# ರಾಷ್ಟ್ರಕೂಟರ ಶಾಸನಗಳ ಸಾಂಸ್ಕೃತಿಕ ಅಧ್ಯಯನ

ಸಂಶೋಧಕರು
ಭಾರತೀ ಬಿ.ಆರ್

ಮಾರ್ಗದರ್ಶಕರು
ಡಾ॥ ದೇವರಕೊಂಡಾರೆಡ್ಡಿ



ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ
2002

# ರಾಷ್ಟ್ರಕೂಟರ ಶಾಸನಗಳ ಸಾಂಸ್ಕೃತಿಕ ಅಧ್ಯಯನ



ಸಂಶೋಧಕರು
ಭಾರತೀ ಬಿ.ಆರ್.

ಮಾರ್ಗದರ್ಶಕರು
ಡಾ॥ ದೇವರಕೊಂಡಾರೆಡ್ಡಿ



ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ
2002





119

# ಪ್ರಮಾಣ ಪತ್ರ

"ರಾಷ್ಟ್ರಕೂಟರ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಇಲ್ಲಿಗೆ ಅರ್ಪಿಸಲಾಗಿದೆ. ಡಾ|| ದೇವರಕೊಂಡಾರೆಡ್ಡಿಯವರ ಸಲಹೆ ಮತ್ತು ಮಾರ್ಗದರ್ಶನದ ಫಲವಾಗಿ ಈ ಮಹಾಪ್ರಬಂಧವು ರೂಪುಗೊಂಡಿದೆ. ಈ ನಿಬಂಧದ ವಿಷಯವನ್ನು ಅಥವಾ ಅದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲೀ, ಇತರೆ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣ ಮಾಡುತ್ತೇನೆ.

ವಿದ್ಯಾರಣ್ಯ
೨೮-೧೦-೨೦೦೨

(ಬಿ.ಆರ್. ಭಾರತೀ)

# ಯೋಗ್ಯತಾ ಪತ್ರ

"ರಾಷ್ಟ್ರಕೂಟರ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿ ಇಲ್ಲಿಗೆ ಅರ್ಪಿಸಲೆಂದು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ನಿಬಂಧವನ್ನು ಸಂಶೋಧಕರು ತಮ್ಮ ಸ್ವಂತ ಸಂಶೋಧನೆಯ ಮೂಲಕ ರಚಿಸಿದ್ದಾರೆ. ಈ ನಿಬಂಧದ ವಿಷಯವನ್ನಾಗಲೀ ಅಥವಾ ಇದರ ಯಾವುದೇ ಭಾಗವನ್ನಾಗಲೀ, ಈ ಮೊದಲು ಬೇರೆ ಯಾವುದೇ ಪದವಿಗಾಗಿ ಒಪ್ಪಿಸಿಲ್ಲ.

ವಿದ್ಯಾರಣ್ಯ
೨೮-೧೦-೨೦೦೨

(ಡಾ|| ದೇವರಕೊಂಡಾರೆಡ್ಡಿ)

# ಕೃತಜ್ಞತೆ

ಭಾರತದ ವಿವಿಧ ಪ್ರದೇಶಗಳಲ್ಲಿನ ಜನರ ತುಂಬು ವಾತ್ಸಲ್ಯದ ಪರಿಚಯ ನನಗಾದದ್ದು ಪಿಎಚ್.ಡಿ., ಅಧ್ಯಯನದ ಅವಧಿಯಲ್ಲಿ ಸಂಶೋಧನಾ ಕ್ಷೇತ್ರಕ್ಕೆ ಕಾಲಿಟ್ಟಾಗ. ಬಹಳ ಹೆದರಿದ್ದ ನನಗೆ ಅಧ್ಯಯನದ ಅವಧಿ ಕಳೆದದ್ದೇ ತಿಳಿಯಲಿಲ್ಲ. ಒಂದೇ ಒಂದು ಕಹಿ ಅನುಭವವಿಲ್ಲದೆ, ಎಲ್ಲರ ಸಹಕಾರದಿಂದ, ಒಂದು ಗುಂಪಿನಲ್ಲಿ ಅಧ್ಯಯನ ಮಾಡಿದ ಅನುಭವವಾಯಿತು. ಇದರ ಕಾರಣಕರ್ತರಾದ ಮತ್ತು ಅಧ್ಯಯನ ವಿಷಯದ ಆಯ್ಕೆಯಿಂದ ಹಿಡಿದು ಅಂತ್ಯದವರೆಗೆ ಎಲ್ಲದರಲ್ಲೂ ಸಂಪೂರ್ಣ ಸ್ವಾತಂತ್ರ್ಯ ನೀಡಿ, ಸಂಶೋಧನೆಯ ರೀತಿ, ಆಕರಗಳ ಸಂಗ್ರಹಣೆ, ವಿಚಾರಗಳ ಚಿಂತನೆ, ವಿಷಯ ಮಂಡನೆ, ಇವುಗಳಲ್ಲಿ ದಾರಿ ತಪ್ಪದಂತೆ ನೋಡಿಕೊಂಡು, ಮುಕ್ತವಾದ ಚರ್ಚೆಗಳಿಂದ, ವಿವಿಧ ದೃಷ್ಟಿಕೋನಗಳಿಂದ, ಕ್ಲಿಷ್ಟ ವಿಚಾರಗಳನ್ನು ಸರಳೀಕರಿಸುವ ಬಗೆಯನ್ನು ಕಲಿಸಿ, ಗುರುವಿಗಿಂತ ಹೆಚ್ಚಾಗಿ ವಿಶ್ವಾಸದಿಂದ, ವಾತ್ಸಲ್ಯದಿಂದ ಮಾರ್ಗದರ್ಶನ ಮಾಡಿದ ಡಾ|| ದೇವರಕೊಂಡಾರೆಡ್ಡಿಯವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ.

ಮಲಗಿದ್ದವಳನ್ನು ಬಲವಂತವಾಗಿ ಎಬ್ಬಿಸಿ, ಬುದ್ಧಿ ಹೇಳಿ, ಗುರಿ ಸಾಧಿಸಲು ಪ್ರೇರೇಪಿಸಿ, ತಾಯಿಯಂತೆ ಸಲಹಿದ ಶ್ರೀಮತಿ ಗುಂಡಮ್ಮನವರ ಆಶೀರ್ವಾದ, ಹಾರೈಕೆಗಳ ಫಲವಾಗಿ ಈ ಸಂಶೋಧನಾ ಕೃತಿಯನ್ನು ಸಲ್ಲಿಸುವ ಮಟ್ಟಕ್ಕೆ ಬಂದಿದ್ದೇನೆ. ಅವರಿಗೆ, ಅಧ್ಯಯನಕ್ಕೆ ಎಲ್ಲ ರೀತಿಯಿಂದ ಸಹಾಯ ಮಾಡಿದ ನನ್ನ ತಂದೆ ಶ್ರೀ ರಾಮಲಿಂಗಪಂಡಿತರಿಗೆ ಮತ್ತು ಸೋದರ ಚಿ|| ಮಹೇಶನಿಗೆ, ಚಿಕ್ಕಮ್ಮ ಶ್ರೀಮತಿ ಜ್ಯೋತಿ ಮತ್ತು ಚಿಕ್ಕಪ್ಪ ಶ್ರೀ ಕುಲಕರ್ಣಿಯವರಿಗೆ, ಯಾವುದೇ ಅಡ್ಡಿ ಅತಂಕಗಳಿಲ್ಲದಂತೆ ತುಂಬು ಮನಸ್ಸಿನಿಂದ ಪ್ರೋತ್ಸಾಹಿಸಿದ ಚಿಕ್ಕಮ್ಮ ಅನುಪಮಾ ರಘುನಂದನ ಮತ್ತು ಮಾಹಿತಿಗಳನ್ನು ಕನ್ನಡಕ್ಕೆ ಅನುವಾದ ಮಾಡಿಕೊಟ್ಟು ಸಹಕರಿಸಿದ ಚಿಕ್ಕಪ್ಪ ರಘುನಂದನರಿಗೆ, ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಹಾಯ ಮಾಡಿದ ಅಕ್ಕ ವನಮಾಲ, ಭಾವ ಮಧುಸೂದನರಿಗೆ,

ಮಾರ್ಗದರ್ಶಕರನ್ನು ಹುಡುಕಿಕೊಟ್ಟು ಅಧ್ಯಯನದ ಅವಧಿಯ ಉದ್ದಕ್ಕೂ ವಿಚಾರಿಸುತ್ತಾ ಧೈರ್ಯ ಹೇಳಿದ ಡಾ|| ಎಚ್.ಎಸ್. ಗೋಪಾಲರಾಯರಿಗೆ, ಯಾವಾಗಲೂ ವಿಚಾರಿಸುತ್ತಾ ಆತ್ಮವಿಶ್ವಾಸ ಬೆಳಸಿ ಮುನ್ನುಗ್ಗಲು ಪ್ರೇರೇಪಿಸಿದ ಡಾ|| ಪಿ. ವಿ. ಕೃಷ್ಣಮೂರ್ತಿಯವರಿಗೆ, ಹಲವಾರು ವಿಚಾರಗಳನ್ನು ಚರ್ಚಿಸಿ, ವಿಷಯ ತಿಳಿಸಿಕೊಟ್ಟು ಸಹಕರಿಸಿದ ಡಾ|| ಕೆ.ಆರ್. ಗಣೇಶ್‌ರವರಿಗೆ, ಡಾ|| ಆ. ಲ. ನರಸಿಂಹನ್, ಆತ್ಮೀಯರಾದ ಶ್ರೀ ಎ.ಆರ್. ಗುರೂಜಿಯವರಿಗೆ, ಶ್ರೀ ನರಸಿಂಗರಾವ್ ಅವರಿಗೆ,

ಮಹಾರಾಷ್ಟ್ರದಲ್ಲಿ ಕ್ಷೇತ್ರಕಾರ್ಯಕ್ಕೆ ಹೋದಾಗ, ಒಂದು ತಿಂಗಳ ಕಾಲ ಮನೆಯಲ್ಲಿ ಇಟ್ಟುಕೊಂಡು ಮಗಳಂತೆ ಆದರಿಸಿದ, ಭಾರತೀಯ ಪುರಾತತ್ವ ಇಲಾಖೆಯ ಔರಂಗಾಬಾದ್ ಸರ್ಕಲ್‌ನ ಸೂಪರಿಂಟೆಂಡಿಂಗ್ ಆರ್ಕಿಯಾಲಜಿಸ್ಟ್ ಆಗಿದ್ದು ಸ್ಮಾರಕಗಳಿಗೆ ಭೇಟಿ ಕೊಡಲು ಅವಕಾಶ ಮಾಡಿಕೊಟ್ಟು, ನಂತರ ಕರ್ನಾಟಕದಲ್ಲಿ ಧಾರವಾಡ ಸರ್ಕಲ್‌ನಲ್ಲಿ ಕ್ಷೇತ್ರಕಾರ್ಯ ಮಾಡಲು ಅನುಮತಿ ನೀಡಿ ಸಹಾಯ ಮಾಡಿದ ಶ್ರೀ ವೆಂಕಟೇಶಯ್ಯನವರಿಗೆ ಮತ್ತು ಅವರ ಪತ್ನಿ ಶ್ರೀಮತಿ ಸರೋಜ ಅವರಿಗೆ,

ಔರಂಗಾಬಾದಿನಲ್ಲಿ ಡೆಪ್ಯುಟಿ ಎಸ್.ಎ. ಆಗಿದ್ದ ಶ್ರೀ ಮಹದೇವಯ್ಯನವರು, ನನ್ನೊಡನೆ ಅನೇಕ ವಿಚಾರಗಳನ್ನು ಚರ್ಚಿಸಿ, ಎಲ್ಲೋರದ ಕೈಲಾಸ ದೇವಾಲಯದ ಬಗ್ಗೆ ಮತ್ತು ಇನ್ನಿತರ ಶಿಲ್ಪ, ವಾಸ್ತುಗಳ ಬಗ್ಗೆ ಹೊಸ ವಿಚಾರಗಳತ್ತ ಬೆಟ್ಟು ಮಾಡಿ ತೋರಿಸಿದ್ದಾರೆ. ಅವರಿಗೆ ಮತ್ತು ಇಲಾಖೆಯ ಎಲ್ಲ ಸಿಬ್ಬಂದಿ ವರ್ಗಕ್ಕೆ,

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಹಾಯ ಮಾಡಿದ ಧಾರವಾಡದ ಶ್ರೀಮತಿ ವಿಜಯಲಕ್ಷ್ಮಿ ಮತ್ತು ಶ್ರೀ ಸದಾನಂದ್ ದಂಪತಿಗಳಿಗೆ, ಡಾ।। ಚೆನ್ನಕ್ಕ ಪಾವಟೆ, ಡಾ।। ಎಚ್. ಆರ್. ರಘುನಾಥ್ ಭಟ್, ಮತ್ತು ಅವರ ವಿದ್ಯಾರ್ಥಿಯಾದ ಶ್ರೀ ವಸಂತ್ ಕುಮಾರ್ ಅವರಿಗೆ, ಶ್ರೀ ಮಹಂತೇಶ್ ಅವರಿಗೆ,

ಔರಂಗಾಬಾದಿನ ಶ್ರೀಮತಿ ಮತ್ತು ಶ್ರೀ ಡಾ।। ಬ್ರಹ್ಮಾನಂದ ದೇಶಪಾಂಡೆ ದಂಪತಿಗಳಿಗೆ, ಮಧ್ಯಪ್ರದೇಶದ ಮಂದ್‌ಸೌರಿನ ಶ್ರೀ ಕೈಲಾಶ್ ಪಾಂಡೆ, ಶ್ರೀಮತಿ ಮತ್ತು ಶ್ರೀ ಮಹೇಂದ್ರನಾಥ ಗುಪ್ತ ದಂಪತಿಗಳಿಗೆ ಹಾಗೂ ಭಾನ್‌ಪುರ ಮ್ಯೂಸಿಯಂನ ಕ್ಯೂರೇಟರ್ ಇವರಿಗೂ,

ನನ್ನ ಅಧ್ಯಯನವು ಯಶಸ್ವಿಯಾಗಿ ಸಾಗಲು ಬೆಂಗಳೂರಿನ ಮಿಥಿಕ್ ಸೊಸೈಟಿ, ಕನ್ನಡ ಸಾಹಿತ್ಯ ಪರಿಷತ್ತು, ಐ.ಸಿ.ಎಚ್.ಆರ್., ರಾಜ್ಯ ಗೆಜ಼ೆಟಿಯರ್, ಬಿ.ಎಂ.ಶ್ರೀ ಪ್ರತಿಷ್ಠಾನ, ಶ್ರವಣಬೆಳಗೊಳದ ರಾಷ್ಟ್ರೀಯ ಪ್ರಾಕೃತ ಅಧ್ಯಯನ ಮತ್ತು ಸಂಶೋಧನ ಸಂಸ್ಥೆ, ಹಂಪಿ ಕನ್ನಡ ವಿಶ್ವವಿದ್ಯಾಲಯ, ಧಾರವಾಡದ ಕನ್ನಡ ಅಧ್ಯಯನ ಸಂಸ್ಥೆ, ಕನ್ನಡ ಸಂಶೋಧನಾ ಸಂಸ್ಥೆ, ಔರಂಗಾಬಾದ್ ಪುರಾತತ್ವ ವಿಭಾಗದ ಗ್ರಂಥಾಲಯ, ಮರಾಠವಾಡ ವಿಶ್ವವಿದ್ಯಾಲಯ, ನಾಗಪುರ ವಿಶ್ವವಿದ್ಯಾಲಯ, ಡೆಕ್ಕನ್ ಕಾಲೇಜು ಪೂನಾ, ಪೂನಾ ವಿಶ್ವವಿದ್ಯಾಲಯ, ಭೋಗೀಲಾಲ್ ಲೆಹರ್‌ಚಂದ್ ಇನ್ಸ್ಟಿಟ್ಯೂಟ್ ಆಫ್ ಇಂಡಾಲಜಿ – ದೆಹಲಿ, ಈ ಎಲ್ಲ ಗ್ರಂಥಾಲಯಗಳ ಸಿಬ್ಬಂದಿ ವರ್ಗಕ್ಕೆ, ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ.

ನನ್ನ ಅಧ್ಯಯನಕ್ಕೆ ಪ್ರೋತ್ಸಾಹ ನೀಡಿ ಸಹಕರಿಸಿದ ರಾಜಾಜಿನಗರದ ವಿದ್ಯಾವರ್ಧಕ ಸಂಘ ಪದವಿ ಪೂರ್ವ ಮಹಿಳಾ ಕಾಲೇಜಿನ ಪ್ರಾಂಶುಪಾಲರಾದ ಶ್ರೀಮತಿ ಎಸ್. ನಾಗಲಕ್ಷ್ಮಿಯವರಿಗೆ ಮತ್ತು ಸಿಬ್ಬಂದಿ ವರ್ಗಕ್ಕೆ,

ಅಧ್ಯಯನ ಮುಗಿದು ಪ್ರಬಂಧವನ್ನು ಸಲ್ಲಿಸಬೇಕಾದ ಹಂತದಲ್ಲಿ ಒದಗಿದ ಅನಿರೀಕ್ಷಿತ ಅನಾರೋಗ್ಯ, ಅಪಘಾತಗಳಿಂದಾಗಿ ಕೆಲಸವು ನಿಂತುಹೋಗುವ ಮಟ್ಟ ತಲುಪಿದಾಗ, ಸಹಾಯ ಮಾಡಿದ ಶ್ರೀಯುತರಾದ ಜಿ.ಎಸ್.ಎಸ್. ರಾವ್, ಮನೋಜ್, ಶ್ರೀಮತಿ ಸಂಧ್ಯಾ ರಾಮಚಂದ್ರ, ಶ್ರೀಮತಿ ಶ್ವೇತಾ ಮತ್ತು ಶ್ರೀ ಸತ್ಯನಾರಾಯಣ, ಡಾ।। ಎಂ. ಬೈರೇಗೌಡರು, ಸುಧೀಂದ್ರ, ಶಶಿಧರ್, ವಿಜಯರಾಘವ, ಶ್ರೀನಿವಾಸಮೂರ್ತಿ, ಅರುಣ್, ನರಸಿಂಹಮೂರ್ತಿ, ಮೋಹನ್‌ಕುಮಾರ, ಇಂದ್ರೇಶ್, ಸಂಪತ್, ಬಾಲು, ನರೇಶ್, ಮುನಿರಾಜು, ಶ್ರೀಮತಿಯರಾದ ಕರುಣಾ ಮಂಗಳವೇಡೆ, ಉಷಾ, ತಾರಾ, ಗೀತಾ, ಶೋಭಾ, ಡಾ।। ಶ್ಯಾಮಲಾ ರತ್ನಕುಮಾರಿ, ಇವರುಗಳ ಸಹಕಾರಕ್ಕೆ ಋಣಿಯಾಗಿದ್ದೇನೆ. ಅಷ್ಟೂ ದಿನಗಳ ಕಾಲ ಆಸ್ಪತ್ರೆಯ ಚಿಕಿತ್ಸೆಯನ್ನೆಲ್ಲ ಮನೆಯಲ್ಲೇ ನೀಡುತ್ತಾ, ಹಿಡಿದ ಕಾರ್ಯ ಕೈಗೂಡಲು ಹಗಲೂ ರಾತ್ರಿ ಶ್ರಮಿಸಿದ ವೈದ್ಯರುಗಳಾದ ಡಾ।। ಬಿ.ಎನ್. ಮಹೇಶ್ ಮತ್ತು ಡಾ।। ಎಸ್. ನಾಗಭೂಷಣರಿಗೆ ಚಿರಋಣಿಯಾಗಿದ್ದೇನೆ. ಅಧ್ಯಯನದ ಉದ್ದಕ್ಕೂ, ಪ್ರತಿಯೊಬ್ಬರೂ ತುಂಬು ಮನಸ್ಸಿನಿಂದ ಹಾರೈಸಿ, ಧೈರ್ಯ ತುಂಬಿ, ಆಶೀರ್ವದಿಸಿದ್ದಾರೆ. ಅವರುಗಳನ್ನೆಲ್ಲಾ ಮನಃಪೂರ್ವಕವಾಗಿ ನೆನೆಯುತ್ತೇನೆ.

ಬಿ.ಆರ್. ಭಾರತೀ

# ಪರಿವಿಡಿ

# ಸಂಕ್ಷೇಪಗಳು

| | | | |
|---|---|---|---|
| 1. | ಹಂ.ಕ.ವಿ.ವಿ.ಶಾ.ಸಂ. | – | ಹಂಪಿ ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು |
| 2. | ABORI | - | Annals of the Bhandarkar Oriental Research Institute, Poona. |
| 3. | APGAS | - | Andhra Pradesh Government Archaeological Series. |
| 4. | ARIE | - | Annual Report on Indian Epigraphy. |
| 5. | ARSIE | - | Annual Report on South Indian Epigraphy. |
| 6. | BG | - | Bombay Gazetteer. |
| 7. | BISM | - | Bharatiya Itihasa Samshodhaka Mandala. |
| 8. | CII | - | Corpus Inscriptionum Indicarum. |
| 9. | EC | - | Epigraphia Carnatica. |
| 10. | EI | - | Epigraphia Indica. |
| 11. | IA | - | Indian Antiquary. |
| 12. | IAP | - | Inscriptions of Andhra Pradesh. |
| 13. | IHQ | - | Indian Historical Quarterly. |
| 14. | JBBRAS | - | Journal of the Bombay Branch of the Royal Asiatic Society. |
| 15. | JESI | - | Journal of the Epigraphical Society of India. |
| 16. | KI | - | Karnataka Inscriptions. |
| 17. | MAR | - | Mysore Archaeological Reports. |
| 18. | KRIPR | - | Kannada Research Institute Progress Report, Dharwad. |
| 19. | QJMS | - | Quarterly Journal of Mythic Society. |
| 20. | RITC | - | Rashtrakuta Inscriptions of Tamil Country. |
| 21. | SIE | - | Studies in Indian Epigraphy. |
| 22. | SIJ | - | South Indian Inscriptions. |
| 23. | SMHD | - | Sources of Medieval History of Deccan (Marathi). |

## ಅಧ್ಯಾಯ – ೧

# ಅಧ್ಯಯನದ ಉದ್ದೇಶ

ಸುಮಾರು ಎರಡು ಶತಮಾನಗಳಿಗೂ ಹೆಚ್ಚು ಕಾಲ ಭಾರತದ ಇತಿಹಾಸದಲ್ಲಿ ತಮ್ಮ ಹೆಸರನ್ನು ಅಚ್ಚಳಿಯದಂತೆ ಉಳಿಸಿಕೊಂಡವರು ರಾಷ್ಟ್ರಕೂಟರು. ಪ್ರಬಲವಾದ ಮೌರ್ಯ, ಗುಪ್ತ ಸಾಮ್ರಾಜ್ಯಗಳೂ ಕೂಡ ಎರಡು ಶತಮಾನಗಳನ್ನು ದಾಟಿ ಅಧಿಕಾರವನ್ನು ನಡೆಸಲು ಸಾಧ್ಯವಾಗಲಿಲ್ಲ. ಆದರೆ ದಕ್ಷಿಣ ಭಾರತದಲ್ಲಷ್ಟೇ ಅಲ್ಲದೆ ಮಧ್ಯಭಾರತವನ್ನೂ, ಉತ್ತರಭಾರತವನ್ನೂ ಸೇರಿಸಿಕೊಂಡು ವಿಸ್ತಾರವಾದ ಸಾಮ್ರಾಜ್ಯವನ್ನು ರಾಷ್ಟ್ರಕೂಟರು ಆಳಿದರು.

ಸಾಮ್ರಾಜ್ಯ ವಿಸ್ತರಣೆಯ ಜೊತೆಜೊತೆಗೆ ಕಲೆ, ವಾಸ್ತು, ಸಾಹಿತ್ಯ, ವಿದ್ಯಾಭ್ಯಾಸ ಮುಂತಾದುವುಗಳಿಗೆ ಕೂಡ ಹೆಚ್ಚಿನ ಪ್ರೋತ್ಸಾಹ ಕೊಟ್ಟಿದ್ದಾರೆ. ಸ್ವತಃ ರಾಜರುಗಳು ನೀಡಿರುವ ದಾನಗಳಲ್ಲದೆ, ಜನಸಾಮಾನ್ಯರೂ ದಾನ ನೀಡಿರುವುದು ಇವರ ಕಾಲದ ಅನೇಕ ಶಾಸನಗಳಿಂದ ತಿಳಿದು ಬರುತ್ತದೆ. ದೇವಾಲಯ ನಿರ್ಮಾಣ ಕಾರ್ಯದಲ್ಲಿ ಅರಸರ ಜೊತೆಗೆ ಸಾಮಂತರೂ, ಉನ್ನತ ಅಧಿಕಾರಿಗಳೂ, ಜನಸಾಮಾನ್ಯರೂ ಭಾಗಿಗಳಾಗಿದ್ದಾರೆ. ರಾಷ್ಟರಕೂಟರ ಕಾಲದಲ್ಲಿ ಮುನ್ನೂರಕ್ಕೂ ಹೆಚ್ಚು ದೇವಾಲಯಗಳು ನಿರ್ಮಾಣವಾಗಿವೆ. ಶೈಲಿಯ ವಿಚಾರದಲ್ಲಿ ಹೇಳುವುದಾದರೆ ರಾಷ್ಟ್ರಕೂಟ ಶೈಲಿಯನ್ನು ಗುರುತಿಸಲು ಅನೇಕ ವಿದ್ವಾಂಸರು ಪ್ರಯತ್ನಪಟ್ಟಿದ್ದಾರೆ.

ಈವರೆಗೆ ರಾಷ್ಟ್ರಕೂಟರ ಇತಿಹಾಸವನ್ನು ಕುರಿತು ಅನೇಕ ಅಧ್ಯಯನಗಳು ನಡೆದಿವೆ. ದೀರ್ಘಕಾಲದಿಂದ ನಡೆಯುತ್ತಿರುವ ಅಧ್ಯಯನವನ್ನು ಮತ್ತು ಅವುಗಳ ಫಲಿತಾಂಶವನ್ನು ಗಮನಿಸುತ್ತಲೇ ಬಂದಿದ್ದೇವೆ. ಇಷ್ಟಾದರೂ ಇನ್ನೂ ರಾಷ್ಟ್ರಕೂಟರ ಬಗ್ಗೆ ಅಧ್ಯಯನಗಳು ನಡೆಯುತ್ತಲೇ ಇವೆ. ರಾಷ್ಟ್ರಕೂಟರ ಆಡಳಿತ ಮತ್ತು ವಾಸ್ತುವಿನ ಬಗ್ಗೆ ಹೆಚ್ಚಿನ ಅಧ್ಯಯನ ನಡೆದಿದೆ. ಸಂಸ್ಕೃತಿಯ ಬಗ್ಗೆ ಹೆಚ್ಚಿನ ಅಧ್ಯಯನಗಳು ನಡೆಯದೆ ಇಲ್ಲದಿರುವುದು ಗಮನಾರ್ಹ. ಹಾಗೆಯೇ ರಾಷ್ಟ್ರಕೂಟರ ಕಾಲದಲ್ಲಿ ಅನುಸರಿಸಲಾಗುತ್ತಿದ್ದಂತಹ ಧರ್ಮಗಳ ಬಗ್ಗೆ ಕೂಡ ಹೆಚ್ಚಿನ ಅಧ್ಯಯನಗಳು ನಡೆದಿಲ್ಲ.

ರಾಷ್ಟ್ರಕೂಟರ ಸಂಸ್ಕೃತಿಯ ಬಗ್ಗೆ ಅಧ್ಯಯನ ಮಾಡಬೇಕೆನ್ನುವವರು ಈವರೆಗೆ ನಡೆದಿರುವ ಅಧ್ಯಯನಗಳನ್ನು ತಿಳಿದುಕೊಳ್ಳುವುದು ಅತ್ಯಗತ್ಯವಾಗಿದೆ. ಈ ವಂಶದ ಮೇಲೆ ಕ್ರಿ.ಶ. ೧೮೨೪ ರಿಂದಲೂ ಸತತವಾಗಿ ಅಧ್ಯಯನ ನಡೆಯುತ್ತಲೇ ಇದೆ. ಈ ಅಧ್ಯಯನಗಳನ್ನು ಗಮನಿಸಿದಾಗ ಇನ್ನೂ ಎಷ್ಟೋ ವಿಷಯಗಳ ಬಗ್ಗೆ ಖಚಿತವಾದ ತೀರ್ಮಾನಗಳು ಬಂದಿಲ್ಲ. ಎಷ್ಟೋ ವಿಚಾರಗಳು ಬೆಳಕಿಗೇ ಬಂದಿಲ್ಲದಿರುವುದು ಸ್ಪಷ್ಟವಾಗುತ್ತದೆ. ಇರುವ ದಾಖಲೆಗಳು ಕೂಡ ರಾಷ್ಟ್ರಕೂಟರ ಇತಿಹಾಸವನ್ನು ಸಂಪೂರ್ಣವಾಗಿ ನಿರೂಪಿಸಲು ಸಾಲದೆಂದೆನಿಸುತ್ತವೆ. ಈವರೆಗೆ ನಡೆದಿರುವ ಅಧ್ಯಯನಗಳನ್ನು ಗಮನಿಸಿ ಅವುಗಳನ್ನು ಮುಂದೆ ಪರಾಮರ್ಶಿಸಲಾಗಿದೆ.

ಕ್ರಿ.ಶ. ೧೮೨೪ ರಲ್ಲಿ ಶ್ರೀ Seely John.B.ಯವರು ಬರೆದ "The Wonders of Elora; or, the narrative of a journey to the temples and dwellings excavated out of a mountain of granite and extending upwards of a mile and a quarter at Elora, in the East Indies, by the route of Poona, Ahmed – Nugger, and Toka, returning by Dowlutabad and Aurangabad, with some general observations on the people and the country. London G.B.Whittaker, 1825; reprint, Delhi: B.R. Publishing Corp., 1975''ಎಂಬ ಲೇಖನದಿಂದ ರಾಷ್ಟ್ರಕೂಟರ ಅಧ್ಯಯನವು ಆರಂಭವಾಯಿತು.

ಕ್ರಿ.ಶ. ೧೮೪೩ ರಲ್ಲಿ ಶ್ರೀ ಬಾಲಶಾಸ್ತ್ರಿ ಜಂಬೇಕರ್‌ರವರು "Journal of Bombay Branch of Royal Asiatic Society" ಪತ್ರಿಕೆಯಲ್ಲಿ ಶಕ ೯೩೦ (ಕ್ರಿ.ಶ. ೧೦೦೮)ರ ಖರೇಪಟಾನ್ ತಾಮ್ರಪಟದ ಬಗ್ಗೆ ಲೇಖನವನ್ನು ಬರೆದರು. ಕ್ರಿ.ಶ. ೧೮೮೪ ರಲ್ಲಿ ಶ್ರೀ ಆರ್. ಜಿ. ಭಂಡಾರ್ಕರರು "ಬಾಂಬೆ ಗೆಝೆಟಿಯರ್"ನಲ್ಲಿ ರಾಷ್ಟ್ರಕೂಟರನ್ನು ಕುರಿತು ಒಂದು ಲೇಖನವನ್ನು ಬರೆದಿದ್ದಾರೆ. ಈ ಲೇಖನದಲ್ಲಿ ರಟ್ಟರ (ರಾಷ್ಟ್ರಕೂಟರ) ವಂಶಾವಳಿಯನ್ನು ನೀಡಿದ್ದಾರೆ. ಆ ಕಾಲದ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ವಿವರಿಸಿದ್ದಾರೆ. ಕ್ರಿ.ಶ. ೧೮೭೭ ರಲ್ಲಿ ಜೇಮ್ಸ್ ಬರ್ಗೆಸ್ ಅವರ "The Rock Temples of Elura or Verul'' ಎಂಬ ಗ್ರಂಥವು ಬೊಂಬಾಯಿಯಲ್ಲಿ ಬಿಡುಗಡೆಯಾಯಿತು. ಇದರಲ್ಲಿ ಪಶ್ಚಿಮಘಟ್ಟದ ಬೌದ್ಧವಿಹಾರಗಳ ಅಧ್ಯಯನದ ವರದಿಯಿದೆ. ಇವರದೇ ಆದ ``Report on Elura caves and the Brahminical and

the Jaina caves in Western India'' ಎಂಬ ವರದಿಯು ಸುಮಾರು ೧೮೭೭ ರಿಂದ ೧೮೮೦ ರವರೆಗೂ ನಡೆದ ಉತ್ಖನನ ಮತ್ತು ಇತರ ಚಟುವಟಿಗಳ ಬಗ್ಗೆ ದಾಖಲೆಯಾಗಿದೆ.

ನಂತರ ಕ್ರಿ. ಶ. ೧೮೯೬ ರಲ್ಲಿ ಡಾ. ಫ್ಲೀಟರು ''ಬಾಂಬೆ ಗೆಝೆಟಿಯರ್''ನಲ್ಲಿ ಒಂದು ಲೇಖನವನ್ನು ಬರೆದು ಕರ್ನಾಟಕದ ಕೆಲವು ರಾಜವಂಶಗಳ ಬಗ್ಗೆ ಚರ್ಚಿಸಿದ್ದಾರೆ. ಇದಿಷ್ಟು ಮೊದಲ ಹಂತದಲ್ಲಿ ಬರುವ ರಾಷ್ಟ್ರಕೂಟರ ಅಧ್ಯಯನದ ಒಂದು ನೋಟವೆಂದು ಹೇಳಬಹುದು.

ಅಲ್ಲಿಂದ ಮುಂದಕ್ಕೆ ಕ್ರಿ.ಶ. ೧೯೩೪ ರವರೆಗೆ ರಾಷ್ಟ್ರಕೂಟರ ಬಗ್ಗೆ ಯಾವುದೇ ಪ್ರಕಟಣೆ ಹೊರಬರಲಿಲ್ಲ. ನಂತರದ ದಿನಗಳಲ್ಲಿ ವಿವಿಧ ಕ್ಷೇತ್ರಗಳಿಗೆ ರಾಷ್ಟ್ರಕೂಟರ ಕೊಡುಗೆಯನ್ನು ಕುರಿತಂತೆ ಸಂಶೋಧನೆಗಳು ಆರಂಭವಾದವು. ಆ ಅವಧಿಯಲ್ಲಿ ಅಂದರೆ ಕ್ರಿ.ಶ. ೧೯೨೮ ರಲ್ಲಿ ಡಾ|| ಎ. ಎಸ್. ಅಲ್ಟೇಕರರು ಕಾಶಿಯ ಬನಾರಸ್ ಹಿಂದೂ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದ ಡಿ.ಲಿಟ್. ಪ್ರಬಂಧದ ಒಂದು ಭಾಗವಾಗಿ, "ರಾಷ್ಟ್ರಕೂಟರ ಆಡಳಿತ ಕಾಲದಲ್ಲಿ ದಖ್ಖನ್" ಎಂಬ ಶೀರ್ಷಿಕೆಯಡಿಯಲ್ಲಿ ರಾಷ್ಟ್ರಕೂಟರ ಬಗ್ಗೆ ವಿವರಣೆ ನೀಡಿದ್ದಾರೆ. ಕ್ರಿ.ಶ. ೧೯೩೪ ರಲ್ಲಿ ಆ ಭಾಗವು "Rashtrakutas and Their Times" ಎನ್ನುವ ಗ್ರಂಥರೂಪದಲ್ಲಿ ಪ್ರಕಟವಾಯಿತು. ಇದು ಅವರ ಡಿ.ಲಿಟ್. ಪ್ರಬಂಧದ ಒಂದು ಭಾಗವಾಗಿದೆ ಅಷ್ಟೆ. ಅಂದಿನಿಂದ ಇಂದಿನವರೆಗೆ ಅನೇಕ ಹೊಸ ಶಾಸನಗಳು ಬೆಳಕಿಗೆ ಬಂದಿವೆ. ಈ ಹಿನ್ನೆಲೆಯಲ್ಲಿ ಅವರು ಹೇಳಿರುವ ಅನೇಕ ವಿಚಾರಗಳನ್ನು ಬದಲಾಯಿಸುವ ಅಗತ್ಯವೂ ಇದೆ. ಆದರೂ ಕೂಡ ಆ ಕಾಲಕ್ಕೆ ತಮಗೆ ದೊರೆತ ಮಾಹಿತಿಗಳನ್ನಾಧರಿಸಿ ಅಧ್ಯಯನ ನಡೆಸಿ ರಾಷ್ಟ್ರಕೂಟರ ಇತಿಹಾಸದ ಬಗ್ಗೆ ಸ್ಪಷ್ಟ ರೂಪರೇಷೆಗಳನ್ನು ಕೊಡುವಲ್ಲಿ ಸಫಲರಾಗಿದ್ದಾರೆ. ರಾಷ್ಟ್ರಕೂಟರ ಬಗ್ಗೆ ಅಧ್ಯಯನ ನಡೆಸುವ ಪ್ರತಿಯೊಬ್ಬರೂ ಇವರ ಗ್ರಂಥವನ್ನು ಗಮನಿಸಿಯೇ ಮುಂದೆ ಸಾಗಬೇಕಾಗುತ್ತದೆ. ರಾಜಕೀಯ ಇತಿಹಾಸಕ್ಕೆ ಹೆಚ್ಚಿನ ಒತ್ತನ್ನು ಕೊಟ್ಟಿದ್ದರೂ ಸಂಸ್ಕೃತಿ, ಧರ್ಮ ಮುಂತಾದ ವಿಷಯಗಳ ಬಗ್ಗೆಯೂ ಅಧ್ಯಯನ ನಡೆಸಿದ್ದಾರೆ. ಧಾರ್ಮಿಕ ಅಧ್ಯಯನದ ಬಗ್ಗೆ ಹೇಳುವಾಗ, "ಧರ್ಮಶಾಸ್ತ್ರದ ಅರಿವಿರುವವರೆಗೆ ಕೂಲಂಕಷವಾಗಿ ಅಧ್ಯಯನ ಮಾಡುವಷ್ಟು ವಿಷಯಗಳಿವೆ" ಎಂದು ಅಭಿಪ್ರಾಯಪಟ್ಟಿದ್ದಾರೆ. ಒಟ್ಟಿನಲ್ಲಿ ಇವರ ಅಧ್ಯಯನದಲ್ಲಿ ರಾಷ್ಟ್ರಕೂಟ ಮನೆತನಗಳು, ಸಮಕಾಲೀನ ರಾಜಮನೆತನಗಳು,

ರಾಜಕೀಯ ಮೇಲ್ಮೈಗಾಗಿ ರಾಷ್ಟ್ರಕೂಟರು, ಪಾಲರು ಮತ್ತು ಪ್ರತಿಹಾರರು ತ್ರಿಪಕ್ಷ ಹೋರಾಟ ನಡೆಸಿದ್ದು, ಆಡಳಿತ ವ್ಯವಹಾರಗಳು, ಸಾಮಾಜಿಕ ಮತ್ತು ಧಾರ್ಮಿಕ ವಿಚಾರಗಳು ಇಂದಿಗೂ ಅಧಿಕೃತ ಹಾಗೂ ಪ್ರಸ್ತುತವೆನಿಸುತ್ತವೆ.

ಕ್ರಿ.ಶ. ೧೯೩೩ ರಲ್ಲಿ ಪಂಡಿತ ಬಿಶೇಷ್ವರನಾಥ ರೇವು ಅವರು "History of The Rashtrakutas (Rathors)" ಎನ್ನುವ ಗ್ರಂಥವನ್ನು ಬರೆದಿದ್ದಾರೆ. ಅದರಲ್ಲಿ ರಾಷ್ಟ್ರಕೂಟರ ಸಣ್ಣ ಪುಟ್ಟ ಶಾಖೆಗಳ ಬಗ್ಗೆ ಚರ್ಚಿಸುವುದಲ್ಲದೆ ಇವರ ಕಾಲವನ್ನು ಸುಮಾರು ಹದಿನಾಲ್ಕನೇ ಶತಮಾನದವರೆಗೂ ಗುರುತಿಸುತ್ತಾರೆ. ರಾಥೋಡರನ್ನು ರಾಷ್ಟ್ರಕೂಟರ ಮುಂದುವರಿದ ಶಾಖೆಯೆಂದು ಪ್ರತಿಪಾದಿಸಿದ್ದಾರೆ. ಇವರಿಗೆ ಸಿಕ್ಕಿರುವ ದಾಖಲೆಗಳು ಬಹಳ ಕಡಿಮೆಯಾದರೂ ಆ ಕಾಲದಲ್ಲಿ ಆ ಶಾಖೆಗಳು ಪ್ರಬಲವಾಗಿದ್ದುದು ತಿಳಿದು ಬರುತ್ತದೆ ಎನ್ನುತ್ತ "ತುರುಷ್ಕ ದಂಡ" ಎನ್ನುವ ಕರವನ್ನು ಮಹಮ್ಮದೀಯರ ಮೇಲೆ ವಿಧಿಸಲಾಗಿತ್ತು ಎಂದು ತಿಳಿಸಿದ್ದಾರೆ. ಇವರು ತಮ್ಮ ಸೀಮಿತತೆಯಲ್ಲಿ ರಾಷ್ಟ್ರಕೂಟರ ಸಣ್ಣ ಪುಟ್ಟ ಶಾಖೆಗಳ ಇತಿಹಾಸವನ್ನು ರಚಿಸಿದ್ದಾರೆ. ೧೯೪೩ ರಲ್ಲಿ ಇವರೇ ಬರೆದ ಇನ್ನೊಂದು ಪುಸ್ತಕ "Glories of Marwar and The Glories of Rathors" ಗ್ರಂಥದಲ್ಲಿ ಮಾರವಾರರ ಮತ್ತು ರಾಥೋರರ ಉಚ್ಛ್ರಾಯ ಸ್ಥಿತಿಯ ಬಗ್ಗೆ ಚರ್ಚಿಸಿದ್ದಾರೆ.

ಕ್ರಿ.ಶ. ೧೯೪೯ ರಲ್ಲಿ ಶ್ರೀ ಹಂದಿಕಿಯವರು ಸೋಮದೇವ ಸೂರಿಯ "ಯಶಸ್ತಿಲಕ ಚಂಪೂ'' ಕೃತಿಯಲ್ಲಿ ಬರುವ ಸಾಂಸ್ಕೃತಿಕ ಮತ್ತು ಸಾಮಾಜಿಕ ಅಂಶಗಳನ್ನು ಗುರುತಿಸಿ ಬರೆದ ಗ್ರಂಥ "Yashasthilaka and Indian Culture". ಸೋಮದೇವ ಸೂರಿಯು ಹತ್ತನೆಯ ಶತಮಾನದಲ್ಲಿ ಬರೆದಿರುವ "ಯಶಸ್ತಿಲಕ ಚಂಪೂ" ಗ್ರಂಥವನ್ನು ಅಧ್ಯಯನ ಮಾಡಿ ಅದರಲ್ಲಿ ರಾಷ್ಟ್ರಕೂಟರ ಕಾಲದಲ್ಲಿದ್ದ ಸಾಮಾಜಿಕ ಸ್ಥಿತಿಗತಿಗಳನ್ನು ಚರ್ಚಿಸಿದ್ದಾರೆ. ಹಂದಿಕಿಯವರ ಗ್ರಂಥದಲ್ಲಿ ಭಾರತೀಯ ಸಂಸ್ಕೃತಿಯ ಬಗ್ಗೆ ಅನೇಕ ವಿವರಗಳು ಸಿಗುತ್ತವೆ. ವಿಶೇಷವಾಗಿ ರಾಷ್ಟ್ರಕೂಟರ ಕಾಲದ ಜೀವನ, ಸಂಸ್ಕೃತಿಯ ಬಗ್ಗೆ ಬೆಳಕು ಚೆಲ್ಲುತ್ತದೆ. ರಾಜಕೀಯ ಇತಿಹಾಸ ಬೆಳವಣಿಗೆಗಳ ಜೊತೆ ಸಂಸ್ಕೃತಿಯ ಬೆಳವಣಿಗೆಯ ಬಗ್ಗೆ ವಿಶೇಷವಾಗಿ ಚರ್ಚಿಸಿದ್ದಾರೆ. ಇದು ಬಹಳ ಉಪಯುಕ್ತವಾದ ಗ್ರಂಥವಾಗಿದೆ. Goetz Hermann ಅವರು ``The Kailasa of

Ellora and the Chronology of Rashtrakuta Art'' ಎನ್ನುವ ಪುಸ್ತಕವನ್ನು ೧೯೫೨ ರಲ್ಲಿ ಬರೆದಿದ್ದಾರೆ.

ಸ್ವಾತಂತ್ರ್ಯಪೂರ್ವದಲ್ಲಿ, ಕ್ರಿ. ಶ. ೧೮೨೪ ರಿಂದ ೧೯೪೩ ಮತ್ತು ೧೯೪೭ ರವರೆಗೆ ನಡೆದ ರಾಷ್ಟ್ರಕೂಟರ ಅಧ್ಯಯನಕ್ಕೂ, ಸ್ವಾತಂತ್ರ್ಯಾನಂತರದಲ್ಲಿ ನಡೆದ ಅಧ್ಯಯನಕ್ಕೂ ಹೋಲಿಸಿದರೆ, ಸ್ವಾತಂತ್ರ್ಯಾನಂತರದ ಅಧ್ಯಯನದಲ್ಲಿ ಶೀಘ್ರ ಬೆಳವಣಿಗೆಯನ್ನು ಕಾಣಬಹುದು. ಕ್ರಿ.ಶ. ೧೯೪೭ ರವರೆಗೆ ಬಂದಿರುವ ಬಿಡಿಲೇಖನಗಳು, ಸಂಶೋಧನ ಗ್ರಂಥಗಳು ಎಲ್ಲವನ್ನು ಲೆಕ್ಕಹಾಕಿದಲ್ಲಿ ಅಧ್ಯಯನ ಮಾಡಿರುವವರ ಸಂಖ್ಯೆ ಕಡಿಮೆ. ಇದಾದ ನಂತರ ತೀವ್ರವಾಗಿ ಬೆಳೆದ ಸಂಶೋಧನೆ, ಅಧ್ಯಯನಗಳಲ್ಲಿ ಪಾಲ್ಗೊಂಡವರ ಸಂಖ್ಯೆ ನೂರ ಐವತ್ತನ್ನೂ ಮೀರಿದೆ. ಲೇಖನಗಳ ಸಂಖ್ಯೆ ಇನ್ನೂರಕ್ಕೂ ಹೆಚ್ಚಿದೆ. ಇದರಲ್ಲಿ ಬಹಳ ಮುಖ್ಯವಾಗಿ ರಾಜಧಾನಿಯ ಬಗ್ಗೆ, ಶಾಸನಗಳ ಬಗ್ಗೆ, ಶಾಖೆಗಳ ಕಾಲ, ರಾಷ್ಟ್ರಕೂಟರ ಪ್ರಾಚೀನತೆ, ಮೂಲ ಮುಂತಾದವುಗಳನ್ನು ಕುರಿತು ಅಧ್ಯಯನ ಮಾಡಿರುವುದು ತಿಳಿಯುತ್ತದೆ. ಇವುಗಳಲ್ಲಿ ವಾದವಿವಾದಗಳ ಗೊಂದಲವಿದೆಯೇ ಹೊರತು ನಿರ್ಣಯದ ಹಂತಕ್ಕೆ ಬಂದಿದ್ದು ಬಹಳ ಕಡಿಮೆ. ರಾಷ್ಟ್ರಕೂಟರ ಸಾಮಾನ್ಯ ಇತಿಹಾಸಕ್ಕೆ ಸಂಬಂಧಿಸಿದಂತೆ ಭಾರತದಲ್ಲಿ ನಾನ್ನೂರಕ್ಕೂ ಹೆಚ್ಚು ಪುಸ್ತಕಗಳಲ್ಲಿ ವಿವರಣೆಗಳಿವೆ. ವಿವಿಧ ವಂಶಗಳ ಇತಿಹಾಸದ ಜೊತೆಯೇ ಇವೂ ಸೇರಿಹೋಗುತ್ತವೆ. ಸ್ವಾತಂತ್ರ್ಯಾನಂತರದಿಂದ ಇಂದಿನವರೆಗಿನ ಅಧ್ಯಯನಗಳ ಬಗ್ಗೆ ನೋಟ ಹರಿಸಿದರೆ ತಿಳಿದು ಬರುವ ಅಂಶಗಳನ್ನು, ಮುಖ್ಯವಾಗಿ ಸಂಶೋಧನಾ ಗ್ರಂಥಗಳಲ್ಲಿ ಮತ್ತು ಸ್ವತಂತ್ರ ಕೃತಿಗಳಲ್ಲಿ ಕಂಡುಬರುವ ವಿಚಾರಗಳೆಂದು ವಿಂಗಡಿಸಿ ಇಲ್ಲಿ ವಿಶ್ಲೇಷಿಸಲಾಗಿದೆ.

ಕ್ರಿ.ಶ ೧೯೫೮ ರಲ್ಲಿ ಗಂಗೂಲಿ ಮತ್ತು ಗೋಸ್ವಾಮಿಯವರು ಕೂಡಿ ಬರೆದ ಗ್ರಂಥ "The Art of The Rashtrakutas"ದಲ್ಲಿ ರಾಷ್ಟ್ರಕೂಟರ ಕಲೆಯ ಬಗ್ಗೆ ವಿವರವಾದ ಅಧ್ಯಯನ ಮಾಡಲಾಗಿದೆ. ಇದರಲ್ಲಿ ರಾಷ್ಟ್ರಕೂಟರ ಮಹೋನ್ನತ ಕಲಾ ಸಾಧನೆಯೆನಿಸಿದ ಎಲ್ಲೋರ ಮತ್ತು ಎಲಿಫೆಂಟಾಗಳಲ್ಲಿರುವ ಗುಹಾಲಯಗಳ ವಾಸ್ತುಶಿಲ್ಪದ ಬಗ್ಗೆ ಸುದೀರ್ಘವಾಗಿ ಚರ್ಚಿಸಿದ್ದಾರೆ. ರಾಷ್ಟ್ರಕೂಟರ ಕಲೆ ಮತ್ತು ವಾಸ್ತುಶಿಲ್ಪದ ಆರಂಭದ ಬಗ್ಗೆ ಚರ್ಚಿಸಿರುವುದಲ್ಲದೆ ಧಾರ್ಮಿಕ ಸಂಸ್ಕೃತಿಯ ಬಗ್ಗೆಯೂ ವಿವರಗಳನ್ನು ಕೊಟ್ಟಿದ್ದಾರೆ. ಶಿಲ್ಪಗಳ ಬಗ್ಗೆ ಮತ್ತು ಆ ಕಲೆಯ ಆಶಯವೇನು ಎಂಬುದರ ಬಗ್ಗೆ ವಿವರಿಸುತ್ತ, ಬೌದ್ಧ, ಜೈನ ಧರ್ಮಕ್ಕಿಂತ ಶಿವ–ಶಕ್ತಿಯರ ಪ್ರಭಾವ

ವೈಭವಗಳನ್ನು ನಾನಾ ರೂಪಗಳಲ್ಲಿ ಕಾಣಬಹುದೆಂದಿದ್ದಾರೆ. ಶಿವನನ್ನು ರೌದ್ರ, ಸೌಮ್ಯ, ಗಂಭೀರ, ನಾಶಕಾರಿ, ಭಿಕ್ಷುಕ, ಪ್ರೇಮಿ, ಸತ್ಯಸ್ವರೂಪಿ, ವಿಶ್ವವ್ಯಾಪಿ, ಯೋಗಿ ಮುಂತಾದ ರೂಪಗಳಲ್ಲಿ ಕಾಣಬಹುದು. ಪಾರ್ವತಿಯು ಶಕ್ತಿಸ್ವರೂಪಿಣಿ, ದುರ್ಗೆ, ಮಹಿಷಾಸುರಮರ್ದಿನಿ, ರಣಕಾಳಿ, ಶಿವನ ಪ್ರಿಯಪತ್ನಿ, ಮಮತಾಮಯಿ ತಾಯಿಯಾಗಿ ಹೇಗೆ ಕಾಣಿಸಿಕೊಳ್ಳುತ್ತಾಳೆ ಎಂಬುದನ್ನು ನಿರೂಪಿಸಿದ್ದಾರೆ.

ಕ್ರಿ.ಶ.೧೯೫೮ ರಲ್ಲಿ ಆರ್. ಎ. ಸೇನ್ ಗುಪ್ತ ಅವರ "Guide to the Buddhist Caves of Ellora'' ಎಂಬ ಲೇಖನವು ``Ancient Monuments of India, Vol. IV''ನಲ್ಲಿ ಪ್ರಕಟವಾಗಿದೆ. ಕ್ರಿ.ಶ. ೧೯೬೨ ಮತ್ತು ೧೯೬೪ ರಲ್ಲಿ ಆರ್.ಎಸ್. ಗುಪ್ತೆಯವರು ತಮ್ಮ "The Iconography of The Buddhist Sculptures (Caves) at Ellora" ಕೃತಿಯಲ್ಲಿ ಅಜಂತಾ, ಎಲ್ಲೋರ, ಔರಂಗಾಬಾದ್ ಗುಹೆಗಳ ಬಗ್ಗೆ ಬರೆಯುವಾಗ ಅಲ್ಲಿನ ಶಿಲ್ಪಗಳು ಮತ್ತು ಶಿಲ್ಪಲಕ್ಷಣಗಳನ್ನು ಕುರಿತು ವಿವೇಚಿಸಿದ್ದಾರೆ. ಅದರಲ್ಲಿ ಇವುಗಳ ಬೆಳವಣಿಗೆಯನ್ನು ಕುರಿತು ಹಂತಹಂತವಾಗಿ ಚರ್ಚಿಸಿದ್ದಾರೆ.

ಕ್ರಿ.ಶ.೧೯೬೪ ರಲ್ಲಿ ಶ್ರೀ ಎಂ.ಕೆ. ಧವಳೀಕರ್‌ರವರು "Master Pieces of Rashtrakuta Art" ಎಂಬ ಚಿಕ್ಕ ಹೊತ್ತಿಗೆಯಲ್ಲಿ ರಾಷ್ಟ್ರಕೂಟರ ಕಲೆಯ ಉತ್ಕೃಷ್ಟ ಭಾಗಗಳನ್ನು ಬಳಸಿಕೊಂಡು ನಿರೂಪಿಸಿದ್ದಾರೆ. ಇದೊಂದು ಏಕವಿಷಯವುಳ್ಳ ಗ್ರಂಥವಾಗಿದೆ. ಇದರಲ್ಲಿ ರಾಷ್ಟ್ರಕೂಟರಿಗೆ ಸೇರಿದ, ಗುಹೆಯನ್ನು ಕೊರೆದು ಮಾಡುವ ವಾಸ್ತುಶೈಲಿಯ ಸ್ವರೂಪದ ಬಗ್ಗೆ ನೀಡಿರುವ ವಿವರಣೆ ಉತ್ತಮವಾಗಿದೆ.

ಕ್ರಿ.ಶ. ೧೯೬೭ ರಲ್ಲಿ ಸ್ಪಿಂಕ್ ವಾಲ್ಟರ್‌ರವರು "Ajanta To Ellora" ಎಂಬ ತಮ್ಮ ಗ್ರಂಥದಲ್ಲಿ ಕಲೆಯ ಬೆಳವಣಿಗೆಯ ಬಗ್ಗೆ ದೀರ್ಘವಾಗಿ ಚರ್ಚಿಸಿದ್ದಾರೆ. ಅಜಂತದ ಕಲೆಯ ಪ್ರಭಾವ ಎಲ್ಲೋರದ ಕಲೆಯಲ್ಲಿ ಯಾವ ರೀತಿ ಕಾಣಿಸಿಕೊಳ್ಳುತ್ತದೆ ಎನ್ನುವುದನ್ನೂ ವಿವರಿಸಿದ್ದಾರೆ. ``Ellora's Earliest Phase'' ಎನ್ನುವ ಲೇಖನವು ``Bulletin of the American Academy of Benares I''ನಲ್ಲಿ ಪ್ರಕಟವಾಗಿದೆ.

ಕ್ರಿ.ಶ. ೧೯೬೮ ರಲ್ಲಿ "Czuma, Stanisaiw Jerzy"ಯವರು "The Brahmanical Rashtrakuta Monuments of Ellora" ಎಂಬ ಸಂಶೋಧನಾ ಮಹಾಪ್ರಬಂಧವನ್ನು ಮಿಚಿಗಾನ್ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಇದರಲ್ಲಿ

ರಾಷ್ಟ್ರಕೂಟರ ಕಾಲದಲ್ಲಿ ರಚನೆಯಾದ ವೈದಿಕ ಗುಹಾಲಯಗಳ ಬಗ್ಗೆ ವಿವರವಾಗಿ ಚರ್ಚೆ ಮಾಡಿದ್ದಾರೆ.

ಕ್ರಿ.ಶ.೧೯೭೧ ರಲ್ಲಿ ಶ್ರೀ ಜಿ.ಬಿ. ದೇಗ್ಲೂರ್‌ಕರ್‌ರವರು ತಮ್ಮ ಸಂಶೋಧನಾ ಗ್ರಂಥವಾದ "Cultural History of Marathwada"ದಲ್ಲಿ ಮರಾಠವಾಡ ಪ್ರದೇಶದಲ್ಲಿದ್ದ ಸಾಂಸ್ಕೃತಿಕ ಇತಿಹಾಸ ಮತ್ತು ಅದರ ಬೆಳವಣಿಗೆಯನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಕ್ರಿ.ಶ.೧೯೭೩–೭೮ ರ ಸುಮಾರಿಗೆ ಶ್ರೀ ಆರ್.ಎಸ್. ಪಂಚಮುಖಿಯವರು "ಕರ್ನಾಟಕದ ಇತಿಹಾಸ"ವೆಂಬ ಗ್ರಂಥದಲ್ಲಿ ರಾಷ್ಟ್ರಕೂಟರ ಮೂಲ, ಕುಲ, ಗೋತ್ರ, ಅವರ ಕೆಲವು ಶಾಖೆಗಳು ಮುಂತಾದವುಗಳ ಬಗ್ಗೆ ಅಧ್ಯಯನ ಮಾಡಿ ವಿಮರ್ಶಿಸಿದ್ದಾರೆ. ಹಾಗೆಯೇ ಕೆಲವು ಶಾಸನಗಳ ಆಧಾರದಿಂದ ರಾಷ್ಟ್ರಕೂಟರ ಇತಿಹಾಸದ ಅನೇಕ ಸಮಸ್ಯೆಗಳನ್ನು ಚರ್ಚಿಸಿದ್ದಾರೆ.

ಕ್ರಿ.ಶ. ೧೯೭೨ ರಲ್ಲಿ ಶ್ರೀ ಎಂ. ಲಿಸಿರಿಯಾ ಅವರು "Social and Economic History of Karnataka" ಎನ್ನುವ ತಮ್ಮ ಪ್ರಬಂಧವನ್ನು ಪಾಟ್ನಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಇದರಲ್ಲಿ ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಇತಿಹಾಸವನ್ನು ಹೇಳುವಾಗ ರಾಷ್ಟ್ರಕೂಟರ ಕಾಲದಲ್ಲಿ ಇದ್ದಂತಹ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಗಮನಿಸಿ ಅವುಗಳ ವಿಶೇಷತೆಯ ಬಗ್ಗೆ ತಿಳಿಸಿದ್ದಾರೆ.

ಕ್ರಿ.ಶ.೧೯೭೨ ರಲ್ಲಿ "ಸ್ಟೆರ್ನ್ ಫಿಲಿಪ್" ಅವರು "Colonnes indiennesd Ajanta et d'Ellora, evolution et repercussions, styles Gupta et post- Gupta" ಎನ್ನುವ ಲೇಖನವನ್ನು "Publications du muse'e Guimet Recherches et Documents d'Art et d'Archeologie, Vol.II" ಎನ್ನುವ ಪತ್ರಿಕೆಯಲ್ಲಿ ಬರೆದಿದ್ದಾರೆ.

ಕ್ರಿ.ಶ.೧೯೭೩ ರಲ್ಲಿ ಶ್ರೀ ಮುಳಿಯ ತಿಮ್ಮಪ್ಪಯ್ಯನವರು "ಕವಿರಾಜಮಾರ್ಗ ವಿವೇಕ"ವೆಂಬ ಕೃತಿಯನ್ನು ಬರೆದಿದ್ದಾರೆ. ಈ ಗ್ರಂಥವನ್ನು ಎರಡು ಭಾಗಗಳಾಗಿ ವಿಂಗಡಿಸಿ, ಮೊದಲನೆಯ ಭಾಗದಲ್ಲಿ ರಾಷ್ಟ್ರಕೂಟರ ಇತಿಹಾಸವನ್ನು ದೊರೆ ಅಮೋಘವರ್ಷ ನೃಪತುಂಗನವರೆಗೆ ಬರೆದಿದ್ದಾರೆ. ಎರಡನೆಯ ಭಾಗದಲ್ಲಿ "ಕವಿರಾಜಮಾರ್ಗ" ಗ್ರಂಥದಲ್ಲಿರುವ ಅಲಂಕಾರಗಳು, ಅವುಗಳ ಪ್ರಯೋಗ ಮುಂತಾದ ವಿವರಣೆಗಳಿವೆ. ಎರಡನೆಯ ಭಾಗವು ದೀರ್ಘವಾಗಿದೆ. ಶ್ರೀ ಪಾಠಕ್ ಎಂಬ ವಿದ್ವಾಂಸರು

"Kavirajamarga of Nrupathunga" ಎಂಬ ಗ್ರಂಥವನ್ನು ಬರೆದಿದ್ದಾರೆ. ಶ್ರೀ ಎಂ.ಎಂ. ಕಲ್ಬುರ್ಗಿಯವರು "ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ" ಎಂಬ ಸಂಶೋಧನಾ ಗ್ರಂಥವನ್ನು ಕ್ರಿ.ಶ. ೧೯೭೩ ರಲ್ಲಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ್ದಾರೆ. ಈ ಗ್ರಂಥದಲ್ಲಿ "ಕವಿರಾಜಮಾರ್ಗ" ಕೃತಿಯ ರಚನೆಗಿದ್ದ ಕಾವ್ಯ ಪರಿಸರವನ್ನು ಮುಖ್ಯವಾಗಿ ಅಭ್ಯಾಸ ಮಾಡಿದ್ದು ಆ ಕಾಲದಲ್ಲಿದ್ದ ಕವಿಗಳು ಮತ್ತು ಕೃತಿಗಳನ್ನು ಸೂಕ್ಷ್ಮ ಅಧ್ಯಯನಕ್ಕೆ ಒಳಪಡಿಸಿದ್ದಾರೆ.

ಕವಿಗಳು, ಸಾಹಿತಿಗಳು ಕೃತಿರಚನೆ ಮಾಡಿದಾಗ ಸಹಜವಾಗಿ ಅವರ ಆಸಕ್ತಿ ಸಾಹಿತ್ಯದ ಕಡೆಗಿರುತ್ತದೆ. ಆದ್ದರಿಂದಲೇ ಮುಳಿಯ ತಿಮ್ಮಪ್ಪಯ್ಯನವರು ರಾಷ್ಟ್ರಕೂಟರ ಇತಿಹಾಸವನ್ನು ಪೂರ್ತಿ ಹೇಳದೆ ತಮಗೆ ಅಗತ್ಯವಾಗಿ ಬೇಕಾಗಿದ್ದ ಅಮೋಘವರ್ಷ ನೃಪತುಂಗನವರೆಗೆ ತಂದು ನಿಲ್ಲಿಸಿಬಿಡುತ್ತಾರೆ. ಕಲ್ಬುರ್ಗಿಯವರು ತಾವು ಆರಿಸಿಕೊಂಡ ವಿಷಯಕ್ಕೆ ಅನುಗುಣವಾಗಿ 'ಕವಿರಾಜಮಾರ್ಗ'ವು ರಚಿತವಾದ ಪರಿಸರದಲ್ಲಿದ್ದ ಕಾವ್ಯಪ್ರಕಾರಗಳು, ಪ್ರಯೋಗ, ಪ್ರಭಾವ ಮುಂತಾದ ವಿಚಾರಗಳನ್ನು ಕೇಂದ್ರವಾಗಿರಿಸಿಕೊಂಡು ಅಧ್ಯಯನ ಮಾಡಿರುವುದು ಕಂಡುಬರುತ್ತದೆ.

ರಾ.ಹ. ದೇಶಪಾಂಡೆಯವರು ರಚಿಸಿರುವ "ಕರ್ನಾಟಕ ಸಾಮ್ರಾಜ್ಯ" ಸಂಪುಟ–೨, ಭಾಗ–೧ ರಾಷ್ಟ್ರಕೂಟರ ಬಗ್ಗೆ ಬರೆದ ಕೃತಿಯಾಗಿದೆ. ಇದರಲ್ಲಿ ರಾಷ್ಟ್ರಕೂಟರು ಯಾರು? ಅವರಲ್ಲಿ ನಡೆದ ಅಂತಃಕಲಹ, ಸಾಮ್ರಾಜ್ಯದ ಬೆಳವಣಿಗೆ ಮುಂತಾದವುಗಳ ಬಗ್ಗೆ ಚರ್ಚಿಸುತ್ತ, ಅನೇಕ ಸಂಶಯಗಳ ಕಡೆಗೆ ಬೆರಳು ಮಾಡುತ್ತ ನಮ್ಮ ಗಮನವನ್ನು ಸೆಳೆಯುತ್ತಾರೆ. ತಮ್ಮ ಸಂಶಯಗಳಿಗೆ ಸರಿಯಾದ ಉತ್ತರವನ್ನು ನೀಡಲು ಸಾಧ್ಯವಾಗದಿದ್ದಾಗ, ಊಹೆಗಳ ಮೂಲಕ ಉತ್ತರಿಸಲು ಪ್ರಯತ್ನಿಸಿದ್ದಾರೆ. ತಮ್ಮ ಊಹೆಗೆ ಆಧಾರವನ್ನೂ ಕೊಡುತ್ತಾರೆ. ಪ್ರತಿಯೊಬ್ಬ ದೊರೆಯ ಬಗ್ಗೆ ಚರ್ಚಿಸಿದ ನಂತರ ಶಾಸನಗಳ ಸಾರಾಂಶವನ್ನು ನೀಡುತ್ತಾರೆ. ಇವರ ಪ್ರಯತ್ನ ಅನೇಕ ಹೊಸ ವಿಚಾರಗಳ ಮೂಲಕ ಸಂಶಯ ನಿವಾರಣೆಗೆ ಆಸ್ಪದ ನೀಡುತ್ತದೆ. ಇದು ಸ್ವತಃ ಅವರಿಗೇ ತಿಳಿದಿರಲಿಲ್ಲವೇನೋ ಎನಿಸುತ್ತದೆ. ಅನಿಶ್ಚಿತ ವಿಷಯಗಳನ್ನು ಕುರಿತು ಅವರು ಮಾಡುವ ಊಹೆಯ ಪ್ರಯತ್ನ ಓದುಗನಿಗೆ ಅಥವಾ ರಾಷ್ಟ್ರಕೂಟರ ಬಗ್ಗೆ ಸಂಶೋಧನೆ ಮಾಡುವ ವಿದ್ಯಾರ್ಥಿಗೆ ಹೊಸ ಸುಳಿವನ್ನು ಕೊಡುತ್ತದೆ. ಇಂತಹ ಸಂದರ್ಭಗಳು ಇವರ ಕೃತಿಯಲ್ಲಿ ಹಲವಾರಿವೆ. ಕೆಲವು ಕಡೆ ಊಹೆಗಳು ಅಷ್ಟೇ ಬಾಲಿಶವೆನಿಸುತ್ತದೆ. ಆದರೂ

ಹಲವಾರು ಕಾರಣಗಳಿಂದ ಇದೊಂದು ಮಾಹಿತಿಪೂರ್ಣ ಗ್ರಂಥವೆಂದು ಹೇಳಬಹುದಾಗಿದೆ.

ಕ್ರಿ.ಶ. ೧೯೭೩ ರಲ್ಲಿ ಶ್ರೀ ಪಥಣಕರ್‌ರವರು ನಾಗಪುರ ವಿಶ್ವವಿದ್ಯಾಲಯಕ್ಕೆ "Kailasa: A Cultural Study" ಎಂಬ ಸಂಶೋಧನಾ ಗ್ರಂಥವನ್ನು ಸಾದರಪಡಿಸಿದ್ದಾರೆ. ಇದರಲ್ಲಿ ಎಲ್ಲೋರದ ಕೈಲಾಸ ದೇವಾಲಯದ ಬೆಳವಣಿಗೆಯನ್ನು ಹಂತಹಂತವಾಗಿ ನೀಡಿದ್ದಾರೆ.

ಕ್ರಿ.ಶ. ೧೯೭೭ ರಲ್ಲಿ ಶ್ರೀ ಜೋಸ್ ಫೆರಿರಾ ಅವರು "Monolithic Jinas: The Iconography of The Jain Temples of Ellora" ಎಂಬ ತಮ್ಮ ಪುಸ್ತಕದಲ್ಲಿ ಎಲ್ಲೋರದ ಜೈನ ದೇವಾಲಯಗಳಲ್ಲಿರುವ ಏಕಶಿಲೆಯ ಜಿನಬಿಂಬಗಳು ಮತ್ತು ಶಿಲ್ಪ ಲಕ್ಷಣಗಳ ಬಗ್ಗೆ ವಿವರಿಸಿದ್ದಾರೆ. ಲೇಖಕರು ಆಗ ತಮಗೆ ಸಹಾಯ ಮಾಡಿದ ಮಾರ್ಗದರ್ಶಿಯನ್ನು ಸ್ಮರಿಸುತ್ತ ಶಿಲ್ಪಗಳ ಅಧ್ಯಯನವನ್ನು ನನಗೂ ಕಲಿಸಿದರು ಎಂದಿದ್ದಾರೆ. ಇದರಲ್ಲಿ ಅವರ ಸ್ವಂತ ಅಭಿಪ್ರಾಯಕ್ಕಿಂತ ಹೆಚ್ಚಾಗಿ ಬೇರೆಯವರ ಅನಿಸಿಕೆಗಳೇ ಇರುವುದು ಕೃತಿಯಲ್ಲಿ ಸ್ವಂತಿಕೆಯ ಕೊರತೆಯಿರುವುದನ್ನು ಎತ್ತಿಹಿಡಿಯುತ್ತದೆ.

ಕ್ರಿ.ಶ.೧೯೭೭ ರಲ್ಲಿ Chatam, Doris Clark ಎನ್ನುವವರು "Stylistic Sources and Relationships of the Kailasa Temple at Ellora" ಎನ್ನುವ ಮಹಾಪ್ರಬಂಧವನ್ನು ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಇದರಲ್ಲಿ ಸಮಕಾಲೀನ ಶೈಲಿಯ ಮೂಲಗಳನ್ನು, ಸಂಬಂಧಗಳನ್ನು ಕುರಿತು ಎಲ್ಲೋರದ ಕೈಲಾಸ ದೇವಾಲಯವನ್ನು ಆಧಾರವಾಗಿ ಇಟ್ಟುಕೊಂಡು ಚರ್ಚಿಸಿದ್ದಾರೆ.

ಕ್ರಿ.ಶ. ೧೯೮೦ ರಲ್ಲಿ ಶ್ರೀ ಟಿ.ವಿ. ಪತಿಯವರು "Elura: A Cultural Study" ಎಂಬ ಸಂಶೋಧನಾ ಪ್ರಬಂಧವನ್ನು ಮರಾಠವಾಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ್ದಾರೆ. ಇವರು ಎಲ್ಲೋರದ ದೇವಾಲಯ, ಗುಹೆಗಳಲ್ಲಿರುವ ಶಿಲ್ಪಗಳು, ಆಭರಣಗಳು, ಆಯುಧಗಳು, ಕೇಶಾಲಂಕಾರ, ವಸ್ತ್ರಾಲಂಕಾರ ಮುಂತಾದವುಗಳನ್ನು ರೇಖಾಚಿತ್ರಗಳ ಮೂಲಕ ವಿವರಿಸುತ್ತಾ ಹೋಗಿದ್ದಾರೆ.

ಕ್ರಿ.ಶ.೧೯೮೧ ರಲ್ಲಿ Hawley, John Steratton ಎನ್ನುವವರು "Scenes from the Childhood of Krishna on the Kailasanatha Temple, Ellora" ಎಂಬ ಲೇಖನದಲ್ಲಿ ಕೃಷ್ಣನ ಬಾಲಲೀಲೆಗಳನ್ನು ಎಲ್ಲೋರದ ಕೈಲಾಸನಾಥ ದೇವಾಲಯದಲ್ಲಿ ವಿವಿಧ ದೃಶ್ಯಾವಳಿಗಳಲ್ಲಿ ಕೊರೆದಿರುವುದರ ಬಗ್ಗೆ ವಿವರ ಪೂರ್ಣವಾದ ಪರಿಚಯವನ್ನು ಮಾಡಿಕೊಟ್ಟಿದ್ದಾರೆ.

ಕ್ರಿ.ಶ.೧೯೮೧–೮೨ ರಲ್ಲಿ Heston, Mary Beth ಎನ್ನುವವರು "Iconographic Themes of the Gopura of the Kailasanatha Temple at Ellora" ಗ್ರಂಥದಲ್ಲಿ ಶಿಲ್ಪಕಲೆಯ ವಸ್ತುವಿಚಾರದಲ್ಲಿ ಎಲ್ಲೋರ ಕೈಲಾಸನಾಥ ದೇವಾಲಯದ ಗೋಪುರಗಳ ವೈವಿಧ್ಯತೆಯನ್ನು ವಿವರಿಸಿದ್ದಾರೆ. ಕ್ರಿ.ಶ. ೧೯೮೩ ರಲ್ಲಿ Malandra, Geri Hockfield ಎನ್ನುವವರು "The Buddhist Caves at Ellora" ಎನ್ನುವ ಸಂಶೋಧನಾ ಮಹಾಪ್ರಬಂಧವನ್ನು Minnesota ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಇದರಲ್ಲಿ ಎಲ್ಲೋರದಲ್ಲಿರುವ ಬೌದ್ಧಗುಹೆಗಳ ಬಗ್ಗೆ ವಿವರವಾಗಿ ಚರ್ಚಿಸಿದ್ದಾರೆ.

ಕ್ರಿ.ಶ. ೧೯೮೭ ರಲ್ಲಿ ಶ್ರೀ ಕೆ.ವಿ. ಸೌಂದರರಾಜನ್ ಅವರು "The Ellora Monoliths (Rashtrakuta Architecture in The Deccan)" ಎಂಬ ಕೃತಿಯನ್ನು ಬರೆದಿದ್ದಾರೆ. ಶ್ರೇಷ್ಠವಾದ ಧಾಟಿಯಲ್ಲಿನ ಶಿಲ್ಪಗಳು ಎನ್ನುತ್ತ ಅದರಲ್ಲೂ ರಾಷ್ಟ್ರಕೂಟ ಶೈಲಿಯ ಉತ್ಕೃಷ್ಟ ಉದಾಹರಣೆಯಾಗಿ ಎಲ್ಲೋರದ ಕೈಲಾಸನಾಥ ದೇವಾಲಯ ಮತ್ತು ಇತರ ಗುಹಾ ಸಮುಚ್ಛಯವನ್ನು ಹೇಳಬಹುದೆಂದಿದ್ದಾರೆ. ವಿವಿಧ ಪ್ರಕಾರಗಳ ಶಿಲ್ಪಶೈಲಿಗಳನ್ನು ಕಾಣಬಹುದು. ಪಲ್ಲವರ ಮಹಾಬಲಿಪುರಂನ ಕಲ್ಲಿನ ರಥ ಮತ್ತು ಕಳಗುಮಲೈಯಲ್ಲಿರುವ ಚೋಳರ ರಚನೆಯ ಜೊತೆ ಹೋಲಿಸಿ ನೋಡುತ್ತ ಕೈಲಾಸ ದೇವಾಲಯದ ವಿಶೇಷತೆಯನ್ನು ಎತ್ತಿಹಿಡಿದಿದ್ದಾರೆ. ಎಲ್ಲೋರಕ್ಕಿಂತ ಮೊದಲು ಮತ್ತು ನಂತರದ ಏಕಶಿಲಾ ಶಿಲ್ಪಗಳ ಮೇಲೆ ಇದರ ಪ್ರಭಾವ ಏನಿತ್ತು ಎನ್ನುವುದರ ಬಗ್ಗೆ ಹೆಚ್ಚು ಗಮನವನ್ನು ಕೊಟ್ಟಿದ್ದಾರೆ. ಶಿಲ್ಪಕಲಾ ನಿಪುಣತೆಯ ಆಧಾರದ ಮೇಲೆ ವಿಶ್ಲೇಷಣೆ ಮಾಡುತ್ತ ಅನೇಕ ಹೊಸ ವಿಚಾರಗಳನ್ನು ಹೇಳಿದ್ದಾರೆ. ಎಲ್ಲಕ್ಕಿಂತ ಮುಖ್ಯವಾಗಿ ರಾಷ್ಟ್ರಕೂಟ ಶೈಲಿಯನ್ನು ಗುರುತಿಸುವ ಪ್ರಯತ್ನಮಾಡಿ ಅದರಲ್ಲಿ ಯಶಸ್ವಿಯಾಗಿದ್ದಾರೆ.

ಉತ್ತರ ಕರ್ನಾಟಕದಲ್ಲಿ ಸುಮಾರು ೨೫೦ ಕ್ಕೂ ಹೆಚ್ಚು ರಾಷ್ಟ್ರಕೂಟರ ಮತ್ತು ರಾಷ್ಟ್ರಕೂಟ ಶೈಲಿಯ ದೇವಾಲಯಗಳಿವೆ. ಇದರ ಬಗ್ಗೆ ಹೆಚ್ಚು ಗಮನ ಹರಿಸದೇ ಇರುವುದರಿಂದ ರಾಷ್ಟ್ರಕೂಟ ವಾಸ್ತು ಶೈಲಿಯ ಅಧ್ಯಯನವು ಪೂರ್ಣವಾಗಿಲ್ಲವೆಂದೇ ಹೇಳಬೇಕು. ಉತ್ತರಭಾರತದ ಯಾವುದೇ ವಿದ್ವಾಂಸರು ರಾಷ್ಟ್ರಕೂಟರ ವಾಸ್ತು ಶೈಲಿಯನ್ನು ಅಧ್ಯಯನ ಮಾಡಹೊರಟರೆ ಎಲ್ಲೋರ, ಎಲಿಫೆಂಟಾ, ಜೋಗೇಶ್ವರಿ, ಮಂಡಪೇಶ್ವರಗಳ ಬಗ್ಗೆ ಮಾತ್ರ ಹೇಳಿ ಅದಷ್ಟನ್ನು ಕುರಿತು ಚರ್ಚಿಸಿದ್ದಾರೆ. ಬಾದಾಮಿ ಐಹೊಳೆಗಳ ಹೆಸರನ್ನು ಕೆಲವರು ಪ್ರಸ್ತಾಪಿಸಿದ್ದಾರೆ. ಉಳಿದ ಯಾವ ದೇವಾಲಯವನ್ನೂ ಹೆಸರಿಸದಿರುವುದು ಆಶ್ಚರ್ಯದ ಜೊತೆಗೆ ವಿಪರ್ಯಾಸವೆನ್ನಿಸುತ್ತದೆ. ಎಲ್ಲೋರದ ಕೈಲಾಸ ದೇವಾಲಯದ ಬಗ್ಗೆ ಏನೆಲ್ಲ ಚರ್ಚೆ ಮಾಡಿದರೂ ಮಧ್ಯಪ್ರದೇಶದ ಧಮ್ನಾರ್ ಅಥವಾ ಧರ್ಮರಾಜೇಶ್ವರದಲ್ಲಿರುವ ಏಕಶಿಲೆಯ ಶಿವ ದೇವಾಲಯವನ್ನಾಗಲೀ, ಅಲ್ಲಿರುವ ಎಂಬತ್ತು ಬೌದ್ಧ ಜೈನ ಗುಹೆಗಳ ಬಗ್ಗೆಯಾಗಲೀ ಪ್ರಸ್ತಾಪ ಮಾಡದಿರುವುದು ಸೋಜಿಗವೆನ್ನಿಸುತ್ತದೆ. ಶಿಲ್ಪಗಳು ಬಹಳ ಕಡಿಮೆಯಿದ್ದರೂ ಆ ಸ್ಥಳ ಮತ್ತು ವಾಸ್ತುವನ್ನು ಯಾರೂ ಉಲ್ಲೇಖಿಸುವುದಿಲ್ಲ. ಈ ಪ್ರದೇಶಗಳಲ್ಲಿ ರಾಷ್ಟ್ರಕೂಟರ ಶಾಖೆಯೊಂದು ಆಳಿರುವುದು ಸ್ಪಷ್ಟವಾಗಿ ತಿಳಿದು ಬರುತ್ತದೆ.

ಕ್ರಿ.ಶ. ೧೯೬೦ ರಲ್ಲಿ ಶ್ರೀ ಎ.ಪಿ. ಮದನ್ ಅವರು ಕುರುಕ್ಷೇತ್ರ ವಿಶ್ವವಿದ್ಯಾಲಯಕ್ಕೆ "A History of The Rashtrakutas" ಎಂಬ ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ದಖ್ಖನ್ನಿನ ಚಾರಿತ್ರಿಕ ಭೂಗೋಳ, ರಾಜಕೀಯ ಸಾಧನೆ, ಸಾಮ್ರಾಜ್ಯ ಪತನದ ಹಾದಿ ಹಿಡಿದಿದ್ದು ಏಕೆ? ಹೇಗೆ? ಎನ್ನುವುದರ ಬಗ್ಗೆ ಚರ್ಚಿಸುತ್ತ ಖಚಿತ ತೀರ್ಮಾನಗಳನ್ನು ನೀಡಲು ಪ್ರಯತ್ನಿಸಿದ್ದಾರೆ. ಸಾಂಸ್ಕೃತಿಕ ಇತಿಹಾಸದ ಪರಿಚಯವನ್ನೂ ಮಾಡಿಕೊಟ್ಟಿದ್ದಾರೆ. ರಾಷ್ಟ್ರಕೂಟರ ಕೈಕೆಳಗೆ ದಕ್ಷಿಣಭಾರತದ ಇತಿಹಾಸ ಹೇಗಿತ್ತು ಎಂದು ಅಧ್ಯಯನ ಮಾಡಿದ್ದಾರೆ. ಈ ಅಧ್ಯಯನದ ಅನೇಕ ವಿಷಯಗಳ ಬಗ್ಗೆ ಹೇಳುವಾಗ ಅಲ್ಟೇಕರರ ಪುನರಾವರ್ತನೆಯಾದಂತೆ ಕಾಣುತ್ತದೆ. ಸಿಂಹಾಸನಕ್ಕಾಗಿ ನಡೆದ ದಂಗೆಗಳ ಬಗ್ಗೆ ವಿವರಿಸುವಾಗ ಅನೇಕ ಮಾಂಡಲೀಕರನ್ನೇ ಹೆಸರಿಸುವುದಿಲ್ಲ. ಒಂದೆರಡು ಸಂದರ್ಭಗಳಲ್ಲಿ ಮಾತ್ರ ದಂಗೆಯಲ್ಲಿ ಪಾಲ್ಗೊಂಡವರ ಹೆಸರನ್ನು ಉಲ್ಲೇಖಿಸಿದ್ದಾರೆ.

ಕ್ರಿ.ಶ. ೧೯೯೧ ರಲ್ಲಿ ಡಾ. ಎಸ್. ರಾಜಶೇಖರ ಅವರು "Rashtrakuta Art in Karnataka" ಎನ್ನುವ ಕೃತಿಯನ್ನು ಬರೆದಿದ್ದಾರೆ. ಕ್ರಿ.ಶ.೧೯೯೦ ರಲ್ಲಿ ನೀಡಿದ ಉಪನ್ಯಾಸದ ವಿವರಗಳನ್ನು ವಿಸ್ತಾರ ಮಾಡಿರುವ ಈ ಕೃತಿಯಲ್ಲಿ ಕರ್ನಾಟಕದಲ್ಲಿರುವ ದೇವಾಲಯಗಳ ಬಗ್ಗೆ ಗಮನ ಹರಿಸಿದ್ದಾರೆ. ಅನುಕೂಲಕ್ಕಾಗಿ ಮೂರು ವಿಭಾಗಗಳನ್ನು ಮಾಡಿಕೊಂಡಿದ್ದಾರೆ. ಅವರ ಸಂಶೋಧನೆಯಿಂದ ರಾಷ್ಟ್ರಕೂಟರು ಆರಂಭದಿಂದ ಇದ್ದ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡುವುದಕ್ಕೂ ಹಾಗೂ ನೂತನ ದೇವಾಲಯ ನಿರ್ಮಾಣಕ್ಕೂ ಉತ್ಸಾಹಿಗಳಾಗಿದ್ದರು ಎಂಬ ವಿಷಯದ ಕಡೆಗೆ ಗಮನ ಸೆಳೆದಿದ್ದಾರೆ. ವಾಸ್ತುವಿನ ಅವಿಭಾಜ್ಯ ಅಂಗಗಳಾದ ನಕ್ಷೆ, ಕಂಬಗಳ ವೈವಿಧ್ಯತೆ, ಬಾಗಿಲುವಾಡ, ಮಕರತೋರಣ ಮುಂತಾದವುಗಳ ವಿಶೇಷತೆಗಳನ್ನು ಹೇಳಿದ್ದಾರೆ. ರಾಷ್ಟ್ರಕೂಟ ಶೈಲಿಯ ಪ್ರಭಾವ ಸಾಮಂತರ ಶೈಲಿಗಳಲ್ಲಿಯೂ ಕಂಡುಬಂದಿರುವುದರ ಬಗ್ಗೆ ಚರ್ಚಿಸಿದ್ದಾರೆ. ಅನೇಕ ರಾಷ್ಟ್ರಕೂಟ ದೇವಾಲಯಗಳ ಪರಿಚಯವನ್ನೂ ಮಾಡಿಕೊಟ್ಟಿದ್ದಾರೆ. ಇದು ರಾಷ್ಟ್ರಕೂಟರ ವಾಸ್ತುವಿನ ದೃಷ್ಟಿಯಿಂದ ಬಹಳ ಉಪಯುಕ್ತವಾದ ಕೃತಿಯಾಗಿದ್ದು ಅನೇಕ ದೇವಾಲಯಗಳನ್ನು ಪರಿಚಯ ಮಾಡಿಕೊಡುವುದರಿಂದ ರಾಷ್ಟ್ರಕೂಟರ ವಾಸ್ತುವನ್ನು ಅಧ್ಯಯನ ಮಾಡುವವರಿಗೆ ಬಹಳ ಉಪಯೋಗವಾಗುತ್ತದೆ. ಈ ಅಧ್ಯಯನದಲ್ಲಿ ಸೀಮಿತತೆಯಿರುವುದರಿಂದ ಬಹಳ ವಿವರವಾಗಿ ವಿಶ್ಲೇಷಿಸಲು ಸಾಧ್ಯವಾಗಿಲ್ಲ ಎನ್ನುವ ಕೊರತೆಯನ್ನು ಬಿಟ್ಟರೆ ಶ್ಲಾಘನೀಯ ಪ್ರಯತ್ನ ಎಂದೇ ಹೇಳಬೇಕು.

ಕ್ರಿ.ಶ. ೧೯೯೨ ರಲ್ಲಿ ಶ್ರೀಮತಿ ಜಯಶ್ರೀ ಮಿಶ್ರಾ ಅವರು "Social and Economic Conditions Under The Imperial Rashtrakutas" ಎನ್ನುವ ಸಂಶೋಧನಾ ಪ್ರಬಂಧವನ್ನು ಪಾಟ್ನಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಇವರು ತಮ್ಮ ಪ್ರಬಂಧದ ಬಗ್ಗೆ ವಿವರಿಸುತ್ತ ಸಿಕ್ಕಿರುವ ಮೂಲಗಳನ್ನು ಅದು ಹೇಗೆ ಸಾಗುತ್ತದೆಯೋ ಅದೇ ರೀತಿ ಹೋಗಲು ಬಿಟ್ಟಿರುವುದಾಗಿಯೂ, ತಮ್ಮ ಸಿದ್ಧಾಂತಗಳನ್ನು ದೃಢೀಕರಿಸಲು ಬಲವಂತವಾಗಿ ಅವುಗಳನ್ನು ಬಳಸಿಕೊಂಡಿಲ್ಲ ಎಂದು ಹೇಳಿದ್ದಾರೆ. ರಾಷ್ಟ್ರಕೂಟರ ಪರಿಧಿಯನ್ನು ದಾಟಿ ಹೊರಗೆ ಹೋಗಿಲ್ಲ; ವಾದಕ್ಕೆ ಮತ್ತು ಹೋಲಿಕೆಗೆ ಮಾತ್ರ ಕೆಲವೊಮ್ಮೆ ಪರಿಧಿಯನ್ನು ಮೀರಿದ್ದೇನೆ ಎಂದಿದ್ದಾರೆ. ಸಾಮಾಜಿಕ ಸ್ಥಿತಿಗತಿಗಳು, ಶಿಕ್ಷಣ, ಕೃಷಿ, ಮತ್ತು ಕೈಗಾರಿಕೆ ಮುಂತಾದವುಗಳ ಬಗ್ಗೆ ಚರ್ಚಿಸಿದ್ದಾರೆ. ರಾಷ್ಟ್ರಕೂಟ ಪ್ರಮುಖ

ಪಟ್ಟಣಗಳ ಬಗ್ಗೆ ವಿವರವಾಗಿ ಚರ್ಚಿಸಿದ್ದಾರೆ. ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ಪೂರ್ಣಚಿತ್ರಣವನ್ನು ನೀಡಲು ಪ್ರಯತ್ನಿಸಿದ್ದಾರೆ. ತಮಗೆ ಸಿಕ್ಕಿರುವ ಶಾಸನಗಳ ಆಧಾರದಿಂದ ತಮ್ಮ ಸಿದ್ಧಾಂತಗಳನ್ನು ಮಂಡಿಸಿದ್ದಾರೆ. ಮೂಲದಲ್ಲಿ ಹೇಗೆ ಹೋಗುತ್ತದೆಯೋ ಹಾಗೆಯೇ ಬಳಸಿಕೊಂಡಿರುವುದರಿಂದ ಸಿದ್ಧಾಂತಗಳನ್ನು ಮಂಡಿಸುವಾಗ ಏರುಪೇರುಗಳಾಗಿವೆ.ಕೆಲವು ಸಿದ್ಧಾಂತಗಳಿಗೆ ಆಧಾರದ ಕೊರತೆಯಿದೆ. ಅಲ್ಟೇಕರ್ ಹೇಳಿರುವ ವಿಷಯಗಳು ಪುನರಾವರ್ತನೆಯಾಗಿರುವುದೂ ಉಂಟು. ಸಾಮಾಜಿಕ ಅಧ್ಯಯನವು ವಿವರವಾಗಿದೆ. ಒಟ್ಟಾರೆಯಾಗಿ ಕೆಲವು ನಿರ್ಣಯಗಳಿಗೆ ಬರಲು ಪ್ರಯತ್ನಿಸಿದ್ದರೂ ಇವರದೇ ಆದ ಸಿದ್ಧಾಂತಗಳನ್ನು ರೂಪಿಸಲು ಸಾಧ್ಯವಾಗಿಲ್ಲ.

ಕ್ರಿ.ಶ. ೧೯೯೪ ರಲ್ಲಿ ಶ್ರೀಮತಿ ಎಲಿಜಬತ್ ಅವರು "State in Medieval Deccan (7th to 10th Century)" ಎನ್ನುವ ಮಹಾಪ್ರಬಂಧವನ್ನು ಮಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ.

ಕ್ರಿ.ಶ. ೧೯೯೪ ರಲ್ಲಿ ಶ್ರೀಮತಿ ಶ್ಯಾಮಲಾ ರತ್ನಕುಮಾರಿಯವರು "Rashtrakuta Rajya" ಎನ್ನುವ ಮಹಾಪ್ರಬಂಧವನ್ನು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ರಾಷ್ಟ್ರಕೂಟರ ಕಾಲದ ಸಂಸ್ಕೃತ ಸಾಹಿತ್ಯವನ್ನಾಧರಿಸಿ ಆಡಳಿತದ ಮುಖ್ಯ ಆಧಾರವಾದ ಸಪ್ತಾಂಗಗಳನ್ನು ಕುರಿತು ನಿರೂಪಿಸಿದ್ದಾರೆ. ಇದೊಂದು ಉತ್ತಮ ಪ್ರಯತ್ನವಾಗಿದ್ದು ಅನೇಕ ಹೊಸ ವಿಷಯಗಳನ್ನು ಮಂಡಿಸಿದ್ದಾರೆ. ಸಾಹಿತ್ಯದ ಆಧಾರದಿಂದಲೇ ಬಹಳಷ್ಟು ವಿಚಾರಗಳನ್ನು ಮಂಡಿಸಿದ್ದರೂ ನಿಖರವಾದ ದಾಖಲೆಗಳನ್ನು ನೀಡಲು ಶಾಸನಗಳನ್ನೂ ಗಮನಿಸಿದ್ದಾರೆ.

ಕ್ರಿ.ಶ. ೧೯೯೪ ರಲ್ಲಿ ಶ್ರೀ ಬ್ರಹ್ಮಾನಂದ ದೇಶಪಾಂಡೆಯವರು "Studies in The Rashtrakuta Inscriptions" ಎಂಬ ಮಹಾಪ್ರಬಂಧವನ್ನು ನಾಗಪುರ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಈ ಗ್ರಂಥದಲ್ಲಿ ಮಾನಪುರ, ಅಚಲಾಪುರ ಮತ್ತು ಮಾನ್ಯಖೇಟದ ರಾಷ್ಟ್ರಕೂಟರ ಶಾಸನಗಳನ್ನು ಅಧ್ಯಯನ ಮಾಡಿದ್ದಾರೆ. ರಾಷ್ಟ್ರಕೂಟರ ಮೂಲ ಯಾವುದು? ರಾಜಧಾನಿಯ ಬಗೆಗಿನ ಚರ್ಚೆ, ವಂಶಾವಳಿಯ ವ್ಯತ್ಯಾಸ, ಮೂಲಪುರುಷ ಯಾರಾಗಿರಬಹುದು ಮುಂತಾದ ವಿಚಾರಗಳ ಬಗ್ಗೆ ಸ್ಪಿಂಕ್ ವಾಲ್ಟರ್, ವಿ.ವಿ. ಮಿರಾಷಿ ಮುಂತಾದವರ ತರ್ಕ ನಿರ್ಣಯಗಳಿಗೆ ತಮ್ಮ ಪ್ರತಿ ತರ್ಕ ವಾದಗಳನ್ನು

ಮಂಡಿಸಿದ್ದಾರೆ. ಅನೇಕ ಸಂದರ್ಭಗಳಲ್ಲಿ ನಿಖರ ಉಪಯುಕ್ತ ದಾಖಲೆಗಳನ್ನು ನೀಡಿ ವಿದ್ವಾಂಸರ ಲೋಪದೋಷಗಳನ್ನು ಎತ್ತಿ ಹಿಡಿದಿದ್ದಾರೆ. ನಂತರ ತಮ್ಮ ವಾದಗಳ ಮೂಲಕ ಏನಾಗಿರಬೇಕಾಗಿತ್ತು ಎನ್ನುವುದನ್ನು ಆಧಾರ ಸಮೇತ ವಿವರಿಸುತ್ತಾ ನಿರ್ಣಯಗಳನ್ನು ಮಂಡಿಸುವ ಪ್ರಯತ್ನ ಮಾಡಿದ್ದಾರೆ. ಕೆಲವೊಮ್ಮೆ ಹೊಸ ನಿರ್ಣಯದ ಸಮೀಪಕ್ಕೆ ಬಂದರೆ ಇನ್ನು ಕೆಲವು ಬಾರಿ ಹೊಸ ನಿರ್ಧಾರಕ್ಕೆ ಬಂದಿದ್ದಾರೆ. ಇವರ ಸಂಶೋಧನೆಯಿಂದ ಹಳೆಯ ವಾದಗಳು ಸ್ವಲ್ಪ ಬದಲಾಗಿವೆ. ಇನ್ನು ಕೆಲವು ಸಮಸ್ಯೆಗಳು ಉತ್ತರ ದೊರಕಬಹುದಾದ ಹಂತಕ್ಕೆ ತಲುಪಿವೆ. ಇಲ್ಲಿ ಕೂಡ ರಾಜಕೀಯ ಅಧ್ಯಯನಕ್ಕೇ ಹೆಚ್ಚಿನ ಒತ್ತು ನೀಡಿರುವುದು ಕಂಡುಬರುತ್ತದೆ. ಇವರ ಗಮನ ಮಾನಪುರ ಮತ್ತು ಎಲಿಚಪುರದ ರಾಷ್ಟ್ರಕೂಟರ ಪೂರ್ಣ ವಿವರವನ್ನು ನೀಡುವುದು ಮತ್ತು ಮಾನ್ಯಖೇಟದ ರಾಷ್ಟ್ರಕೂಟರ ಇತಿಹಾಸವನ್ನು ಪೂರ್ಣಗೊಳಿಸಲು ತಡೆಯಾಗಿದ್ದ ವಿವಾದಗಳನ್ನು ಬಗೆಹರಿಸುವುದಾಗಿತ್ತು. ತಮ್ಮ ಪ್ರಯತ್ನದಲ್ಲಿ ಇವರು ಸಾಕಷ್ಟು ಯಶಸ್ವಿಯಾಗಿದ್ದಾರೆ.

ಕ್ರಿ.ಶ. ೧೯೯೭ ರಲ್ಲಿ ಶ್ರೀ ಶಿವಣ್ಣ ಅವರು "Rashtrakuta Relations with Gangas of Talkad" ಎಂಬ ಸಂಶೋಧನಾ ಗ್ರಂಥವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಇದರಲ್ಲಿ 'ಭಾರತದ ಚರಿತ್ರೆಯನ್ನು ಬರೆಯುವಾಗ ಪ್ರಾದೇಶಿಕ ಚರಿತ್ರೆಯ ಬಗ್ಗೆ ಒತ್ತು ಕೊಡಲು ಸಾಧ್ಯವಿಲ್ಲ. ಹಾಗೆಯೇ ದೇಶದ ಚರಿತ್ರೆ ಬರೆಯಲು ಹೋಗಿ ಪ್ರಾದೇಶಿಕ ಚರಿತ್ರೆ ಬರೆದಿರುವ ಉದಾಹರಣೆಗಳೂ ಇವೆ. ಇಂತಹ ಮನೋಭಾವಗಳನ್ನು ಗಮನದಲ್ಲಿರಿಸಿಕೊಂಡಿದ್ದೇನೆ' ಎನ್ನುತ್ತ ತಮ್ಮ ಮಿತಿಯಲ್ಲಿ ತಾವು ಗಂಗ–ರಾಷ್ಟ್ರಕೂಟರ ಸಂಬಂಧಗಳ ಬಗ್ಗೆ ಚರ್ಚಿಸಿದ್ದಾರೆ. ಅಲ್ಟೇಕರರ ಅಭಿಪ್ರಾಯಗಳನ್ನು ಎಲ್ಲರೂ ಹೇಳುತ್ತಾರೆ. ಆದರೆ ಕೆಲವು ತಿದ್ದುಪಡಿಗಳ ಅಗತ್ಯವಿದೆ ಎಂದಿದ್ದಾರೆ. ತಮ್ಮ ಗ್ರಂಥದಲ್ಲಿ ಪ್ರಾದೇಶಿಕ ವಿವರಣೆಗಳನ್ನು ಹೇಳುತ್ತ, ಗಂಗರ ಇತಿಹಾಸವನ್ನು ತಿಳಿಸಿದ್ದಾರೆ. ರಾಷ್ಟ್ರಕೂಟರೊಂದಿಗೆ ಆರಂಭದಿಂದ ಇದ್ದಂತಹ ದ್ವೇಷ ಮಾಯವಾಗಿ ಸೌಹಾರ್ದತೆ ಮೂಡಿದ್ದು ನಂತರ ನಿಷ್ಠಾವಂತ ಬೆಂಬಲಿಗರಾಗಿ ಕೊನೆಯವರೆಗೂ ಉಳಿದುಕೊಂಡಿದ್ದರ ಬಗ್ಗೆ ವಿವರಿಸಿದ್ದಾರೆ.

ಕ್ರಿ.ಶ. ೨೦೦೧ ರಲ್ಲಿ ಶ್ರೀ ಹಂಪ ನಾಗರಾಜಯ್ಯನವರು "A History of The Rashtrakutas of Malkhed and Jainism" ಎಂಬ ಕೃತಿಯನ್ನು ಬರೆದಿದ್ದಾರೆ. 'ಈ

ಗ್ರಂಥದಲ್ಲಿ ವಿಚಾರಗಳ ದಾಖಲೆಯೇ ಮುಖ್ಯವಾಗಿದೆ' ಎಂದು ಮುನ್ನುಡಿಯಲ್ಲಿ ಹೇಳಿದ್ದಾರೆ. ವಿವರಣೆ ನೀಡುವುದು ಅವರ ಗುರಿಯಲ್ಲ. ದಾಖಲೀಕರಣ ಮಾತ್ರ ಮಾಡುವುದಾಗಿ ಹೇಳಿರುವುದರಿಂದ ವಿಷಯಗಳ ಸಂಗ್ರಹಣವನ್ನು ನೋಡಬಹುದು. ರಾಷ್ಟ್ರಕೂಟ ವಂಶ, ಮಾಂಡಲೀಕರು, ಸಾಹಿತ್ಯ, ಭಾಷೆ, ಧರ್ಮ ಮುಂತಾದವುಗಳ ಬಗ್ಗೆ ತಿಳಿಸಿದ್ದಾರೆ. ರಾಷ್ಟ್ರಕೂಟರು ಮತ್ತು ಜೈನಧರ್ಮ ಎಂಬುದೇ ಮುಖ್ಯ ವಿಷಯವಾದ್ದರಿಂದ ಜೈನಧರ್ಮದ ಬಗ್ಗೆ ಹೆಚ್ಚು ವಿವರಗಳಿವೆ. ಜೈನ ಸಂಘ, ಜೈನಕಲೆ ಮತ್ತು ವಾಸ್ತುವನ್ನು ಕುರಿತೂ ಬರೆದಿದ್ದಾರೆ. ಜೈನಧರ್ಮದ ಬಗ್ಗೆ ತಿಳಿಸುವಾಗ ಸಾಹಿತ್ಯ ಸೃಷ್ಟಿಯಲ್ಲಿ ಪ್ರಮುಖ ಪಾತ್ರವಹಿಸಿರುವ ಜೈನ ಕವಿಗಳು ಮತ್ತು ಮುನಿಗಳ ಬಗ್ಗೆ ವಿವರವಿದೆ. ರಾಜಾಶ್ರಯ ಮತ್ತು ದೊರೆಗಳ ಪ್ರೋತ್ಸಾಹದ ಬಗ್ಗೆಯೂ ತಿಳಿಸಿದ್ದಾರೆ. ಜೈನಧರ್ಮದ ಸಾರ, ಮರಣಕ್ಕೆ ಅನುಸರಿಸಿದ ವಿಧಾನಗಳು ಇತ್ಯಾದಿಗಳ ಬಗ್ಗೆ ತಿಳಿಸಿದ್ದಾರೆ.

ಕ್ರಿ.ಶ. ೨೦೦೧ ರಲ್ಲಿ ಶ್ರೀ ಜಿ.ಬಿ. ಕುಲಕರ್ಣಿಯವರು "ರಾಷ್ಟ್ರಕೂಟರ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಕ್ರಿ.ಶ. ೭೫೩ರಿಂದ ೯೭೩ರವರೆಗೆ)" ಎಂಬ ಸಂಶೋಧನಾ ಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಇದರಲ್ಲಿ ಅವರು, ಇದುವರೆಗೆ ನಡೆದಿರುವ ಅಧ್ಯಯನಗಳ ಬಗ್ಗೆ ವಿವರಿಸುತ್ತ 'ಅಲ್ಟೇಕರ್, ಮದನ್, ಜಯಶ್ರೀ ಮಿಶ್ರಾ ಅವರ ಸಂಶೋಧನಾ ಪ್ರಬಂಧಗಳು, ಬಾ.ರಾ. ಗೋಪಾಲರು ಸಂಪಾದಿಸಿರುವ "The Rashtrakutas of Malkhed" ಎಂಬ ಕೃತಿಯ ವಿಚಾರ ಸಂಕಿರಣದಲ್ಲಿ ಮಂಡಿಸಿದ ಹಲವಾರು ಪ್ರಬಂಧಗಳ ಸಂಗ್ರಹದಲ್ಲಿ ಕೊರತೆಗಳು ಕಾಣುತ್ತಿರುವುದರಿಂದ ರಾಷ್ಟ್ರಕೂಟರ ಸಮಗ್ರ ಅಧ್ಯಯನದ ಅವಶ್ಯಕತೆ ಇದೆಯೆಂದಿದ್ದಾರೆ.

ಎಸ್. ರಾಜಶೇಖರ್, ಜೇಮ್ಸ್ ಬರ್ಗೆಸ್, ಗುಪ್ತೆ, ಅಮಿತ್ ರಾಯ್ ಮುಂತಾದವರ ಗ್ರಂಥಗಳು ಕೇವಲ ರಾಷ್ಟ್ರಕೂಟರ ವಾಸ್ತುಶಿಲ್ಪಕ್ಕೆ ಸಂಬಂಧಿಸಿದೆ. ಇವುಗಳೆಲ್ಲ ರಾಷ್ಟ್ರಕೂಟರ ಸಮಗ್ರ ಸಂಸ್ಕೃತಿಯನ್ನು ಪರಿಚಯಿಸುವಲ್ಲಿ ಯಶಸ್ವಿಯಾಗಿಲ್ಲ ಎಂದಿದ್ದಾರೆ. ಹಲವಾರು ಲೋಪದೋಷಗಳನ್ನು ವಿವರಿಸುತ್ತ, ರಾಷ್ಟ್ರಕೂಟರ ಸಮಗ್ರ ಅಧ್ಯಯನವನ್ನು ಒಂದೇ ಕಡೆ ಸೇರಿಸುವುದೇ ತಮ್ಮ ಅಧ್ಯಯನದ ಗುರಿ ಎಂದಿದ್ದಾರೆ. ತಾವು ಮಾಡಬೇಕೆಂದಿರುವ ಉದ್ದೇಶಗಳನ್ನೂ

ತಿಳಿಸಿದ್ದಾರೆ. ಆದರೆ ಅಂತ್ಯದಲ್ಲಿ ಅನೇಕ ವಿಚಾರಗಳ ಪ್ರಸ್ತಾಪವಿಲ್ಲ. ಆರಂಭದಲ್ಲಿ ಹೇಳಿರುವ ಅನೇಕ ವಿಚಾರಗಳನ್ನು ಕೈಬಿಟ್ಟಿರುವುದು ಕಂಡುಬರುತ್ತದೆ. 'ಆಡಳಿತಕ್ಕೆ ಸಂಬಂಧಿಸಿದಂತೆ ಸಮಗ್ರ ಅಧ್ಯಯನವಾಗಿಲ್ಲ; ಅಸ್ಪಷ್ಟವಾಗಿದೆ' ಎಂದಿದ್ದಾರೆ. ರಾಷ್ಟ್ರಕೂಟರ ದೇವಾಲಯಗಳನ್ನು ಕುರಿತು ಸಮಗ್ರ ಸಮೀಕ್ಷೆಯ ಕಾರ್ಯ ಸ್ವತಂತ್ರವಾಗಿ ನಡೆಯಬೇಕೆಂದೂ ಆಶಿಸಿದ್ದಾರೆ. ರಾಷ್ಟ್ರಕೂಟರ ಸಾಮಂತರು ಕಟ್ಟಿದ ದೇವಾಲಯಗಳ ಬಗ್ಗೆ ಪ್ರತ್ಯೇಕ ಅಧ್ಯಯನವಾಗಬೇಕೆಂದು ಅಭಿಪ್ರಾಯಪಟ್ಟಿದ್ದಾರೆ. ಸಮಾಜದಲ್ಲಿ ಶ್ರಮಿಕ ವರ್ಗದವರ ಪಾತ್ರವನ್ನು, ಸಾಹಿತ್ಯವನ್ನು ಗುರುತಿಸಿರುವುದಾಗಿ ಹೇಳಿದ್ದಾರೆ. ಕೆಲವು ತೆರಿಗೆಗಳ ಅರ್ಥಗಳನ್ನು ಇನ್ನೂ ಸ್ಪಷ್ಟಪಡಿಸಬೇಕೆಂದು ಅಭಿಪ್ರಾಯಪಟ್ಟಿದ್ದಾರೆ.

ಅಧ್ಯಯನದ ಫಲದ ಬಗ್ಗೆ ಹೇಳುವುದಾದರೆ, ಸಮಗ್ರ ಅಧ್ಯಯನವೇ ಗುರಿ ಎಂದವರು ಶಾಸನಗಳ ಸಾಂಸ್ಕೃತಿಕ ಅಧ್ಯಯನದತ್ತ ಹೊರಳಿದ್ದು ಹೇಗೆ ಎಂದು ಸ್ಪಷ್ಟವಾಗುವುದಿಲ್ಲ. ಇನ್ನು ರಾಷ್ಟ್ರಕೂಟರ ಅಧ್ಯಯನಕ್ಕೆ ಸಂಬಂಧಿಸಿದಂತೆ ಕೆಲವೇ ಗ್ರಂಥಗಳನ್ನು ಮತ್ತು ಪ್ರಬಂಧಗಳನ್ನು ನೋಡಿದ್ದಾರೆ. ಆದ್ದರಿಂದ ಎಷ್ಟೋ ಹೊಸ ವಿಚಾರಗಳು, ನಿರ್ಧಾರಿತ ವಿಚಾರಗಳು ಇವರಿಗೆ ತಿಳಿದಿಲ್ಲದಿರುವುದು ಸ್ಪಷ್ಟವಾಗುತ್ತದೆ. ಕೊನೆಯಲ್ಲಿ ಸಮಗ್ರ ಸಂಸ್ಕೃತಿಯನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಲಾಗಿದೆ ಎಂದಿದ್ದಾರೆ. ತಮ್ಮ ಅಧ್ಯಯನದಲ್ಲಿ ಇದು ಸಾಧಿತವಾಗಿದೆಯೇ ಎಂದುದನ್ನು ಸ್ಪಷ್ಟವಾಗಿ ಹೇಳಿಲ್ಲ. ಆಡಳಿತಕ್ಕೆ ಸಂಬಂಧಿಸಿದಂತೆ ಅಧ್ಯಯನ ಅಸ್ಪಷ್ಟವಾಗಿದೆ ಎಂದವರು ಆಡಳಿತದ ಬಗ್ಗೆ ಬರೆದಿರುವ ಅಧ್ಯಾಯದಲ್ಲಿ 'ಸುವ್ಯವಸ್ಥಿತ ಆಡಳಿತವನ್ನು ಹೊಂದಿದ್ದು, ಅದು ಮುಂದಿನ ರಾಜಮನೆತನಗಳಿಗೆ ಮಾದರಿಯಾಗಿತ್ತು' ಎಂದಿದ್ದಾರೆ. ಈ ಎರಡೂ ಹೇಳಿಕೆಗಳನ್ನು ಒಟ್ಟಿಗೆ ಹೇಳುವುದು ಹೇಗೆ? ಹಾಗೆ ಹೇಳಿದರೂ ಕೂಡ ತಮ್ಮ ಅಧ್ಯಯನದ ಮೂಲಕ ಇದ್ದಂತಹ ಅಸ್ಪಷ್ಟತೆಯನ್ನು ಹೋಗಲಾಡಿಸಿದ್ದಾರೆಯೇ ಎಂಬುದನ್ನು ಸ್ಪಷ್ಟವಾಗಿ ತಿಳಿಸಿಲ್ಲ. ಯಾವುದೇ ವಿಚಾರವಾದರೂ ಬೇರೆ ಬೇರೆ ಆಕರಗಳನ್ನು ಕೊಡುತ್ತಾರೆಯೇ ಹೊರತು ತಮ್ಮ ಅನಿಸಿಕೆ ಅಭಿಪ್ರಾಯಗಳನ್ನು ಕೊಡುವುದಿಲ್ಲ! ಆದ್ದರಿಂದ ಈ ಸಂಶೋಧನೆಯಿಂದ ಬಂದ ಹೊಸ ವಿಚಾರ ಏನು ಎಂಬುದೇ ತಿಳಿಯುವುದಿಲ್ಲ.

ಕ್ರಿ.ಶ. ೨೦೦೨ ರಲ್ಲಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯಲ್ಲಿ ರಾಷ್ಟ್ರಕೂಟರ ಬಗ್ಗೆ ಎರಡು ದಿನಗಳ ವಿಚಾರ

ಸಂಕಿರಣವೊಂದು ನಡೆಯಿತು. ಇದರಲ್ಲಿ ಇದುವರೆಗೆ ನಡೆದಿರುವ ಅಧ್ಯಯನಗಳ ಚರ್ಚೆ ಪುನರಾವರ್ತನೆಯಾದುದೆ ಹೆಚ್ಚು. ಹೊಸ ಮಾಹಿತಿಗಳು ಕಡಿಮೆ. ೨೫-೩೦ ಹೊಸ ರಾಷ್ಟ್ರಕೂಟರ ಶಾಸನಗಳು ಸಿಕ್ಕಿದ್ದರೂ ಅವುಗಳಿಂದ ತಿಳಿಯುವ ಹೊಸ ಅಂಶಗಳನ್ನು ಸ್ಪಷ್ಟವಾಗಿ ತಿಳಿಸುವ ಪ್ರಯತ್ನ ಮಾಡಲಿಲ್ಲ. ವಾಸ್ತು, ಕಲೆ, ಲೋಹಶಿಲ್ಪ, ಶಾಸನ ಮುಂತಾದ ವಿಚಾರಗಳ ಬಗ್ಗೆ ಹಲವಾರು ಲೇಖನಗಳು ಮಂಡನೆಯಾದವು.

ಇದುವರೆಗೆ ರಾಷ್ಟ್ರಕೂಟರಿಗೆ ಸಂಬಂಧಿಸಿದಂತೆ ನಡೆದಿರುವ ಅಧ್ಯಯನಗಳಲ್ಲಿ ವಿಶೇಷ ಅಂಶಗಳನ್ನು ಗಮನಿಸಿದ್ದೇವೆ. ವಾಸ್ತವವಾಗಿ ಹೇಳುವುದಾದರೆ, ವಿಷಯ ಸಂಗ್ರಹಿಸಿ ಅಧ್ಯಯನ ಮಾಡಿದರೆ ಸಿಗುವ ಹೊಸವಿಚಾರಗಳು ನಮ್ಮನ್ನು ಮತ್ತಷ್ಟು ಆಳವಾಗಿ ಅಧ್ಯಯನ ಮಾಡಲು ಪ್ರೇರೇಪಿಸುತ್ತವೆ. ಕೆಲವು ಪುಸ್ತಕಗಳನ್ನು ಗಮನಿಸಿದಾಗ ಅನೇಕ ತಪ್ಪುಗಳನ್ನು ಕೂಡ ಯಥಾವತ್ತಾಗಿ ಚಿತ್ರಿಸುವ ಪರಿಪಾಠ ಕಂಡುಬಂದಿದೆ. ಸ್ವತಂತ್ರ, ತರ್ಕಶುದ್ಧ ಆಲೋಚನೆಗಳ ಅಗತ್ಯವಿದೆ ಎಂದು ಹೇಳಬೇಕಾದುದು ಅನಿವರ್ಯವಾಗಿದೆ. ಮುಕ್ತಚರ್ಚೆ, ವಿಚಾರ ವಿನಿಮಯ, ವಿಶ್ಲೇಷಣೆ, ವಿಮರ್ಶೆಗೆ ಅವಕಾಶವಿರಬೇಕಾದುದು ಬಹಳ ಮುಖ್ಯ. ವಿಚಾರಪರ ಚಿಂತನೆಗಳು, ವ್ಯಾಪಕವಾದ ಕ್ಷೇತ್ರಕಾರ್ಯ, ಪ್ರಾಮಾಣಿಕ ಅಭಿಪ್ರಾಯಗಳು, ಅದಕ್ಕೆ ಸರಿಯಾದ ಆಧಾರಗಳನ್ನು ನೀಡುವ ಕಾರ್ಯ ಇನ್ನೂ ವಿಸ್ತೃತವಾಗಿ ನಡೆಯಬೇಕಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ರಾಷ್ಟ್ರಕೂಟರ ಶಾಸನಗಳ ಸಾಂಸ್ಕೃತಿಕ ಅಧ್ಯಯನವನ್ನು ಪ್ರಮುಖವಾದ ವಿಷಯವಾಗಿ ತೆಗೆದುಕೊಳ್ಳಲಾಗಿದೆ. ಸಮಗ್ರ ಅಧ್ಯಯನಕ್ಕೆ ಅನುಕೂಲವಾಗುವಂತೆ ಮಾಹಿತಿ ಸಂಗ್ರಹಣ ಕಾರ್ಯ ನಡೆದರೂ ಪ್ರಬಂಧದ ಗಾತ್ರವನ್ನು ಗಮನದಲ್ಲಿಟ್ಟುಕೊಂಡು ಅನೇಕ ವಿವರಣೆಗಳನ್ನು ಅಗತ್ಯಕ್ಕೆ ತಕ್ಕಷ್ಟೇ ಬಳಸಿಕೊಳ್ಳಲಾಗಿದೆ. ಹೀಗೆ ಮೊಟಕುಗೊಳಿಸಿರುವ ಭಾಗಗಳು ಈಗಾಗಲೇ ಎಲ್ಲರಿಗೂ ತಿಳಿದಿರುವ ವಿಷಯಗಳಾಗಿದ್ದು, ಅದನ್ನೂ ಕೂಡ ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ರಾಷ್ಟ್ರಕೂಟರ ಕಾಲದ ಸಾಂಸ್ಕೃತಿಕ ಮಾಹಿತಿಗಳನ್ನು ಒಂದೆಡೆ ಕಲೆಹಾಕುವುದನ್ನು ಮೂಲ ಉದ್ದೇಶವಾಗಿ ಮಾಡಿಕೊಳ್ಳಲಾಗಿದೆ. ಹಾಗೆಯೇ ನಿರ್ಧಾರವಾಗದೆ ಮೇಲಿಂದ ಮೇಲೆ ಚರ್ಚೆಯಾಗುತ್ತಲೇ ಇರುವ ವಿಷಯಗಳ ಕಡೆಗೆ ಹೆಚ್ಚಿನ ಗಮನವನ್ನು ನೀಡಲಾಗಿದೆ. ವಿವರಣೆಗೆ ಅನುಕೂಲವಾಗುವಂತೆ ಇತರೆ ಸಮಕಾಲೀನ ಅರಸರ ದಾಖಲೆಗಳನ್ನು ಗಮನಿಸಲಾಗಿದೆ. ಅಗತ್ಯವಿರುವಡೆ

ಕ್ಷೇತ್ರಕಾರ್ಯವನ್ನೂ ಮಾಡಲಾಗಿದ್ದು ವಿಷಯ ನಿರೂಪಣೆಗೆ, ವಿಶ್ಲೇಷಣೆಗೆ ಆಧಾರವಾಗಿ ಬಳಸಿಕೊಳ್ಳಲಾಗಿದೆ. ಸಾಹಿತ್ಯವೂ ಇದರಿಂದ ಹೊರತಾಗಿಲ್ಲ. "ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆಯನ್ನು, ಒಂದು ಚೌಕಟ್ಟಿಗಾಗಿ ಮಾತ್ರ ಹಾಕಿಕೊಳ್ಳಲಾಗಿದೆ. ರಾಷ್ಟ್ರಕೂಟರು ಎಂದು ಕರೆದುಕೊಂಡಿರುವ ಎಲ್ಲ ಗುಂಪುಗಳನ್ನೂ ಅಧ್ಯಯನಕ್ಕೆ ಒಳಪಡಿಸುವುದರಿಂದ ಕಾಲಮಿತಿಯನ್ನು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಆದರೂ ಕ್ರಿ.ಶ. ಸುಮಾರು ನಾಲ್ಕನೆಯ ಶತಮಾನದಿಂದ ೧೪ ನೇ ಶತಮಾನದವರೆಗಿನ ದೀರ್ಘಾವಧಿಯನ್ನು ಸ್ಥೂಲವಾಗಿ ಗಮನದಲ್ಲಿರಿಸಿಕೊಳ್ಳಲಾಗಿದೆ. 'ರಾಷ್ಟ್ರಕೂಟ'ರೆಂದು ಕರೆದುಕೊಳ್ಳುವ ಸಣ್ಣಪುಟ್ಟ ವಂಶಗಳನ್ನು ಸಂದರ್ಭಕ್ಕನುಗುಣವಾಗಿ ಅಲ್ಲಲ್ಲಿ ಪ್ರಸ್ತಾಪಿಸಲಾಗಿದೆ.

ಅಧ್ಯಾಯ ೨

# ಲಿಖಿತ ಉಲ್ಲೇಖಗಳು

**ಸಮಕಾಲೀನ ರಾಜವಂಶಗಳ ಮತ್ತು ಮಾಂಡಳೀಕರ ದಾಖಲೆಗಳಲ್ಲಿ ಸಿಗುವ ಮಾಹಿತಿಗಳು– ವಿದೇಶಿ ಪ್ರವಾಸಿಗರ ಬರಹ– ಶಾಸನಗಳ ಹರಹು– ಶಾಸನಗಳ ಸಂಖ್ಯೆ, ಶಾಸನದ ಭಾಷೆ– ಲಿಪಿ– ಮುದ್ರಣವಾಗಿರುವ ಲೇಖನಗಳು**

**ಈ** ಅಧ್ಯಾಯದಲ್ಲಿ ಸಮಕಾಲೀನ ರಾಜವಂಶಗಳೊಂದಿಗೆ ರಾಷ್ಟ್ರಕೂಟರು ಹೇಗೆ ವ್ಯವಹರಿಸಿದ್ದರು, ಮತ್ತು, ಅವರು ರಾಷ್ಟ್ರಕೂಟರೊಂದಿಗೆ ಹೇಗೆ ಪ್ರತಿಕ್ರಯಿಸುತ್ತಿದ್ದರು ಎನ್ನುವ ವಿಚಾರಗಳನ್ನು ಗಮನಿಸಲಾಗಿದೆ. ಹೀಗೆಂದ ಮಾತ್ರಕ್ಕೆ ಆಮೂಲಾಗ್ರವಾಗಿ ಪರಿಶೀಲಿಸಲಾಗಿದೆಯೆಂದು ಭಾವಿಸಬಾರದು. ರಾಷ್ಟ್ರಕೂಟರ ಶಾಸನಗಳನ್ನು ಅರ್ಥೈಸುವ ಕಾಲಕ್ಕೆ ಅಗತ್ಯವಾಗಿ ಬೇಕಾಗಿದ್ದ ಶಾಸನಗಳನ್ನು ಗಮನಿಸಲಾಗಿದೆ. ವಿದೇಶೀ ಪ್ರವಾಸಿಗರ ಬರಹದಲ್ಲಿ ಸಿಗುವ ಕೆಲವೇ ಮಾಹಿತಿಗಳನ್ನು ನೀಡಲಾಗಿದೆ. ಶಾಸನಗಳ ಹರಹಿನ ಬಗ್ಗೆ ಹೇಳುವಾಗ ರಾಷ್ಟ್ರಕೂಟರ ಶಾಸನಗಳು ಸಿಗುವ ಪ್ರದೇಶದ ಆಧಾರದ ಮೇಲೆ ವಿವರಿಸಲಾಗಿದೆ. ಸಂಖ್ಯೆಯಲ್ಲಿ ಈವರೆಗೆ ಅಂದರೆ ಪ್ರಸ್ತುತ ಅಧ್ಯಯನದ ಹೊತ್ತಿಗೆ ಸಿಕ್ಕಿರುವಂತಹ ಲಭ್ಯ ಶಾಸನಗಳನ್ನು ಸಾಧ್ಯವಾದಷ್ಟೂ ಗಮನಿಸಲಾಗಿದೆ. ಮತ್ತೂ ಉಳಿದಿರುವುದರ ಬಗ್ಗೆ ಏನೂ ಹೇಳಲಾಗದು. ಇದು ಮುದ್ರಣವಾಗಿರುವ ಲೇಖನಗಳಿಗೂ ಅನ್ವಯವಾಗುತ್ತದೆ.

## ರಾಜವಂಶಗಳು

ರಾಷ್ಟ್ರಕೂಟರೊಂದಿಗೆ ಸಮಕಾಲೀನರಾಗಿದ್ದಂತಹ ಪ್ರಮುಖ ರಾಜವಂಶಗಳಲ್ಲಿ ಬಾದಾಮಿಯ ಚಲುಕ್ಯರು, ಪಾಲರು, ಗೂರ್ಜರರು,ಪ್ರತೀಹಾರರು, ಪರಮಾರರು, ಚೇದಿಯ ಕಲಚುರಿಯರನ್ನು ಹೆಸರಿಸಬಹುದು. ಮಾಂಡಳೀಕರಾಗಿ ಇದ್ದವರಲ್ಲಿ ಗುಜರಾತಿನ ರಾಷ್ಟ್ರಕೂಟರು, ಗಂಗ, ನೊಳಂಬ, ಬಾಣ, ಕಲ್ಯಾಣಿ ಚಾಲುಕ್ಯ, ವೈದುಂಬ, ಆಳುಪ, ಚಲ್ಲಕೇತನ (ಮುಗುಳವಂಶ), ಮಾಟೂರ, ಶಿಲಾಹಾರ, ಸೇಂದ್ರಕ, ಸೇನಾವಾರ,

ವೇಮುಲವಾಡದ ಚಾಲುಕ್ಯರು, ಸೌಂದತ್ತಿ ರಟ್ಟರು, ಮೈಸೂರು ಪ್ರಾಂತ್ಯದಲ್ಲಿದ್ದ ಚಾಲುಕ್ಯರು ಮುಂತಾದವರನ್ನು ಹೆಸರಿಸಬಹುದು. ಇವಿಷ್ಟೇ ಅಲ್ಲದೇ ಸಣ್ಣ ಪುಟ್ಟ ವಂಶಗಳಾದ ಸಿಂದಕ, ಸಾಂತರ, ಅಶ್ವಕುಲ, ಕದಂಬ, ಗಜಜೀವಿ ವಂಶ, ಆದವ ವಂಶ, ಫಣೀಂದ್ರಕುಲ, ಮಲಯಕುಲ, ನಾಗರಕುಲ, ಮಾಟೂರವಂಶ, ಸಾಗರ, ಬ್ರಹ್ಮಕ್ಷತ್ರ ಎಂದು ಕರೆದುಕೊಳ್ಳುವವರೆಲ್ಲರ ಉಲ್ಲೇಖಗಳು ಶಾಸನಗಳಲ್ಲಿ ಸಿಗುತ್ತವೆ.

## ಪಾಲರು

ಬಂಗಾಳದಲ್ಲಿ ನಡೆದ ರಾಜಕೀಯ ಗಲಭೆಗಳ ಫಲವೇ ಪಾಲವಂಶ. ಕ್ರಿ.ಶ. ೮ ನೆಯ ಶತಮಾನದ ಮಧ್ಯದಲ್ಲಿ ಈ ವಂಶವು ಹುಟ್ಟಿಕೊಂಡಿತು. ಇದರ ಹುಟ್ಟು ಕೂಡ ವಿಶೇಷವಾಗಿದೆ. ಜನರೇ ತಮ್ಮ ಪ್ರತಿನಿಧಿಯೊಬ್ಬನನ್ನು ಆರಿಸಿ, ರಾಜ್ಯ ಪಟ್ಟವನ್ನು ಕಟ್ಟಿದರು. ದೊರೆಯ ಮೊದಲ ಇತಿಹಾಸಕ್ಕಿಂತ, ನಂತರ ಆತ ಬೆಳೆಸಿದ ವಂಶದ ಏಳಿಗೆಯನ್ನು ಗಮನದಲ್ಲಿರಿಸಿಕೊಂಡರೆ, ಉತ್ತಮವೆನಿಸುತ್ತದೆ. ಅವನ ಹೆಸರು ಗೋಪಾಲ. ಈತನ ಹೆಸರಿನ ಭಾಗವೇ ವಂಶದ ಹೆಸರಾಯಿತು. ಗೋಪಾಲನ ನಂತರ ಧರ್ಮಪಾಲನು (ಕ್ರಿ.ಶ, ೭೭೦–೮೧೦) ಸಿಂಹಾಸನವನ್ನೇರಿದನು. ಈ ಕಾಲಕ್ಕೆ ಪ್ರತೀಹಾರರು ರಾಜ್ಯ ವಿಸ್ತರಣೆ ಮಾಡುತ್ತಿದ್ದರು. ಪಾಲ ಪ್ರತೀಹಾರರ ಮಧ್ಯೆ ರಾಷ್ಟ್ರಕೂಟರೂ ತಲೆ ಹಾಕಿದ್ದು ತ್ರಿಕೋಣ ಯುದ್ಧಕ್ಕೆ ಬುನಾದಿ ಹಾಕಿದಂತಾಯಿತು. ಪಾಲ ಮತ್ತು ಪ್ರತೀಹಾರರ ಮಧ್ಯೆ ಯುದ್ಧ ನಡೆದಾಗ ಧ್ರುವನು ಅವರನ್ನು ಸೋಲಿಸಿ, ಎರಡು ಶ್ವೇತ ಛತ್ರಿಗಳನ್ನು ವಶಪಡಿಸಿಕೊಂಡನು. ಸಂಜಾನ ಶಾಸನವು ಇದನ್ನು ತಿಳಿಸುತ್ತದೆ. ಆದರೆ ಧ್ರುವನು ಗೌಡರಾಜನನ್ನು ಸೋಲಿಸಲ್ಲಿಲ್ಲ. ಅವನ ಪ್ರಭುತ್ವ ಸೂಚಕ ಛತ್ರಿಗಳನ್ನು ವತ್ಸರಾಜನಿಂದ ವಶಪಡಿಸಿಕೊಂಡನೆಂದು ಪ್ರತಿಪಾದಿಸಲಾಗಿದೆ (IHQ, Vol XX, P – 84 Dashrath Sharma). ಧ್ರುವನು ಗಂಗಾ ಯಮುನಾ ನದಿಗಳ ನಡುವೆ ಸೋಲಿಸಿದ್ದು ವತ್ಸರಾಜನನ್ನು ಮಾತ್ರ ಎಂದು ತಿಳಿದು ಬರುತ್ತದೆ. ಗೌಡರಾಜನನ್ನು ಸೋಲಿಸದೆ ಗೌಡರಾಜನಿಗೆ ಸೇರಿದ ಶ್ವೇತ ಛತ್ರಿಗಳನ್ನು ವಶಪಡಿಸಿಕೊಂಡನೆಂದು ರಾಷ್ಟ್ರಕೂಟ ಶಾಸನವನ್ನು ಬರೆದ ಲೇಖಕನಿಗೆ ತಿಳಿದಿತ್ತು ಎನ್ನುತ್ತಾರೆ. ಈ ಮಾತನ್ನು ಒಪ್ಪುವುದು ಸಾಧ್ಯವಿಲ್ಲ. ಏಕೆಂದರೆ ಲೇಖನವನ್ನು ಬರೆದ ವಿದ್ವಾಂಸರು ಇದಕ್ಕೆ ಯಾವುದೇ ಆಧಾರವನ್ನು ಕೊಟ್ಟಿಲ್ಲ.

## ಗೂರ್ಜರರು

ಈಗಿನ ರಾಜಸ್ಥಾನದ ಬಹುಭಾಗವು ಗೂರ್ಜರಾತ್ರ ಪ್ರದೇಶಕ್ಕೆ ಸೇರಿತ್ತು. ಕ್ರಿ.ಶ. ೬ ನೆಯ ಶತಮಾನದಲ್ಲಿ "ಗೂರ್ಜರರು" ಎಂದು ಕರೆದುಕೊಂಡ ರಾಜ್ಯವೊಂದು ಉದಯಿಸಿತು. ಈ ವಂಶದ ಮೂಲಪುರುಷ ಹರಿಶ್ಚಂದ್ರ. ಈತನೊಬ್ಬ ಪ್ರಕಾಂಡ ಪಂಡಿತ ಬ್ರಾಹ್ಮಣ. ಈತನ ಬ್ರಾಹ್ಮಣ ಪತ್ನಿಯಲ್ಲಿ ಜನಿಸಿದವರು ಪ್ರತೀಹಾರರೆನಿಸಿಕೊಂಡರು. ನಾಗಭಟ, ತಾತ ಮುಂತಾದವರು ಭಿಲ್ಲಮಾಲವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯಭಾರವನ್ನು ನಡೆಸಿದ್ದರು. ಕ್ರಿ.ಶ. ೬-೭ ನೆಯ ಶತಮಾನದ ನಂತರ ಅನೇಕ ಸಣ್ಣ ಪುಟ್ಟ ಭಿನ್ನ ಶಾಖೆಗಳು ಹುಟ್ಟಿಕೊಂಡವು. ಅವರಲ್ಲಿಯೇ ಒಬ್ಬರು ಉಜ್ಜಯನಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಗರ್ಜೂರ ಪ್ರತೀಹಾರರು. ರಾಷ್ಟ್ರಕೂಟ ದೊರೆ ದಂತಿದುರ್ಗನು ಗೂರ್ಜರ ದೊರೆಯನ್ನು ಸೋಲಿಸಿ, ಉಜ್ಜಯನಿಯಲ್ಲಿ ಹಿರಣ್ಯಗರ್ಭದಾನ ಮಾಡಿದನು (EI., Vol XVII, P 235). ಗೂರ್ಜರ ಅರಸ ದಂತಿದುರ್ಗನಿಗೆ ಶರಣಾದನೆಂದು ಹೇಳಬಹುದು. ಮಾಳವ ಪ್ರದೇಶದಲ್ಲೇ ಒಂದನೆಯ ನಾಗಭಟನು ರಾಜ್ಯವಾಳುತ್ತಿದುದರಿಂದ ದಂತಿದುರ್ಗ ಸೋತ ಅರಸನ ಅರಮನೆಯನ್ನು ಆಕ್ರಮಿಸಿಕೊಂಡಿರಬಹುದು. ಅರಬ್ಬರ ದಾಳಿಯನ್ನು ಒಂದನೆಯ ನಾಗಭಟನು ಎದುರಿಸಿ ಹಿಮ್ಮೆಟ್ಟಿಸಿದನು. ನಾಗಭಟನ ಸಹೋದರನ ಮೊಮ್ಮಗನೇ ವತ್ಸರಾಜ. ಈತ ಕ್ರಿ.ಶ. ೭೭೮ ರಲ್ಲಿ ಪಟ್ಟಕ್ಕೆ ಬಂದನು. ಈತನ ರಾಜ್ಯವು ಮಾಳವ ಮತ್ತು ಪೂರ್ವದ ರಾಜಸ್ಥಾನವನ್ನು ಒಳಗೊಂಡಿತ್ತು.

ವತ್ಸರಾಜನು ತನ್ನ ರಾಜ್ಯವನ್ನು ವಿಸ್ತರಿಸಲು ಹೊರಟಾಗಲೇ ರಾಷ್ಟ್ರಕೂಟರೊಂದಿಗೆ ಮುಖಾಮುಖಿಯಾಯಿತು. ನಂತರ ರಾಷ್ಟ್ರಕೂಟರ ದೊರೆ ಧ್ರುವನ ದಾಳಿಯಿಂದಾಗಿ ವತ್ಸರಾಜನು ಸಾಮ್ರಾಟನಾಗಲಿಲ್ಲ. ಕನೋಜಿನ ಆಕರ್ಷಣೆಯಿಂದಾಗಿ ರಾಷ್ಟ್ರಕೂಟರು, ಪಾಲರು ಮತ್ತು ಪ್ರತೀಹಾರರ ನಡುವೆ ತ್ರಿಕೋಣ ಯುದ್ಧವು ನಡೆದವು. ಈ ಯುದ್ಧವು ಸುಮಾರು ನೂರು ವರ್ಷಗಳವರೆಗೆ ಆಗಾಗ ನಡೆಯುತ್ತಲೇ ಇತ್ತು.

ಆಯುಧ ಮನೆತನದ ಇಂದ್ರಾಯುಧ ಮತ್ತು ಚಕ್ರಾಯುಧರೆಂಬ (ಕ್ರಿ.ಶ. ೮ ನೆಯ ಶತಮಾನದ ಉತ್ತರಾರ್ಧ) ಸೋದರರ ನಡುವೆ ಕಲಹವುಂಟಾಯಿತು.

ಈ ಸಮಯವನ್ನು ಉಪಯೋಗಿಸಿಕೊಂಡು ವತ್ಸರಾಜನು ಇಂದ್ರಾಯುಧನನ್ನು ಸೋಲಿಸಿದನು. ಹೀಗೆ ಪ್ರಾರಂಭವಾದ ಯುದ್ಧದ ನಂತರ ಪಾಲರ ಧರ್ಮಪಾಲನು ವತ್ಸರಾಜನನ್ನು ಎದುರಿಸಿ ಸೋತನು. ಇದೆ ಸಂದರ್ಭದಲ್ಲಿ ರಾಷ್ಟ್ರಕೂಟರ ದೊರೆ ಧ್ರುವನು ಬಂದು ವತ್ಸರಾಜನನ್ನು ಸೋಲಿಸಿದನು. ರಾಧನಪುರ ಮತ್ತು ವಾಣಿದಿಂಡೋರಿಯ ಶಾಸನಗಳು ಇದನ್ನು ದಾಖಲಿಸುತ್ತದೆ. ಹೀಗೆ ಪ್ರಾರಂಭವಾಯಿತು ತ್ರಿಕೋಣ ಸರಣಿ ಯುದ್ಧ. ಇಲ್ಲಿನ ವಿಷೇಶವೇನೆಂದರೆ ರಾಷ್ಟ್ರಕೂಟರ ದೊರೆಗೆ ದಿಗ್ವಿಜಯಾಕಾಂಕ್ಷೆ ಇತ್ತೆ ಹೊರತು ಕನೋಜನ್ನು ಆಕ್ರಮಿಸುವ ಯೋಚನೆಯೇ ಇರಲ್ಲಿಲ್ಲ. ಕೇವಲ ತನ್ನ ಬಲ ಪ್ರದರ್ಶನಕ್ಕೆ ಯುದ್ಧ ಮಾಡಿ ಗೆದ್ದಂತೆ ಕಂಡು ಬರುತ್ತದೆ. ಈ ಯುದ್ಧವೇ ಮುಂದುವರಿದು ಎರಡನೆಯ ಬಾರಿ ಸುಮಾರು ಕ್ರಿ.ಶ. ೮೦೯–೮೧೦ ರಲ್ಲಿ ನಡೆಯಿತು. ರಾಷ್ಟ್ರಕೂಟ ಗೋವಿಂದ ಪ್ರತೀಹಾರ ನಾಗಭಟ, ಪಾಲರ ಧರ್ಮಪಾಲರ ನಡುವೆ ನಡೆಯಿತು. ಮತ್ತೊಮ್ಮೆ ಭೋಜ, ದೇವಪಾಲ ಮತ್ತು ಗುಜರಾತಿನ ರಾಷ್ಟ್ರಕೂಟರ ದೊರೆ ಧ್ರುವನ ಮಧ್ಯೆ ಯುದ್ಧವಾಯಿತು. ಕ್ರಿ.ಶ ೮೫೦ ರ ಸುಮಾರಿನಲ್ಲಿ ಕೂಡ ಇದು ಇತ್ಯರ್ಥವಾಗಿರಲಿಲ್ಲ. ಆದರೆ ಗೂರ್ಜರರ ಪಾಲಿಗೆ ಗೆಲುವು ದುಸ್ತರವಾಗಿತ್ತೆನ್ನಬಹುದು.

## ಕಾರ್ಕೋಟಕ ವಂಶ

ಲಲಿತಾದಿತ್ಯ ಮುಕ್ತಾಪೀಡ ಕಾರ್ಕೋಟಕ ವಂಶಕ್ಕೆ ಸೇರಿದವನು. ಹಿಂದೆ ಈತನ ಸೋದರನ ಕಾಲದಲ್ಲಿ ಮಹಮ್ಮದ್–ಬಿನ್–ಕಾಸಿಂ ಎಂಬ ಅರಬ್ಬ ಕಾಶ್ಮೀರವನ್ನು ಮುತ್ತಿದ್ದು ಸೋತು ಹೋಗಿದ್ದರು. ಕ್ರಿ.ಶ. ೭೨೬ ರಲ್ಲಿ ಲಲಿತಾದಿತ್ಯನು ಪಟ್ಟಕ್ಕೆ ಬಂದನು. ಟಿಬೇಟಿನ ದೊರೆ ಇವನ ಮೇಲೆ ಯುದ್ಧಕ್ಕೆ ಬಂದಾಗ, ಕನೋಜಿನ ಯಶೋವರ್ಮನ ಸಹಾಯದಿಂದ ಅವನನ್ನು ಸೋಲಿಸಿದನು. ನಂತರ ಕಾಂಭೋಜ, ತುರ್ಕಿಸ್ಥಾನವನ್ನು ಗೆದ್ದನು. ರಾಜ್ಯದಾಹದಿಂದ ಕೊನೆಗೆ ಯಶೋವರ್ಮನನ್ನು ಕೂಡ ಸೋಲಿಸಿದನು. ಇತ ದಿಗ್ವಿಜಯಕ್ಕೆ ಹೊರಟಾಗ ಕಳಿಂಗ, ಗೌಡದೇಶದ ಅರಸರು ಶರಣಾದರು. ಕರ್ನಾಟಕಕ್ಕೆ ಬಂದಾಗ ರಾಣಿ ರಟ್ಟಾದೇವಿಯೆಂಬುವಳನ್ನು ಸೋಲಿಸಿದನೆಂಬ ವಿಚಾರ ಕಲ್ಹಣನ ರಾಜತರಂಗಿಣಿಯಿಂದ ತಿಳಿದು ಬರುತ್ತದೆ. ಇಲ್ಲಿ ಮುಖ್ಯ ವಿಚಾರವೇನೆಂದರೆ, ಕ್ರಿ.ಶ. ೭೨೪ ರ ಸುಮಾರಿನಲ್ಲಿ ಅಷ್ಟು ಬಲಿಷ್ಠಳಾಗಿದ್ದ ರಾಣಿ ರಟ್ಟಾದೇವಿ ಯಾರು ಎಂಬುದಾಗಿದೆ. ರಟ್ಟಾದೇವಿಗೂ ರಾಷ್ಟ್ರಕೂಟರಿಗೂ ಏನಾದರು ಸಂಬಂಧವಿರಬಹುದೆ?

## ಗಂಗರು

ಆರಂಭದಲ್ಲಿ ಗಂಗರು ರಾಷ್ಟ್ರಕೂಟರ ವಿರೋಧಿಗಳಾಗಿದ್ದರೂ, ಕಾಲಕ್ರಮೇಣ ರಾಷ್ಟ್ರಕೂಟರ ಮಾಂಡಳೀಕರಾದರು. ನಿಷ್ಠಾವಂತ ಅನುಯಾಯಿಗಳಾಗಿ ರಾಷ್ಟ್ರಕೂಟರೊಂದಿಗೆ ಕೊನೆಯವರೆಗೂ ಜೊತೆಗಿದ್ದರು. ಗಂಗರು ಗಂಗವಾಡಿ – ೯೬,೦೦೦ ಪ್ರದೇಶವನ್ನು ಆಳುತ್ತಿದ್ದರು. ಗಂಗ – ರಾಷ್ಟ್ರಕೂಟರ ಸಂಬಂಧಗಳನ್ನು ಹಲವಾರು ಮಜಲುಗಳಲ್ಲಿ ಗುರುತಿಸಬಹುದು. ರಾಷ್ಟ್ರಕೂಟ ಒಂದನೆಯ ಕೃಷ್ಣನೊಂದಿಗೆ ಪ್ರಾರಂಭವಾದ ಕಲಹವು ಒಂದನೆಯ ಅಮೋಘವರ್ಷನ ಕಾಲಕ್ಕೆ ತಹಬದಿಗೆ ಬಂದು ಮಧುರವಾಗಿತ್ತು ಎನ್ನುವ ವಿಚಾರ ಸರ್ವವಿದಿತ. ರಾಷ್ಟ್ರಕೂಟ ಒಂದನೆಯ ಕೃಷ್ಣನ ಕಾಲದಲ್ಲಿ ಗಂಗ ಶ್ರೀಪುರುಷನೊಂದಿಗೆ ಯುದ್ಧಗಳು ನಡೆದವು. ರಾಷ್ಟ್ರಕೂಟರು ತಮ್ಮ ಸೈನ್ಯವನ್ನು ಮಣ್ಣೆಯವರೆಗೆ ತಂದಿದ್ದರು. ಗಂಗ ಶ್ರೀಪುರುಷನ ಮಗನಾದ ಗಂಗ ಸೇನಾಧಿಪತಿ ಸಿಯಗೆಲ್ಲನು ವೀರಾವೇಶದಿಂದ ಹೋರಾಡಿ ವೀರಸ್ವರ್ಗವನ್ನು ಹೊಂದಿದನು. ಇದರಿಂದ ಇಬ್ಬರಿಗೂ ನಡೆದ ಕದನ ಘೋರವಾಗಿತ್ತೆಂದು ಊಹಿಸಬಹುದು. ವೆಂಗಿಯ ಚಲುಕ್ಯರನ್ನು ಹತ್ತಿಕ್ಕಲು ಸೈನ್ಯವನ್ನು ಕರೆಸಿಕೊಂಡಿದ್ದರಿಂದ ಯುದ್ಧ ಸ್ವಲ್ಪಕಾಲ ನಿಂತಿತ್ತು. ನಂತರ ರಾಷ್ಟ್ರಕೂಟರಲ್ಲಿ ನಡೆದ ಅಂತಃಕಲಹಗಳಿಂದಾಗಿ ಗಂಗರು ಕೂಡ ಇವರ ಜೊತೆ ಸೇರಿಸಿಕೊಂಡರು. ರಾಷ್ಟ್ರಕೂಟರ ರಾಜಕೀಯದಲ್ಲಿ ಕೈಹಾಕಿದ ನಂತರ ಒಂದು ಹಂತದಲ್ಲಿ ದ್ವೇಷ ಸ್ನೇಹವಾಗಿ ಮಾರ್ಪಟ್ಟಿತು. ೨ ನೆಯ ಶಿವಮಾರನು ರಾಜದ್ರೋಹಿಯೆಂದು ಸಂಜಾನ ತಾಮ್ರಪಟಗಳಲ್ಲಿ (EI., Vol XVIII, PP 235 ff, 871 AD) ವರ್ಣಿತವಾಗಿದೆ.

ಒಂದನೆಯ ಅಮೋಘವರ್ಷನು ಪಟ್ಟಕ್ಕೆ ಬಂದ ನಂತರ ಮೊದಲು ಅನೇಕ ಸಮಸ್ಯೆಗಳು ಎದುರಾದರೂ, ಅದನ್ನೆಲ್ಲಾ ನಿವಾರಿಸಿಕೊಂಡು ರಾಜ್ಯಭಾರ ನಡೆಸಿದರು. ಗಂಗದೊರೆ ಎರೆಯಂಗನು ಪಟ್ಟಕ್ಕೆ ಬಂದ ನಂತರ ಗಂಗ – ರಾಷ್ಟ್ರಕೂಟ ಸಂಬಂಧ ಬಹಳ ಚಟುವಟಿಕೆಯಿಂದ ಕೂಡಿತ್ತು. ಆಗ ನಡೆದ ಯುದ್ಧದಲ್ಲಿ ಅಮೋಘವರ್ಷನು ನೀತಿಮಾರ್ಗನಿಂದ ಸೋಲನ್ನು ಅನುಭವಿಸಬೇಕಾಯಿತು.

ಕೆರೆಗೋಡಿನ ರಂಗಾಪುರದ ಎರಡನೆಯ ರಾಜಮಾಲ್ಲನ ಶಾಸನ, ಮೂರನೆಯ ಮಾರಸಿಂಹನ ಕುಕ್ಲೂರು ಶಾಸನಗಳು ರಾಜಾರಾಮುಡು ಯುದ್ಧದಲ್ಲಿ ಈ

ಸೋಲುಂಟಾಯಿತೆಂದು ತಿಳಿಸುತ್ತದೆ. ಅಮೋಘವರ್ಷನು ತನ್ನ ಮಗಳು ಚಂದ್ರೋಬಲಬ್ಬೆಯನ್ನು ನೀತಿಮಾರ್ಗನ ಮಗನಾದ ಒಂದನೆಯ ಬೂತುಗನಿಗೆ ವಿವಾಹ ಮಾಡಿಕೊಟ್ಟನು. ಇನ್ನೊಬ್ಬ ಮಗಳಾದ ರೇವಕನಿರ್ಮಡಿಯು ಗಂಗ ಎರೆಯಂಗನ ಪತ್ನಿಯಾಗಿದ್ದಳು.

ಮುಂದೆ ರಾಷ್ಟ್ರಕೂಟರೊಂದಿಗೆ ಸೇರಿದ ಗಂಗರು ಅನೇಕ ಉತ್ತರದ ದಂಡಯಾತ್ರೆಗಳಲ್ಲಿ ಪಾಲ್ಗೊಂಡಿದ್ದರು. ತಕ್ಕೋಲಂ ಯುದ್ಧದಲ್ಲಿ (ಕ್ರಿ.ಶ.೯೪೯) ಬೂತುಗನ ಶೌರ್ಯವನ್ನು ಮೆಚ್ಚಿದ ಮೂರನೆಯ ಕೃಷ್ಣನು ಬೂತುಗನಿಗೆ ಬನವಾಸಿ, ಬೆಳುವಲ, ಕಿಸುಕಾಡು-೭೦, ಬಗೆನಾಡು, ಪುರಿಗೆರೆ ಪ್ರಾಂತ್ಯಗಳಿಗೆ ಆಡಳಿತಾಧಿಕಾರಿಯಾಗಿ ನೇಮಿಸಿದನು. ಇವನ ನಂತರ ಮೂರನೆಯ ಮಾರಸಿಂಹನು ರಾಜನಾದನು. ಇವನ ಪಟ್ಟಾಭಿಷೇಕ ಮಹೋತ್ಸವಕ್ಕೆ ಚಕ್ರವರ್ತಿಯಾಗಿದ್ದ ಮೂರನೆಯ ಕೃಷ್ಣನು ಗಂಗವಾಡಿಗೆ ಬಂದಿದ್ದನು. ಇದನ್ನು ಗಮನಿಸಿದರೆ ಗಂಗ ರಾಷ್ಟ್ರಕೂಟರ ಸಂಬಂಧದ ಬಗ್ಗೆ ತಿಳಿಯುತ್ತದೆ.

ರಾಷ್ಟ್ರಕೂಟರ ಇಳಿಗಾಲದಲ್ಲಿ ಪರಮಾರ ಸೀಯಕನು ಮಾನ್ಯಖೇಟದ ಮೇಲೆ ದಾಳಿ ಮಾಡಿದಾಗ ಗಂಗಮಾರಸಿಂಹನು ಸಾಮ್ರಾಜ್ಯವನ್ನು ಉಳಿಸಿಕೊಳ್ಳಲು ಬಹಳ ಪಾಡುಪಟ್ಟನು. ಆದರೆ ಸಾಧ್ಯವಾಗಲಿಲ್ಲ.

ಗಂಗ ರಾಷ್ಟ್ರಕೂಟರ ಸಂಬಂಧ ಕೇವಲ ರಾಜಕೀಯವಾಗಿ ಮಾತ್ರವಲ್ಲದೆ, ಸಾಂಸ್ಕೃತಿಕವಾಗಿಯೂ, ಧಾರ್ಮಿಕವಾಗಿಯೂ ಶ್ರೇಷ್ಠಮಟ್ಟದ್ದಾಗಿತ್ತು. ಜೈನಧರ್ಮಕ್ಕೆ ಪ್ರೋತ್ಸಾಹ, ಸಾಹಿತ್ಯ ಪೋಷಣೆ, ರಚನೆ ಮುಂತಾದವುಗಳು ಇವರ ಕಾಲದಲ್ಲಿ ಯಥೇಚ್ಛವಾಗಿ ನಡೆದವು.

## ಬಾಣರು

ಕ್ರಿ.ಶ, ೭೫೩ ರಲ್ಲಿ ರಾಷ್ಟ್ರಕೂಟರು ಅಧಿಕಾರಕ್ಕೆ ಬಂದಾಗ ಗಂಗರು ಅವರನ್ನು ಒಪ್ಪಿಕೊಳ್ಳಲಿಲ್ಲ. ರಾಷ್ಟ್ರಕೂಟ ಒಂದನೆಯ ಕೃಷ್ಣನು ಕ್ರಿ.ಶ. ೭೬೮ ರಲ್ಲಿ ಗಂಗರಾಜ್ಯದ ಮೇಲೆ ದಾಳಿ ಮಾಡಿದನು (EI., Vol XIII., P 275).ಈ ಸಂದರ್ಭದಲ್ಲಿ ಬಾಣರು ಪಲ್ಲವರ ಪಕ್ಷ ವಹಿಸಿದರು. ನಂತರ ಕ್ರಿ.ಶ. ೮೦೩ರಲ್ಲಿ ರಾಷ್ಟ್ರಕೂಟರ ಮೂರನೆಯ ಗೋವಿಂದನು ಗಂಗರಾಜ್ಯವನ್ನು ವಶಪಡಿಸಿಕೊಂಡು ಪಲ್ಲವ ದಂತಿಗನನ್ನು

ಸೋಲಿಸಿದನು. ಈ ಸಂದರ್ಭದಲ್ಲಿ ಬಾಣರು ರಾಷ್ಟ್ರಕೂಟರ ಮಾಂಡಳೀಕರಾದರು. ಮುಂದೆ ಒಂದನೆಯ ಅಮೋಘವರ್ಷನನ್ನು ಸೋಲಿಸಿದ ಒಂದನೆಯ ರಾಚಮಲ್ಲನು ತನ್ನ ರಾಜ್ಯಕ್ಕೆ ತಂದೆಯನ್ನು ಸಿಂಹಾಸನದಲ್ಲಿ ಕೂಡಿಸಿದನು.

ಬಾಣರಸರು ಪುಲಿನಾಡನ್ನು ಜಯಿಸಲು ಯುದ್ಧಮಾಡುತ್ತಿರುವಾಗ ಉತ್ತರದಿಂದ ರಾಷ್ಟ್ರಕೂಟ ಇಮ್ಮಡಿ ಕೃಷ್ಣನ ಮಗ ರಾಜಕುಮಾರ ಮೂರನೆಯ ಇಂದ್ರನು ದಾಳಿ ಮಾಡಿದನು. ಸೋತ ಬಾಣರು ರಾಷ್ಟ್ರಕೂಟರ ಸಾಮಂತರಾದರು. ರಾಷ್ಟ್ರಕೂಟರು ಉತ್ತರಭಾರತದ ಕಡೆ ದಾಳಿ ಮಾಡಿದಾಗ ಅವರ ಜೊತೆಯಲ್ಲಿ ಬಾಣರ ಅರಸನಾಗಿದ್ದ ವಿಕ್ರಮಾದಿತ್ಯನು ಹೋಗಿದ್ದನು. ಕೃಷ್ಣನು ಮಧ್ಯಪ್ರದೇಶದ ರತನಪುರದ ಬಳಿ ಪಾಲಿ ಎಂಬಲ್ಲಿ ಶಿವ ದೇವಾಲಯವನ್ನು ಕಟ್ಟಿಸಿದನು. ಈ ದೇವಾಲಯದ ಸಭಾಗೃಹದ ಬಾಗಿಲುವಾಡದ ಖಾಲಿ ಜಾಗಗಳನ್ನು ಸೇರಿಸಿ ಮಾಡಿದ ಜಾಲಂಧ್ರಗಳ ಮೇಲಿರುವ ಶಾಸನದಲ್ಲಿ ಇದರ ಉಲ್ಲೆಖವಿದೆ (ಬಾಣರ ಶಾಸನಗಳು: ಒಂದು ಅಧ್ಯಯನ., ಡಾ॥ ಪಿ.ವಿ. ಕೃಷ್ಣಮೂರ್ತಿ., ಅಪ್ರಕಟಿತ ಡಿಲಿಟ್ ಪ್ರಬಂಧ).

ಬಾಣರಾಜ್ಯದಲ್ಲಿ ಸಂಘರ್ಷಗಳು ನಡೆದವು ಎನ್ನುವುದಕ್ಕೆ ಸಾಕ್ಷಿಯಾಗಿ ತುರುಗಾಳಗಕ್ಕೆ ಸಂಬಂಧಿಸಿದ ಅನೇಕ ಶಾಸನಗಳು ಸಿಗುತ್ತವೆ. ರಾಷ್ಟ್ರಕೂಟ ದೊರೆ ಎರಡನೆಯ ಕೃಷ್ಣನು ಚೋಳರ ಮೇಲೆ ದಂಡಯಾತ್ರೆ ಮಾಡಿದ ಬಗ್ಗೆ ರಾಷ್ಟ್ರಕೂಟ ಶಾಸನಗಳು ದಾಖಲಿಸುತ್ತವೆ. ಒಂದನೆಯ ಆದಿತ್ಯನು ರಾಷ್ಟ್ರಕೂಟ ಎರಡನೆಯ ಕೃಷ್ಣನ ಮಗಳನ್ನು ಮದುವೆಯಾಗಿದ್ದನು. ಆದಿತ್ಯನ ನಂತರ ಸಿಂಹಾಸನವನ್ನೇರಿದ ದೊರೆಯು ರಾಷ್ಟ್ರಕೂಟ ರಾಜಕುಮಾರಿಯ ಮಗನಾಗಿರದೇ ಇನ್ನೊಬ್ಬ ಅರಸಿಯ ಮಗನಾದ್ದರಿಂದ ಕುಪಿತಗೊಂಡ ಎರಡನೆಯ ಕೃಷ್ಣನು ಯುದ್ಧಕ್ಕೆ ಹೊರಟನು. ಆ ಸಂದರ್ಭದಲ್ಲಿದ್ದ ಬಾಣದೊರೆ ಎರಡನೆಯ ವಿಜಯಾದಿತ್ಯನು ಮರಣಹೊಂದಿರಬಹುದು. ಇವನ ಮಗನಾದ ಎರಡನೆಯ ವಿಕ್ರಮಾದಿತ್ಯನು ಚೋಳದೊರೆಯ ಕೋಪಕ್ಕೆ ತುತ್ತಾದನು. ರಾಷ್ಟ್ರಕೂಟರಿಗೆ ಸಹಾಯ ಮಾಡಿದ್ದ ಸೇಡು ತೀರಿಸಿಕೊಳ್ಳಲು ಬಾಣರ ಮೇಲೆ ದಾಳಿ ಮಾಡಿ ಜಯಗಳಿಸಿದನು.

ಮೂರನೆಯ ವಿಕ್ರಮಾದಿತ್ಯನಿಗೆ ಮೂರನೆಯ ಕೃಷ್ಣನು ಸ್ನೇಹಿತನಾಗಿದ್ದನೆಂದು ತಿಳಿದು ಬರುತ್ತದೆ. ಚೋಳರ ಮೇಲಿನ ದ್ವೇಷದಿಂದಾಗಿ ಮೂರನೆಯ ಕೃಷ್ಣನ ಸ್ನೇಹಮಾಡಿದ್ದನೆಂದು ಭಾವಿಸಬಹುದು. ಮೂರನೆಯ ಕೃಷ್ಣನು ತಕ್ಕೋಲಂ ಎಂಬಲ್ಲಿ

ಚೋಳರ ಮೇಲೆ ಯುದ್ಧ ಮಾಡಿದನು. ಗಂಗರ ಇಮ್ಮಡಿ ಬೂತುಗನು ಮೂರನೆಯ ಕೃಷ್ಣನಿಗೆ ನೆರವಾದನು. ಅಲ್ಲಿಂದ ಮುಂದುವರಿದು ಇಡೀ ತೊಂಡೈಮಂಡಲವನ್ನು ವಶಪಡಿಸಿಕೊಂಡನು. ಸುಮಾರು ೧೫ ವರ್ಷಗಳ ಕಾಲ ಈ ಪ್ರದೇಶವು ಮೂರನೆಯ ಕೃಷ್ಣನ ವಶದಲ್ಲಿತ್ತು. ಈ ಅವಧಿಯಲ್ಲಿ ರಾಷ್ಟ್ರಕೂಟರ ಮಾಂಡಲೀಕರಾಗಿದ್ದ ಬಾಣರ ಮತ್ತು ವೈದುಂಬರ ಶಾಸನಗಳು ಸಿಗುತ್ತವೆ. ಮುಂದೆ ಬಾಣರು ಚೋಳರೊಡನೆ ಸೇರಿಕೊಂಡರು.

### ನೊಳಂಬರು

ರಾಷ್ಟ್ರಕೂಟರ ಸಾಮಂತರಾಗಿ ಆಳಿದವರಲ್ಲಿ ನೊಳಂಬರು ಕೂಡ ಒಬ್ಬರು. ಇವರು ನೊಳಂಬವಾಡಿ ಪ್ರದೇಶವನ್ನು ಆಳುತ್ತಿದ್ದರು. ಇದಕ್ಕೂ ಮೊದಲು ಎರಡನೆಯ ಗಂಗ ಶಿವಮಾರನ ಗೈರುಹಾಜರಿಯಲ್ಲಿ ಅವನ ಸೋದರ ದುಗ್ಗಮಾರನು ನೊಳಂಬವಾಡಿಯನ್ನು ತಾನೇ ವಶಪಡಿಸಿಕೊಳ್ಳಲು ನೋಡಿದನು. ಶಿವಮಾರನ ಮಾಂಡಳೀಕನಾಗಿದ್ದ ಸಿಂಹಪೋತನು ದುಗ್ಗಮಾರನ ವಿರುದ್ಧ ಹೋರಾಡಿದನು. ಈ ಹೋರಾಟದಲ್ಲಿ ಯಾರು ಗೆದ್ದರು ಅಥವಾ ಯಾರು ಸೋತರು ಎಂದು ತಿಳಿಯದಿದ್ದರೂ ನೊಳಂಬವಾಡಿ ಪ್ರದೇಶವೆಲ್ಲ ರಾಷ್ಟ್ರಕೂಟರ ಆಡಳಿತಕ್ಕೆ ಸೇರಿಕೊಂಡಿತು. ಇದರೊಂದಿಗೆ ಗಂಗರೊಂದಿಗೆ ನೊಳಂಬರು ಕೂಡ ರಾಷ್ಟ್ರಕೂಟರ ಮಾಂಡಳೀಕರಾದರು. ಸಿಂಹಪೋತನ ನಂತರ ಬಂದವನು ರಾಷ್ಟ್ರಕೂಟರ ಮಾವಳಿ ಶಾಸನದಲ್ಲಿ ಉಕ್ತನಾಗಿರುವ ಕಲಿ ನೊಳಂಬಾಧಿರಾಜ. ಮೂರನೆಯ ಗೋವಿಂದನ ವಿರುದ್ಧ ಆಳುಪ ವಂಶದ ಚಿತ್ರವಾಹನನು ಯುದ್ಧಕ್ಕೆ ಬಂದಾಗ ನಡೆದ ಹೋರಾಟದಲ್ಲಿ ಕಲಿ ನೊಳಂಬಾಧಿರಾಜನ ಪಾತ್ರ ಪ್ರಮುಖವಾದುದು.

ಗೋವಿಂದನ ಮರಣಾನಂತರ ರಾಷ್ಟ್ರಕೂಟರ ರಾಜಕೀಯ ಪರಿಸ್ಥಿತಿಯಲ್ಲಿ ಮಹತ್ತರವಾದ ಬದಲಾವಣೆಗಳುಂಟಾದವು. ನೊಳಂಬರ ಪ್ರಸಿದ್ಧ ದೊರೆ ನೊಳಂಬಾಧಿರಾಜ ಒಂದನೆಯ ಪೊಲಲ್ಚೋರನಾಗಿದ್ದಾನೆ. ಈತ ಚಿತ್ರದುರ್ಗ, ತುಮಕೂರು, ಬೆಂಗಳೂರು, ಕೋಲಾರ, ಅನಂತಪುರ ಮತ್ತು ಚಿತ್ತೂರು ಜಿಲ್ಲೆಯ ಕೆಲವು ಭಾಗಗಳಲ್ಲಿ ಆಳ್ವಿಕೆ ನಡೆಸಿದನು. ಈತ ಬಾಣರ ವಿರುದ್ಧ ಜಯಗಳಿಸಿದ್ದನಲ್ಲದೇ

ಒಂದನೆಯ ನೀತಿಮಾರ್ಗನಿಗೆ ರಾಷ್ಟ್ರಕೂಟರ ವಿರುದ್ಧ ಹೋರಾಡುವಾಗ ಸಹಾಯ ಮಾಡಿದನು. ಸಿಂಹಪೋತನು ತನ್ನ ರಾಜ್ಯವನ್ನು ಸುರಕ್ಷಿತವಾಗಿ ರಕ್ಷಿಸಿಕೊಂಡು ಬಂದನು.

## ಚಲ್ಲಕೇತನರು

ರಾಷ್ಟ್ರಕೂಟರು ಮತ್ತು ಚಲ್ಲಕೇತನರಿಗೆ ಒಂದು ರೀತಿಯ ಅವಿನಾಭವ ಸಂಬಂಧವಿತ್ತು ಎಂದರೂ ಸರಿಯೆ. ರಾಷ್ಟ್ರಕೂಟರು ಸಂಸ್ಕೃತಿಗೆ ನೀಡಿದ ಕೊಡುಗೆಗಳಿಗೆ ಸಹಾಯಕರಾಗಿಯೂ ನಿಂತಿದ್ದವರು ಚಲ್ಲಕೇತನರು. ಹಾಗಾಗಿ ಚಲ್ಲಕೇತನರು ಆಳ್ವಿಕೆ ನಡೆಸಿದ್ದ ಧಾರವಾಡದ ಸುತ್ತಮುತ್ತಲ ಪ್ರದೇಶವೇ ಒಂದು ಸಾಂಸ್ಕೃತಿಕ ಕೇಂದ್ರವಾಗಿತ್ತೆನ್ನಬಹುದು. ಕೊಣ್ಣೂರಿನ ಶಾಸನದಲ್ಲಿ (SII, Vol XVII, No. 12, 860 AD) ಚಲ್ಲಕೇತನರ ಪ್ರಾಚೀನ ಉಲ್ಲೇಖವಿದೆ. ಎರಕೋರಿಯ ಮಗ ಮೊದಲನೆಯ ಧೋರನು ರಾಷ್ಟ್ರಕೂಟರ ಸೇನಾದಿಪತಿಯಾಗಿದ್ದ. ಈತನ ಮಗನೇ ಬಂಕೇಯ. ಈತ ಕೂಡ ಸೇನಾನಿ ದಂಡನಾಯಕನಾಗಿದ್ದವನು. ರಾಷ್ಟ್ರಕೂಟರ ವಂಶವು ಬಂಕೇಯನ ರಾಜಕೀಯ ಮುತ್ಸದ್ದಿತನದಿಂದಾಗಿ ಪ್ರಸಿದ್ಧ ವಂಶವಾಗಿ ಬೆಳೆಯಿತು. ಈತ ಅಮೋಘವರ್ಷನ ಮನಸ್ಸನ್ನು ಗೆದ್ದವನು.

"ಮತ್ಪ್ರಸಾದೇನ ಸಂಲಬ್ಧವನವಾಸಿ ಪುರಸ್ಸರಾನ್।

ಗ್ರಾಮಾನ್ ತ್ರಿಂಶತ್ಸಹಸ್ರಾಣಿ ಭುನಕ್ತ್ಯವಿರತೋದಯ:॥"

ಎಂದು ಇವನನ್ನು ಕೊಣ್ಣೂರಿನ ಶಾಸನದಲ್ಲಿ ವರ್ಣಿಸಲಾಗಿದೆ. ಪ್ರಜ್ವಲಿಸುವ ಹರಿತವಾದ ಖಡ್ಗದಂತಿರುವವನು, ಲೆಕ್ಕವಿಲ್ಲದಷ್ಟು ಹಗೆಗಳನ್ನು ಕೊಂದವನು. ಬಂಕೇಯನ ನೆರವು ರಾಷ್ಟ್ರಕೂಟ ಅಮೋಘವರ್ಷನಿಗೆ ಶ್ರೀರಕ್ಷೆಯಂತಿತ್ತು. ಈತ ಅಮೋಘವರ್ಷನ ತಂದೆ ಮೂರನೆಯ ಗೋವಿಂದರಾಜನ ಬಳಿ ಸೇನಾಧಿಪತಿಯಾಗಿದ್ದವನು. ಕಳೆದುಹೋದಂತಿದ್ದ ರಾಜ್ಯವನ್ನು ಮತ್ತೆ ಪಡೆಯಲು ಗುಜರಾತಿನ ರಾಷ್ಟ್ರಕೂಟ ದೊರೆಯ ಜೊತೆ ತಾನೂ ಸೇರಿಕೊಂಡು ರೇವಾನಗರದ ಮೇಲೆ ದಾಳಿ ಮಾಡಿ ಚಾಲುಕ್ಯ ವಿಜಯಾದಿತ್ಯನನ್ನು ಸೋಲಿಸಿ ರಾಜ್ಯವನ್ನು ಮರಳಿ ಪಡೆದರು.

ಕೊಣ್ಣೂರು ಶಾಸನದಲ್ಲಿ (EI., Vol VI, 860 A.D.) ಕಾವೇರಿ ನದಿಯ ದಡದಲ್ಲಿರುವ ಕೇದಲದುರ್ಗದಲ್ಲಿ ಗಂಗರಾಜನು ಸಾಮಂತನಾಗಿ ರಾಜ್ಯಭಾರ

ಮಾಡುತ್ತಿದ್ದನು ಎಂದು ಉಲ್ಲೇಖಿಸಿದೆ. ವೆಂಗಿಯ ಚಾಲುಕ್ಯ ವಿಜಯಾದಿತ್ಯ, ಗುಜರಾತಿನ ರಾಷ್ಟ್ರಕೂಟ ದೊರೆ ಧ್ರುವ, ಗುಜರಾತದ ಮಾಂಡಳೀಕ ಅರಸ ಕರ್ಕನ ಮಗ, ಗಂಗ ರಾಚಮಲ್ಲ ಮುಂತಾದವರುಗಳೆಲ್ಲ ನೃಪತುಂಗನ ವಿರೋಧಿಗಳಾಗಿದ್ದರು. ಇವರೆಲ್ಲರೂ ಸೇರಿ, ಯುವರಾಜನಾಗಿದ್ದ ಅಮೋಘವರ್ಷನ ಮಗ ಎರಡನೆಯ ಕೃಷ್ಣನನ್ನು ತಮ್ಮ ಗುಂಪಿಗೆ ಸೇರಿಸಿಕೊಂಡಿದ್ದು ನೃಪತುಂಗನ ಪಾಲಿಗೆ ಕಷ್ಟಕರವಾಗಿ ಪರಿಣಮಿಸಿತು. ಕೊಣ್ಣೂರು ಶಾಸನದಲ್ಲಿ ಇದರ ಬಗ್ಗೆ "ಮಹಾಪ್ರತಾಪಾದುಚ್ಛೇದಮುದ್ಯಚ್ಛನ್ಮದಿಚ್ಛಯಾ ಮೂಲಾದುಚ್ಛೇತ್ತುಮುತ್ತುಂಗಾಂ ಗಂಗವಾಡಿವಟಾಟವೀಂ" ಎಂದಿದೆ. ತನ್ನ ಇಚ್ಛೆಯಂತೆ ವೀರಬಂಕೇಯ ದಾಳಿಮಾಡಲು ಮುನ್ನುಗ್ಗಿದನು ಎಂದು ಅಮೋಘವರ್ಷನು ತಿಳಿಸಿದ್ದಾನೆ. ದಾಳಿ ಮಾಡಲು ನಡೆದ ಬಂಕೇಯನಿಗೆ ನಾನಾ ರೀತಿಯ ತೊಂದರೆಗಳು ಎದುರಾದವು. ಕೇದಲದುರ್ಗದಲ್ಲಿ ಯುದ್ಧ ನಡೆದಾಗ ಇತ್ತ ಮಳಖೇಡದಲ್ಲಿ ಬಂಡಾಯ ಪ್ರಾರಂಭವಾಯಿತು. ತನ್ನ ಮಗನೂ ಅದರಲ್ಲಿ ಪಾಲ್ಗೊಂಡನೆಂದು ತಿಳಿದಾಗ ನೃಪತುಂಗನು ಬಹುಶಃ ಯುದ್ಧ ನಿಲ್ಲಿಸಿರಬಹುದು. ಆದ್ದರಿಂದ ಬಂಕೆಯನಿಗೆ ಯುದ್ಧವನ್ನು ನಿಲ್ಲಿಸಿ ಹಿಂದಿರುಗಿ ಬರುವಂತೆ ಹೇಳಿದಾಗ ಬಂಕೇಯನು ಸೂಕ್ತ ಉತ್ತರದೊಂದಿಗೆ ದೂತನನ್ನು ಹಿಂದಿರುಗಿಸಿ ಶತ್ರುಮರ್ದನ ಮಾಡಿ ಯುವರಾಜನ ಸಮೇತ ರಾಜಧಾನಿಗೆ ಹಿಂದಿರುಗಿದನು.

ಚಲ್ಲಕೇತನ ವಂಶದ ಎಲ್ಲ ಅರಸರೂ ರಾಷ್ಟ್ರಕೂಟರ ನಿಷ್ಠಾವಂತ ಮಾಂಡಳೀಕರಾಗಿದ್ದು ಎರಡನೆಯ ಕೃಷ್ಣ, ಮೂರನೆಯ ಇಂದ್ರ, ನಿತ್ಯವರ್ಷ ಮುಂತಾದವರ ಕಾಲದಲ್ಲಿ ಆಳಿದ್ದಾರೆ. ತಮ್ಮ ಪ್ರಾಮಾಣಿಕ ಸೇವೆಗೆ ಹೆಸರಾಗಿದ್ದರಲ್ಲದೇ ಒಡೆಯನಿಗಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟಿದ್ದಾರೆ. ರಾಷ್ಟ್ರಕೂಟರ ಸೈನ್ಯಬಲದ ಬೆನ್ನೆಲುಬಾಗಿ ನಿಂತವರು ಇವರೇ ಎಂದರೂ ಸರಿಯೇ.

## ಆಳುಪರು

ಕ್ರಿ.ಶ. ೭ ನೆಯ ಶತಮಾನದ ಮಧ್ಯಭಾಗದಿಂದ ಕ್ರಿ.ಶ. ೧೪ ನೆಯ ಶತಮಾನದವರೆಗೆ ಆಳಿದ ವಂಶವಿದು. ಎರಡನೆಯ ಆಳುವರಸನ (ಕ್ರಿ.ಶ. ಸುಮಾರು ೭೩೦ – ೭೭೫) ಮರಣದ ನಂತರ ಹಿರಿಯ ಮಗ ಎರಡನೆಯ ಚಿತ್ರವಾಹನನು ಪೊಂಬುಚ್ಚಪುರಕ್ಕೂ, ಕಿರಿಯ ಮಗ ರಣಸಾಗರನು ತುಳುನಾಡಿಗೂ

ಅಧಿಪತಿಯಾಗಿದ್ದರು. ರಾಷ್ಟ್ರಕೂಟ ಮೂರನೆಯ ಗೋವಿಂದನ ದಾಳಿಯಿಂದಾಗಿ ಎರಡನೆಯ ಚಿತ್ರವಾಹನನ್ನು ಸೋಲಿಸಿದನು. ಇದರಿಂದಾಗಿ ಚಿತ್ರವಾಹನನು ತುಳುನಾಡಿಗೆ ಹಿಂದಿರುಗಬೇಕಾಯಿತು. ಆಳುಪರು ರಾಷ್ಟ್ರಕೂಟರ ಸಾಮಂತರಾಗಿ ಕೆಲವು ಕಾಲ ಆಳ್ವಿಕೆ ನಡೆಸಿದ್ದರು. ರಾಷ್ಟ್ರಕೂಟರ ಒಂದೆರಡು ಶಾಸನಗಳಲ್ಲಿ ಆಳುಪರು ಉಲ್ಲೇಖ ಬಂದಿದೆ.

## ಸೇಂದ್ರಕರು

ಸೇಂದ್ರಕರು ರಾಷ್ಟ್ರಕೂಟರ ಒಂದು ಶಾಖೆಗೆ ಮಿತ್ರರಾಗಿದ್ದರು. ಇವರು ದಕ್ಷಿಣ ಮರಾಠಾ ದೇಶದ ಅರಸರೂ ಮತ್ತು ಚಾಲುಕ್ಯರ ಬಂಧುಗಳು ಆಗಿದ್ದರು. ೭ ನೆಯ ಶತಮಾನದ ಮಧ್ಯಭಾಗದಲ್ಲಿದ್ದರು ಎಂದು ತಿಳಿದು ಬರುತ್ತದೆ.

## ಸಿಂದಕರು

ಸಿಂದಕ ವಂಶದ ಗೊಂಕ, ಗೊಂಕರಸ ಮುಂತಾದವರ ಉಲ್ಲೇಖಗಳು ರಾಷ್ಟ್ರಕೂಟರ ಶಾಸನಗಳಲ್ಲಿ ಸಿಗುತ್ತವೆ. ಇವರು ಕರಹಾಟ ಪುರವರಾಧೀಶ್ವರ, ಮಾಳತೀದೇವಿಲಬ್ಧವರಪ್ರಸಾದ, ಫಣಿರಾಜವಂಶ, ವ್ಯಾಘ್ರಮೃಗಲಾಂಛನ ಮುಂತಾದ ಪ್ರಶಸ್ತಿಗಳನ್ನು ಹೊಂದಿದ್ದರು. ಇದೊಂದು ಸಣ್ಣವಂಶವಾಗಿದ್ದು, ರಾಷ್ಟ್ರಕೂಟರ ಕಾಲದಲ್ಲಿ ಕೆಲವು ಕಾಲ ಹಾನುಗಲ್ಲನ್ನು ಆಳುತ್ತಿದ್ದನೆಂದು ತಿಳಿದುಬರುತ್ತದೆ.

## ಸಾಂತರರು

ಕ್ರಿ.ಶ. ೭ ರಿಂದ ೧೭ ನೆಯ ಶತಮಾನದವರೆಗೆ ಆಳಿದ ರಾಜವಂಶ. ಇವರು ರಾಷ್ಟ್ರಕೂಟರ ಮಾಂಡಳೀಕರಾಗಿ ಆಳ್ವಿಕೆ ನಡೆಸಿದ್ದರು. ಉಗ್ರವಂಶಕ್ಕೆ ಸೇರಿದವರು. ವಾನರಧ್ವಜರು, ಸಿಂಹಲಾಂಛನರು ಎಂದು ಶಾಸನಗಳಲ್ಲಿ ಉಲ್ಲೇಖಿತರಾಗಿದ್ದರು. ಸಾಂತಳಿಗೆ – ೧೦೦೦ ದ ಪ್ರದೇಶವನ್ನು ಆಳುತ್ತಿದ್ದರು. ರಾಷ್ಟ್ರಕೂಟರ ಕೆಲವು ಶಾಸನಗಳಲ್ಲಿ ಇವರ ಉಲ್ಲೇಖವಿದ್ದು, ದಾನನೀಡಿದ, ಗೋಸಾಸ ನೀಡಿದ ವಿವರಗಳಿವೆ.

ಮೈಸೂರು ಪ್ರಾಂತದಲ್ಲೊಂದು ಚಾಲುಕ್ಯ ವಂಶವಿದ್ದು, ಅವರು ರಾಷ್ಟ್ರಕೂಟರ ಮಾಂಡಳೀಕರಾಗಿದ್ದರೆಂದು ಹೇಳಲಾಗಿದೆ. ಮೇಲಿನ ಸಣ್ಣಪುಟ್ಟ ಮಾಂಡಳೀಕರಲ್ಲದೇ, ಮಾಟೂರವಂಶ, ಸಗರಕುಲ, ನಾಗರಕುಲ, ಗಜಜೀವಿವಂಶ ಮುಂತಾದ ತೀರ

ಪುಟ್ಟಪುಟ್ಟ ಮಾಂಡಳೀಕರೂ ಇದ್ದರೆಂಬ ವಿಚಾರವು ನಮಗೆ ರಾಷ್ಟ್ರಕೂಟರ ಶಾಸನಗಳಿಂದ ತಿಳಿದುಬರುತ್ತದೆ.

## ವಿದೇಶೀ ಪ್ರವಾಸಿಗರ ಬರಹ

ವಿದೇಶೀ ಪ್ರವಾಸಿಗರಲ್ಲಿ ಅರಬ್ಬರು ಮತ್ತು ಮುಸಲ್ಮಾನರನ್ನು ಹೆಸರಿಸಬಹುದು. ಕ್ರಿ.ಶ. ೯ ನೆಯ ಶತಮಾನದಿಂದ ೧೬ ನೆಯ ಶತಮಾನದವರೆಗು ಅರಬ್ ಪ್ರವಾಸಿಗರು ಬಂದು ಹೋದುದಕ್ಕೆ ಅವರ ಪ್ರವಾಸ ಬರಹಗಳೆ ಸಾಕ್ಷಿಯಾಗಿವೆ. ಅವರಿಗೆ ಪ್ರಾದೇಶಿಕ ದೂರ ಗಡಿಗಳ ಪರಿಚಯವಿಲ್ಲದಿದ್ದರೂ ಇತಿಹಾಸಕಾರರಿಗೆ ಸಹಾಯಕವಾಗುವಂತೆ ಊರುಗಳ ಹೆಸರು, ವಾಣಿಜ್ಯ ವ್ಯವಹಾರಗಳು, ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಮತ್ತು ತಮಗೆ ವಿಶೇಷವೆನಿಸಿದ ಅಂಶಗಳನ್ನು ಹೇಳಿದ್ದಾರೆ. ಇವರಲ್ಲಿ ಪ್ರಮುಖರೆಂದರೆ ಖುರ್ದಾದ್‌ಬೆ (ಕ್ರಿ.ಶ. ೮೪೪–೮೪೮), ಸುಲೈಮಾನ್ (ಕ್ರಿ.ಶ.೮೫೦), ಯಾಕೋಬಿ (ಕ್ರಿ.ಶ.೮೭೫–೮೮೦), ಅಬುಜೈದ್ (ಕ್ರಿ.ಶ.೯೧೬), ಅಲ್ ಮಸೂದಿ (ಕ್ರಿ.ಶ.೯೩೨–೯೫೬), ಅಲ್ ಇಸ್ತಾಖ್ರಿ, ಇಬ್ನ್ ಹಖಲ್ ಮತ್ತು ಮಕ್‌ದಿಸಿ ( ಕ್ರಿ.ಶ. ೯೫೧–೯೬೮), ಆಲ್ ಬೆರುನಿ (ಕ್ರಿ.ಶ.೯೭೩–೧೦೪೮) ಮುಂತಾದವರು. ಇವರಲ್ಲಿ ಆಲ್ ಬೆರುನಿಯು ರಾಷ್ಟ್ರಕೂಟರ ಅವನತಿಯನ್ನು ಕಂಡಿರಬಹುದು ಎಂದು ಊಹಿಸಬಹುದಾಗಿದೆ. ವಲ್ಲಭರಾಜನನ್ನು ಬಲ್ಹಾರನೆಂದು ಕರೆದು ಜಗತ್ತಿನ ನಾಲ್ಕು ಮಹಾನ್ ದೊರೆಗಳಲ್ಲಿ ಒಬ್ಬನೆಂದು ಹೊಗಳಿದ್ದಾನೆ.

ಇವರಲ್ಲಿ ಸುಲೈಮಾನ್, ಅಬುಜೈದ್, ಇಬ್ನಖುರ್ದಾದ್, ಅವರುಗಳು ರಾಷ್ಟ್ರಕೂಟರನ್ನು ಮೆಚ್ಚಿಕೊಂಡಿದ್ದಾರೆ. ಮುಸಲ್ಮಾನ ಪ್ರಜೆಗಳ ಮೇಲಿನ ಆಡಳಿತವನ್ನು ಅಥವಾ ಮೇಲುಸ್ತುವಾರಿಯನ್ನು ನೋಡಿಕೊಳ್ಳಲು ಮುಸಲ್ಮಾನ ಅಧಿಕಾರಿಗಳನ್ನು ನೇಮಿಸುತ್ತಿದ್ದರೆಂದು ದಾಖಲಿಸಿದ್ದಾರೆ. ಇದಕ್ಕೆ ಕಾರಣವನ್ನು ನೀಡುತ್ತಾ, ಮುಸಲ್ಮಾನರ ಧಾರ್ಮಿಕ ನಂಬಿಕೆಗಳನ್ನೂ, ಆಚಾರ ವಿಚಾರಗಳನ್ನೂ ಮುಸಲ್ಮಾನರೇ ತಿಳಿಯಲು ಸಾಧ್ಯವೆಂದು ಈ ರೀತಿಯ ವ್ಯವಸ್ಥೆ ಮಾಡಲಾಗಿತ್ತು ಎಂದು ತಿಳಿಸಿದ್ದಾರೆ.

## ಮುಸಲ್ಮಾನರು

ಕ್ರಿ.ಶ. ೮–೯ ನೆಯ ಶತಮಾನದಲ್ಲಿ ಮೊಹಮ್ಮದಿಯರು ಭಾರತಕ್ಕೆ ಕಾಲಿಟ್ಟರು. ಭಾರತಕ್ಕೆ ಮುಸಲ್ಮಾನರ ಆಗಮನ ಬಹಳ ಶಾಂತವಾದ ರೀತಿಯಲ್ಲಿ ಆಯಿತು.ಅವರು

ಬಂದಿದ್ದು ವ್ಯಾಪಾರಕ್ಕಾಗಿ, ಅದರೆ ಅವರು ಭಾರತದ ಅಪಾರ ಐಶ್ವರ್ಯಕ್ಕೆ ಆಕರ್ಷಿತರಾದರು. ಭಾರತದ ದೊರೆಗಳು ಮೊದಲು ಆಗಮಿಸಿದ ವ್ಯಾಪಾರಿಗಳನ್ನು ಸ್ವಾಗತಿಸಿ ಪ್ರೋತ್ಸಾಹಿಸಿದರು. ಮೊಹಮ್ಮದಿಯರ ನೌಕಾದಳ, ಠಾಣ, ಭರೋಚ ಮತ್ತು ದೇಬಲ್‌ಗಳಲ್ಲಿತ್ತು. ಕ್ರಿ.ಶ. ೭೧೮ರಲ್ಲಿ ಮಹಮ್ಮದ್-ಬಿನ್-ಕಾಸಿಮನು ದೇಬಲ್ ಕೋಟೆಯನ್ನು ಒಡೆದನು. ಸಿಂದ್ ಪ್ರಾಂತ್ಯವು ಮೊಹಮ್ಮದಿಯರ ವಶವಾಯಿತು. ಚಲುಕ್ಯರು ಮುಂತಾದವರು ಇವರನ್ನು ಓಡಿಸಲು ಪ್ರಯತ್ನಿಸಿದರಾದರೂ ಅವರು ಪ್ರಬಲರಾಗುತ್ತಲೇ ಹೋದದ್ದು ಭಾರತೀಯರ ದುರಾದೃಷ್ಟವೆನ್ನಬಹುದು. ೮ ನೆಯ ಶತಮಾನದ ಹೊತ್ತಿಗೆ ಅರಬ್ಬರು ಸಿಂಧ್‌ನ ಮೇಲೆ ಹತೋಟಿಯನ್ನಿಟ್ಟುಕೊಂಡಿದ್ದರು. ಅದನ್ನು ದಾಟಿ ಮುಂದೆ ಬರದಂತೆ ಅವನಿಜಾಶ್ರಯ ಪುಲಿಕೇಶಿಯು ಅವರನ್ನು ತಡೆದಿದ್ದನು. ಬಾದಾಮಿ ಚಲುಕ್ಯರ ನಂತರ ರಾಷ್ಟ್ರಕೂಟರು ಬಂದಾಗಲೂ ಪರಿಸ್ಥಿತಿ ಬದಲಾಗಲಿಲ್ಲ.

ಸಂಜಾನ್ ತಾಮ್ರಪಟದಲ್ಲಿ (EI. Vol. XXXII, p45ff. 926AD), ಸಂಯಾನ ಮಂಡಲವನ್ನು ತಾಜಿಕವಂಶದ (ಮುಸಲ್ಮಾನ) ಮಧುಮತಿಯು ಆಳುತ್ತಿದ್ದನೆಂಬ ಉಲ್ಲೇಖವಿದೆ. ಬಾದಾಮಿ ಚಲುಕ್ಯರ ಅವನಿಜನಾಶ್ರಯ ಪುಲಕೇಶಿಯು ಕ್ರಿ.ಶ.೭೩೮ ರಲ್ಲಿ ತಾಜಿಕರನ್ನು ಓಡಿಸಿದ್ದನೆಂದು ತಿಳಿದುಬರುತ್ತದೆ. ರಾಷ್ಟ್ರಕೂಟ ಎರಡನೆಯ ಕೃಷ್ಣನಿಂದ ಸಂಯಾನ ಮಂಡಲವನ್ನು ಪಡೆದು ಅಲ್ಲಿ ಆಳ್ವಿಕೆ ನಡೆಸಿದ್ದರು. ಮೂರನೆಯ ಇಂದ್ರನ ಕಾಲದಲ್ಲಿ ಕೂಡ ಅಲ್ಲಿಯೇ ಆಳುತ್ತಿದ್ದರು. ಮಧುಮತಿಯು ಸುಗತಿಪನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು. ಈತ ಜನೋಪಕಾರಿ ಕಾರ್ಯವಾಗಿ ಸಂಯಾನದ ಬಳಿ ನದಿಗೆ ಹರಿಗೋಲನ್ನು ಮಾಡಿಸಿಕೊಟ್ಟನಲ್ಲದೇ, ಧರ್ಮಾರ್ಥವಾಗಿ ಊಟದ ಛತ್ರವನ್ನು ಸ್ಥಾಪಿಸಿದನು. ಕ್ರಿ.ಶ. ೯೧೫ ರಲ್ಲಿ ಆಳ್ವಿಕೆ ನಡೆಸಿದ್ದ ಈತ ಜನಪ್ರಿಯನಾಗಿದ್ದನು. ಹಿಂದೂ ದೇವಿಯಾದ ದಶಮೀ ದೇವಿಗೆ ಮಠಿಕೆಯನ್ನು ಕಟ್ಟಿಸಿ ದತ್ತಿ ನೀಡುವುದಕ್ಕೆ ಈತ ಅಗ್ರಭಾಗಿಯಾಗಿದ್ದನೆಂದು ತಿಳಿದುಬರುತ್ತದೆ.

ಮೋತಿಚಂದ್ರ ಅರಬ್ಬರ ಧಾಳಿಗಳನ್ನು ಕುರಿತು ಹೀಗೆ ಹೇಳುತ್ತಾರೆ: "ರಾಷ್ಟ್ರಕೂಟರು ಅರಬ್ಬರ ನೆರವಿಗೆ ಬಂದಿರಲಿಲ್ಲವಾದರೆ ಬಹುಶಃ ಅವರು ಸಿಂಧ್‌ನಲ್ಲಿ ಉಳಿಯುವುದು ಕಷ್ಟವಾಗುತ್ತಿತ್ತು" (ಸಾರ್ಥವಾಹ ಪು,೨೬೪). ರಾಷ್ಟ್ರಕೂಟರು ಅರಬ್ಬರ ನೆರವಿನಿಂದ ವಿದೇಶೀ ವಾಣಿಜ್ಯ ವ್ಯವಹಾರವನ್ನು ನಡೆಸುತ್ತಿದ್ದರೆ ಹೊರತು ಅವರು

ರಾಜ್ಯಗಳಿಸಲು ಸಹಾಯ ಮಾಡಿರಲಿಲ್ಲವೆಂದು ನಿಸ್ಸಂದೇಹವಾಗಿ ಹೇಳಬಹುದು. ಅರಬ್ ಪ್ರವಾಸಿಗರು ರಾಷ್ಟ್ರಕೂಟ ದೊರೆಯನ್ನು ಬಲ್ಹರನೆಂದು ಕರೆದಿದ್ದರು. ಅಷ್ಟೇ ಅಲ್ಲದೆ ಜಗತ್ತಿನ ನಾಲ್ಕು ಮಹಾನ್ ದೊರೆಗಳಲ್ಲಿ ಒಬ್ಬನೆಂದು ಅಮೋಘವರ್ಷನನ್ನು ಹೊಗಳಿದ್ದರು. ರಾಷ್ಟ್ರಕೂಟರ ಕಾಲದಲ್ಲಿ ಮುಸಲ್ಮಾನ ಅಧಿಕಾರಿಗಳಿದ್ದರು ಮತ್ತು ಅವರು ಮಸೀದಿಯನ್ನು ಕಟ್ಟಿಕೊಳ್ಳಲು ಅನುಮತಿ ಪಡೆದಿದ್ದರು. ಅದರ ರಾಜ್ಯ ವಿಸ್ತರಣೆಯಂಹ ಅಧಿಕಪ್ರಸಂಗಕ್ಕೆ ಪ್ರೋತ್ಸಾಹ ನೀಡುತ್ತಿರುಲಿಲ್ಲ.

## ಶ್ರೀಲಂಕ

ಅಮೋಘವರ್ಷನ ಸಂಜಾನ್ ತಾಮ್ರಪಟಗಳಲ್ಲಿ (EI., Vol XVIII, P 235, 871 AD) ಸಿಂಹಳದ ದೊರೆಯು ಮೂರನೆಯ ಅಮೋಘವರ್ಷನಿಗೆ ತನ್ನ ಮತ್ತು ತನ್ನ ಮಂತ್ರಿಯ ಎರಡು ವಿಗ್ರಹಗಳನ್ನು ಕಾಣಿಕೆಯಾಗಿ ನೀಡಿದನೆಂಬ ಉಲ್ಲೇಖವಿದೆ. ಇದಕ್ಕೆ ಪೂರಕವಾಗಿ ಸಿಂಹಳದ ಯಾವುದೇ ಶಾಸನಗಳಲ್ಲಿ ಹೆಚ್ಚಿನ ಮಾಹಿತಿಯಿಲ್ಲ. ಆದರೆ "ಕುಲವಂಶ" ಶ ಪ್ರಕಾರ ಐದನೆಯ ಮಹೇಂದನ ಕ್ರಿ.ಶ. ೯೬೩ ರಲ್ಲಿ ರಾಷ್ಟ್ರಕೂಟರೊಡನೆ ಯುದ್ಧ ಮಾಡಿದನು. ವಲ್ಲಭರಾಜನು ತನ್ನ ಸೈನ್ಯವನ್ನು ಉತ್ತರಸಿಂಹಳಕ್ಕೆ ಅರ್ಥಾತ್ ನಾಗದ್ವೀಪಕ್ಕೆ ಕಳಿಸಿದಾಗ ಮಹೇಂದನ ತನ್ನ ಸೇನಾಧಿಪತಿಯಾದ ಸೇನನ ನೇತೃತ್ವದಲ್ಲಿ ಸೈನ್ಯವನ್ನು ಕಳುಹಿಸಿದನು. ಈ ಯುದ್ಧದಲ್ಲಿ ವಲ್ಲಭರಾಜನ ಸೈನ್ಯವು ಸೋತಿತು. ಸೋತ ವಲ್ಲಭರಾಜನು ಒಪ್ಪಂದಕ್ಕೆ ಹಸ್ತಾಕ್ಷರವನ್ನು ಹಾಕಿದನೆಂದು ದಾಖಲಿಸುತ್ತದೆ. ಈ ವಲ್ಲಭನು ಯಾರು ಎಂಬುದರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿತ್ತು. ತಮಿಳು ಅರಸರಲ್ಲಿ ಒಬ್ಬನೆಂದು ಭಾವಿಸಿದ್ದರು. ನೀಲಕಂಠ ಶಾಸ್ತ್ರಿಯವರು ರಾಷ್ಟ್ರಕೂಟ ಮೂರನೆಯ ಕೃಷ್ಣನೆಂದು ಸರಿಯಾಗಿ ಗುರುತಿಸಿದ್ದಾರೆ. ಕ್ರಿ.ಶ. ೯೬೩ ರ ಸುಮಾರಿಗೆ ತಮಿಳುನಾಡಿನ ಹಲವಾರು ಪ್ರದೇಶಗಳನ್ನು ಮೂರನೆಯ ಕೃಷ್ಣನು ಆಳುತ್ತಿದ್ದನು. ಸಿಂಹಳದ ಅರಸನು ಮೂರನೆಯ ಕೃಷನಿಗೆ ಸೋತಿದ್ದನ್ನು ಶಾಸನವೊಂದು ಉಲ್ಲೇಖಿಸಿದೆ. ಸೋಮದೇವ ಸೂರಿಯ "ಯಶಸ್ತಿಲಕ ಚಂಪೂ" ವಿನಲ್ಲಿ ಇದರ ಬಗ್ಗೆ ಉಲ್ಲೇಖವಿದೆ. ಇದು ರಾಷ್ಟ್ರಕೂಟರ ಸಮುದ್ರದಾಚೆಗಿನ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ. ರಾಷ್ಟ್ರಕೂಟರು ಆಗಾಗ್ಗೆ ಸಿಂಹಳಕ್ಕೆ ಭೇಟಿ ನೀಡುತ್ತಿದ್ದರೆಂಬ ಉಲ್ಲೇಖವಿದೆ. ಮಹೇಂದನು ತನ್ನ ಸೈನ್ಯವನ್ನು ನಡೆಸಲಾರದೆ ಅನುರಾಧಪುರದಿಂದ ಪಲಾಯನ ಮಾಡಿದನೆಂದೂ

ಆಗ ಕೇರಳ, ಕರ್ನಾಟಕ ಸೈನ್ಯಗಳು ಒಂದಾಗಿ ಆಡಳಿತ ನಡೆಸಿದರೆಂದೂ ಕುಲವಂಶದಲ್ಲಿ ವಿವರಿಸಲಾಗಿದೆ. ಹಾಗೆಯೇ ಕೇರಳ ಸೈನ್ಯವು ಪರಾಕ್ರಮಬಾಹು / ಗಜಬಾಹುವಿನ ಕಾಲದಲ್ಲೂ ಇದ್ದ ಉಲ್ಲೇಖವಿದೆ. ಸಿಂಹಳರಾಜ ಶ್ರೀವಲ್ಲಭ ಮದನರಾಜನು ರಾಷ್ಟ್ರಕೂಟ ಮೂರನೆಯ ಕೃಷ್ಣನ ರಾಜ್ಯದಲ್ಲಿ ಹಲವಾರು ದಿನಗಳ ಕಾಲ ಇದ್ದ ಬಗ್ಗೆಯೂ ವಿವರಗಳಿವೆ. ಕೊಂಕಣದ ಸಿಲಹಾರ ಸಂತತಿಯವರು ಸಿಂಹಳ ಮೂಲದವರೆಂದು ಸಿಲಹರ ರಟ್ಟರಾಜನ ಶಾಸನದಲ್ಲಿ ಕಾಣಬಹುದು. ಈಗಲೂ ಸಿಂಹಳದಲ್ಲಿ ಕರ್ನಾಟಕದ ರಾಷ್ಟ್ರಕೂಟರ ಅಧೀನರಾಗಿದ್ದ ನೊಳಂಬವಾಡಿ ಕುಲದವರೆಂದು ಕರೆದುಕೊಳ್ಳುವ ಸಂತತಿಯವರು "ನೊಳಂಬರಾಯರ್" ಎಂಬ ಹೆಸರಿನಲ್ಲಿ ಇದ್ದಾರೆಂದು ಹೇಳಿದ್ದಾರೆ. ಈ ರೀತಿಯ ಓಡಾಟಗಳಿಂದಾಗಿ ಗಂಗವಂಶಕ್ಕೆ ಸೇರಿದವರೆಂದು ಹೇಳಿಕೊಳ್ಳುವವರೂ ಅಲ್ಲಿದ್ದರು. ತಲಕಾಡಿನ ಗಂಗರದೆನ್ನಲಾದ ಚಿನ್ನದ ನಾಣ್ಯಗಳು ಸಿಂಹಳದಲ್ಲಿ ದೊರೆತಿರುವುದು ಬಹುಶಃ ಈ ಕಾರಣದಿಂದಲೇ ಎನ್ನಬಹುದು.

## ಶಾಸನಗಳ ಹರಹು

ರಾಷ್ಟ್ರಕೂಟರ ಶಾಸನಗಳು ಕರ್ನಾಟಕ, ತಮಿಳುನಾಡು, ಆಂಧ್ರಪ್ರದೇಶ, ಒರಿಸ್ಸಾ, ಮಹಾರಾಷ್ಟ್ರ, ಮಧ್ಯಪ್ರದೇಶ, ಗುಜರಾತ್ ಮತ್ತು ರಾಜಸ್ಥಾನಗಳಲ್ಲಿ ಸಿಗುವುದನ್ನು ಗಮನಿಸಬಹುದು. ತಾಮ್ರಪಟಗಳು ಮತ್ತು ಶಿಲಾಲೇಖಗಳು ಎರಡೂ ಪ್ರಕಾರಗಳಲ್ಲಿ ಶಾಸನಗಳಿವೆ. ಕರ್ನಾಟಕದಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಶಿಲಾ ಶಾಸನಗಳು ಲಭ್ಯವಾಗಿವೆ. ತಾಮ್ರಪಟಗಳು ಕಡಿಮೆ. ಶಾಸನಗಳ ಹರಹನ್ನು ಗಮನಿಸಿದಾಗ ರಾಷ್ಟ್ರಕೂಟ ಸಾಮ್ರಾಜ್ಯದ ವಿಸ್ತಾರವನ್ನು ಕಲ್ಪಿಸಿ ಕೊಳ್ಳುವುದು ಸುಲಭವಾಗುತ್ತದೆ. ಪ್ರಸ್ತುತ ಅಧ್ಯಯನವು ಎಲ್ಲ ರಾಷ್ಟ್ರಕೂಟ ವಂಶಗಳನ್ನು ಒಳಗೊಂಡಿರುವುದರಿಂದ ವಿವಿಧ ಕಾಲಗಳಲ್ಲಿ ವಿವಿಧ ಕೇಂದ್ರಗಳನ್ನು ಗುರುತಿಸಬಹುದಾಗಿದೆ. ಒಟ್ಟಾರೆಯಾಗಿ ಗಮನಿಸಿದಾಗ ಮಳಖೇಡದ ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಆ ಪ್ರದೇಶಗಳು ಸೇರಿಹೋಗಿತ್ತೆನ್ನುವ ಅಂಶ ಮನದಟ್ಟಾಗುತ್ತದೆ. ಆದರೂ ವಿವಿಧ ಕೇಂದ್ರಗಳನ್ನು ಗುರುತಿಸಿ ಅಭ್ಯಾಸ ಮಾಡುವ ಪದ್ಧತಿಯೊಂದು ಬೆಳೆದು ಬಿಟ್ಟಿರುವು ದರಿಂದ, ಅದರ ಜಾಡಿನ ಅನಿವಾರ್ಯತೆಯು ಇದೆ ಎನಿಸುತ್ತದೆ. ಹಳೆಯದರ ಹಿನ್ನೆಲೆಯಲ್ಲಿಯೇ ಹೊಸ ದೃಷ್ಟಿಯಿಂದ ಗಮನಿಸುವ ಪ್ರಯತ್ನದಲ್ಲಿ ಕಾಲಾನುಕ್ರಮದ ಕಡೆ ಗಮನ ಕೊಡುವುದು ಅಸಾಧ್ಯ. ಆದ್ದರಿಂದ ಆ ನಿಟ್ಟಿನಲ್ಲಿ ಕೆಲವು

ಬದಲಾವಣೆಗಳನ್ನು ಗುರುತಿಸುವತ್ತ ಯೋಚಿಸಬೇಕಾಯಿತು. ಒಟ್ಟಿನಲ್ಲಿ ಎಲ್ಲ ರಾಷ್ಟ್ರಕೂಟ ವಂಶಗಳನ್ನು ಒಂದೇ ಛತ್ರದ ಅಡಿಯಲ್ಲಿ ಗುರುತಿಸಬಹುದಾಗಿದೆ. ರಾಮೇಶ್ವರದಿಂದ ಕನೌಜದವರೆಗೆ, ಪಾಂಡಿಚೆರಿಯಿಂದ ಗುಜರಾತಿನವರೆಗೆ, ರಾಜಸ್ಥಾನದಿಂದ ಒರಿಸ್ಸಾದವರೆಗೆ, ಭಾರತದ ದಕ್ಷಿಣ, ಪಶ್ಚಿಮ ಮತ್ತು ಮಧ್ಯಭಾಗವನ್ನು ತಮ್ಮ ಹಿಡಿತದಲ್ಲೇ ಇಟ್ಟುಕೊಂಡಿದ್ದರು ಎನ್ನುವ ವಿಚಾರವೇ ಕುತೂಹಲಕಾರಿಯಾಗಿದೆ. ಶ್ರೀಲಂಕಾವು ಕೂಡ ಇವರ ಆಡಳಿತಕ್ಕೆ ಸೇರಿತ್ತು ಎನ್ನುವ ಮಾತನ್ನು ಹೇಳಿದರೂ ಎಷ್ಟು ವರ್ಷಗಳ ಕಾಲ ಇತ್ತು ಎನ್ನುವುದು ಖಚಿತವಾಗಿ ತಿಳಿಯುತ್ತಿಲ್ಲ. ಇನ್ನೂ ಹೆಚ್ಚಿನ ಪರಿಶ್ರಮವಹಿಸಿ ಅಧ್ಯಯನ ಮಾಡಿದರೆ ಅದು ಕೂಡ ತಿಳಿಯುವ ಸಾಧ್ಯತೆಗಳಿವೆ. ಇನ್ನು ಶಂಕರಾಚಾರ್ಯರ ಉಲ್ಲೇಖವಿರುವ ಶಾಸನವೊಂದು ಕಾಂಬೋಡಿಯಾದಲ್ಲಿ ಸಿಕ್ಕಿದೆ ಎಂದು ವಿದ್ವಾಂಸರು ಗುರುತಿಸಿದ್ದಾರೆ. ಇದರಲ್ಲಿ ಬರುವ ಶಂಕರರು ಅಭಿನವ ಶಂಕರರು ಹೌದೇ ಅಲ್ಲವೇ ತಿಳಿದಿಲ್ಲ.

### ಶಾಸನಗಳ ಸಂಖ್ಯೆ

ರಾಷ್ಟ್ರಕೂಟರ ಶಾಸನಗಳ ಸಂಖ್ಯೆ ಇಂತಿಷ್ಟೇ ಇದೆ ಎಂದು ಹೇಳುವುದು ಸಾದ್ಯವಿಲ್ಲ. ಏಕೆಂದರೆ ನಮಗೆ ದೊರಕಿರುವ ಹಲವಾರು ಶಾಖೆಗಳಲ್ಲಿ ಸಿಗುವ ಶಾಸನಗಳ ಸಂಖ್ಯೆ ಒಂದೋ ಎರಡೋ ಆಗಿರುವುದರಿಂದ ಅವರು ಹಾಕಿಸಿರುವುದೇ ಅಷ್ಟು ಎಂದರೆ ಉದ್ಧಟತನವಾದೀತು. ಪ್ರತಿಯೊಂದು ಶಾಖೆಯೂ ಕಡೆಯ ಪಕ್ಷ ೪೦ ರಿಂದ ೫೦ ವರ್ಷಗಳವರೆಗೆ ಆಳ್ವಿಕೆ ನಡೆಸಿದೆ. ಲಭ್ಯವಿರುವ ಶಾಸನಗಳ ಆಧಾರದಿಂದ ನಮ್ಮ ಕುತೂಹಲವನ್ನು ತಣಿಸಿಕೊಳ್ಳುವ ಪ್ರಯತ್ನವಷ್ಟೇ ಎಂದರೆ ಸರಿಯಾಗುತ್ತದೆ. ಕಣ್ಣು ತಪ್ಪಿ ಉಳಿದಿರುವ ಸಾಧ್ಯತೆಯೂ ಹೆಚ್ಚಿರುವುದರಿಂದ ಇಲ್ಲಿ ಕೂಡ ಸಂಖ್ಯೆ ಸರಿಯಾಗಿದೆಯೆಂದು ಧೈರ್ಯವಾಗಿ ಹೇಳಲಾಗದಿದ್ದರೂ ಪರಿಮಿತಿಯಲ್ಲಿ ಸಿಕ್ಕಿರುವುದನ್ನು ಮಾತ್ರ ಸೇರಿಸಿ ಕೊಡಲಾಗಿದೆ.

| ಸಂಖ್ಯೆ | ಶಾಖೆ | ಪ್ರಕಟಿತ ಶಾಸನಗಳು |
|---|---|---|
| ೧. | ಮಾನಪುರ | ೪ |
| ೨. | ಅಚಲಾಪುರ | ೫ |
| ೩. | ಮಾನ್ಯಖೇಟ | ೬೨೭ |

| | | |
|---|---|---|
| ೪. | ಗುಜರಾತ್ ಶಾಖೆ – ೧ | ೧೬ |
| ೫. | ಗುಜರಾತ್ ಶಾಖೆ – ೨ | ೩ |
| ೬. | ಪಠಾರಿ | ೧ |
| ೭. | ಹಸ್ತಿಕುಂಡಿ | ೧ |
| ೮. | ಬೋಧಗಯಾ | ೧ |
| ೯. | ಧಾನೋಪ | ೧ |
| ೧೦. | ರಾಷ್ಟ್ರೋಡ ಶಾಖೆ – ೧ | ೧ |
| ೧೧. | ಮಗಧ | ೧ |
| ೧೨. | ಸೌಂದತ್ತಿ | ೩೭ |
| ೧೩. | ಓಢ್ರ | ೧ |
| ೧೪. | ಕನೌಜ | ೮೬ |
| ೧೫. | ಬಿಥೂ | ೧ |
| ೧೬. | ಬದಾವನ್ | ೧ |
| ೧೭. | ರಾಷ್ಟ್ರೋಡ ಶಾಖೆ – ೨ | ೧ |
| | * ಗುರುತಿಸಿರುವುದು (ಪ್ರಕಟವಾಗಬೇಕಾಗಿದೆ) | ೭೩ |
| | * ಹೊಸದು | ೬೦ |
| | ಒಟ್ಟು | ೯೨೧ |

ಕೆಲವು ವಂಶಗಳ ಒಂದೊಂದೆ ಶಾಸನಗಳು ಸಿಕ್ಕಿವೆ. ಆದ್ದರಿಂದ ಹೆಚ್ಚಿನ ಮಾಹಿತಿ ತಿಳಿಯದಿದ್ದರು ಕೆಲವು ಅರಸರ ಹೆಸರು, ಲತ್ತಲೂರು, ಪಾಲಿಧ್ವಜ ಮುಂತಾದ ಆಧಾರಗಳಿಂದ ರಾಷ್ಟ್ರಕೂಟರ ವಂಶಕ್ಕೆ ಸೇರಿಸಬಹುದಾಗಿದೆ. ಪ್ರಕಟವಾಗಿರುವ ಶಾಸನಗಳ ಸಂಖ್ಯೆ ೭೮೮, ಇದಲ್ಲದೆ ವಿದ್ವಾಂಸರು ಈಗಾಗಲೇ ಗುರುತಿಸಿದ್ದು, ಆದರೆ ಪ್ರಕಟಿಸಬೇಕಾಗಿರುವ ಹೊಸ ಶಾಸನಗಳು ಸುಮಾರು ೭೩ ಇವೆ. ಮಳಖೇಡದ ಮತ್ತು

ಉಳಿದ ಶಾಖೆಗಳ ಹೊಸ ಶಾಸನಗಳು ಸುಮಾರು ೬೦ ಇವೆ. ಒಟ್ಟಾರೆಯಾಗಿ ರಾಷ್ಟ್ರಕೂಟರ ಶಾಸನಗಳು ಸುಮಾರು ೯೨೧ ಇವೆ.

## ಶಾಸನದ ಭಾಷೆ

ರಾಷ್ಟ್ರಕೂಟರ ಶಾಸನಗಳ ಭಾಷೆಯನ್ನು ಗಮನಿಸಿದರೆ ಸಂಸ್ಕೃತ, ಕನ್ನಡ, ತಮಿಳು, ತೆಲುಗು, ಮರಾಠಿ, ಒರಿಯಾ ಭಾಷೆಗಳಲ್ಲಿದೆ. ಸಂಸ್ಕೃತ ಭಾಷೆಯಲ್ಲಿ ಸಿಗುವುದು ಬಹುಪಾಲು ತಾಮ್ರಪಟಗಳಾಗಿವೆ. ಉಳಿದಂತೆ ಕನ್ನಡ ಶಾಸನಗಳು ಕಂಡುಬರುತ್ತವೆ. ಕನ್ನಡ, ಸಂಸ್ಕೃತ ಮಿಶ್ರಿತ, ಕನ್ನಡ, ಸಂಸ್ಕೃತ, ತೆಲುಗು ಮಿಶ್ರಿತ, ಕನ್ನಡ, ಸಂಸ್ಕೃತ, ಮರಾಠಿ ಮಿಶ್ರಿತ, ಸಂಸ್ಕೃತ, ಒರಿಯಾ ಮಿಶ್ರಿತ ಭಾಷೆಯಲ್ಲಿ ಶಾಸನಗಳು ಸಿಕ್ಕಿವೆ. ಭಾಷೆಯ ದೃಷ್ಟಿಯಿಂದ ಹೇಳುವುದಾದರೆ ಆರಂಭದ ಶಾಸನಗಳು ಸಂಸ್ಕೃತದ್ದಾಗಿವೆ. ದೊಡ್ಡ ದೊಡ್ಡ ಶಾಸನಗಳು ಸಿಗುವುದಿಲ್ಲ. ಶಾಸನಗಳಲ್ಲಿ ಬಳಸಿರುವ ಭಾಷೆಯು ಕಾವ್ಯಮಯವಾಗಿಯೇ ಇದೆ ಎಂದು ಹೇಳಲಾಗದಿದ್ದರೂ ಪ್ರಶಸ್ತಿ ರೂಪದಲ್ಲಿರುವ ಶಾಸನಗಳೂ ಇವೆ. ಕನ್ನಡ ಭಾಷೆಯ ಪ್ರಯೋಗದಲ್ಲಿ ಹಳೆಗನ್ನಡದಲ್ಲಿಯೇ ಇರುವ ಶಾಸನಗಳು ಎರಡು ಮೂರು ಸಿಗುತ್ತವೆ. ಉಳಿದಂತೆ ಸಮಕಾಲೀನ ಕನ್ನಡ ಪ್ರಯೋಗವಿರುವ ಶಾಸನಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ತಮಿಳು ಭಾಷೆಯ ಶಾಸನಗಳಲ್ಲಿ ಅರಸರ ಹೆಸರುಗಳೂ ಕೂಡ ತಮಿಳೀಕೃತವಾಗಿಯೇ ಕಂಡುಬರುತ್ತದೆ. ಶಾಖೆಗಳ ಶಾಸನಗಳು ಎಲ್ಲವನ್ನೂ ಗಮನದಲ್ಲಿರಿಕೊಂಡು ಹೇಳುವುದಾದರೆ ಸಂಸ್ಕೃತ ಭಾಷೆಗೆ ಪ್ರಾಧಾನ್ಯತೆಯಿದೆ. ಆಗೊಮ್ಮೆ ಈಗೊಮ್ಮೆ ಪ್ರಾದೇಶಿಕ ವೈಶಿಷ್ಟ್ಯವೆಂಬಂತೆ ಕೆಲವು ಶಬ್ದಗಳು, ವಾಕ್ಯಗಳ ಬಳಕೆಯಾಗಿದೆ. ಇದರಿಂದ ಶಾಸನವನ್ನು ಅರ್ಥೈಸಲು ಭಾದಕವೇನೂ ಆಗಿಲ್ಲ. ಕನ್ನಡದಲ್ಲಿ ಹೆಚ್ಚು ಶಾಸನಗಳು ಸಿಕ್ಕಿದ್ದರೂ ಪ್ರಾದೇಶಿಕ ವ್ಯತ್ಯಾಸಗಳು ಗುರುತಿಸುವಷ್ಟು ವಿಶೇಷವಾಗಿಯೇನೂ ಕಂಡುಬರುವುದಿಲ್ಲ.

## ಲಿಪಿ

ರಾಷ್ಟ್ರಕೂಟರು ತಮ್ಮ ಶಾಸನದಲ್ಲಿ ಬಳಸಿರುವ ಲಿಪಿಗಳು ದಕ್ಷಿಣ ಬ್ರಾಹ್ಮಿ, ಉತ್ತರ ಬ್ರಾಹ್ಮಿ, ಸಿದ್ಧ ಮಾತೃಕೆ, ನಾಗರಿ, ಕನ್ನಡ, ತೆಲುಗು ಮತ್ತು ಗ್ರಂಥ ಲಿಪಿಯಲ್ಲಿ ದೊರಕುತ್ತವೆ. ಲಿಪಿಯ ಆಧಾರದಿಂದ ಶಾಸನದ ಕಾಲವನ್ನು ಗುರುತಿಸಲು

ಸಾಧ್ಯವಾಗುತ್ತದೆ. ಶಾಸನದಲ್ಲಿ ಬರುವ ಮಾಹಿತಿಗಳಿಗೆ ಪೂರಕವಾಗಿ ಲಿಪಿ ಕೂಡ ಬಹಳ ಮುಖ್ಯವಾಗುತ್ತದೆ. ಐದನೆಯ ಶತಮಾನದ ಬ್ರಾಹ್ಮೀ ಲಿಪಿಯಿಂದ ಹದಿನಾಲ್ಕನೆಯ ಶತಮಾನದ ನಾಗರಾಕ್ಷರದವರೆಗೆ ರಾಷ್ಟ್ರಕೂಟರ ಕಾಲದ ಲಿಪಿ ವೈವಿಧ್ಯವನ್ನು ನೋಡಬಹುದಾಗಿದೆ. ರಾಷ್ಟ್ರಕೂಟರ ಕಾಲದ ಕನ್ನಡದ ಲಿಪಿಯ ಬಗ್ಗೆ ಹೇಳುವುದಾದರೆ ಲಿಪಿಯ ಬೆಳವಣಿಗೆಯು ಪರಿಪೂರ್ಣತೆಯ ಹಂತವನ್ನು ಮುಟ್ಟಿತು. ತಲಕಟ್ಟುಗಳು ಸ್ವಲ್ಪ ಚಿಕ್ಕದಾಗಿದ್ದರೂ, ಧೀರ್ಘ, ಕೊಂಬು ಮುಂತಾದವುಗಳು ಪೂರ್ಣವಾಗಿ ಬೆಳೆದಿತ್ತು. ಅಕ್ಷರದ ಗಾತ್ರವು ಗುಂಡಾಗುತ್ತ ಹೋಗಿದ್ದಲ್ಲದೇ ಸ್ಪಷ್ಟ ರೂಪವೊಂದು ಸಿದ್ಧವಾಗುತ್ತಿತ್ತು. ಅಶೋಕನ ಬ್ರಾಹ್ಮೀಯಿಂದ ಆರಂಭವಾಗಿ ಬೆಳೆದುಬಂದ ಕನ್ನಡ ಲಿಪಿ ರಾಷ್ಟ್ರಕೂಟರ ಕಾಲಕ್ಕೆ ಒಂದು ನಿರ್ದಿಷ್ಟ ಹಂತಕ್ಕೆ ಮುಟ್ಟಿದ್ದು ಬಹುಶಃ ಎಲ್ಲ ಅಕ್ಷರಗಳ ಪ್ರಯೋಗವೂ ನಡೆದಿತ್ತೆನ್ನಬಹುದು. ಪ್ರಾದೇಶಿಕ ವೈವಿಧ್ಯತೆಗಳಿದ್ದರೂ ಒಟ್ಟಾರೆಯಾಗಿ ಪೂರ್ಣತೆಯನ್ನು ಗುರುತಿಸಬಹುದು.

## ಮುದ್ರಣವಾಗಿರುವ ಲೇಖನಗಳು

ರಾಷ್ಟ್ರಕೂಟರನ್ನು ಕುರಿತು ಮುದ್ರಣವಾಗಿರುವ ಲೇಖನಗಳು ೨೦೦ಕ್ಕೂ ಹೆಚ್ಚಿವೆ. ಈ ಲೇಖನಗಳಲ್ಲಿ ಚರ್ಚಿತವಾಗಿರುವ ವಿಚಾರಗಳ ಮೇಲೆ ಕಣ್ಣಾಡಿಸಿದರೆ ಕೆಲವೇ ವಿಚಾರಗಳ ಸುತ್ತ ಸುತ್ತುತ್ತಿರುವ ಅನುಭವವಾಗುತ್ತದೆ. ಇದು ಕುತೂಹಲಕಾರಿಯಾಗಿ ಕಂಡುಬರುವುದರ ಜೊತೆಗೆ ನಿರ್ಧಾರವಾಗದ ವಿಚಾರಗಳನ್ನೆ ಇಟ್ಟುಕೊಂಡು ಬೇರೆ ಬೇರೆ ವಿದ್ವಾಂಸರ ಮಾತುಗಳನ್ನು ಹೇಳುತ್ತ  ನಿರ್ಧಾರವಾಗದೆಯೆ ಕೊನೆಮುಟ್ಟುವ ಲೇಖನಗಳು ಬಹಳಷ್ಟಿವೆ. ಖಚಿತ ಆಧಾರಗಳು ಸಿಗುವವರೆಗೆ ಹಳೆಯದನ್ನೇ ಮೆಲಕು ಹಾಕುವ ಪರಿಪಾಠವೆಂಬಂತೆ ಕಂಡುಬಂದರೂ, ವಿದ್ವಾಂಸರ ಉತ್ಸಾಹ, ಛಲದ ಪರಿಚಯವಾಗುತ್ತದೆ. ಇದಕ್ಕೆ ಕಾರಣಗಳೇನಿರಬಹುದೆಂಬ ಮೂಲವಿಚಾರದ ಕಡೆಗೆ ಗಮನ ಸರಿಯುತ್ತದೆ. ಅದರಲ್ಲಿಯೂ ಮಳಖೇಡದ ಮುಂಚಿನ ರಾಜಧಾನಿ ಯಾವುದಿತ್ತು ಎನ್ನುವ ವಿಚಾರದಲ್ಲಿ ಹೆಚ್ಚಿನ ಚರ್ಚೆಗಳಾಗಿವೆ. ಇಲ್ಲಿ ಮುಖ್ಯವಾಗಿ ರಾಜಧಾನಿಗಳು, ವಿಜಯಯಾತ್ರೆಗಳು, ರಾಷ್ಟ್ರಕೂಟ ವಂಶದ ಮೂಲಪುರುಷ, ಪ್ರಾಚೀನ ರಾಷ್ಟ್ರಕೂಟರು, ಕಾಲ ಪರಿಮಿತಿ, ರಾಷ್ಟ್ರಕೂಟರೊಂದಿಗೆ ವಿವಿಧ ಅರಸು ಮನೆತನಗಳ ಸಂಬಂಧ, ಸಮಕಾಲೀನ ದೊರೆಗಳ ಶಾಸನಾಧಾರದಿಂದ ರಾಷ್ಟ್ರಕೂಟರ ಬಗ್ಗೆ ಹೊಸ ಮಾಹಿತಿಯನ್ನು ಕಲೆಹಾಕುವ ಪ್ರಯತ್ನವನ್ನು ಕಾಣಬಹುದು. ಕೆಲವು ಬಾರಿ ಸಾಹಿತ್ಯ

ಕೃತಿಗಳ ಕಾಲದ ಚರ್ಚೆಯ ಆಧಾರದಿಂದಲೂ ಮಾಹಿತಿ ಕಲೆಹಾಕುವ ಪ್ರಯತ್ನವನ್ನಿಲ್ಲಿ ಕಾಣಬಹುದು.

ಮೇಲೆ ಕೊಟ್ಟಿರುವ ಅನೇಕ ಉದಾಹರಣೆಗಳಲ್ಲಿ ಅತಿ ಹೆಚ್ಚಾಗಿ ಚರ್ಚಿತವಾಗುತ್ತಿರುವುದು ಮೊದಲ ಐದು ವಿಚಾರಗಳು ಮಾತ್ರ. ಪ್ರಾಚೀನ ರಾಷ್ಟ್ರಕೂಟರೆಂದು ಮಾನಪುರದ ರಾಷ್ಟ್ರಕೂಟರನ್ನು ಗುರುತಿಸುತ್ತೆವೆ. ಆದರೆ ಮಾನಪುರ ಯಾವುದೆಂಬುದನ್ನು ಖಚಿತವಾಗಿ ಹೇಳಿರಲಿಲ್ಲ. ಆದರೆ ಈಗ ಡಾ॥ ಬ್ರಹ್ಮಾನಂದ ದೇಶಪಾಂಡೆಯವರು ಮಾನಪುರವನ್ನು ಗುರುತಿಸಿದ್ದಾರೆ. ಇನ್ನು ಲತ್ತಲೂರು ಪುರವರಾಧೀಶ್ವರ ಎನ್ನುವ ಸಮಸ್ಯೆಯನ್ನು ಕೂಡ ಶಾಸನದ ಆಧಾರದಿಂದ ಗುರುತಿಸಲಾಗಿದೆ. ಅನೇಕ ವಿದ್ವಾಂಸರು ಈ ಬಗ್ಗೆ ಹಲವಾರು ಲೇಖನಗಳನ್ನು ಬರೆದಿದ್ದಾರೆ. ಅವರಲ್ಲಿ ಮುಖ್ಯವಾಗಿ ಫ್ಲೀಟ್, ವಿ.ವಿ. ಮಿರಾಶಿ, ಅಜಯ್ ಮಿತ್ರ ಶಾಸ್ತ್ರಿ, ಥೋಸರ್, ಮಜುಂದಾರ್ ಅರ್. ಸಿ., ತ್ರಿಪಾಠಿ, ಜಿ.ಎಸ್. ಗಾಯಿ, ಎ.ಎನ್. ಶಾಸ್ತ್ರಿ, ದಶರಥ ಶರ್ಮ, ಸ್ಪಿಂಕ್ ವಾಲ್ಟರ್ ಮುಂತಾದವರನ್ನು ಹೆಸರಿಸಬಹುದು. ಲತ್ತಲೂರು ಉತ್ತರ ಕರ್ನಾಟಕದ ಭಾಗದಲ್ಲಿದ್ದು ಸೌಂದತ್ತಿಯ ರಟ್ಟರು ಕೂಡ ಇಲ್ಲಿ ಆಳಿದ ಉಲ್ಲೇಖವಿದೆ. ಇಂತಹ ಚರ್ಚೆಗಳು ನಡೆಯುವುದು ಕೂಡ ಅವಶ್ಯಕವಾಗಿದೆ. ಏಕೆಂದರೆ ರಾಷ್ಟ್ರಕೂಟರ ಸಾಮ್ರಾಜ್ಯದ ವಿಸ್ತಾರವನ್ನು ಗಮನಿಸಿದಾಗ ಭಾರತದ ಯಾವುದೋ ಒಂದು ಭಾಗದಲ್ಲಿರುವವರು ಎಲ್ಲ ಕಡೆಯ ವಿಷಯಗಳನ್ನು ಸಂಗ್ರಹಿಸಿ ಅಧ್ಯಯನ ಮಾಡುವುದು ಕಷ್ಟಸಾಧ್ಯವಾದ ಕಾರ್ಯವಾಗಿದೆ. ಬೇರೆ ಬೇರೆ ಕಡೆಯ ವಿದ್ವಾಂಸರು ಸಮಕಾಲೀನ ದಾಖಲೆಗಳ ಆಧಾರದ ಮೇಲೆ ಮತ್ತು ತಮ್ಮ ಸುತ್ತಮುತ್ತಲೂ ಇರುವ ಶಾಸನಗಳು, ಕ್ಷೇತ್ರಗಳು, ಸಾಹಿತ್ಯದ ಮಾಹಿತಿಗಳು, ಐತಿಹ್ಯಗಳು ಮುಂತಾದವುಗಳ ಆಧಾರದಿಂದ ವಿಚಾರವನ್ನು ಬೆಳೆಸುವುದರಿಂದ ಸಹಜವಾಗಿ ಹೊಸ ಹೊಸ ಮಾಹಿತಿಗಳು ಸೇರ್ಪಡೆಯಾಗುತ್ತ ಹೋಗುತ್ತದೆ. ಮುಂದೆ ಅಧ್ಯಯನ ಮಾಡುವವರಿಗೆ ಇದು ಬಹಳ ಸಹಾಯಕವಾಗುತ್ತದೆ

## ಅಧ್ಯಾಯ ೩

# ರಾಷ್ಟ್ರಕೂಟರು

### ರಾಷ್ಟ್ರಕೂಟರು ಮತ್ತು ಪದದ ಪ್ರಾಚೀನತೆ- ಮೂಲ- ಶಾಖೆಗಳು- ವಿದ್ವಾಂಸರ ಚರ್ಚೆ-ವಂಶಾವಳಿ

ಪ್ರಾಚೀನತೆ ಮತ್ತು ಮೂಲವನ್ನು ಕುರಿತು ಬಹಳಷ್ಟು ಚರ್ಚೆಯಾಗುತ್ತಿರುವ ವಂಶವು ರಾಷ್ಟ್ರಕೂಟರದಾಗಿದೆ. ಎಷ್ಟೇ ಚರ್ಚೆ ಮಾಡಿದರೂ ಸಿಕ್ಕಿರುವ ಮಾಹಿತಿಗಳ ಆಧಾರದಿಂದಲೇ ಚರ್ಚಿಸಬೇಕಾಗಿರುವುದರಿಂದ ವಿದ್ವಾಂಸರು ಅವರವರ ಬುದ್ಧಿಶಕ್ತಿಯ ಆಧಾರದಿಂದ ಇದಮಿತ್ಥಂ ಎಂಬ ತೀರ್ಮಾನಕ್ಕೆ ಬರಲು ಪ್ರಯತ್ನಿಸುತ್ತಿದ್ದಾರೆ. ಆದರೆ ಅದು ಅಷ್ಟು ಸುಲಭವಾದ ಕಾರ್ಯವಲ್ಲವೆಂದು ಎಲ್ಲರಿಗೂ ಮನದಟ್ಟಾಗುತ್ತಿದೆ. ಮುಂದಿನ ಪುಟಗಳಲ್ಲಿ ಈವರೆಗೆ ನಡೆದಿರುವ ಚರ್ಚೆಗಳ ಬಗ್ಗೆ ಸ್ಥೂಲವಾಗಿ ಗಮನಿಸುವ ಪ್ರಯತ್ನ ಮಾಡಲಾಗಿದೆ.

ರಾಷ್ಟ್ರಕೂಟ ಪದದ ಪ್ರಾಚೀನತೆ, ಅವರ ಹಿನ್ನೆಲೆಯೇನು? ಮೂಲತಃ ಅವರೇನಾಗಿದ್ದರು? ಯಾವ ಪ್ರದೇಶಕ್ಕೆ ಸೇರಿದವರು ಎಂಬುದನ್ನು ಶಾಸನ, ಪುರಾಣ, ಕಾವ್ಯ, ಇತರ ಸಾಹಿತ್ಯ ಕೃತಿಗಳು, ವೃತ್ತಿ ಮುಂತಾದವುಗಳನ್ನು ಆಧಾರವಾಗಿಟ್ಟುಕೊಂಡು ಎಲ್ಲರ ಚರ್ಚೆಗಳು ಬೆಳದಿವೆ ಎಂಬುದನ್ನು ಗಮನಿಸಬಹುದಾಗಿದೆ.

ಶಂಬಾ ಜೋಶಿಯವರು ತಮ್ಮ ಕೃತಿಯಲ್ಲಿ (ಕನ್ನಡದ ನೆಲೆ ) ರಾಷ್ಟ್ರಕೂಟ ಶಬ್ದದ ಬಗ್ಗೆ ಬೇರೆ ಬೇರೆ ವಿದ್ವಾಂಸರ ಅಭಿಪ್ರಾಯಗಳನ್ನು ಹೀಗೆ ಸಂಗ್ರಹಿಸಿದ್ದಾರೆ. ಪಾಲೀ ಶಬ್ದಕೋಶದಲ್ಲಿ ರಠಿಕ ಶಬ್ದಕ್ಕೆ ದೇಶೀಯನಿವಾಸಿ ಎಂಬ ಅರ್ಥವಿದೆ. ಹೊಸಕೋಟೆ ಕೃಷ್ಣರಾಯರು ಒಕ್ಕಲುತನದವರೆಂಬ ಅರ್ಥವಿದೆಯೆಂದಿದ್ದಾರೆ. The familiar phrase, ರಾಷ್ಟ್ರಕೂಟ ಪ್ರಮುಖಾನ್ ಕುಟುಂಬಿನಃ which occurs in copper plate inscriptions shows also that the Rashtrakutas were ಕುಟುಂಬಿಗಳು i.e., cultivators who enjoyed a higher social status than others of their community.

ಪಾಲೀ ಕೋಶದಲ್ಲಿಯೇ ಬರುವ ಇನ್ನೂ ಅನೇಕ ಅರ್ಥಗಳನ್ನೂ ಹೇಳಬಹುದಾಗಿದೆ. ರಠಿಯೋ, ರಠಿಕೋ, an inhabitant ಎಂಬ ಅರ್ಥವೂ ಇದೆ (Childer's Pali Dictoinary). ರಾಷ್ಟ್ರಕೂಟರು ಲಟ್ಟಲೂರು ಪುರವರಾಧೀಶ್ವರರೆಂದೂ, ಮಾನ್ಯಖೇಟವು ರಾಜಧಾನಿಯಾಗಿದೆ ಎಂದು ಹೇಳಿಕೊಳ್ಳುವುದರಿಂದ, ಇವರು ಕನ್ನಡಿಗರೇ ಆಗಿದ್ದಾರೆ. ಲಟ್ಟಲೂರು ಮತ್ತು ಮಳಖೇಡ ಎರಡೂ ಕನ್ನಡದ ಊರುಗಳೇ ಆಗಿವೆ.

ವಿನ್ಸೆಂಟ್ ಸ್ಮಿತ್ ಅವರು ರಾಷ್ಟ್ರಕೂಟರನ್ನು "The Indegenous tribes"(Early History of India, p-430). "ಲಾಟರು" ಎಂದರೆ ರಾಠರು, ರಟ್ಟರು ಎಂದಿದ್ದಾರೆ. ಇವರೇ ಲಾಟದೇಶದ "ಕುಟುಂಬಿ"ಗಳು ಎಂದಿದ್ದಾರೆ. "ಕೃಷೀವಳಂ ಕರ್ಷಕಂ ಕುಟುಂಬಿಯೆನಿಕ್ಕುಂ" ಎಂದು "ಅಭಿದಾನವಸ್ತು" ವಿನಲ್ಲಿ ಹೇಳಿದೆ (ನಾಗವರ್ಮ). ಕನ್ನಡನಾಡಿನಲ್ಲಿರುವ ಕುಡುವರು ಅಥವಾ ಒಕ್ಕಲು, ಮಹಾರಾಷ್ಟ್ರದ ಕುಳಂಬಿಗಳು ಮತ್ತು ಗೂರ್ಜರ ದೇಶದ "ಕಣಬಿ" ಗಳು ಈ ಮೂರೂ ಜನರನ್ನು ರಾಷ್ಟ್ರಕೂಟರ ಪೀಳಿಗೆಯವರೆಂದು ಹೇಳಬಹುದೆಂದಿದ್ದಾರೆ. "ಕುಣಬಿ, ಕುಳುಂಬಿ– ಶೇತಕರಿ" ಎಂದು ಮಹಾರಾಷ್ಟ್ರ ಶಬ್ದಕೋಶದಲ್ಲಿದೆ. ಅದೇ ರೀತಿ "ಕುಣಬಿ ಮಾಜೂನ ಮರಾಠಾ ಹೋತೋ" ಎಂಬ ಗಾದೆ ಮಾತೂ ಇದೆ. ಕುಟುಂಬಿಯು ಸೇರಿತು ಎಂದರೆ ಬಲಿಷ್ಠನಾದ ಮರಾಠನು ಎನಿಸಿಕೊಳ್ಳುತ್ತಾನೆ. ಈ ಗಾದೆ ಮಾತಿನ ನೆರವಿನಿಂದ ಮರಾಠರಲ್ಲಿ ಕುಟುಂಬಿಗಳು (ರಠಿಕ) ಉಂಟೆಂದು ತಿಳಿದು ಬರುತ್ತದೆ. ಸ್ಟೆನ್ ಕೊನೊ ಅವರು ಹೇಳುವಂತೆ, ಮಹಾರಾಷ್ಟ್ರ ಮತ್ತು ಗುಜರಾತಿನಲ್ಲಿರುವ ದ್ರಾವಿಡ ಅಂಶಕ್ಕೆ (Dravidian substrata) ರಾಷ್ಟ್ರಕೂಟರೇ ಅಥವಾ ಕುಣಬಿ, ಕುಳಬಿಗಳೆ ಕಾರಣ.

ಡಾ. ಹುಲ್ಷ್ ಅವರು ರಠಿಕ, ರಾಷ್ಟ್ರಿಕರನ್ನು ಪಂಜಾಬಿನ ಅರಟ್ಟರಿಗೆ ಹೋಲಿಸಿದ್ದಾರೆ (Corpus Inscriptionum Indicarum vol I, p-56) ಮಹಾಭಾರತದ "ಕರ್ಣಪರ್ವ" ದಲ್ಲಿ, "ಪಂಚನದ್ಯೋ ನಟ್ಟನ್ತ್ಯೋತಾಯತ್ರ ಪೀಲುವನಾನ್ಯುತ ॥

ಶತದ್ರುಶ್ಚ ವಿಪಾಶಾ ಚ ತೃತಪ್ಯೈ ಖತಾ ತಥಾ। ಚನ್ದ್ರಭಾಗಾವಿತಸ್ತಾ ಚ ಸಿನ್ಧುಷಷ್ಠಾಬಹಿರ್ಗಿರೇ ಅರಟ್ಟಾನಾಮ ತೇ ದೇಶಾಃ" (ಕರ್ಣಪರ್ವ, ಅಧ್ಯಾಯ–೧) ಎನ್ನುವ ವಿಚಾರವಿದೆ. ಅಂದರೆ ಅರಟ್ಟಾ ಎನ್ನುವ ಹೆಸರಿನ ದೇಶವಿತ್ತು ಎಂಬ

ಉಲ್ಲೇಖವು ಸಿಗುತ್ತದೆ. ಅರಟ್ಟಾ ಎನ್ನುವುದನ್ನು ಬಹುವ್ರೀಹಿ ಸಮಾಸವಾಗಿ ಮಾಡಿಕೊಂಡರೆ "ಆ ಸಮಸ್ತಾನ್ ವ್ಯಾಪ್ತಾ ರಟ್ಟಾ ಯಸ್ಮಿನ್ ಸ ಆರಟ್ಟಃ" ಎಂದಾಗುತ್ತದೆ ಎಂದಿದ್ದಾರೆ. ರಾಷ್ಟ್ರಕೂಟರು ತಮ್ಮನ್ನು ತಾವು ರಟ್ಟ ಎಂದು ಕರೆದುಕೊಂಡಿರುವುದರಿಂದ ಇವರು ಮೊದಲು ಪಂಜಾಬಿನಲ್ಲಿದ್ದರು, ನಂತರ ದಕ್ಷಿಣಕ್ಕೆ ರಾಜ್ಯವನ್ನು ವಿಸ್ತರಿಸಿಕೊಂಡು ಬಂದರೆಂದು ಹೇಳಬಹುದು ಎಂದಿದ್ದಾರೆ.

## ಪುರಾಣ ಕಾವ್ಯಗಳ ಉಲ್ಲೇಖ

ಋಗ್ವೇದದಲ್ಲಿ "ದಾಸಾಃ ಯದು ತುರ್ವಶಶ್ಚ" (೧೦-೬೨-೧೦) ಎಂದು ಹೇಳಿದೆ. ಯದು ಮತ್ತು ತುರ್ವಸುಗಳು ರಾಷ್ಟ್ರಿಕ, ಭೋಜಕರ ದಾಸರು ಅಥವಾ ಸಂಬಂಧಿಗಳು ಎಂದ ಮೇಲೆ ಇವರೆಲ್ಲ ದ್ರಾವಿಡ ವರ್ಗಕ್ಕೆ ಸೇರಿದವರೆಂಬ ವಿಚಾರ ತಿಳಿಯುತ್ತದೆ (ಕರ್ನಾಟಕದ ವೀರ ಕ್ಷತ್ರಿಯರು ಪು.೪೯-೫೬). ವಾಲ್ಮೀಕೀ ರಾಮಾಯಣದಲ್ಲಿ ರಾಷ್ಟ್ರಕೂಟರ ಉಲ್ಲೇಖ ಬರುತ್ತದೆಂದು ವಿದ್ವಾಂಸರು ಹೇಳಿದ್ದಾರೆ (ಕನ್ನಡದ ನೆಲೆ, ಶಂಬಾ ಜೋಶಿ). "ವಿದರ್ಭಾನ್ ಋಷಿಕಾನ್ ಚೈವ" ಎನ್ನುವ ಮಾತು ರಾಮಾಯಣದಲ್ಲಿದೆ. ವಿದರ್ಭರೆಂದರೆ ಭೋಜಕರು, ಋಷಿಕರೆಂದರೆ ರಾಷ್ಟ್ರಿಕರು. ರಿಷ್ಟಿಕರನ್ನು ಲಾಟ-ಕರ್ಣಾಟಗಳ ಸಂಯುಕ್ತ ಉಲ್ಲೇಖವೆನ್ನಬಹುದು ಎಂದಿದ್ದಾರೆ. ರಾಷ್ಟ್ರಕೂಟರು ಅಥವಾ ರಿಷ್ಟಿಕರು ಆರ್ಯೇತರ ಜನಾಂಗದವರು ಎಂಬ ಮಾತು ಮಹಾಭಾರತದಲ್ಲಿದೆ (೧.೮೫, ೩೫.೩೫). ಮತ್ಸ್ಯಪುರಾಣದಲ್ಲಿ ಮ್ಲೇಚ್ಛರು ಎಂದಿದ್ದಾರೆ (೩೪-೩೦). "ವಿಷ್ಣುಪುರಾಣ" ದಲ್ಲಿ ದಕ್ಷಿಣದಂತೆ ಗುಜರಾತಿಗೆ ಹೋಗಿಬಂದರೂ ಬ್ರಾಹ್ಮಣರು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕೆಂದಿದೆ. ಇಲ್ಲಿ ಪ್ರಾಯಶ್ಚಿತ್ತದ ಮಾತೇಕೆಂದು ಅರ್ಥವಾಗುವುದಿಲ್ಲ. ಭೋಜಕರು ವಿದರ್ಭವನ್ನು ಆಳಿದರೆಂದು ಐತರೇಯ ಬ್ರಾಹ್ಮಣ, ಮಹಾಭಾರತ, ಪುರಾಣಗಳಲ್ಲಿ ಸ್ಪಷ್ಟ ಉಲ್ಲೇಖಗಳಿವೆ (Indian culture, Calcutta, January, 35 p280). ಭೋಜಕರು ಯದುವಂಶಕ್ಕೆ ಸಂಬಂಧ ಪಟ್ಟವರೆಂದು ಪುರಾಣಗಳಿಂದ ತಿಳಿಯುತ್ತದೆ. ಇವರು ವರ್ಹಾಡದಲ್ಲಿ ಆಳುತ್ತಿದ್ದವರು. ರಾಷ್ಟ್ರಿಕರು ನೆರೆಯ ನಾಡಿನಲ್ಲಿ ವಾಸಿಸುತ್ತಿದ್ದರೆಂದು ಹೇಳಬಹುದು. ಪ್ರಾಚೀನ ಉಲ್ಲೇಖಗಳಲ್ಲಿ ರಾಷ್ಟ್ರಿಕರೊಡನೆ ಭೋಜಕರ ಹೆಸರು ಸಾಮಾನ್ಯವಾಗಿ ಬರುತ್ತದೆ. ಅಶೋಕನ ೫ ಮತ್ತು ೧೩ ನೆಯ ಶಾಸನಗಳಲ್ಲಿ ಇದನ್ನು ಕಾಣಬಹುದು. ರಾಷ್ಟ್ರಿಕ

ಮತ್ತು ಭೋಜಕ ಜೋಡು ಹೆಸರುಗಳ ಆಧಾರದಿಂದ ಇವೆರಡೂ ಸಮಾಜಗಳು ಕೂಡಿಬೆಳೆದವು. ಹತ್ತಿರಹತ್ತಿರದವು ಎಂದು ತಿಳಿಯಬಹುದಾಗಿದೆ.

ಡಾ. ವಿಮಲಚರಣರು ಇವರನ್ನು ಕುರಿತು "The Rashtrakutas who were almost associated with the Bhojas must have occupied adjoining tracts and it may be assumed that they were located in the very region where the present Marathas have their habitant" (Indian culture, 1935, P 390-91) ಎಂದಿದ್ದಾರೆ. ಸಿ.ವಿ. ವೈದ್ಯ ಎನ್ನುವ ವಿದ್ವಾಂಸರು ರಾಷ್ಟಿಕ ಶಬ್ದವು ಮಹಾರಾಷ್ಟ್ರದ ರಾಷ್ಟ್ರಕೂಟರನ್ನು ಉಲ್ಲೇಖಿಸುತ್ತದೆ (History of Medeval Hindu India Part II, P 323). ಮಹಾರಟ್ಟ ಕ್ಷತ್ರಿಯರು ಉತ್ತರದ ರಾಷ್ಟ್ರಕೂಟರಿಗಿಂತ ಬೇರೆ ಎಂದಿದ್ದಾರೆ.(ಅದೇ, ಪುಟ ೧೫೨-೧೫೩). "ದೀಪವಂಶ", "ಮಹಾವಂಶ" ಮುಂತಾದ ಬೌದ್ಧ ಗ್ರಂಥಗಳಲ್ಲಿರುವ ಮಹಾರಟ್ಟ ಎನ್ನುವ ಶಬ್ದವು ಮಹಾರಾಷ್ಟ್ರದಲ್ಲಿ ವಾಸಿಸುವವರಿಗೆ ಅನ್ವಯಿಸುತ್ತದೆ. (From the cave inscriptions of Bhaja, Bedsa, Karla and Nanaghat of the second century A.D, it appears that this Maharatta tribe was very generous). ಪಾಳಿ ಭಾಷೆಯಲ್ಲಿ ಮಹಾರಟ್ಟ ಎನ್ನುವ ಉಲ್ಲೇಖವೇ ಇದೆ. "ರಾಷ್ಟಿಕ" ಅಲ್ಲ. ಮಹಾರಟ್ಟರು ಮಹಾರಾಷ್ಟ್ರ ಪ್ರಾಂತ್ಯಕ್ಕೆ ಸೇರಿದವರು. (History of the Rashtrakutas [Rathore] 1933 Pt.Bisheshvaranatha Reu). ಕಾಶ್ಮೀರ ದೇಶದ ಪ್ರಾಚೀನ ಇತಿಹಾಸ ಗ್ರಂಥವಾದ "ರಾಜತರಂಗಿಣಿ" ಯಲ್ಲಿ ರಟ್ಟರು ಕರ್ಣಾಟಕರು ಎಂದುದುಂಟು. ರಟ್ಟರು ಮತ್ತು ರಾಷ್ಟ್ರಕೂಟರು ಒಂದೇ ಎಂದು ಶಾಸನಗಳಿಂದ ಸಿದ್ಧವಾಗಿದೆ (RKP, P 17-19). ಕ್ರಿ.ಶ. ೧೫೯೬ ರಲ್ಲಿ "ರಾಷ್ಟ್ರೌಡ ವಂಶ ಮಹಾಕಾವ್ಯ" ಎಂಬ ಸಂಸ್ಕೃತ ಕಾವ್ಯವನ್ನು ರುದ್ರನೆಂಬ ಕವಿಯು ಬರೆದಿದ್ದಾನೆ. ಈತ ಮಯೂರಗಿರಿಯ ರಾಜ ನಾರಾಯಣ ಷಾನ ಆಸ್ಥಾನ ಕವಿಯಾಗಿದ್ದ. ತನ್ನ ಕಾವ್ಯದಲ್ಲಿ ಈತ ರಾಷ್ಟ್ರಕೂಟರ ಬಗ್ಗೆ ಬರೆದಿದ್ದಾನೆಂದು ವಿದ್ವಾಂಸರು ಹೇಳಿದ್ದಾರೆ (History of the Rashtrakutas [Rathore] 1933 Pt. Bisheshvaranatha Reu)

ವಿವಿಧ ವಿದ್ವಾಂಸರ ಅಭಿಪ್ರಾಯಗಳನ್ನು ಗಮನಿಸಿದಾಗ ಪುರಾಣ, ಕಾವ್ಯಗಳ ಉಲ್ಲೇಖಗಳು ಸರಿಯೆನಿಸಿದರೂ ಮಧ್ಯದಲ್ಲಿರುವ ಕಾಲದ ಅಂತರವನ್ನು ಗಮನಿಸಿ ನಂತರ ಮುಂದುವರಿಯಬೇಕಾಗಿತ್ತು ಎನಿಸುತ್ತದೆ. ಏಕೆಂದರೆ ಪೌರಾಣಿಕ ಹಿನ್ನೆಲೆಯಲ್ಲಿ

ಕಾವ್ಯಾಂಶಗಳೊಂದಿಗೆ ಹೊಸ ಇತಿಹಾಸವನ್ನು ರಚಿಸುವಾಗ ಎಚ್ಚರಿಕೆಯಿಂದ ಇರಬೇಕಾಗುತ್ತದೆ. ಪೌರಾಣಿಕ ವ್ಯಕ್ತಿಗಳು ಮತ್ತು ಕಾವ್ಯಗಳಲ್ಲಿ ಬರುವ ವ್ಯಕ್ತಿಗಳ ಗುರುತನ್ನು ಎಲ್ಲೆಲ್ಲೂ ನೋಡಬಹುದಾಗಿದೆ. ಆದ್ದರಿಂದ ಕಾವ್ಯ, ಪುರಾಣ ಮತ್ತು ಇತಿಹಾಸಗಳ ನಡುವಿನ ಕಾಲವನ್ನು ನಿರ್ಲಕ್ಷಿಸುವಂತಿಲ್ಲ. ಆದರೆ ಅದನ್ನು ಗಮನದಲ್ಲಿರಿಸಿಕೊಂಡು ಮುಂದುವರಿಯಬೇಕಾದುದು ಅಗತ್ಯ. ಹಾಗೆಯೇ ರಾಷ್ಟ್ರಕೂಟರು ಒಕ್ಕಲುತನದವರು, ದ್ರಾವಿಡ ಅಂಶವನ್ನುಳ್ಳವರು ಎನ್ನುವುದನ್ನು ಸ್ಪಷ್ಟೀಕರಿಸಲು ಪ್ರಯತ್ನ ಪಟ್ಟಿರುವುದು ಕಂಡುಬರುತ್ತದೆ. ಮಹಾರಾಷ್ಟ್ರದ ಮೂಲ ನಿವಾಸಿಗಳು ಮರಾಠೀ ಮೂಲದವರೇ ಎಂದು ತಿಳಿಸಲು ಪ್ರಯತ್ನ ಪಟ್ಟಿದ್ದಾರೆ. ಆದರೆ ಅಲ್ಟೇಕರರು ಮತ್ತು ಇತರ ವಿದ್ವಾಂಸರು ಇದನ್ನು ಅಲ್ಲಗಳೆದು ರಾಷ್ಟ್ರಕೂಟರು ಒಕ್ಕಲುತನದವರು ನಿಜ ಆದರೆ ಕನ್ನಡಿಗರು ಎನ್ನುವ ಅಭಿಪ್ರಾಯಕ್ಕೆ ಬಂದಿದ್ದಾರೆ.

ಕ್ರಿ.ಶ. ೨ ನೆಯ ಶತಮಾನದಿಂದ ಕ್ರಿ.ಶ. ೪ ನೆಯ ಶತಮಾನದ ಕೊನೆಯ ವರೆಗೆ ರಟ್ಟರು ಆಳಿದ ದಾಖಲೆಯಿದೆ (The Kongu Country, p-91, Arokiaswami.M). ಇದರಲ್ಲಿ ರಾಷ್ಟ್ರಕೂಟರ ಮೂಲ ರಟ್ಟರೇ ಆಗಿದ್ದಾರೆಂದು ನಿರ್ಣಯಿಸಿದ್ದಾರೆ. ಅವರ ಹೆಸರುಗಳನ್ನು ವೀರರಾಯ ಚಕ್ರವರ್ತಿ, ಗೋವಿಂದರಾಯ, ಕಲಾವಲ್ಲಭರಾಯ, ಕನ್ನಾರದೇವ, ತಿರುವಿಕ್ರಮದೇವ ಎಂದು ಹೆಸರಿಸಿದ್ದಾರೆ. ಕರ್ನಾಟಕದಲ್ಲಿ ಈ ಹೆಸರುಗಳು ಪರಿಚಿತವಾದವುಗಳು. ರಾಷ್ಟ್ರಕೂಟರಲ್ಲಿ ಕೂಡ ವೀರರಾಯ, ತಿರುವಿಕ್ರಮದೇವ ಎನ್ನುವ ಹೆಸರುಗಳನ್ನು ಬಿಟ್ಟರೆ ಉಳಿದವುಗಳೆಲ್ಲ ಪರಿಚಿತವಾದ ಹೆಸರುಗಳೇ ಆಗಿವೆ.

ಮೇಲಿನ ಮಾತುಗಳನ್ನು ಗಮನಿಸಿದಾಗ ಕೆಲವು ಸಂಶಯಗಳು ಬರುತ್ತವೆ. ಕ್ರಿ.ಶ. ಎರಡರಿಂದ ನಾಲ್ಕನೆಯ ಶತಮಾನದವರೆಗೆ ಆಳಿರುವುದಕ್ಕೆ ದಾಖಲೆಯಿದೆ ಎಂದಿದ್ದಾರೆ. ಅದರ ಬಗ್ಗೆ ಹೆಚ್ಚಿನ ವಿವರಗಳನ್ನು ನೀಡುವುದಿಲ್ಲ. ಇನ್ನು ಹೆಸರುಗಳ ವಿಷಯಕ್ಕೆ ಬಂದರೆ ತಮಿಳೀಕೃತಗೊಂಡ ಹೆಸರುಗಳ ಉಲ್ಲೇಖವನ್ನು ಕೊಟ್ಟಿದ್ದಾರೆ. ಕಲಾವಲ್ಲಭರಾಯ, ವೀರರಾಯ ಚಕ್ರವರ್ತಿ, ತಿರುವಿಕ್ರಮದೇವ ಮುಂತಾದ ಹೆಸರುಗಳು ರಾಷ್ಟ್ರಕೂಟರ ತಮಿಳುಶಾಸನಗಳ ವಿವರಣೆಯಲ್ಲಿ ಮಾತ್ರ ಬರುವ ಹೆಸರುಗಳಾಗಿವೆ.

## ರಾಷ್ಟ್ರಕೂಟ ಪದದ ಪ್ರಾಚೀನತೆ:

ರಾಷ್ಟ್ರಕೂಟರ ಪ್ರಾಚೀನ ಉಲ್ಲೇಖವು ಅಶೋಕನ ಶಾಸನಗಳಲ್ಲಿ ರಠಿಕ ಎಂಬುವನನ್ನು ಹೆಸರಿಸುವ ಮೂಲಕ ಪ್ರಯೋಗವಾಗಿದೆ. ಗುಜರಾತಿನ ಗಿರ್ನಾರ್ ಪ್ರದೇಶಗಳಲ್ಲಿ, ಉತ್ತರ, ಪಶ್ಚಿಮ ಭಾಗದ ಜನಾಂಗದಲ್ಲಿ ಈ ಹೆಸರುಗಳನ್ನು ಆಡಳಿತಕ್ಕೆ ಸಂಬಂಧಿಸಿದಂತೆ ಉಪಯೋಗಿಸಲಾಗಿದೆ. ಕ್ರಿ.ಪೂ. ಒಂದನೆಯ ಶತಮಾನ, ಕ್ರಿ.ಶ. ಎರಡನೆಯ ಶತಮಾನದಲ್ಲಿ ಪಶ್ಚಿಮ ಭಾರತದ ನಾನಾಘಾಟ್ ಎಂಬಲ್ಲಿ ರಾಣಿ ನಾಯನಿಕಾದೇವಿಯ ಶಾಸನದಲ್ಲಿ, ಮಹಾರಠಿ ಎಂದು ಉಲ್ಲೇಖಿಸಿದೆ. ಇದು "ಮಹಾರಠಿ"ಗಳೆಂದು ಕರೆದುಕೊಳ್ಳುವವರು ಈ ಪ್ರಾಂತ್ಯದಲ್ಲಿದ್ದರು ಎಂಬುದನ್ನು ದಾಖಲಿಸುತ್ತದೆ. ಕ್ರಿ.ಶ. ಮೂರನೆಯ ಶತಮಾನದಲ್ಲಿ "ಸದಾಕವಿ ಕಲಾಲಯ ಮಹಾರಠಿ" ಎಂಬ ಉಲ್ಲೇಖವಿದೆ. ಹಿರೇಹಡಗಲಿಯಲ್ಲಿ ದೊರೆತ ಶಾಸನಗಳಲ್ಲಿ, ಪಲ್ಲವ ದೊರೆ ಶಿವಸ್ಕಂದವರ್ಮನ ಶಾಸನಗಳಲ್ಲೂ "ಸಾತವಾಹನಿ ರಠ್ಠ" ಎಂಬ ಪದ ಕಂಡುಬರುತ್ತದೆ. ಇಲ್ಲಿ ರಠ್ಠ ಎಂಬ ಪದವು ದೇಶವಾಚಿಯಾಗಿ ಉಲ್ಲೇಖವಾಗಿದೆ. ಇಡೀ ಭಾರತದಲ್ಲಿ ಕ್ರಿ.ಪೂ. ೩ ನೆಯ ಶತಮಾನದಲ್ಲಿ ರಾಷ್ಟ್ರಿಕ ಎನ್ನುವ ಹೆಸರು ಸಿಗುವುದರಿಂದ ರಾಷ್ಟ್ರಕೂಟ ಎನ್ನುವ ಪದ ಆಗಿನಿಂದಲೂ ಇತ್ತು ಎನ್ನುವುದು ತಿಳಿಯುತ್ತದೆ. ಆರಂಭದಲ್ಲಿ ಒಂದೋ ಎರಡೋ ಸಂಖ್ಯೆಯಲ್ಲಿದ್ದುದು ನಂತರ ರಾಷ್ಟ್ರಿಕರು, ರಠಿಕರು ಎಂದಾಗಿದೆ. ಒಟ್ಟುಗೂಡಿಸುವಿಕೆಯೇ ಕೂಟ ಎಂಬ ಪದದೊಡನೆ ಸೇರಿ ರಾಷ್ಟ್ರಕೂಟವಾಗಿದೆ. ಗ್ರಾಮಕೂಟ ಎನ್ನುವ ಪದಪ್ರಯೋಗವೂ ನಮಗೆ ಸಿಗುತ್ತದೆ. "ಒಂದು ಗ್ರಾಮವನ್ನು ಸ್ಥಾಪಿಸಿದವನಿಗೆ, ಅಥವಾ ವಾಸಕ್ಕೆ ತಕ್ಕುದಾಗಿ ಮಾಡಿದವನಿಗೆ ಗ್ರಾಮಕೂಟವೆಂದು ಕರೆಯುತ್ತಿದ್ದ" ರೆಂದು ಜಿ.ಎಚ್. ಖರೆಯವರು ತಮ್ಮ ಲೇಖನದಲ್ಲಿ ಬರೆಯುತ್ತಾರೆ (Gopal B.R.(ed), Mythic Society, P 24-28). ಹಾಗೆಯೇ ಮುಂದುವರಿದು "ಇಂತಹ ಹಲವು ಗ್ರಾಮಗಳನ್ನು, ವಾಸಿಸಲು ಯೋಗ್ಯವಾಗಿ ಮಾಡಿಕೊಟ್ಟವರನ್ನು ರಾಷ್ಟ್ರಕೂಟರೆಂದು ಕರೆದರು" ಎಂಬುದು ತಮ್ಮ ಅಭಿಪ್ರಾಯವೆಂದಿದ್ದಾರೆ. ಈ ಅಭಿಪ್ರಾಯವನ್ನು ಒಪ್ಪುವುದು ಕಷ್ಟವಾಗುತ್ತದೆ. ದೇಶ್‌ಮುಖ್, ದೇಸಾಯಿ ಎಂಬ ಪದಗಳು ವಂಶಸೂಚಕವಾದಂತೆ ರಾಷ್ಟ್ರಕೂಟ

ಎಂಬುದು ಸಹ ಆಡಳಿತ ಸೂಚಕ ಪದ ಮತ್ತು ವಂಶಸೂಚಕ ಪದ ಎಂಬ ಅರ್ಥವನ್ನು ಕೊಡುತ್ತಿತ್ತೆಂದು ತಿಳಿಸಿದ್ದಾರೆ.

ಕ್ರಿ.ಪೂ. ೩ ನೆಯ ಶತಮಾನದಲ್ಲಿ ಸಿಗುವ ಅಶೋಕನ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ರಾಷ್ಟ್ರಕೂಟರ ಮೂಲವನ್ನು ಹುಡುಕುವ ಪ್ರಯತ್ನವನ್ನು ಎಲ್ಲ ವಿದ್ವಾಂಸರೂ ಮಾಡಿದ್ದಾರೆ. ಮಾನ್‌ಸೇರಾ, ಷಾಬಾಜ್‌ಗಿರಿ, ಧವಲಿ, ಗಿರ್ನಾರ್ ಶಾಸನಗಳಲ್ಲಿ ರಠಿಕ, ರಿಸ್ಟಿಕ ಎಂಬ ಹೆಸರುಗಳು ಕಾಂಭೋಜ ಮತ್ತು ಗಾಂಧಾರಗಳನ್ನು ಹೆಸರಿಸಿದ ತಕ್ಷಣ ಬರುತ್ತದೆ. ರಠಿಕರ ನಂತರ ಪಿತಿನಿಕ ಎನ್ನುವ ಬುಡಕಟ್ಟು ಜನಾಂಗವನ್ನು ಹೆಸರಿಸುತ್ತದೆ. ಇವರ ಬಗ್ಗೆ ಹೆಚ್ಚಿನ ವಿವರಗಳು ತಿಳಿದುಬಂದಿಲ್ಲ. ಇವರೂ ಕೂಡ ಬುಡಕಟ್ಟು ಜನಾಂಗಕ್ಕೆ ಸೇರಿದವರಿರಬಹುದೆಂಬ ಅಭಿಪ್ರಾಯವನ್ನು ವಿದ್ವಾಂಸರು ನೀಡಿದ್ದಾರೆ.

"ಸ್ವಸ್ತಿ ಅನೇಕ ಗುಣಗಣಾಲಂಕೃತ ಯಶಸ ರಾಷ್ಟ್ರಕೂಟಾನಾಂ ತಿಲಕಭೂತೋ ಮಾನಾಂಕ ಇತಿ ರಾಜ ಬಭೂವ" ಎಂಬ ಪ್ರಯೋಗವು ಮಾನಪುರದ ರಾಷ್ಟ್ರಕೂಟ ದೊರೆ ಅಭಿಮನ್ಯುವಿನ ಊಂಡಿಕಾವಾಟಿಕಾ ಶಾಸನದಲ್ಲಿದೆ (E.I. vol VIII, p-163-166).

ನನ್ನರಾಜನ ಮುಲ್ತಾಯಿ ಶಾಸನ (ಅಚಲಾಪುರದ ರಾಷ್ಟ್ರಕೂಟರು), ದಂತಿದುರ್ಗನ ಸಾಮನಗಡದ ಶಾಸನದಲ್ಲಿ ರಾಷ್ಟ್ರಕೂಟ ಶಬ್ದದ ಪ್ರಯೋಗವಿದೆ. ಪೂರ್ವ ಚಲುಕ್ಯರ ದೊರೆ ೧ ನೆಯ ಅಮ್ಮನು ತನ್ನ ಶಾಸನದಲ್ಲಿ ರಾಷ್ಟ್ರಕೂಟರನ್ನು ರಟ್ಟರೆಂದಿದ್ದಾನೆ. ಸವದತ್ತಿಯ ರಟ್ಟರು ಒಂದೆರಡು ಬಾರಿ ತಮ್ಮನ್ನು ರಾಷ್ಟ್ರಕೂಟರೆಂದು ಕರೆದುಕೊಂಡಿದ್ದಾರೆ. ಹಾಗೆಯೇ ಮುಂದುವರೆದು ಕ್ರಿ.ಶ. ೮ ನೆಯ ಶತಮಾನದ ಪೂರ್ವಾರ್ಧಕ್ಕಿಂತ ಮೊದಲೇ ರಾಷ್ಟ್ರಕೂಟ ಶಬ್ದವು ಬಳಕೆಯಲ್ಲಿದ್ದಿದ್ದರೆ ಆ ಕಾಲದ ಯಾವುದಾದರೂ ಶಾಸನದಲ್ಲಿ ಪ್ರಯೋಗವಾಗುತ್ತಿತ್ತು. ಆದ್ದರಿಂದ ರಾಷ್ಟ್ರಕೂಟ ಶಬ್ದ ದೇಸೀ ಶಬ್ದದ ಸಂಸ್ಕೃತ ರೂಪ ಎಂದು ಹೇಳಬಹುದು ಎಂದಿದ್ದಾರೆ ಫ್ಲೀಟರು (ಕರ್ನಾಟಕ ಸಾಮ್ರಾಜ್ಯ ಸಂ. ೨, ಭಾಗ-೧, ಪು – ೭ ದೇಶಪಾಂಡೆ ರಾ.ಹ.).

ಶ್ರೀಯುತ ಶಂಬಾ ಜೋಶಿಯವರು ತಮ್ಮ ಗ್ರಂಥ "ಕನ್ನಡದ ನೆಲೆ"ಯಲ್ಲಿ ಕನ್ನಡಿಗರು ಯಾರು?, ಕರ್ಣಾಟಕ ಎಂದು ಹೆಸರು ಬರಲು ಕಾರಣವೇನು?

ಕರ್ಣಾಟಕದಲ್ಲಿ ಇದ್ದವರು ಯಾರು?, ಅವರ ಮೂಲವೇನು? ಮುಂತಾದ ವಿಚಾರಗಳನ್ನು ಚರ್ಚೆ ಮಾಡಿದ್ದಾರೆ. ಹಾಗೆ ಚರ್ಚಿಸುವಾಗ ವಿವಿಧ ವಿದ್ವಾಂಸರ ಅಭಿಪ್ರಾಯಗಳನ್ನು ಉಲ್ಲೇಖಿಸಿದ್ದಾರೆ.

ಕನ್ನಡದ, ಕರ್ಣಾಟಕದ ನೆಲೆಯ ಬಗ್ಗೆ ತಿಳಿದುಕೊಳ್ಳಲು ರಾಷ್ಟ್ರಕೂಟರ ಕಾಲದಲ್ಲಿ ರಚಿತವಾದ "ಕವಿರಾಜಮಾರ್ಗ" ಗ್ರಂಥದ ಸಹಾಯವಿಲ್ಲದೆ ಮುಂದುವರೆಯಲು ಸಾಧ್ಯವಿಲ್ಲ. ಏಕೆಂದರೆ ಕನ್ನಡಿಗರು ನೆಲೆಸಿದ್ದ ನಾಡಿನ ಮೇರೆಯನ್ನು ಗುರುತಿಸಿರುವ ಪ್ರಥಮ ಉಲ್ಲೇಖ ಇದರಲ್ಲಿದೆ. "ಕಾವೇರಿಯಿಂದ ಮಾ ಗೋದಾವರೀವರಮಿರ್ದ ನಾಡದಾ ಕನ್ನಡದೊಳ್" ಎಂದಿದೆ. ಕರ್ಣಾಟಕವನ್ನು ಆಳಿದ ಕದಂಬರು, ಬಾದಾಮಿ ಚಲುಕ್ಯರು ಎಲ್ಲೂ ಸಹ ಕರ್ಣಾಟಕ ಪ್ರದೇಶದ ವೈಶಾಲ್ಯತೆಯನ್ನು ಹೇಳಿಲ್ಲ, ಕುಂತಲನಾಡು ಎಂದಷ್ಟೆ ಕರೆದಿದ್ದಾರೆ. ಕುಂತಳದೇಶದ ಉದ್ದಗಲಗಳನ್ನು ಗುರುತಿಸುತ್ತ ಹೋಗುವುದು ಇಲ್ಲಿ ಅಪ್ರಸ್ತುತ. "ಲಾಟ" ಎನ್ನುವ ಪದದ ಅರ್ಥವೇನಿರಬಹುದೆಂದು ನೋಡಿದರೆ, ಇದರ ಮೂಲ ರೂಪವು "ಲಟ್ಟ" ಎಂದಿರುವ ಸಾಧ್ಯತೆಗಳಿವೆ. ರಾಷ್ಟ್ರಕೂಟರ ಶಾಸನಗಳಲ್ಲಿ ಬರುವ ಲಾಟೂರು, ಲಟ್ಟಲೂರು, ಎರಡೂ ಈಗಿನ ಲಾತೂರು ಎಂಬುದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ.

ಈಗಿನ ಗುಜರಾತಿನ ದಕ್ಷಿಣ ಭಾಗವನ್ನು "ಲಾಟ" ಎಂದು ಭಾವಿಸುತ್ತಿದ್ದರು. ಮಹೀ ನದಿ ಮತ್ತು ತಾಪೀ ಹೊಳೆಗಳ ಮಧ್ಯಭಾಗವೇ "ಲಾಟ" ಎಂದು ಬೂಹ್ಲರ್ (I.A., Vol XV, p198) ಹೇಳಿದ್ದಾರೆ. ಹಲ್ಯನ ಅಭಿಪ್ರಾಯವೂ ಹೀಗೆಯೇ ಇದೆ (I.A., Vol XII, p181). ಹಿಂದೂ ದೇಶದ ಪಟ್ಟಣ, ದೇಶಗಳನ್ನು ವಿವರಿಸುವ ಪದಕೋಶವೊಂದು, "ಲಾಟದೇಶವು ಖಾನ್ ದೇಶದವರೆಗೂ ಇತ್ತೆಂಬ ವಿವರವನ್ನು ನೀಡುತ್ತದೆ. ಲಾಟದ ಸೀಮೆಗೆ ಹೊಂದಿಕೊಂಡು ಕರ್ಣಾಟಕವಿತ್ತು ಎನ್ನುವ ಪ್ರಾಚೀನ ಪರಂಪರೆಯನ್ನು ನೆನೆದುಕೊಂಡರೆ ಕನ್ನಡದ ಉತ್ತರ ಮೇರೆ ತಾಪಿ ನದಿಯವರೆಗೆ ಬರುತ್ತದೆ. ಖಾನ್‌ದೇಶ ಕರ್ಣಾಟಕದಲ್ಲೇ ಸೇರಿಹೋಗುತ್ತದೆ. ದ್ವಾರಕೆಯವರೆಗೆ ಕುಂತಲ ದೇಶವಿದ್ದಿತೆಂಬ ಪರಂಪರೆಯ ಬೆಳಕಿನಲ್ಲಿ ವಿಚಾರಿಸಿದರೆ, ಕರ್ಣಾಟ–ಲಾಟಗಳ ಉಲ್ಲೇಖಗಳ ರೀತಿಯನ್ನು ನೋಡಿದರೆ, ಪೂರ್ವಕಾಲದಲ್ಲಿ ಲಾಟದೇಶವು ಕನ್ನಡಿಗರದೇ

ಆಗಿತ್ತು ಎಂಬ ವಿಚಾರ ಬಲ ಪಡುತ್ತದೆ " ಎಂದು ಶಂಬಾ ಜೋಶಿಯವರು ಅಭಿಪ್ರಾಯ ಪಡುತ್ತಾರೆ (ಕನ್ನಡದನೆಲೆ ಪು. ೧೫೦).

ಪಂಡಿತ ಭಗವಾನ್‌ಲಾಲ್ ಇಂದ್ರಜಿಯವರು ಅಭಿಪ್ರಾಯ ಪಡುವಂತೆ ಅಲ್ಲಿ ನೆಲೆಸಿದ್ದ ಜನಾಂಗವೊಂದರಿಂದ ಆ ಪ್ರದೇಶಕ್ಕೆ "ಲಾಟ" ಎನ್ನುವ ಹೆಸರು ಬಂದಿತೆಂದು ಹೇಳಿದ್ದಾರೆ. (Bombay gazetteer, Vol.I pt.I, p 7). ಫ್ಲೀಟರು ಕೂಡ ಇದೇ ಮಾತನ್ನು ಹೇಳಿದ್ದಾರೆ. Name of the Lat country was determined from the name of some local tribe, perhaps the Lattas". ಫ್ಲೀಟರು ಲಟ್ಟಲೂರಿನ ಬಗ್ಗೆ ಚರ್ಚಿಸುವಾಗ ಈ ಮಾತನ್ನು ಹೇಳಿದ್ದಾರೆ. ಡಾ. ಸ್ಟೆನ್ ಕೊನೊ ಅವರು ಲಾಟರನ್ನು ದ್ರಾವಿಡ ಶಾಖೆಗೆ ಸಂಬಂಧಿಸಿದ ಗುಜರಾತಿನ ಮೂಲಿಗರು ಎಂದಿದ್ದಾರೆ. ತಮಿಳುನಾಡಿನ ಚೋಳವಂಶದ ರಾಜರಿಗೆ "ಲಾಟರಾಜ"ರೆಂಬ ಬಿರುದಿದ್ದುದು ಕಂಡು ಬರುತ್ತದೆ. ಲಾಟರಾಜ ವೀರಚೋಳ ಎಂಬ ಮಾತು ಆಗಾಗ ಕಾಣಿಸಿಕೊಳ್ಳುತ್ತದೆ. ಇದರಿಂದ ಈ "ಚೋಳವಂಶದವರು ಲಾಟದೇಶದಿಂದ ಬಂದಿರಬಹುದು" ಎಂದು ವಿದ್ವಾಂಸರು ಹೇಳಿದ್ದಾರೆ. (E.I., vol IV, p-138 Venkaiah.,V). "The expression 'Lat Raj' which is applied to Veera chola and his ancestors suggests that these chiefs may have immigrated from Lat (Gujarat). ಆದ್ದರಿಂದ ಲಾಟ ಎಂಬ ಜನಾಂಗವು ದ್ರಾವಿಡ ಕುಲದ್ದು ಎಂದು ಊಹಿಸಲು ಅಡ್ಡಿಯೇನಿಲ್ಲ" ಎಂದಿದ್ದಾರೆ. ರಾಷ್ಟ್ರಕೂಟ ಎಂಬ ಪದವು ರಾಠೋಡ್ ಪದದ ಸಂಸ್ಕೃತ ರೂಪವಿರಬಹುದಾದುದರಿಂದ, ಮಾಲ್‌ಖೇಡಿನ ರಾಷ್ಟ್ರಕೂಟರು ರಜಪುತಾನ ಕನೂಜ್ ಪ್ರಾಂತ್ಯದವರಂತೆ ತೋರುತ್ತಾರೆ ಎಂದಿದ್ದಾರೆ (Dynasties of the Kanarese Districts., Fleet., 1896). ಲಾತೂರು (ಹೈದರಬಾದ್ ಸಂಸ್ಥಾನ) ಎಂಬುದಕ್ಕೆ ಬಲವಾದ ಕಾರಣ ಕೊಟ್ಟಿದ್ದಾರೆ (EI. Vol VII, P-223, Fleet).

ಶ್ರೀಯುತ ಜಯಸ್ವಾಲರು ಹಾಥಿಗುಂಫ ಶಾಸನವನ್ನು ವಿಮರ್ಶಿಸುವಾಗ ರಠಿಕ ಶಬ್ದವು ಬೇರೆ ಬೇರೆ ಶಾಸನಗಳಲ್ಲಿ ಬೇರೆ ಬೇರೆ ರೀತಿ ಬರೆಯಲಾಗಿದೆ (E.I. Vol XX, p-84) ಎಂದಿದ್ದಾರೆ. ರಠಿಕರೇ ರಟ್ಟರೆಂದು ಅಲ್ಟೇಕರರೂ ಒಪ್ಪಿದ್ದಾರೆ (Rashtrakutas and Their Times, p-26 ). ಈ ಎಲ್ಲ ಕಾರಣಗಳಿಂದ "Rathika –Bhojaka, stands

for the Maharathis and Mahabhojas of Satavahana inscriptions and the minor inscriptions of the same period at Kanheri, Kuda and Bedsa. The Rathikas are mentioned as Ristikas in the Girnar, Rathikas in the Shahbazgiri and Rathakas in the Mansera version of the 5th edict of Ashoka. The Dhauli version supplies the analogous form in Lathika. In the 13th edict we find the Bhojakas mentioned with Pitinakas in Shahbazgiri, Mansera and Kalsi versions. In the Kanheri cave inscription of the time of Vinhukada Chutukulananda a Mahabhoja is also called a Maharaja showing that Bhoja probably was a title. Mahabhojas or Mahabhojis are mentioned in five votive inscriptions in the Kuda cave. In later periods a Bhojaka is mentioned in the copper plate inscription of Pallava king Shivaskandavarman (Hindu polity p- 143-195). "ಲಾಟದ ಮೂಲ ನಿವಾಸಿಗಳು ರಠಿಕ ಅಥವಾ ರಟ್ಟರೆಂದೂ, ಮೂಲದಲ್ಲಿ ದ್ರಾವಿಡ ಪಂಗಡದವರೆಂದು ಒಪ್ಪಬಹುದಾಗಿದೆ" ಎಂಬ ಮಾತನ್ನು ಫ್ಲೀಟರು ಹೇಳಿದ್ದಾರೆ. ರಾಷ್ಟ್ರಕೂಟರೇ ತಮ್ಮ ಶಾಸನದಲ್ಲಿ "ರಟ್ಟವಂಶೋದ್ಭವ" ಎಂದು ಹೇಳಿಕೊಂಡಿರುವುದರಿಂದ ಅನುಮಾನಕ್ಕೆ ಆಸ್ಪದವಿಲ್ಲ.(I.A, vol XII,p-218; E.I. vol,V p-192) ಎಂದಿದ್ದಾರೆ.

ಮಳಖೇಡದ ರಾಷ್ಟ್ರಕೂಟರು, ಆಂಧ್ರಪ್ರದೇಶದ ರೆಡ್ಡಿಗಳೂ ಒಂದೆ ಪಂಗಡಕ್ಕೆ ಸೇರಿದವರೆಂದು ಸೂಚಿಸಿದ್ದಾರೆ (South Indian paleography p-54, n-3). "ರಡ್ಡಿ ಶಬ್ದವು ರಟ್ಟ ಶಬ್ದದ ಅಪಭ್ರಂಶವಾಗಿರುವಂತೆ ರಾಷ್ಟ್ರಕೂಟ ಶಬ್ದವು ರಟ್ಟ ಶಬ್ದದ ಸಂಸ್ಕೃತ ರೂಪವಾಗಿರಬಹುದು" ಎಂದು ಅಭಿಪ್ರಾಯ ಪಡುತ್ತಾರೆ. ಅತ್ತಿವರ್ಮನ ಗುಂಟೂರ ಶಾಸನವು ಬಹಳ ಹಳೆಯ ಶಾಸನವಾಗಿದ್ದು ಅದರಲ್ಲಿ ರಟ್ಟ ಶಬ್ದವು ಕಂಡು ಬರುತ್ತದೆ. ಅದು ರಾಷ್ಟ್ರಕೂಟರ ಶಾಸನವೆಂದು ಸಿದ್ಧವಾದರೆ ಡಾ. ಬರ್ನೆಲ್ಲರ ಅಭಿಪ್ರಾಯವನ್ನು ಬಲಪಡಿಸುತ್ತದೆಂದು ಹೇಳಬಹುದು. (ಕರ್ಣಾಟಕ ಸಾಮ್ರಾಜ್ಯ, ಸಂ–೨, ಭಾಗ ೧, ಪು, ೪, ದೇಶಪಾಂಡೆ ರಾ.ಹ.)

ಲಾಟ ಮತ್ತು ಕರ್ಣಾಟದ ಹೆಸರುಗಳನ್ನು ಜೊತೆ ಜೊತೆಯಲ್ಲಿಯೇ ಹೇಳಿರುವ ಉದಾಹರಣೆಗಳು ಹಲವಾರಿವೆ. "ಜಿತ್ವಾ ಚೋಳ ಕಳಿಂಗ ಸೇವುಣ ಬೃಹತ್ ಕರ್ಣಾಟಲಾಟಾಧಿಪಾನ್ ಲಾಟ ಕರ್ನಾಟ ಕರಹಾಟ ಕಲಿಂಗ ಕೊಂಗ ವಂಗ ವೆಂಗಿ ......"

(E.I. Vol. IV, p261), "ಜಿತ್ವಾ ವಂಗ ತಿಲಂಗ ಗೂರ್ಜರಲಸತ್ ಕರ್ಣಾಟ ಗೌಡಾಧಿಪಾನ್॥ ಕರ್ಣಾಟ ಲಾಟೋದ್ಭಟ ಕ್ಷೋಣೀಪಾಲ ವಿಡಂಬನಃ" (E.I. Vol. XII, p24 Ladnu inscription of Sadharana. 20 miles, northwest of Didwana the principle town of the district of the same name in the Jodhpur state. V.S.1373 verse 2) ಎಂಬಿತ್ಯಾದಿಯಾಗಿ ಉಲ್ಲೇಖಗಳು ಸಿಗುತ್ತವೆ.

"ರಾಷ್ಟ್ರಕೂಟರು ಅಥವಾ ರಟ್ಟರು ಬುನಾದಿಯಿಂದ ದಕ್ಷಿಣಾಪಥದಲ್ಲಿ ವಾಸಮಾಡಿಕೊಂಡಿದ್ದವರೇ ಸರಿ. ಇವರು ರಜಪುತ ರಾಠೋರ ಮನೆತನಕ್ಕೆ ಸೇರಿದವರಾಗಿರಬಹುದು. ಈಗಿನ ರಡ್ಡಿಯರು ಇವರ ವಂಶದವರೆಂದು ಕೆಲವರು ಊಹಿಸುತ್ತಾರೆ. ರಾಷ್ಟ್ರಕೂಟರ ರಾಜ್ಯವನ್ನು ಕನ್ನಡದಲ್ಲಿ ರಟ್ಟವಾಡಿಯೆಂತಲೂ ತಮಿಳಿನಲ್ಲಿ ಇರಟ್ಟಪಾಡಿ ಎಂತಲು ಕರೆಯುತ್ತಿದ್ದರು" ಎಂದು ಲೂಯಿ ರೈಸರು ಬರೆಯುತ್ತಾರೆ (ಕರ್ಣಾಟಕ ಸಾಮ್ರಾಜ್ಯ ಸಂ,೨ ಭಾಗ-೧ ಪು,೩ ದೇಶಪಾಂಡೆ ರಾ.ಹ.).

ಲಟ್ಟಲೂರು ಅಥವಾ ಲಟ್ಟಲೂರುಪುರ ಪರಮೇಶ್ವರ ಎಂದು ರಾಷ್ಟ್ರಕೂಟರ ಹಲವು ಶಾಖೆಗಳವರು ಕರೆದುಕೊಂಡಿದ್ದಾರೆ. ಕೊಲ್ಹಾಪುರದ ಬಗ್ಗೆ ಕೆಲಸ ಮಾಡಿದ ಗ್ರಹಾಮರೆಂಬುವರು ಬೆಳಗಾವಿಯ ಅಥಣಿಯೇ ಲಟ್ಟನೂರು ಆಗಿರಬಹುದೆಂದಿದ್ದಾರೆ. ಆದರೆ ತಮ್ಮ ಮಾತಿಗೆ ಸರಿಯಾದ ಅಧಾರಗಳು ದೊರೆತಿಲ್ಲವೆಂದಿದ್ದಾರೆ. ಮಧ್ಯಪ್ರಾಂತ್ಯ ಬಲಸಾರ ಜಿಲ್ಲೆಯಲ್ಲಿರುವ ರತನಪುರವೇ ಲಟ್ಟಲೂರು ಎಂದಿದ್ದಾರೆ (ಕರ್ಣಾಟಕ ಸಾಮ್ರಾಜ್ಯ, ಸಂ-೨, ಭಾಗ-೧, ಪು,೫, ದೇಶಪಾಂಡೆ ರಾ.ಹ.).

"ಲತ್ತಲೂರುಪುರವು ಮಧ್ಯಭಾರತದ ಬಿಲಾಸಪುರ ಜಿಲ್ಲೆಯ ರತ್ನಪುರ" ಎಂದಿದ್ದಾರೆ ರಾಜವಾಡೆ ಎಂಬ ವಿದ್ವಾಂಸರು. ತಮ್ಮ ಊಹೆಯು ಸರಿಯಾಗಿದ್ದರೆ "ರಾಥೋರರು ಉತ್ತರದಿಂದ ದಕ್ಷಿಣಕ್ಕೆ ಬಂದರೆಂದು ತಿಳಿಯುತ್ತದೆ" ಎಂದಿದ್ದಾರೆ. (History of the Rashtrakutas (Rathore) p7, Bisheshwaranath Reu). ಫ್ಲೀಟರು ಲತ್ತಲೂರಿನ ಬಗ್ಗೆ ಹೇಳುತ್ತಾ; ಲತ್ತಲೂರು ಯಾವಾಗಲೂ ರಾಷ್ಟ್ರಕೂಟರ ರಾಜಧಾನಿಯಾಗಿರಲ್ಲಿಲ್ಲ. ಆದ್ದರಿಂದ ಅವರ ಮೂಲಸ್ಥಾನವಾಗಿರಬಹುದು. ಮಾಲ್‌ಖೇಡಿನ ರಾಷ್ಟ್ರಕೂಟರು, ಉತ್ತರದವರೆಂದು ಫ್ಲೀಟರು, ರಾಜವಾಡೆ ಮುಂತಾದವರು ತಿಳಿದಿದ್ದರು. ಈ ಪ್ರದೇಶವನ್ನು ಮಧ್ಯಭಾರತದ ರತ್ನಾಪುರವೆಂದು

ಊಹಿಸಿದ್ದರು. ನಂತರ ಫ್ಲೀಟರು ತಮ್ಮ ನಿರ್ಧಾರವನ್ನು ಬದಲಾಯಿಸಿ, ಹೈದರಾಬಾದ್ ಕರ್ಣಾಟಕದ ಭಾಗವಾದ ಬೀದರ್ ಜಿಲ್ಲೆಯೊಳಗಿದ್ದ ಮಂಚೇರಾ ನದಿಯ ತೀರದಲ್ಲಿರುವ ಲಾತೂರೇ ಈ ಲತ್ತಲೂರು ಇರಬಹುದೆಂದು ಹೇಳಿದ್ದಾರೆ. ಈ ಲಾತೂರಿನಲ್ಲಿ ಚಾಲುಕ್ಯ ೩ನೆಯ ಸೋಮೇಶ್ವರನ ಕಾಲದ ಶಿಲಾಶಾಸನವು ಸಿಕ್ಕಿದೆ. ಅದರಲ್ಲಿ;

ಅಸ್ತಿ ದಿವ್ಯಂ ಪುರಸ್ರೇ(ಶ್ರೇ) ಷ್ಟಂ ಲತ್ತಲೌರಾಭಿದಾನಕಂ ।

ಮಹಾಜನ್ಯೈಃ ಪಂಚಶತ್ಯೈರ್ವೇದವಿದ್ಧಿರ್ನಿಷೇವಿತಂ ॥

ದೇವೋಸ್ತಿ ಪ್ರಥಿತಸ್ತತ್ರ ನಾಮ್ನಾ ಪಾಪವಿನಾಶನಃ ।

ಯಂ ದೃಷ್ಟ್ವಾ ದೇವದೇವದೇವೇಶಂ ಸಿದ್ಧ್ಯಂತಿ ಮನುಜಾ ಭುವಿ॥

(Proceedings of the seventh Oriental Conference, p591 ff), ಎಂದಿದ್ದು ಲಾತೂರಿನಲ್ಲಿ ಮಾಡಿರುವ ದಾನವನ್ನು ಉಲ್ಲೇಖಿಸುತ್ತದೆ. ಮೊದಲು ಲತ್ತಲೌರ ಎಂಬ ಹೆಸರಿದ್ದು ಅದೇ ಹೆಸರೇ ಲಾತೂರು ಆಗಿದೆಯೆಂಬುದು ನಿರ್ವಿವಾದ. ಈ ಶಾಸನದ ಆಧಾರದಿಂದ ಮಳಖೇಡದ ರಾಷ್ಟ್ರಕೂಟರ ಮೂಲವು ಕರ್ಣಾಟಕದಲ್ಲಿರುವ "ಲಾತೂರು" ಆಗಿದೆಯೆಂದು ನಿರ್ಧರಿತವಾಗಿದೆ.

ಪ್ರಸ್ತುತ ರಾಷ್ಟ್ರಕೂಟರು ಎಂದು ಗುರುತಿಸಿಕೊಳ್ಳುವ ಹಲವಾರು ವಂಶಗಳನ್ನು ಇಲ್ಲಿ ಗಮನಿಸಲಾಗಿದೆ. ಇವರು ನೇರವಾಗಿ ಪ್ರಧಾನ ಶಾಖೆಗೆ ಸೇರಿರಬಹುದು ಅಥವಾ ಬೇರೆಯೇ ಇರಬಹುದು. ಇದಲ್ಲದೆ ಬೇರೆಯಾವುದಾದರೂ ರೀತಿಯಲ್ಲಿ (ಹೆಣ್ಣುಮಕ್ಕಳ ಕಡೆಯಿಂದ) ಸಂಬಂಧವಿರುವ ವಂಶಾವಳಿಯನ್ನು ಗಮನಿಸಬಹುದಾಗಿದೆ. ರಾಷ್ಟ್ರಕೂಟರ ಗುಂಪುಗಳನ್ನು ಲಾಂಛನಗಳ ಆಧಾರದಿಂದ ವಿಂಗಡಿಸಬಹುದು. ಆದರೆ ಕೆಲವು ಗುಂಪುಗಳು ಅಲ್ಲಿಯೂ ಕೂಡಾ ತಮ್ಮನ್ನು ಲತ್ತಲೂರುಪುರವರಾಧೀಶ್ವರರೆಂದೇ ಗುರುತಿಸಿಕೊಂಡಿರುವುದನ್ನು ಗಮನಿಸಬಹುದು. ಈ ದೃಷ್ಟಿಯಿಂದ ನೋಡಿದಾಗ ರಾಷ್ಟ್ರಕೂಟ ಪದವು ಅಧಿಕಾರಸೂಚಿಯಾಗಿಯೇ ಕಂಡುಬರುತ್ತದೆ.

## ಮೂಲ

ರಾಷ್ಟ್ರಕೂಟರು ಮೂಲತಃ ಕೃಷಿಕರೆಂದು ಹೇಳಬಹುದು. ಮಳಖೇಡವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ ರಾಷ್ಟ್ರಕೂಟರು ನೇಗಿಲನ್ನು ತಮ್ಮ

ಲಾಂಛನವನ್ನಾಗಿ ಬಳಸಿಕೊಂಡಿದ್ದಾರೆ. ಇನ್ನೊಂದು ಅಂಶವೆಂದರೆ ತಮ್ಮ ಹೆಸರುಗಳನ್ನು ಕೂಡ ಮಳೆಗೆ ಸಂಬಂಧಿಸಿದಂತೆ ಇರಿಸಿಕೊಂಡಿದ್ದಾರೆ. ಧಾರಾವರ್ಷ, ಅಮೋಘವರ್ಷ, ಅಕಾಲವರ್ಷ, ಹಿರಣ್ಯವರ್ಷ ಇತ್ಯಾದಿ. .ನೇಗಿಲಿನ ಚಿತ್ರಗಳನ್ನು ಅವರ ಶಾಸನಗಳ ಮೇಲೆ ಕಾಣಬಹುದು. ಆಡಳಿತದಲ್ಲಿ ಸಹಾಯ ಮಾಡಲು ಅವಕಾಶ ಸಿಕ್ಕಾಗ ದೊರೆತ ಅಧಿಕಾರಸೂಚಿ ಹೆಸರನ್ನೇ ತಮ್ಮ ವಂಶದ ಹೆಸರನ್ನಾಗಿ ಇಟ್ಟುಕೊಂಡಿದ್ದಾರೆಂದು ಹೇಳಬಹುದು.



## ರಾಷ್ಟ್ರಕೂಟರ ಶಾಖೆಗಳ ಸಂಖ್ಯೆ

ರಾಷ್ಟ್ರಕೂಟರೆಂದು ಕರೆದುಕೊಳ್ಳುವ ವಂಶಗಳೆಷ್ಟು ಎಂದು ಪರಿಶೀಲಿಸಿದಾಗ ಹಲವಾರು ಸಿಗುತ್ತವೆ. ಇವರೆಲ್ಲರೂ ಒಂದೇ ವಂಶಕ್ಕೆ ಸೇರುವುದಿಲ್ಲ ಅಥವಾ ರಾಷ್ಟ್ರಕೂಟರದೇ ಶಾಖೆಗಳು ಎಂದು ನಿಖರವಾಗಿ ಹೇಳಲು ಸಾಧ್ಯವಿಲ್ಲ. ಈ ಎಲ್ಲಾ ಶಾಖೆಗಳ ಮೂಲ ಯಾವುದು ಎಂಬುದನ್ನು ಗುರುತಿಸಲು ಸಾಧ್ಯವಾಗಿಲ್ಲ. ಆದರೆ ಇವರಲ್ಲಿ ಕೆಲವು ಗುಂಪುಗಳನ್ನಾದರೂ ಸೇರಿಸುವುದು ಸಾಧ್ಯವಾಗಿದೆ. ಕೆಲವು ವಂಶಗಳಿಗೆ ಕಾಲ ದೊರೆತಿದ್ದರೆ ಇನ್ನು ಕೆಲವಕ್ಕೆ ದೊರೆತಿಲ್ಲ. ಹಾಗಿದ್ದರೂ ಇವರನ್ನು ಶಾಖೆಗಳೆಂದೇ ಗುರುತಿಸಿದ್ದಾರೆ. ಏಕೆಂದರೆ ಎಲ್ಲ ಗುಂಪುಗಳೂ ಒಂದಲ್ಲ ಒಂದುಕಡೆ ಪ್ರಧಾನ ಶಾಖೆಗೆ ಅಂದರೆ ಮಳಖೇಡದ ರಾಷ್ಟ್ರಕೂಟರಿಗೆ ಹತ್ತಿರವಾಗುತ್ತಾರೆ. ಇಲ್ಲವೇ ಅವರೊಂದಿಗೇ ಸೇರಿಹೋಗುತ್ತಾರೆ. ಕೆಲವೆಡೆ ದಾಖಲೆಗಳ ಕೊರತೆಯಿಂದಾಗಿ ಸಮಸ್ಯೆ ಸಮಸ್ಯೆಯಾಗಿಯೇ ಉಳಿದುಕೊಳ್ಳುತ್ತದೆ. ಇಲ್ಲಿ ಸಿಕ್ಕಿರುವ ಮಾಹಿತಿಗಳಿಂದ ಸ್ಪಷ್ಟ ಚಿತ್ರವನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

ವಿವಿಧ ವಿದ್ವಾಂಸಗು ಕೆಲವು ಶಾಖೆಗಳನ್ನು ಗುರುತಿಸಿದ್ದಾರೆ. ಕೆಲವರು ತಾವು ಶಾಖೆಗಳನ್ನು ಗಮನಿಸುವುದಿಲ್ಲವೆಂದು ಹೇಳಿದರೆ, ಇನ್ನು ಕೆಲವರು ಕೆಲವು ಶಾಖೆಗಳ ಹೆಸರನ್ನು ಹೇಳಿ ಮುಂದುವರಿಯುತ್ತಾರೆ. ಸಾಮಾನ್ಯವಾಗಿ ಮಾನಪುರ, ಎಲಿಚಪುರ, ಗುಜರಾತ್ ಮತ್ತು ಮಳಖೇಡದ ರಾಷ್ಟ್ರಕೂಟರನ್ನು ಮಾತ್ರ ಹೆಸರಿಸುತ್ತಾರೆ. ಆದರೆ ಸಣ್ಣ ಪುಟ್ಟ ಶಾಖೆಗಳ ಕಡೆಗೆ ಎಲ್ಲರೂ ಗಮನ ಕೊಡುವುದಿಲ್ಲ. ಈಗ ವಿವಿಧ ವಿದ್ವಾಂಸರು ಚರ್ಚಿಸುವ ಶಾಖೆಗಳನ್ನು ಗಮನಿಸೋಣ.

ಡಾ.ಫ್ಲೀಟರು ಐದು ರಾಷ್ಟ್ರಕೂಟ ಮನೆತನಗಳನ್ನು ಹೆಸರಿಸುತ್ತಾರೆ. "ಮಂಗಲೀಶನು ತೀರಿಕೊಂಡನಂತರ ಬಾದಾಮಿಯ ಮೇಲೆ ದಂಡೆತ್ತಿಕೊಂಡು ಹೋದ ಗೋವಿಂದನು ಸೊಲ್ಲಾಪುರ, ಬಿಜಾಪುರ ಜಿಲ್ಲೆಗಳಲ್ಲಿದ್ದ ರಾಷ್ಟ್ರಕೂಟ ಮನೆತನದವನು. ಗುಂಟೂರು ಜಿಲ್ಲೆಯ ತಾಮ್ರಶಾಸನದಲ್ಲಿ ಬರುವ ಅತ್ತಿವರ್ಮ ರಾಜನು ಇನ್ನೊಂದು ರಾಷ್ಟ್ರಕೂಟ ಮನೆತನಕ್ಕೆ ಸೇರಿದವನು. ಮಾಳವ ಪ್ರಾಂತ್ಯದ ಮಾನಪುರದಲ್ಲಿ ರಾಷ್ಟ್ರಕೂಟ ಮನೆತನವಿತ್ತು. ಮಧ್ಯ ಪ್ರಾಂತ್ಯದ ಬೇತೂಲ್ ಜಿಲ್ಲೆಯಲ್ಲಿ ಒಂದು, ಮಳಖೇಡದಲ್ಲಿ ಒಂದು ರಾಷ್ಟ್ರಕೂಟ ಮನೆತನಗಳಿದ್ದವು. ಇವುಗಳಲ್ಲಿ ಮಾನಪುರದಲ್ಲಿದ್ದ ರಾಷ್ಟ್ರಕೂಟರು ಸಿಂಹ ಲಾಂಛನರಾಗಿದ್ದರು. ಆದ್ದರಿಂದ ಇವರು ಮಳಖೇಡದ ರಾಷ್ಟ್ರಕೂಟರಿಗಿಂತ ಭಿನ್ನರು ಎಂದಿದ್ದಾರೆ. ಇವರೆಲ್ಲ ಕ್ರಿ.ಶ. ೬ನೆಯ ಶತಮಾನದಲ್ಲಿ ಇದ್ದವರು. ಈ ರಾಷ್ಟ್ರಕೂಟ ಮನೆತನ ಅಥವಾ ನಾಡುಗವುಡ ಮನೆತನಗಳು ಇನ್ನೂ ಎಷ್ಟಿವೆಯೆಂದು ಹುಡುಕ ಹೊರಟರೆ ಏಳು ಮತ್ತು ಎಂಟನೆ ಶತಮಾನದಲ್ಲಿ ಕರ್ಣಾಟಕದಲ್ಲಿಯೇ ಹಲವಾರು ನಾಡುಗವುಡ ಮನೆತನಗಳು ಕಂಡು ಬರಬಹುದು" ಎಂದಿದ್ದಾರೆ.

"ಮಗಧದ ದೊರೆಗಳು ತಮ್ಮ ಸಾಮ್ರಾಜ್ಯದಲ್ಲಿ ಬೇರೆ ಬೇರೆ ಭಾಗಗಳಿಗೆ ನೇಮಿಸಿದ್ದ ಅಧಿಕಾರಿಗಳು ರಾಷ್ಟ್ರಪಾಲರಷ್ಟು ಅಧಿಕಾರವನ್ನು ಹೊಂದಿದ್ದರು. ಇವರೇ ರಾಷ್ಟ್ರೀಯರು" ಎಂದು ಪಂಡಿತ ಹೇಮಚಂದ್ರ ಚೌಧರಿಯವರು (ಪ್ರಾಚೀನ ಭರತಖಂಡದ ರಾಜಕೀಯ ಇತಿಹಾಸ, ಪು. ೧೫೨-೧೫೪) ಅಭಿಪ್ರಾಯ ಪಡುತ್ತಾರೆ. ಇನ್ನು "ರಾಷ್ಟ್ರಿಯರೇ ರಾಷ್ಟ್ರಕೂಟರು" ಎನ್ನುವ ಮಾತನ್ನು ಹೇಳಿದ್ದಾರೆ. "ರಾಷ್ಟ್ರೀಯರ ಕೂಟವೆ ರಾಷ್ಟ್ರಕೂಟ. ಕುಂತಳ ದೇಶವು ನಂದ ಮೌರ್ಯರ ರಾಜ್ಯಕ್ಕೆ ಸೇರಿದ್ದಾಗ ಕೆಲವು ರಾಷ್ಟ್ರೀಯರು ಅಲ್ಲಲ್ಲಿ ವಾಸಮಾಡಿಕೊಂಡಿದ್ದರೆಂದು ಹೇಳಬಹುದು. ಮೌರ್ಯ ವಂಶವು ಹೋದ ಬಳಿಕ ರಾಷ್ಟ್ರೀಯರು ನಾಡುಗವುಡರೆಂಬ ಅಡ್ಡ ಹೆಸರಿನಿಂದ ಕೆಲವು ಗ್ರಾಮಗಳ ಮುಖ್ಯಸ್ಥರಾಗಿದ್ದು ದೊರೆಗೆ ತಾವು ನೋಡಿಕೊಳ್ಳುತ್ತಿದ್ದ ಹಳ್ಳಿಗಳ ಕಂದಾಯವನ್ನು ಸಂಗ್ರಹಿಸಿ ಕೊಡುವುದು, ಸೈನಿಕರನ್ನು ಒದಗಿಸುವುದು ಮುಂತಾದ ಸಣ್ಣ ಪುಟ್ಟ ಸಹಾಯಗಳನ್ನು ಮಾಡುತ್ತಿದ್ದರೆಂದು ಹೇಳಬಹುದು" ಎಂದು ರಾ.ಹ. ದೇಶಪಾಂಡೆಯವರು ಹೇಳಿದ್ದಾರೆ. "ತಮ್ಮ ಈ ಊಹೆಯು ಸರಿಯಾಗಿದ್ದರೆ, ಬಾದಾಮಿ

ಚಲುಕ್ಯರ ಆಳ್ವಿಕೆಯಲ್ಲಿ ಇಂತಹ ನಾಡುಗವುಡರು ಆಧಾರ ಸ್ತಂಭಗಳಾಗಿದ್ದರೆಂದು ಹೇಳಬಹುದು" ಎಂದಿದ್ದಾರೆ (ಕರ್ನಾಟಕ ಸಾಮ್ರಾಜ್ಯ, ಸಂ.೨, ಭಾಗ-೧, ಪು, ೧೪).

"ಬೀರಾರಿನಲ್ಲಿ, ಮಧ್ಯಹಿಂದುಸ್ಥಾನದಲ್ಲಿ ಮತ್ತು ಉತ್ತರ ಭಾರತದ ಇನ್ನೂ ಕೆಲವು ಭಾಗಗಳಲ್ಲಿ ಹಲವಾರು ರಾಷ್ಟ್ರಕೂಟ ಮನೆತನಗಳಿದ್ದವು. ಕ್ರಿ.ಶ. ೭ ನೆಯ ಶತಮಾನದಿಂದಲೇ ಸಣ್ಣ ಪುಟ್ಟ ರಾಜ್ಯಗಳನ್ನು ಆಳುತ್ತಿದ್ದರು ಎನ್ನುವುದರ ಜೊತೆಗೆ, ಈ ಪ್ರದೇಶದಲ್ಲಿ ಏಳು ರಾಷ್ಟ್ರಕೂಟ ಮನೆತನಗಳಿದ್ದವೆಂದು ತಿಳಿದುಬರುತ್ತದೆ" ಎಂದಿದ್ದಾರೆ ಎನ್. ಲಕ್ಷ್ಮೀನಾರಾಯಣ ರಾವ್ (ಕರ್ನಾಟಕದ ಅರಸು ಮನೆತನಗಳು). ಅವರನ್ನು ಕ್ರಮವಾಗಿ ಮಾನಪುರ, ಬೀರಾರಿನಲ್ಲಿ ಆಳುತ್ತಿದ್ದ ಬೇತೂಲಿನ ರಾಷ್ಟ್ರಕೂಟರು (ನನ್ನರಾಜನ ತೀವಾರ್‌ಖೇಡ್, ಮುಲ್ತಾಯಿ ಶಾಸನ), ಬೋಧಗಯಾದ ರಾಷ್ಟ್ರಕೂಟರು (c. 9-10, A.D., Bodh Gaya p195, Rajendra Lal Mithra), ಮಧ್ಯ ಹಿಂದೂಸ್ಥಾನದ ಪಠಾರಿಯ ರಾಷ್ಟ್ರಕೂಟರು (ಕ್ರಿ.ಶ. ೯ನೆಯ ಶತಮಾನ), ರಜಪುತಾನದಲ್ಲಿ ಆಳುತ್ತಿದ್ದ ಹಸ್ತಿಕುಂಡಿಯ ರಾಷ್ಟ್ರಕೂಟರು (ಕ್ರಿ.ಶ. ೧೦-೧೧ನೆಯ ಶತಮಾನ), ರಜಪುತಾನದಲ್ಲಿ ಆಳುತ್ತಿದ್ದ ಇನ್ನೊಂದು ಶಾಖೆ ಧಾನೋಪದ ರಾಷ್ಟ್ರಕೂಟರು (ಕ್ರಿ.ಶ. ೧೧ ನೆಯ ಶತಮಾನ), ಸಂಯುಕ್ತ ಸಂಸ್ಥಾನದಲ್ಲಿ ಆಳುತ್ತಿದ್ದ ವೋದಾಮಯೂತದ ರಾಷ್ಟ್ರಕೂಟರು (ಕ್ರಿ.ಶ. ೧೧-೧೨ನೆಯ ಶತಮಾನ). ಇಷ್ಟು ಹೇಳಿದ ನಂತರ ರಾಷ್ಟ್ರಕೂಟರ ಮೂಲ, ರಾಜಧಾನಿಗಳ ಕುರಿತ ವಿಚಾರಗಳನ್ನು ಮುಂದುವರಿಸಿಕೊಂಡು ಹೋಗುತ್ತಾರೆ. ಶಾಖೆಗಳ ಬಗ್ಗೆ ಹೆಚ್ಚಿಗೆ ಇನ್ನೇನೂ ಹೇಳುವುದಿಲ್ಲ.

ಇನ್ನು ಮಳಖೇಡದ ರಾಷ್ಟ್ರಕೂಟರು ಬೀರೂರಿನ ರಾಷ್ಟ್ರಕೂಟರ ಶಾಖೆಯೇ ಎಂದು ಹೇಳಲು ಆಧಾರಗಳು ಸಾಲದು ಎಂದು ಹೇಳಿದ್ದಾರೆ. ಈ ಸಂದರ್ಭದಲ್ಲಿ ಅಲ್ಟೇಕರರು ತಮ್ಮ ಅಭಿಪ್ರಾಯಕ್ಕೆ ಎರಡು ಮುಖ್ಯ ಕಾರಣಗಳನ್ನು ಕೊಟ್ಟಿರುವುದರ ಪ್ರಸ್ತಾಪ ಮಾಡಿದ್ದಾರೆ. ಹೆಸರಿನ ಸಾಮ್ಯವು ಒಂದಾದರೆ, ದಕ್ಷಿಣ ದೇಶದಲ್ಲಿ ಸಿಕ್ಕಿರುವ ರಾಷ್ಟ್ರಕೂಟ ಶಾಸನಗಳಿಗಿಂತ ಪ್ರಾಚೀನವಾದವು ಎಂಬುದು ಎರಡನೆಯ ಕಾರಣವಾಗಿದೆ ಎಂದು ಉಲ್ಲೇಖಿಸುತ್ತ, ಹೆಸರಿನ ಹೋಲಿಕೆಯಿದ್ದ ಮಾತ್ರಕ್ಕೆ ಮನೆತನಗಳು ಒಂದೇ ಎನ್ನಲು ಸಾಧ್ಯವಿಲ್ಲ. ಅಲ್ಟೇಕರರು ಬರೆದ ಕಾಲಕ್ಕೆ ಸಿಗದಿದ್ದರೂ ನಂತರ ಗೋಕಾಕಿನಲ್ಲಿ ದೆಜ್ಜಮಹಾರಾಜನ ಕನ್ನಡ ಲಿಪಿಯ ತಾಮ್ರಪಟ ಸಿಕ್ಕಿದೆ. ಇದರ ಕಾಲ ೬-೭ನೆಯ

ಶತಮಾನವಾಗುವುದರಿಂದ ಪ್ರಸ್ತುತ ಶಾಸನದ ವ್ಯಕ್ತಿ ಕರ್ನಾಟಕದಲ್ಲಿಯೇ ಆಳುತ್ತಿದ್ದನೆಂಬುದು ನಿಶ್ಚಯ. ಇವರಿಬ್ಬರು ಸಮಕಾಲೀನರು, ಮಳಖೇಡದ ರಾಷ್ಟ್ರಕೂಟರು ಹೊರಗಿನಿಂದ ಬಂದವರೆಂಬ ಅನುಮಾನಕ್ಕೆ ಆಸ್ಪದವಿಲ್ಲ ಎಂದು ತಮ್ಮ ಅಭಿಪ್ರಾಯವನ್ನು ಕೊಟ್ಟಿದ್ದಾರೆ (ಪ್ರಬುದ್ಧ ಕರ್ನಾಟಕ ಸಂ, ೨೦, ಸಂಚಿಕೆ–೩).

ಚಲುಕ್ಯ ದೊರೆಯು ತನ್ನ ಅಧೀನದಲ್ಲಿದ್ದ ರಾಷ್ಟ್ರಕೂಟ ಅರಸ ಗೋವಿಂದರಾಜನ ಕೋರಿಕೆಯ ಮೇರೆಗೆ ರತ್ನಗಿರಿ ಜಿಲ್ಲೆಯ ಒಂದು ಗ್ರಾಮವನ್ನು ದಾನವಾಗಿ ನೀಡಿದನು. ೨ ನೆಯ ವಿಕ್ರಮಾದಿತ್ಯನ ನರವಣ ಶಾಸನದಲ್ಲಿ (ಕ್ರಿ.ಶ. ೭೪೩) ಇದರ ಉಲ್ಲೇಖವಿದೆ (ಅಭಿಜಾತ ಯುಗ, ಪು–೩೮೨, ಭಾರತೀಯ ವಿದ್ಯಾಭವನ ಸಂಪುಟಗಳು). ರಾಷ್ಟ್ರಕೂಟ ಶಿವರಾಜನ ಮಗ ಗೋವಿಂದರಾಜನು ಆದಿತ್ಯವಾಟಿಕಾ ಎಂಬಲ್ಲಿ ಉಳಿದು ಕೊಂಡಿದ್ದಾಗ ಈ ಶಾಸನವನ್ನು ಹಾಕಿಸಿದನು. ಆದಿತ್ಯವಾಟಿಕಾವು ಸತಾರ ಜಿಲ್ಲೆಯ ಐತವೇಡವಾಗಿದೆ. ರಾಷ್ಟ್ರಕೂಟ ಗೋವಿಂದರಾಜನು ಬಹುಶಃ ಸತಾರ–ರತ್ನಗಿರಿ ಪ್ರದೇಶದಲ್ಲಿನ ಆಡಳಿತವನ್ನು ನೋಡಿಕೊಳ್ಳುತ್ತಿದ್ದನೆಂದು ತೋರುತ್ತದೆ. ಕ್ರಿ.ಶ. ೮ ನೆಯ ಶತಮಾನದ ಪೂರ್ವಾರ್ಧದಲ್ಲಿ ಬಾದಾಮಿಯು ಕೊನೆಕೊನೆಯ ಅರಸರ ಆಳ್ವಿಕೆಯಲ್ಲಿ ದುರ್ಬಲಗೊಳ್ಳುತ್ತಿತ್ತು. ಆ ಸಮಯದಲ್ಲಿ ದಕ್ಷಿಣ ಭಾರತದ ಉತ್ತರಭಾಗದಲ್ಲಿ ರಾಷ್ಟ್ರಕೂಟರ ಎರಡು ವಂಶಗಳು ಪ್ರಬಲವಾಗ ತೊಡಗಿದ್ದವು ಎಂದು ಉಲ್ಲೇಖಿಸುತ್ತದೆ.

ಶ್ರೀ ಬಿಶೇಷ್ವರನಾಥರೇವು ಅವರು ಮಾನಪುರ, ಅಚಲಪುರ, ಮಳಖೇಡ, ಧಾನ್ಸೋಪ, ಕನೌಜ, ಬದೌನ್, ಪಠಾರಿ, ಬಿಥು, ಬೋಧಗಯಾ, ರಾಷ್ಟ್ರೌಡ ಶಾಖೆ – ೧, ಶಾಖೆ – ೨, ಸೌಂದತ್ತಿಯ ರಟ್ಟ, ಗುಜರಾತ್ ಶಾಖೆ, ಕನೌಜದ ಗಹಡವಾಲರ ಬಗ್ಗೆ ಉಲ್ಲೇಖಿಸುತ್ತಾರೆ. ಎಂ.ವಿ.ಕೃಷ್ಣಸ್ವಾಮಿಯವರು ಸಹ ಏಳೆಂಟು ಶಾಖೆಗಳ ಬಗ್ಗೆ ಹೇಳಿದ್ದಾರೆ. ಶಾಖೆಯೆಂದು ನೇರವಾಗಿ ಹೇಳದಿದ್ದರೂ ಅವರ ಲಾಂಛನಗಳ ಬಗ್ಗೆ ಉಲ್ಲೇಖಿಸಿದ್ದಾರೆ. ಬಿಶೇಷ್ವರನಾಥ ರೇವು ಅವರ ಸಣ್ಣ ಶಾಖೆಗಳ ಬಗ್ಗೆ, ಅವರ ವಂಶಾವಳಿಗಳ ಬಗ್ಗೆ ಹೇಳುತ್ತ, ಇಂತಹ ವಂಶಗಳ ಪರಿಚಯ ಮಾಡಿಕೊಡುತ್ತಾರೆ. ಅತಿ ಹೆಚ್ಚಿನ ಸಂಖ್ಯೆಯಲ್ಲಿ ರಾಷ್ಟ್ರಕೂಟರ ಗುಂಪುಗಳನ್ನು ಉಲ್ಲೇಖಿಸಿರುವ ಕೀರ್ತಿ ಇವರದಾಗಿದೆ. ಆದರೆ ಎಲ್ಲ ಶಾಖೆಗಳಿಗೂ ಇರಬಹುದಾದ ಪರಸ್ಪರ ಸಂಬಂಧಗಳ ಬಗ್ಗೆ ಇಲ್ಲಿ ಹೆಚ್ಚಿನ ಗಮನ ಹರಿಸಿಲ್ಲದಿರುವುದು ಕಂಡುಬರುತ್ತದೆ.

ರಾಷ್ಟ್ರಕೂಟರದು ಸುಮಾರು ಸಾವಿರ ವರ್ಷಗಳಿಗೂ ಹೆಚ್ಚು ಕಾಲ ಭಾರತದ ಬೇರೆ ಬೇರೆ ಭಾಗಗಳಲ್ಲಿ ಮೆರೆದ ಮನೆತನ. ಆದರೆ ರಾಷ್ಟ್ರಕೂಟ ವಂಶಗಳು ಭಾರತದಲ್ಲಿ ಅನೇಕವಿದ್ದು, ಯಾರು ಬಲಿಷ್ಠರಾಗಿ ಮುಂದೆ ರಾಜ್ಯವನ್ನಾಳಿದರೊ ಅವರನ್ನು ಪ್ರಧಾನ ಅಥವಾ ಮುಖ್ಯ ರಾಷ್ಟ್ರಕೂಟರು ಎನ್ನುತ್ತೇವೆ. ಏಕೆಂದರೆ ಕ್ರಿ.ಶ. ಸು. ೩೭೫ ರಿಂದ ಕ್ರಿ.ಶ. ೧೩೮೪ ರವರೆಗೆ ನಮಗೆ ರಾಷ್ಟ್ರಕೂಟರು ಅಥವಾ ರಾಷ್ಟ್ರಕೂಟ ಎಂದು ಕರೆದುಕೊಂಡಿರುವ ಗುಂಪುಗಳ ಶಾಸನಗಳು ಸಿಗುತ್ತವೆ. ಕೊನೆಗೆ ಇವರೇ ದಕ್ಷಿಣ ಭಾರತದಲ್ಲಿ ಸೌಂದತ್ತಿಯ ರಟ್ಟರಾಗುತ್ತಾರೆ, ಉತ್ತರದಲ್ಲಿ ಗಹಡವಾಲರಾಗುತ್ತಾರೆ (History of The Rashtrakutas[Rathore] 1933, Pt. Bishweshwara Nath. Reu).

ರಾಷ್ಟ್ರಕೂಟರು ಎಂದು ಕರೆದುಕೊಳ್ಳುವ ಗುಂಪುಗಳನ್ನು ಮುಂದೆ ಕಾಲಾನುಕ್ರಮದಲ್ಲಿ ನೀಡಲಾಗಿದೆ.

| ಗುಂಪುಗಳು | ಕಾಲ |
|---|---|
| ೧. ಮಾನಪುರದ ರಾಷ್ಟ್ರಕೂಟರು | ಕ್ರಿ.ಶ. ೩೭೫ – ೫೦೬ |
| ೨. ಎಲಿಚಪುರ / ಅಚಲಪುರ / ವಿದರ್ಭ / ಬೀರಾರ್ / ಬೇತೂಲ್ / ಬೇಕುಲ | ಕ್ರಿ.ಶ. ಸು. ೫೭೩ – ೭೩೧ |
| ೩. ಮಾನ್ಯಖೇಟ/ಮಳಖೇಡ | ಕ್ರಿ.ಶ. ೭೩೫ – ೯೭೪ |
| ೪. ಗುಜರಾತ/ಲಾಟ ಶಾಖೆ–೧ | ಕ್ರಿ.ಶ. ೭೫೭ |
| ೫. ಗುಜರಾತ/ಲಾಟ ಶಾಖೆ–೨ | ಕ್ರಿ.ಶ. ಸು. ೮೦೦ – ೮೮೮ |
| ೬. ಪಠಾರಿ | ಕ್ರಿ.ಶ. ೭೭೦ – ೮೭೦ |
| ೭. ಹಸ್ತಿಕುಂಡಿ/ಹಾತುಂಡಿ | ಕ್ರಿ.ಶ. ೯೦೦ – ೧೦೧೬ |
| ೮. ಬೋದ್‌ಗಯಾ | ಕ್ರಿ.ಶ. ೯೦೦ – ೯೮೦ |
| ೯. ಧಾನೋಪ | ಕ್ರಿ.ಶ. ೧೦೦೬ |

| | |
|---|---|
| ೧೦. ರಾಷ್ಟ್ರೋಡ ಶಾಖೆ–೧ | ಕ್ರಿ.ಶ. ೧೦೭೬    ೧೧೨೬ |
| | (ತಿಳಿದಿರುವ ಕಾಲ ೧೦೮೬) |
| ೧೧. ಮಗಧ | ಕ್ರಿ.ಶ.೧೧ನೆಯ ಶತಮಾನ |
| ೧೨.ಸೌಂದತ್ತಿ | ಕ್ರಿ.ಶ. ೮೭೫ – ೧೨೩೦ |
| ೧೩. ಓಢ್ರ | ಕ್ರಿ.ಶ. ೧೧೩೦ |
| ೧೪. ಕನೌಜ | ಕ್ರಿ.ಶ. ೧೧೮೮ |
| ೧೫. ಬಿಥೂ | ಕ್ರಿ.ಶ. ೧೨೦೦ – ೧೩೧೫ |
| ೧೬. ಬದಾವುನ್/ಬುಧೌನ್ | ಕ್ರಿ.ಶ. ೧೨೦೧ |
| ೧೭. ರಾಷ್ಟ್ರೋಡ ಶಾಖೆ–೨ | ಕ್ರಿ.ಶ. ೧೩೮೪ |
| ೧೮. ಇತರ ಸಣ್ಣ ಪುಟ್ಟ ವಂಶಗಳು | |

## ರಾಷ್ಟ್ರಕೂಟರ ವಂಶ

ರಾಷ್ಟ್ರಕೂಟರು ತಾವು ಯಾದವ ವಂಶದವರೆಂದು ಹೇಳಿಕೊಂಡಿದ್ದಾರೆ. ಇದರ ಉಲ್ಲೇಖ ಕೆಲವೇ ಶಾಸನಗಳಲ್ಲಿ ಮಾತ್ರ ಬಂದಿದೆ. ಒಂದನೆಯ ಅಮೋಘವರ್ಷನ ಸೊರಟೂರು ಶಾಸನದಲ್ಲಿ (SII, Vol IX, Part I, p12, 867-68 AD) ಯಾದವ ವಂಶೋದ್ಭವನೆಂಬ ಉಲ್ಲೇಖವಿದೆ. ಕ್ರಿ.ಶ. ೯೧೬ರ ಶಾಸನವೊಂದು "ತತ್ರಾನ್ವಯೇ ವಿತತಸಾತ್ಯಕೀ ವಂಶಜನ್ಮಾ। ಶ್ರೀ ದಂತಿದುರ್ಗನೃಪತಿಃ ಪುರುಷೋತ್ತಮೋಭೂತ್" ಎನ್ನುವುದರ ಮೂಲಕ ದಂತಿದುರ್ಗನು ಯಾದವ ಸಾತ್ಯಕೀ ವಂಶದವನೆನ್ನುತ್ತದೆ. ಹಲಾಯುಧ ಕವಿಯ "ಕವಿರಹಸ್ಯ" ಕೃತಿಯೂ ಕೂಡ ರಾಷ್ಟ್ರಕೂಟರು ಯಾದವ ಸಾತ್ಯಕೀ ವಂಶದವರೆಂದು ಉಲ್ಲೇಖಿಸುತ್ತದೆ. ಮೂರನೆಯ ಗೋವಿಂದರಾಜನ ರಾಧಾನಪುರದ ಶಾಸನವು (E.I. vol VI, p239 ಕ್ರಿ.ಶ. ೮೦೮) "ಯಸ್ಮಿನ್ ಸರ್ವಗುಣಾಶ್ರಯೇ ದಿತಿಪತೌ ಶ್ರೀ ರಾಷ್ಟ್ರಕೂಟಾನ್ವಯೋ । ಜಾತೇ ಯಾದವ ವಂಶವನ್ಮಧುರೀಪಾವಾಸೀದಲಂದ್ಯಃ ಪರೈಃ" ಎಂದರೆ ಯಾದವ ವಂಶವು ಶ್ರೀಕೃಷ್ಣನ

ಹುಟ್ಟಿನಿಂದ ಹೇಗೆ ಶ್ರೇಷ್ಠವಾಯಿತೋ, ಹಾಗೆಯೇ ರಾಷ್ಟ್ರಕೂಟ ವಂಶವು ಶ್ರೇಷ್ಠವಾಯಿತು ಎನ್ನುತ್ತದೆ.

"ರಾಷ್ಟ್ರಕೂಟರು ಯದುವಂಶದ ಸಾತ್ಯಕೀ ಶಾಖೆಯವರೆಂದು ಹೇಳಿಕೊಂಡಿದ್ದಾರೆ. ರಟ್ಟನೆಂಬ ಮೂಲಪುರುಷನಿಗೆ ರಾಷ್ಟ್ರಕೂಟನೆಂಬ ಮಗನಿದ್ದ" ಎಂದು ವರ್ಧಾ ಶಾಸನದಲ್ಲಿ ಬರೆದಿದೆ. "ಮೌರ್ಯ ಅಶೋಕನ ಕಾಲದಿಂದ ಮಹಾರಾಷ್ಟ್ರದಲ್ಲಿ ವಾಸಮಾಡಿಕೊಂಡಿದ್ದ ರಟ್ಟರೆಂಬ ಕ್ಷತ್ರಿಯರ ಮುಖ್ಯ ಶಾಖೆಯೇ ರಾಷ್ಟ್ರಕೂಟ ಮನೆತನವಾಗಿರಬಹುದು. ಐಹೊಳೆಯ ರವಿಕೀರ್ತಿಯ ಶಾಸನದಲ್ಲಿ (EI., vol XI, pp 5 ff) ಹೇಳಿರುವ ಗೋವಿಂದನು, ಈ ರಾಷ್ಟ್ರಕೂಟ ಮನೆತನದ ಅರಸನಾಗಿದ್ದನು" ಎಂದು ಡಾ. ಭಂಡಾರ್ಕರ್ ಅವರು ಹೇಳಿದ್ದಾರೆ (ರಾಷ್ಟ್ರಕೂಟ ಸಮ್ರಾಜ್ಯ ಸಂ.೨, ಭಾಗ-೧, ಪು,೨ ದೇಶಪಾಂಡೆ ರಾ.ಹ.) ರಾಷ್ಟ್ರಕೂಟರು ಯದುಕುಲದ ಸಾತ್ಯಕೀ ವಂಶದವರೆಂದು ಕರೆದುಕೊಳ್ಳುವುದು, ಆಳಲು ಪ್ರಾರಂಭಿಸಿದ ೧೫೭ ವರ್ಷಗಳ ನಂತರವಾಗಿದ್ದು, ಇದೊಂದು ಕಟ್ಟುಕಥೆ ಎಂದಿದ್ದಾರೆ ಫ್ಲೀಟರು.

ಕ್ರಿ.ಶ. ೯೪೦ ರ ಶಾಸನವೊಂದು ಮೂರನೆಯ ಕೃಷ್ಣನದಾಗಿದ್ದು, ಇದರಲ್ಲಿ "ತದ್ವಂಶಜಾ ಜಗತಿ ಸಾತ್ಯಕಿವಗ್ಗಭಾಜಃ" ಎನ್ನುತ್ತದೆ. ಇದರಲ್ಲಿ ರಾಷ್ಟ್ರಕೂಟರು ಚಂದ್ರವಂಶಕ್ಕೆ ಸೇರಿದವರು, ಗೌತಮ ಗೋತ್ರದವರು ಎಂದು ಹೇಳಲಾಗಿದೆ. ಇದರಿಂದ ರಾಷ್ಟ್ರಕೂಟರು ತಾವು ಯದುವಿನಿಂದ ಹುಟ್ಟಿದವರೆಂದು ಹೇಳಿಕೊಳ್ಳುತ್ತಾರೆಂದು ತಿಳಿದು ಬಂದಿದೆ. ಇನ್ನೊಂದು ಶಾಸನದ ಪ್ರಕಾರ ಇವರು ಸಾತ್ಯಕೀಶಾಖೆಯ ಯದು ವಂಶಕ್ಕೆ ಸೇರಿದವರೆಂದು ತಿಳಿದುಬರುತ್ತದೆ. ಜೊತೆಗೆ ತಮ್ಮನ್ನು ಲಟ್ಟಲೂರುಪುರವರಾಧೀಶ್ವರರೆಂದು ಕರೆದುಕೊಂಡಿದ್ದಾರೆ.

ರಾಷ್ಟ್ರಕೂಟರ ಮುಂದುವರಿದ ವಂಶ ಎಂದು ಹೇಳಿಕೊಳ್ಳುವ ಗಹಡವಾಲರು ಅಥವಾ ರಾಥೋಡರು ಸೂರ್ಯವಂಶದವರು ಮತ್ತು ಕಾಶ್ಯಪ ಗೋತ್ರದವರು. ಇವರು ತಮ್ಮನ್ನು ಎಲ್ಲಿಯೂ ರಟ್ಟರು, ರಾಷ್ಟ್ರಕೂಟರು ಎಂದು ಹೇಳಿಕೊಳ್ಳುವುದಿಲ್ಲ. ಗಹಡವಾಲರು ಎಂದೇ ಗುರುತಿಸಿಕೊಳ್ಳುತ್ತಾರೆ. ಪರಮಾರರಿಗೆ ಸೇರಿದ ಅತ್ಯಂತ ಪ್ರಾಚೀನ ಶಾಸನವು ಹರ್ಸೋಲಾ ದಾನ ಶಾಸನವಾಗಿದೆ. ಇದರಲ್ಲಿ ಪರಮಾರ ವಂಶದ

ರಾಜರು ದಖನ್ನಿನ ರಾಷ್ಟ್ರಕೂಟರ ವಂಶದಲ್ಲಿ ಹುಟ್ಟಿದವರು ಎಂದಿದೆ. ಇವರ ಕಾಲ ಪದ್ಮಗುಪ್ತನಿಗಿಂತ ಅರ್ಧ ಶತಮಾನದಷ್ಟು ಹಿಂದೆ.

ಶಕ ಸಂವತ್ ೬೭೫ (ಕ್ರಿ.ಶ.೭೫೩) ರ ದಂತಿದುರ್ಗನ ಸಾಮನ್‌ಗಡ ಶಾಸನ ಮತ್ತು ಅಚಲಾಪುರದ ನನ್ನರಾಜನ ಮುಲ್ತಾಯಿ ಶಾಸನವು (ಕ್ರಿ.ಶ. ೭೦೯) ರಾಷ್ಟ್ರಕೂಟ ವಂಶವನ್ನು ಹೆಸರಿಸುತ್ತದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ರಟ್ಟ ಎಂಬ ಶಬ್ದವು ಬಳಕೆಯಲ್ಲಿತ್ತು. ಅದೇರೀತಿ ೧ ನೆಯ ಅಮೋಘವರ್ಷನ ಶಿರೂರು ಶಾಸನದಲ್ಲಿ ರಟ್ಟ ಎನ್ನುವ ಶಬ್ದವನ್ನು ಉಪಯೋಗಿಸಲಾಗಿದೆ (ರಟ್ಟ ವಂಶೋದ್ಭವ). ಮೂರನೆಯ ಇಂದ್ರನ ನವಸಾರಿ ಶಾಸನವು (BG. Vol I, Part II, P 415, 915 AD), ಅಮೋಘವರ್ಷನು ರಟ್ಟವಂಶದ ಗೌರವವನ್ನು ಹೆಚ್ಚಿಸಿದನು ಎನ್ನುತ್ತದೆ (JBBRAS, Vol XVIII, P 249-251). ಈ ಶಾಸನದಲ್ಲಿ ರಾಷ್ಟ್ರಕೂಟರು ಸೋಮವಂಶದ ಯದುಕುಲದ ಸಾತ್ಯಕೀ ಶಾಖೆಯವರೆಂದು ತಿಳಿದು ಬರುತ್ತದೆ. "ಆ ಕಾಲದಲ್ಲಿ ದಕ್ಷಿಣದ ಎಲ್ಲ ರಾಜ ವಂಶಗಳಿಗೆ ತಮ್ಮ ಮೂಲವನ್ನು ಪುರಾಣಪುರುಷರೊಡನೆ ಸೇರಿಸಿಕೊಳ್ಳುವ ಹುಚ್ಚು ಹಿಡಿದಿತ್ತು" ಎಂದು ಲೂಯಿ ರೈಸರು ಅಭಿಪ್ರಾಯ ಪಟ್ಟಿದ್ದಾರೆ (ಕರ್ನಾಟಕ ಸಾಮ್ರಾಜ್ಯ ಸಂ-೨, ಭಾಗ-೧, ಪು,೩ ದೇಶಪಾಂಡೆ ರಾ.ಹ.). ಕ್ರಿ.ಶ. ೯೩೦ ರ ಧಿಯೋಲಿ ತಾಮ್ರಪಟವು ರಟ್ಟ ಎಂಬುವವನು ವಂಶದ ಮೂಲಪುರುಷನೆಂದು ತಿಳಿಸುತ್ತದೆ. ರಾಷ್ಟ್ರಕೂಟನು ರಟ್ಟನ ಮಗ, ಅವನಿಂದಾಗಿ ಈ ವಂಶಕ್ಕೆ ರಾಷ್ಟ್ರಕೂಟರೆಂಬ ಹೆಸರು ಬಂತು ಎಂದು ವಿದ್ವಾಂಸರು ಹೇಳಿದ್ದಾರೆ. ಇದೊಂದು ಕಲ್ಪನೆ ಎನ್ನಬಹುದೇ ಹೊರತು, ಬೇರೆ ಯಾವ ಆಧಾರಗಳನ್ನು ಕೊಡುವುದು ಸಾಧ್ಯವಿಲ್ಲ.

## ರಾಜಲಾಂಛನಗಳು

ರಾಜಮುದ್ರೆಯು ಅಧಿಕೃತವಾದ ಲಾಂಛನವಾಗಿದೆ. ಲಕ್ಷ್ಮಿಯನ್ನು ರಾಜಮುದ್ರೆ ಅಥವಾ ರಾಜಲಾಂಛನವಾಗಿ ಅಮೋಘವರ್ಷನ ಜಾವಖೇಡ ತಾಮ್ರಪಟಗಳಲ್ಲಿ ಬಳಸಲಾಗಿದೆ. ಲಾಂಛನಗಳು ಒಂದು ವಂಶದ ಶ್ರೇಷ್ಠತೆಯನ್ನು ಎತ್ತಿ ಹಿಡಿಯುತ್ತದೆ. ಇವು ಯಾವುದೇ ಕಾಲದಲ್ಲಿರಬಹುದು, ಆದರೆ ಸಮಾಜದಲ್ಲಿ ತಮ್ಮ ಛಾಪನ್ನು ಮೂಡಿಸಿರುತ್ತದೆ. ಆಧುನಿಕ ಪ್ರಪಂಚದಲ್ಲಿ ಕೂಡ ಲಾಂಛನಗಳನ್ನು ಬಳಸುವುದು ಸರ್ವೇಸಾಮಾನ್ಯ. ಇತಿಹಾಸದಲ್ಲಿ ದೊರಕುವ ಎಲ್ಲ ರಾಜವಂಶಗಳಿಗೂ ಒಂದೊಂದು

ಲಾಂಛನವಿದೆ. ಲಾಂಛನಗಳಿಂದಲೇ ವಂಶವನ್ನು ಗುರುತಿಸಬಹುದು. ಇದರ ಆಯ್ಕೆ ಅವರವರಿಗೇ ಸೇರಿದ್ದು. ತಾವೆಷ್ಟು ಬಲಿಷ್ಠರು, ಶೂರರು ಎಂದು ಗುರುತಿಸಿಕೊಳ್ಳುವವರು ಕೆಲವರಾದರೆ, ತಮ್ಮ ಕುಲಕಸುಬನ್ನು ಲಾಂಛನಕ್ಕೆ ಬಳಸಿರುವವರು ಕೆಲವರು. ಬಹುಶಃ ರಾಷ್ಟ್ರಕೂಟರು ಬಳಸುವ ನೇಗಿಲು ಇದನ್ನೇ ಪ್ರತಿನಿಧಿಸುವುದೇನೋ? ಲಾಂಛನಗಳಲ್ಲಿ ಆನೆ, ಸಿಂಹ, ಗರುಡ, ಗಂಡಭೇರುಂಡ, ಹುಲಿಯನ್ನು ಕೊಲ್ಲುತ್ತಿರುವ ವೀರ ಮುಂತಾದವುಗಳನ್ನು ಕಾಣಬಹುದು. ಅದೇ ರೀತಿ ರಾಷ್ಟ್ರಕೂಟರು ಗರುಡ ಲಾಂಛನರು. ಆಗಾಗ ನೇಗಿಲನ್ನು ಕೂಡ ಲಾಂಛನವಾಗಿ ಬಳಸಿಕೊಂಡಿದ್ದಾರೆ. ರಾಷ್ಟ್ರಕೂಟರ ಅನೇಕ ಶಾಖೆಗಳಿದ್ದು, ಇವರಲ್ಲಿ ಎಲ್ಲರು ಗರುಡ ಲಾಂಛನರಲ್ಲ- ಸಿಂಹ, ಲಕ್ಷ್ಮೀ, ಶಿವ, ಆನೆ, ಮುಂತಾದ ಬೇರೆ ಬೇರೆ ಲಾಂಛನಗಳನ್ನು ಕಾಣಬಹುದು.

ಮಾನಪುರದ ರಾಷ್ಟ್ರಕೂಟರ ದೊರೆ ಅಭಿಮನ್ಯುವಿನ ಶಾಸನದಲ್ಲಿ ಸಿಂಹ ಲಾಂಛನವಿದೆ. ಅಚಲಾಪುರದ ರಾಷ್ಟ್ರಕೂಟರು ಗರುಡ ಲಾಂಛನವನ್ನು ಹೊಂದಿದ್ದರು. ಮಳಖೇಡದ ರಾಷ್ಟ್ರಕೂಟರು, ಓಢ್ರದ ರಾಷ್ಟ್ರಕೂಟರು, ಗರುಡ ಲಾಂಛನರು. ಸೌಂದತ್ತಿಯ ಎರೆಗ ಅಥವಾ ಯೆರೆಯೆಮ್ಮರಸನಿಗೆ 'ಸಿಂಘಣ ಗರುಡ' ಎಂಬ ಬಿರುದಿದೆ. ಪಠಾರಿ ರಾಷ್ಟ್ರಕೂಟರು ಆನೆಯನ್ನು ಲಾಂಛನವನ್ನಾಗಿ ಇಟ್ಟುಕೊಂಡಿದ್ದರು. ದಂತಿವರ್ಮನ (ಇಮ್ಮಡಿ ದಂತಿದುರ್ಗ) ಶಕ ೬೭೫ರ (ಕ್ರಿ.ಶ.೭೫೩) ತಾಮ್ರಪಟದಲ್ಲಿ ಶಿವನ ಪ್ರತಿಮೆಯಿದೆ. ಕೃಷ್ಣರಾಜನ ನಾಣ್ಯಗಳ ಮೇಲೆ ಶಿವಲಿಂಗದ ಪ್ರತಿಮೆಯಿದೆ. ನಂತರ ಸಿಗುವ ತಾಮ್ರಪಟಗಳಲ್ಲಿ ಕೆಲವದರ ಮೇಲೆ ಗರುಡ, ಮತ್ತೆ ಕೆಲವದರ ಮೇಲೆ ಶಿವನ ಪ್ರತಿಮೆಯಿದೆ. ಅದೇ ರೀತಿ ಬೇರೆ ವಂಶಗಳ ಬಗ್ಗೆ ಹೇಳುವುದಾದರೆ, ಸೋಮವಂಶಿಗಳು ಗರುಡ ಲಾಂಛನರಾಗಿದ್ದರು. ನಂತರ ನಂದಿ ಲಾಂಛನದವರಾಗುತ್ತಾರೆ. ಕಲಚುರಿಗಳು ನಂದಿ ಲಾಂಛನದವರು.

## ರಾಜ ಚಿನ್ಹೆಗಳು

ರಾಷ್ಟ್ರಕೂಟರು ಗಂಗಾ-ಯಮುನಾ ಚಿನ್ಹೆಗಳನ್ನು ಹೊಂದಿದ್ದರು. ಈ ಚಿನ್ಹೆಗಳನ್ನು ರಾಷ್ಟ್ರಕೂಟ ಅರಸನು ಉತ್ತರದ ದೊರೆಯನ್ನು ಗೆದ್ದಾಗ ವಿಜಯದ ದ್ಯೋತಕವಾಗಿ ತೆಗೆದುಕೊಂಡು ಬರುತ್ತಾನೆ. ಗಂಗಾ-ಯಮುನೆಯರ ಶಿಲ್ಪಗಳನ್ನು ಕೂಡ ಎಲ್ಲೋರದಲ್ಲಿ ಕಾಣಬಹುದು. ನೇಗಿಲು ರಾಷ್ಟ್ರಕೂಟರ ಚಿನ್ಹೆಯಾಗಿತ್ತು ಅಥವಾ

ಲಾಂಛನವಾಗಿತ್ತು. ಇದನ್ನು ಸಾಮಾನ್ಯವಾಗಿ ಅವರ ಶಾಸನಗಳ ಮೇಲೆ ನೋಡಬಹುದು. ಗರುಡ ಕೂಡ ಚಿನ್ಹೆಯಾಗಿ ಬಳಕೆಯಾಗಿರುವುದು ಕಂಡುಬರುತ್ತದೆ.

ಚಿನ್ಹೆ ಎಂದರೇನು ಎಂಬ ಪ್ರಶ್ನೆಗೆ ರಾಜವಂಶದವರು ತಮ್ಮನ್ನು ಗುರುತಿಸಿಕೊಳ್ಳುವ ಸಲುವಾಗಿ ಇಟ್ಟುಕೊಳ್ಳುತ್ತಿದ್ದ ಗುರುತು. ಧ್ವಜ, ಲಾಂಛನ, ಮುದ್ರೆಗಳಂತೆ ಚಿನ್ಹೆಗಳು ಕೂಡ ಪ್ರತಿಷ್ಠೆಯ ಅಂಗವಾಗಿಯೇ ಬಳಕೆಯಾಗುತ್ತಿದ್ದವು ಎನ್ನಬಹುದು. ಅಧಿಕಾರ ವಹಿಸಿಕೊಂಡವರು ಆಡಳಿತ ಸೂತ್ರವನ್ನು, ಒಡೆತನವನ್ನು ಸಕಲ ಮರ್ಯಾದೆಗಳೊದಿಗೆ ಕೈಗೆತ್ತಿಕೊಂಡರೆಂದು ಗ್ರಹಿಸುವುದು ಉತ್ತಮ ಎನ್ನಬಹುದು.

## ಧ್ವಜ

ರಾಷ್ಟ್ರಕೂಟರು ಪಾಳಿ ಧ್ವಜವನ್ನು ಹೊಂದಿದ್ದರು. ಪಾಲಿಧ್ವಜ ಅಥವಾ ಪಾಳಿಧ್ವಜವೆಂದು ಇದನ್ನು ಕರೆದಿದ್ದಾರೆ. ಪಾಳಿ ಎಂದರೆ ಸರತಿ, ಸಾಲು, ಡೇಗೆ, ಹದ್ದು ಎಂಬುದಾಗಿ ಅರ್ಥಗಳನ್ನು ಹೇಳಬಹುದಾಗಿದೆ. ಪಾಳಿಧ್ವಜದಲ್ಲಿ ನಾಲ್ಕು ದಿಕ್ಕಿನಲ್ಲಿಯು ಹತ್ತು ರೀತಿಯ ನೂರ ಎಂಟು ಧ್ವಜಗಳು ಇರುತ್ತವೆ. ಅಂದರೆ ೧೦೮ X ೪ X ೧೦ = ೪೩೨೦ ಸಣ್ಣಸಣ್ಣ ಧ್ವಜಗಳಿರುತ್ತವೆ.

ಆದಿಪುರಾಣದಲ್ಲಿ ಹತ್ತು ರೀತಿಯ ಧ್ವಜಗಳನ್ನು ಹೇಳಿದ್ದಾರೆ. ಹಾರ, ದಂಡೆ, ವಸ್ತ್ರ, ನವಿಲು, ಕಮಲ, ರಾಜಹಂಸ, ಗರುಡಪಕ್ಷಿ, ಅರ್ಧಪಕ್ಷಿಯಂತಿರುವ ದೇವತೆ, ಸಿಂಹ, ಗೂಳಿ, ಆನೆ, ಗುರಿಗೆ ಒಗೆಯುವ ಉಂಗುರ, ಕಬ್ಬಿಣದಬಳೆ. ಈ ಹತ್ತರಲ್ಲಿ ರಾಷ್ಟ್ರಕೂಟರ ಧ್ವಜವು ವಸ್ತ್ರದಿಂದ ಮಾಡಿದುದಾಗಿದೆ. ಈ ಧ್ವಜವು ಮೊದಲು ಬಾದಾಮಿ ಚಲುಕ್ಯರದಾಗಿತ್ತು ಎಂಬ ವಿಚಾರವು ತಿಳಿದು ಬರುತ್ತದೆ. ಇದರಿಂದ ಆದಿಪುರಾಣದ ರಚನೆಯ ಕಾಲಕ್ಕಾಗಲೇ ಹತ್ತು ಧ್ವಜಗಳಿದ್ದವೆಂದು ತಿಳಿದು ಬರುತ್ತದೆ.

ರಾಷ್ಟ್ರಕೂಟರ ಶಾಸನಗಳಲ್ಲಿ ಇವುಗಳ ಉಲ್ಲೇಖವಿದೆ. ಓಢ್ರದ ರಾಷ್ಟ್ರಕೂಟ ರಾಣಕ ಪರಚಕ್ರಶಲ್ಯನ ಶಾಸನವು (EI., Vol XXX, P 135) “ಗರುಡ ದರ್ಪಣ ಧ್ವಜ” ವನ್ನು ಉಲ್ಲೇಖಿಸಿದೆ. ಒಂದನೆಯ ಅಮೋಘವರ್ಷನ ಸಿರೂರಿನ ಶಾಸನದಲ್ಲಿ (IA., Vol XII, P 216, 866-67 AD) "ಶ್ವೇತಾತಪತ್ರತ್ರಯ ಕಹಳ ಶಂಖ ಪಾಳಿಧ್ವಜೋ (ಚೌ) ಕಕೇತು ಪತಾಕಾಚ್ಛಾಧಿತ ದಿಗಂತರೆಲ್ಲಂ" ಎಂದು ಉಲ್ಲೇಖಿಸಿದೆ. ಇದೇ ಅರಸನ

ನೀಲಗುಂದ ಶಾಸನದಲ್ಲಿ (EI., Vol VI, P 98, 866 AD) "ಢಕ್ಕಾ ಪಾಳಿಮಹಾಧ್ವಜ ನಿತ್ಯ ಶ್ರೀಯಮೋಘವರ್ಷದೇವಸ್ಯ" ಎಂಬ ಉಲ್ಲೇಖವಿದೆ. ಇದೇ ಅರಸನ ಸೊರಟೂರು ಶಾಸನದಲ್ಲಿ (SII, Vol XI, Part I, No.12, 867 AD) "[ಪಡೆ] ಢಕ್ಕಾ ಪಾಳಿಮಹಾಧ್ವಜ"ದ ಉಲ್ಲೇಖವಿದೆ. ಪಂಪಭಾರತದಲ್ಲಿ ಇದರ ಬಗ್ಗೆ ಎರಡು ಉಲ್ಲೇಖವಿದೆ. "ಮುಂದೆ ಪರಿವ ಧವಳಚ್ಛತ್ರಚಾಮರಂಗಳುಂ ಮಿಳಿರ್ವ ಪಾಳಿ ಕೇತನಂಗಳುಂ" (ಪಂಪಭಾರತ ೧೦-೨೭) "ಪಸರಿಸಿ ಬಂದ ಮಾಮರನೆ ಬೆಳ್ಗೊಡೆ ರಾಗದ ಪುಂಜದನ್ನವಪ್ಪುಸುಗೆಯ ನೀಳ್ದ ಕೆಂದಳಿರೆ ಪಾಳಿ ಮಹಾಧ್ವಜಂ" (೧೪.೧೩).

## ವಾದ್ಯ

ರಾಜವಂಶಗಳು ತಮ್ಮನ್ನು ಗೌರವಿಸಿಕೊಳ್ಳಲು ಪಂಚಮಹಾವಾದ್ಯಗಳನ್ನು ಬಳಸುತ್ತಿದ್ದರು. ಹಾಗೆಯೇ ರಾಜವಾದ್ಯಗಳೂ ಇರುತ್ತಿದ್ದವು. ಇನ್ನು ದೇವಾಲಯಗಳಲ್ಲಿ ದೇವರಿಗೆ ಗೌರವ ಸಲ್ಲಿಸಲು, ದೇವರನ್ನು ಸಂತೋಷಪಡಿಸಲು ಸಂಗೀತ, ನೃತ್ಯಗಳ ಜೊತೆಗೆ ವಾದ್ಯಸೇವೆಗಳನ್ನು ಸಲ್ಲಿಸುತ್ತಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ. ರಾಷ್ಟ್ರಕೂಟರು ತಿವಳಿ, ತಿವಳ ಎಂಬ ಹೆಸರಿನ ವಾದ್ಯವನ್ನು ರಾಜವಾದ್ಯವೆಂದು ಕರೆದುಕೊಂಡಿದ್ದಾರೆ. ಪಂಚಮಹಾವಾದ್ಯಗಳು ಕೂಡ ಇವರಿಗಿತ್ತು. ಸಾಮಾನ್ಯವಾಗಿ ರಾಷ್ಟ್ರಕೂಟರ ಶಾಸನಗಳಲ್ಲಿ ತಿವಳಿ, ಪಱೆ ಮತ್ತು ಢಕ್ಕೆಗಳ ಉಲ್ಲೇಖವಿರುತ್ತದೆ. ಪಂಚಮಹಾವಾದ್ಯಗಳ ಗೌರವವು ಸಾಮ್ರಾಟರಿಗೆ, ಮಹಾಮಂಡಲೇಶ್ವರರಿಗೆ, ಮಹಾಸಾಮಂತರಿಗೆ, ಸಾಮಂತರಿಗೆ ಮೀಸಲಾಗಿತ್ತು. ಪಂಚಮಹಾವಾದ್ಯಗಳಲ್ಲಿ ತಿವಳಿ, ಶಂಖ, ಭೇರಿ, ಜಯಘಂಟೆ, ಕಹಳೆಗಳು ಸೇರಿರುತ್ತವೆ. ಪಡೆಢಕ್ಕೆ, ತಿವಳಿ ಎಂದು ಕೆಲವು ಶಾಸನಗಳು ಉಲ್ಲೇಖಿಸಿವೆ. ಎಲ್ಲೋರದ ತಾಮ್ರಪಟದಲ್ಲಿ (EI., Vol XXV, P 125, 741 AD) ದಂತಿದುರ್ಗನು ಪಂಚಮಹಾಶಬ್ದಗಳಿಂದ ಗೌರವಿತನಾಗಿದ್ದನೆಂದು ತಿಳಿದುಬರುತ್ತದೆ.

ಭಂಢ ಶಾಸನವು ಓಢ್ರದ ರಾಷ್ಟ್ರಕೂಟ ದೊರೆ ರಾಣಕ ಪರಚಕ್ರಶಲ್ಯನದಾಗಿದ್ದು (EI., Vol XXX, P 135) ಇದರಲ್ಲಿ ಪಂಚಮಹಾವಾದ್ಯಗಳ ಉಲ್ಲೇಖವಿದೆ. ಇದನ್ನು "ಕನಕಡಮರು ತ್ರಿವಳಿ ರವೋತ್ಸಾಸೀತಾರಾತಿಚಕ್ರ" ಎಂದು ವಿವರಿಸಿದ್ದಾರೆ. ಡಿ.ಸಿ.ಸರ್ಕಾರರು ಇದನ್ನು ಕನಕ - ಡಮರು - ತ್ರಿವಳಿ - ರವೋತ್ಸಾಸೀತ್ - ಆರಾತಿ

ಚಕ್ರ ಎಂದು ಬಿಡಿಸಿದ್ದಾರೆ. ಪಂಚಮಹಾವಾದ್ಯಗಳನ್ನು ಹೇಳುವಾಗ ಕನಕ, ಡಮರು, ತ್ರಿವಳಿ, ತೂರ್ಯಗಳನ್ನು ಹೆಸರಿಸಿದ್ದಾರೆ.

ಶಿಲ್ಪಗಳಲ್ಲಿ ಬರುವ ವಾದ್ಯಗಳ ಬಗ್ಗೆ ಹೇಳುವುದಾದರೆ, ಎಲ್ಲೋರದ ಗುಹೆಯಲ್ಲಿರುವ ಮಹಾಯೋಗಿಯ ಶಿಲ್ಪದ ಸುತ್ತಮುತ್ತ ಇರುವ ಗಣಗಳು ವಾದ್ಯಗಳನ್ನು ನುಡಿಸುತ್ತಿರುವಂತೆ ಬಿಡಿಸಲಾಗಿದೆ. ಇವಿಷ್ಟೇ ಅಲ್ಲದೇ ಇನ್ನೂ ಅನೇಕ ರಾಷ್ಟ್ರಕೂಟ ದೇವಾಲಯಗಳ ಭಿತ್ತಿಗಳ ಮೇಲೆ ಅನೇಕ ವಾದ್ಯಗಳ ಶಿಲ್ಪಗಳನ್ನು ನೋಡಬಹುದಾಗಿದೆ.

**ವಂಶಾವಳಿ**

ರಾಷ್ಟ್ರಕೂಟರ ವಂಶಾವಳಿಯ ಬಗ್ಗೆ ಹೇಳುವುದಕ್ಕೆ ಮೊದಲು ಒಂದೆರಡು ವಿಷಯಗಳನ್ನು ಅವಶ್ಯಕವಾಗಿ ಗಮನಿಸಬೇಕಾಗಿದೆ. ಮಳಖೇಡದ ರಾಷ್ಟ್ರಕೂಟರ ವಂಶಾವಳಿಯ ಬಗ್ಗೆ ಹೇಳುವಾಗ ಎಲ್ಲ ವಿದ್ವಾಂಸರಲ್ಲೂ ಕಾಲದ ಬಗ್ಗೆ ಒಮ್ಮತವಿಲ್ಲ. ಕೆಲವು ಅರಸರ ಕಾಲಗಳಲ್ಲಿ ೭–೮ ವರ್ಷಗಳಷ್ಟು ಅಂತರವನ್ನು ನೀಡಿರುವುದು ಕಂಡುಬರುತ್ತದೆ. ಕೆಲವು ಅರಸರ ಆಳ್ವಿಕೆಯ ಕಾಲದ ಬಗ್ಗೆ ಹೆಚ್ಚಿನ ಚರ್ಚೆಯೇನೂ ಕಂಡುಬರುವುದಿಲ್ಲ. ಆದರೆ ಕೆಲವು ಅರಸರು ಆಳ್ವಿಕೆ ನಡಸಿಯೇ ಇಲ್ಲವೆಂದು ಭಾವಿಸಿರುವುದೂ ಉಂಟು. ಉದಾಹರಣೆಗೆ ಎರಡನೆಯ ಜಗತ್ತುಂಗನನ್ನು ಹೆಸರಿಸಿ ಮುಂದುವರೆಯುತ್ತಾರೆ. ಆದರೆ ಈತ ತನ್ನ ತಂದೆಯ ಕಾಲದಲ್ಲಿ ಸುಮಾರು ಇಪತ್ತೆರಡು ವರ್ಷಗಳ ಕಾಲ ರಾಜ್ಯಭಾರ ಮಾಡಿರಬಹುದೆಂದು ಶಾಸನಗಳಲ್ಲಿ ಬರುವ ಮಾಹಿತಿಗಳನಾಧರಿಸಿ ಹೇಳಬಹುದಾಗಿದೆ. ಅದೇ ರೀತಿ ಉಳಿದ ವಂಶಾವಳಿಗಳನ್ನು ಕಾಲಾನುಕ್ರಮದಲ್ಲಿ ಸೀಡಲಾಗಿದೆ. ಇಲ್ಲಿ ಕೊಟ್ಟಿರುವ ವಂಶಾವಳಿಗಳು ಶಾಸನಾಧಾರಿತವಾಗಿದೆ.

## ವಂಶಾವಳಿಗಳು

### ಮಾನಪುರದ ರಾಷ್ಟ್ರಕೂಟರು




### ಅಚಲಾಪುರದ ರಾಷ್ಟ್ರಕೂಟರು



## ಮಳಖೇಡದ ರಾಷ್ಟ್ರಕೂಟರು (ಇಸವಿಗಳು ಕ್ರಿ.ಶ. ದಲ್ಲಿವೆ)

| | ಪಿ.ಬಿ.ದೇಸಾಯಿ | ದೇಶಪಾಂಡೆರಾಹ | ಅಲ್ಟೇಕರ್ | ಪಂಡಿತ್‌ರೇವು | ಕುಲಕರ್ಣಿ |
|---|---|---|---|---|---|
| | ಡಾ॥ ಫ್ಲೀಟ್ | ಜಯಶ್ರೀಮಿಶ್ರ | ಭಾ.ವಿ.ಭವನ್ | ಗೆಜೆಟಿಯರ್ | ಷೇಕ್ ಅಲಿ |
| ದಂತಿವರ್ಮನ್ | ದಂತಿವರ್ಮ | ಹೆಸರಿಸುತ್ತಾರೆ I | ಸು. ೬೫೦–೬೭೦ | ದಂತಿವರ್ಮನ್ I | ದಂತಿವರ್ಮ |
| | ದಂತಿವರ್ಮ I | ಹೆಸರಿಸುತ್ತಾರೆ | – | ” | ದಂತಿವರ್ಮI |
| ಇಂದ್ರ I | ” | ” | ಪೃಚ್ಛಕರಾಜ ಸು. ೬೭೦–೬೯೦ | ಇಂದ್ರರಾಜ I | ” |
| | ” | ” | – | ” | ” |
| ಗೋವಿಂದ I | ” | ” | ಗೋವಿಂದರಾಜ ಸು. ೬೯೦–೭೧೦ | ಗೋವಿಂದರಾಜ I | ” |
| | ” | ” | – | ” | ” |
| ಕರ್ಕ I | ” | ” | ಸು. ೭೧೦–೭೩೦ | ಕರ್ಕರಾಜ I | ” |
| | ” | ” | ಹೆಸರಿಸುತ್ತಾರೆ | ” | ಕಕ್ಕ I |
| ಇಂದ್ರ II | ” | ” | ಇಂದ್ರ I ಸು. ೭೩೦–೭೪೫ | ಇಂದ್ರುಸಾಜ II | ” |
| | ” | ” | ” | ” | ” |
| ದಂತಿದುರ್ಗ | ೭೩೫–೭೫೬ | ದಂತಿವರ್ಮ II | ಸು. ೭೪೫–೭೫೬ | ದಂತಿವರ್ಮನ್II ೭೫೩ | ೭೩೫–೭೫೬ |
| | ” | ೭೩೫–೭೫೬ | ” | ೭೫೩–೭೫೬ | ೭೫೪ |
| ಕೃಷ್ಣ I | ೭೫೬–೭೭೪ | ” | ಸು. ೭೫೬–೭೭೫ | ಕೃಷ್ಣರಾಜ I ೭೬೮(೭೭೦)–೭೭೨ | ೭೫೬–೭೭೪ |
| | ” | ೭೫೬–೭೭೪ | ” | ೭೫೬–೭೭೪ | ೭೬೮–೭೭೨ |
| ಗೋವಿಂದ II | ೭೭೪–೭೮೦ | ” | – | ಗೋವಿಂದರಾಜII ೭೭೦–೭೮೩ | ೭೭೪–೭೮೦ |
| | ” | ೭೭೪–೭೮೦ | ” | ” | ” |
| ಧ್ರುವ | ೭೮೦–೭೯೨ | ” | – | ೭೭೫–೭೯೩ | ೭೮೦–೭೯೨ |
| | ” | ೭೮೦–೭೯೩ | ” | ೭೮೦–೭೯೩ | ” |
| ಕರ್ಕ II | ” | – | – | – | – |
| | – | ” | ” | ” | – |
| ಸ್ತಂಭ | ” | – | – | – | – |
| | – | ” | ” | ” | ” |
| ಗೋವಿಂದ III | ೭೯೧–೮೧೪ | ೭೮೪–೮೧೫ | – | ೭೭೪–೮೧೩ | ೭೯೨–೮೧೪ |
| | ೭೮೪–೮೧೫ | ೭೭೯–೮೧೪ | ” | ೭೯೩–೮೧೪ | ೭೯೩–೮೧೪ |
| ಇಂದ್ರ III | ” | ” | – | – | ” |
| | ” | ” | ” | ” | ” (ಲಾಟ) |
| ಅಮೋಘವರ್ಷI | ೮೧೪–೮೭೮ | ೮೧೫–೮೭೮ | ” | ೮೧೬–೮೭೭ | ೮೧೪–೮೭೮ |
| | ೮೧೫–೮೭೮ | ೮೧೪–೮೭೮ | ” | ೮೧೪–೮೭೮ | ೮೧೪–೮೭೭ |

| | ಪಿ.ಬಿ.ದೇಸಾಯಿ | ದೇಶಪಾಂಡೆರಾಹ | ಅಲ್ಟೇಕರ್ | ಪಂಡಿತ್‌ರೇವು | ಕುಲಕರ್ಣಿ |
|---|---|---|---|---|---|
| | ಡಾ॥ ಫ್ಲೀಟ್ | ಜಯಶ್ರೀಮಿಶ್ರ | ಭಾ.ವಿ.ಭವನ್ | ಗೆಜೆಟಿಯರ್ | ಷೇಕ್ ಅಲಿ |
| ಕೃಷ್ಣ II | ೮೭೮-೯೧೪ | ೮೮೮-೯೧೨ | ಕೃಷ್ಣರಾಜ | ೮೭೫-೯೦೦ | ೮೭೮-೯೧೪ |
| | ೮೮೮-೯೧೨ | ೮೭೮-೯೧೪ | ” | ೮೭೮-೯೧೪ | ೮೭೭-೯೧೩ |
| ಜಗತ್ತುಂಗ I | ” | ಜಗತ್ತುಂಗ II | ಜಗತ್ತುಂಗ | ಜಗತ್ತುಂಗ | ” |
| | ಜಗತ್ತುಂಗ II | ” | ಜಗತ್ತುಂಗ | ” | ” |
| ಇಂದ್ರ IV | ೯೧೪-೯೨೯ | ೯೧೫-೯೧೭ | ” | ೯೧೪-೯೩೧ | ೯೧೪-೯೨೯ |
| | ” | ೯೧೪-೯೨೯ | ” | ೯೧೪-೯೨೯ | ೯೧೫-೯೨೭ |
| ಅಮೋಘವರ್ಷIII (ವಡ್ಡಿಗ) | ” | ” | ” | ” (ಬದ್ದಿಗ) | ೯೩೫-೯೩೯ |
| | ” | ೯೩೫-೯೩೯ | ” | ೯೩೫-೯೩೯ | ೯೩೪-೯೩೯ |
| ಅಮೋಘವರ್ಷII | ೯೨೯-೯೩೦ | ” | ” | ” | ೯೨೯-೯೩೦ |
| | ” | ೯೨೯-೯೩೦ | ” | ೯೨೯-೯೩೦ | ” |
| ಗೋವಿಂದ IV | ೯೩೦-೯೩೫ | ೯೧೮-೯೩೩ | ” | ೯೧೮-೯೩೩ | ೯೩೦-೯೩೫ |
| | ೯೧೮-೯೩೩ | ೯೩೦-೯೩೫ | ” | ೯೩೦-೯೩೫ | ೯೧೮-೯೩೪ |
| ಕೃಷ್ಣ III | ೯೩೯-೯೬೭ | ೯೪೦-೯೫೬ | ” | ೯೩೯-೯೬೨ | ೯೩೯-೯೬೭ |
| | ೯೪೦-೯೫೬ | ೯೩೯-೯೬೭ | ” | ” | ” |
| ಜಗತ್ತುಂಗ II | ” | ಇಗತ್ತುಂಗ III | – | – | ” |
| | ಜಗತ್ತುಂಗ III | ” | – | ” | – |
| ಖೊಟ್ಟಿಗ | ೯೬೭-೯೭೨ | ೯೭೧ | ” | ೯೭೧ | ೯೬೭-೯೭೨ |
| | ೯೭೧ | ೯೬೭-೯೭೨ | ” | ೯೬೭-೯೭೨ | ೯೬೮-೯೭೨ |
| ನಿರುಪಮ | ” | ” | – | – | ” |
| | ” | ” | ” | ” | ” |
| ಮಗ (ಹೆಸರು ಗೊತ್ತಿಲ್ಲ) | – | ” | – | – | – |
| | ” | ” | ” | – | ” |
| ಇಂದ್ರ IV | ” | ೯೮೨ | – | ೯೮೨ | ” |
| | ೯೮೨ | ” | ” | ” | ೯೮೨ |
| ಕನ್ನರದೇವ IV | - | – | – | – | – |
| | – | – | – | ” | – |
| ಕರ್ಕ II | ೯೭೨-೯೭೩ | ೯೭೨-೯೭೩ | – | ೯೭೨-೯೭೪ | ೯೭೨-೯೭೩ |
| | ೯೭೨-೯೭೩ | ೯೭೨-೯೭೩ | ” | ೯೭೨-೯೭೩ | ” |

ಭಾ.ವಿ.ಭವನ್ – ಭಾರತೀಯ ವಿದ್ಯಾಭವನ

ಇಲ್ಲಿ ಪ್ರಮುಖ ವಿದ್ವಾಂಸರು ಹೇಳಿರುವ ವಂಶಾವಳಿಯನ್ನು ಮಾತ್ರ ನೀಡಲಾಗಿದೆ.

## ಗುಜರಾತಿನ ರಾಷ್ಟ್ರಕೂಟರು

**ಶಾಖೆ I**




**ಶಾಖೆ II**




## ಪಠಾರಿ ರಾಷ್ಟ್ರಕೂಟರು

ಪರಬಲ
(ಕ್ರಿ.ಶ.೭೮೦–೮೦೦)



ಹಸ್ತಿಕುಂಡಿ ರಾಷ್ಟ್ರಕೂಟರು




ಬೋಧ್‌ಗಯಾ ರಾಷ್ಟ್ರಕೂಟರು




ಧಾನೋಪದ ರಾಷ್ಟ್ರಕೂಟರು




ಮಗಧದ ರಾಷ್ಟ್ರಕೂಟರು



## ಸೌಂದತ್ತಿಯ ರಟ್ಟರು

### ಶಾಖೆ I




### ಶಾಖೆ II






## ಕನೌಜದ ರಾಷ್ಟ್ರಕೂಟರು (ಗಾಧಿಪುರ)



## ಬದೌನಿನ ರಾಷ್ಟ್ರಕೂಟರು



# ರಾಷ್ಟ್ರಕೂಟರ ಸಾಮ್ರಾಜ್ಯ

ಕ್ರಿ.ಶ. ಸು. ೭೫೩-೯೭೩



## ಅಧ್ಯಾಯ ೪

# ರಾಷ್ಟ್ರಕೂಟರ ಶಾಖೆಗಳು

ಮಾನಪುರ – ಅಚಲಾಪುರ – ಮಾನ್ಯಖೇಟ – ಗುಜರಾತ್ ಶಾಖೆ I – ಗುಜರಾತ್ ಶಾಖೆ II – ಪಠಾರಿ – ಹಸ್ತಿಕುಂಡಿ – ಬೋಧಗಯಾ – ಧಾನೋಪ –ರಾಷ್ಟ್ರೋಡ ಶಾಖೆ I – ಮಗಧ – ಸೌಂದತ್ತಿ – ಓಢ್ರ– ಕನೌಜ –ಬಿಥೂ – ಬದಾವ್ರೂನ್ – ರಾಷ್ಟ್ರೋಡ ಶಾಖೆ II

ರಾಜಧಾನಿಗಳು

ಮಾನಪುರ – ಅಚಲಾಪುರ – ಎಲ್ಲೋರ – ಮಯೂರಖಂಡಿ – ಮಳಖೇಡ – ಕಾಂಧಾರ

ರಾಷ್ಟ್ರಕೂಟರ ನೆಲೆವೀಡುಗಳು

ಈ ಅಧ್ಯಾಯದಲ್ಲಿ ಚರ್ಚಿತವಾಗಿರುವ ರಾಷ್ಟ್ರಕೂಟರ ಇತಿಹಾಸವನ್ನು ಸಾಧ್ಯವಾದಷ್ಟೂ ಕಾಲಾನುಕ್ರಮದಲ್ಲಿ ನೀಡಲಾಗಿದೆ. ಇನ್ನೂ ಅನೇಕ ಶಾಸನಗಳು ಸಿಕ್ಕಿದ್ದು ನಮ್ಮ ಗಮನಕ್ಕೆ ಬಾರದೇ ಹೋಗಿರುವುದನ್ನು ಹೊರತುಪಡಿಸಿ ಉಳಿದವುಗಳನ್ನು ಬಳಸಿಕೊಳ್ಳಲಾಗಿದೆ. ಪ್ರಸ್ತುತ ಹದಿನೇಳು ರಾಷ್ಟ್ರಕೂಟ ಶಾಖೆಗಳನ್ನು ಗುರುತಿಸಿ ಅವುಗಳ ಇತಿಹಾಸವನ್ನು ನಿರೂಪಿಸಲಾಗಿದೆ. ಇದರಲ್ಲಿ ಸೌಂದತ್ತಿಯ ರಾಷ್ಟ್ರಕೂಟರ ಎರಡು ಶಾಖೆಗಳಿದ್ದರೂ ಅದನ್ನು ಒಂದೇ ಶಾಖೆಯಡಿಯಲ್ಲಿ ಚರ್ಚಿಸಲಾಗಿದೆ. ಇಲ್ಲಿ ಕೊಟ್ಟಿರುವ ಎಲ್ಲ ಶಾಖೆಗಳೂ ಒಂದಕ್ಕೊಂದು ಸೇರಿದೆ. ಚಿಕ್ಕ ಪುಟ್ಟ ಶಾಖೆಗಳ ಬಗ್ಗೆ ಹೇಳುವಾಗ ರಾಜಕೀಯ ಇತಿಹಾಸದ ಜೊತೆಜೊತೆಗೇ ಸಾಂಸ್ಕೃತಿಕ ಅಂಶಗಳನ್ನೂ ಸಾಂದರ್ಭಿಕವಾಗಿ ಪ್ರಸ್ತಾಪಿಸಲಾಗಿದೆ.

## ೧. ಮಾನಪುರದ ರಾಷ್ಟ್ರಕೂಟರು (ಕ್ರಿ.ಶ. ೩೭೫ ರಿಂದ ೫೦೬)

ಕ್ರಿ.ಶ. ಸುಮಾರು ೩೭೫ರಿಂದ ೫೦೬ರವರೆಗೆ ರಾಷ್ಟ್ರಕೂಟರವಂಶವೊಂದು ಪಶ್ಚಿಮ ಮಹಾರಾಷ್ಟ್ರದಲ್ಲಿ ಆಳ್ವಿಕೆ ನಡೆಸಿತ್ತು. ಇವರನ್ನು ಆರಂಭದ ರಾಷ್ಟ್ರಕೂಟರು ಎಂದು ಕರೆಯುತ್ತಾರೆ. ಇತ್ತೀಚಿಗೆ ಇವರನ್ನು ಮಾನಪುರ ರಾಷ್ಟ್ರಕೂಟರು ಅಥವಾ ಮಾನಪುರದ ಅರಸರು ಎಂದು ಗುರುತಿಸಲಾಗುತ್ತದೆ. ಮಾನಪುರದ ರಾಷ್ಟ್ರಕೂಟರು ಸಿಂಹಲಾಂಛನರು.

ಮಾನಪುರ ಯಾವುದು? ಎಲ್ಲಿತ್ತು? ಆ ಊರು ರಾಜಧಾನಿಯಾಗಿತ್ತೆ? ಎಂದು ಗುರುತಿಸಲು ವಿದ್ವಾಂಸರು ಪ್ರಯತ್ನಿಸಿದ್ದಾರೆ. ರಾಷ್ಟ್ರಕೂಟರ ಅಧ್ಯಯನ ಆರಂಭವಾದಾಗಿನಿಂದ ಇಂದಿನವರೆಗೆ ಅವರ ಪ್ರಯತ್ನವು ಮುಂದುವರೆದಿದೆ. ಶಾಸನದ ಸಾಹಿತ್ಯಾಧಾರಗಳ ಮುಂತಾದ ಅಧ್ಯಯನ ನಡೆಸಿ ಹಲವಾರು ಮಾನಪುರ, ಮಾನಗಳನ್ನು ಗುರುತಿಸಿದ್ದಾರೆ. ನಿಜವಾದ ಮಾನಪುರ ಯಾವುದೆಂದು ಇನ್ನೂ ಪತ್ತೆಹಚ್ಚಲಾಗಿಲ್ಲ. ಗುರುತಿಸುವುದು ಕಷ್ಟಸಾಧ್ಯವೆಂದು ಈ ಬಗ್ಗೆ ಚರ್ಚೆ ನಡೆಸಿದ ವಿದ್ವಾಂಸರು ತೀರ್ಮಾನಕ್ಕೆ ಬಂದಿದ್ದಾರೆ.

'ಮಾನಪುರ ರಾಷ್ಟ್ರಕೂಟ'ರ ಮೂರು ತಾಮ್ರಪಟಗಳು ಮಾತ್ರ ದೊರೆತಿವೆ. ಶಾಸನಗಳಲ್ಲಿ ಅವರ ಹೆಚ್ಚಿನ ವಿವರಗಳನ್ನು ನೀಡದಿರುವುದರಿಂದ ಅವರ ಪೂರ್ಣ ಇತಿಹಾಸವನ್ನು ತಿಳಿಯುವುದು ಕಷ್ಟಸಾಧ್ಯ. ಶಾಸನಗಳಲ್ಲಿ ಕಾಲದ ವಿವರ ನೀಡುವಾಗ ತಮ್ಮ ಆಳ್ವಿಕೆಯ ವರ್ಷವನ್ನಷ್ಟೇ ಹೇಳಿದ್ದಾರೆ. ಇದರಿಂದ ಕಾಲನಿರ್ಣಯ ಕಷ್ಟವಾಗಿದೆ. ಹಿಂಗ್ಣಿಬೆರ್ಡಿ ಮತ್ತು ಪಂಡುರಂಗಪಲ್ಲಿ ಶಾಸನಗಳ ಅಕ್ಷರಗಳು ಅಕ್ಷರಕೂಟಗಳಂತಿರುವುದರಿಂದಲೂ ಕಾಲವನ್ನು ನಿಗದಿಗೊಳಿಸುವುದು ಕಷ್ಟವಾಗಿದೆ. ಶಾಸನದಲ್ಲಿ ಸಿಗುವ ಮಾಹಿತಿಗಳು ಸಮಕಾಲೀನ ಇತಿಹಾಸದ ಬಗ್ಗೆ ಏನನ್ನೂ ಹೇಳುವುದಿಲ್ಲ. ಶಾಸನಗಳ ಲಿಪಿಸ್ವರೂಪದ ಹಿನ್ನಲೆಯಲ್ಲಿ ಇಲ್ಲದಿದಿದ್ದರೆ ಸಾಂದರ್ಭಿಕ ಊಹೆಯ ಮೂಲಕವೇ ಇವರ ಕಾಲವನ್ನು ನಿಷ್ಕರ್ಷೆ ಮಾಡಬೇಕಾಗಿರುವುದು ಅನಿವಾರ್ಯವಾಗಿದೆ.

ಮಾನಪುರದ ರಾಷ್ಟ್ರಕೂಟರ ಮೂರು ತಾಮ್ರಪಟಗಳನ್ನು ಊಂಡಿಕಾವಾಟಿಕಾ (EL. Vol. III, P 163-166), ಪಂಡುರಂಗಪಲ್ಲಿ (EL. XXXVII, P 9) ಮತ್ತು ಹಿಂಗ್ಣಿಬೆರ್ಡಿ (EL. Vol. 1 XXX, P 174 ff) ಎಂದು ವಿದ್ವಾಂಸರು ಗುರುತಿಸಿದ್ದಾರೆ.

ಇದರಲ್ಲಿ ಉಂಡಿಕಾವಾಟಿಕಾ ಪಟಗಳು ಎಲ್ಲಿ ಸಿಕ್ಕಿದವೆಂದು ತಿಳಿದಿಲ್ಲ. ಊಂಡಿಕಾವಾಟಿಕಾ ಗ್ರಾಮವನ್ನು ದಾನವಾಗಿ ಕೊಟ್ಟಿದ್ದನ್ನು ಈ ಶಾಸನ ಉಲ್ಲೇಖಿಸುತ್ತದೆ. ಇದು ಮೂರು ಪಟಗಳನ್ನು ಹೊಂದಿದ್ದು, ಜೋಡಿಸಿರುವ ಉಂಗುರದ ಮೇಲೆ ಬಲಕ್ಕೆ ತಿರುಗಿರುವ ಸಿಂಹದ ಮುದ್ರೆಯಿದೆ. ಶಾಸನದ ಭಾಷೆ ಸಂಸ್ಕೃತ. ಲಿಪಿಯ ದೃಷ್ಟಿಯಿಂದ ಹೇಳುವುದಾದರೆ ದಕ್ಷಿಣ ಭಾರತದಲ್ಲಿ ಬಳಸುವ ಬ್ರಾಹ್ಮೀಲಿಪಿಯನ್ನು ಬಳಸಿದ್ದಾರೆ. ಲಿಪಿಯ ಆಧಾರದಿಂದ ಈ ಶಾಸನವನ್ನು ಕ್ರಿ.ಶ. ಸುಮಾರು ಐದನೇ ಶತಮಾನಕ್ಕೆ ಸೇರಿಸಬಹುದು ಎಂದು ವಿದ್ವಾಂಸರು ಊಹಿಸಿದ್ದಾರೆ. ಇದೊಂದು ದಾನ ಶಾಸನವಾಗಿದೆ. ದಾನವನ್ನು ಮಾಡಿದವನು ವೈದ್ಯನಾದ ದಕ್ಷಿಣ ಶಿವ ಜಟಾಭಾರ ಪ್ರಪ್ರಾಜಿತನು ಪೇಠಪಂಗಾರಕ ಎನ್ನುವ ಗ್ರಾಮವನ್ನು ದಾನಮಾಡಿದನು. ಆಗ ದೊರೆಯಾದ ಅಭಿಮನ್ಯುವು ಮಾನಪುರದಲ್ಲಿ ಅರಮನೆಯನ್ನು ಕಟ್ಟಿಕೊಂಡು ವಾಸವಾಗಿರುವ ಮೂಲಕ ನಗರಕ್ಕೆ ಶೋಭೆ ತಂದನೆಂದು ವರ್ಣಿಸಲಾಗಿದೆ.

ಪಂಡುರಂಗಪಲ್ಲಿ ಪಟವು ಕೊಲ್ಹಾಪುರ ಜಿಲ್ಲೆ, ಹಾತ್ಕಣಂಗಲೆ ತಾಲ್ಲೂಕು, ಕರೋಚಿಯಲ್ಲಿ ದೊರಕಿದ್ದು, ಶಾಸನವು ಮೂರು ಪಟಗಳಲ್ಲಿದೆ. ಪಟಗಳನ್ನು ಉಂಗುರದಿಂದ ಸೇರಿಸಲಾಗಿದ್ದು, ಇದರ ಮೇಲಿರುವ ಮುದ್ರೆಯಲ್ಲಿ ಸಿಂಹವು ಎಡಕ್ಕೆ ತಿರುಗಿ ಕುಳಿತಿರುವಂತೆ ಕೆತ್ತಲಾಗಿದೆ. ರಾಜನ ಆಳ್ವಿಕೆಯ ಹದಿನೈದನೆಯ ವರ್ಷ ಕಾರ್ತೀಕ ವದ್ಯ (ಶುದ್ಧ) ಪಂಚಮಿಯಲ್ಲಿ ಶಾಸನವನ್ನು ಹೊರಡಿಸಲಾಗಿದೆ. ಈ ಶಾಸನವು ಅವಿಧೇಯನೆಂಬ ರಾಜನನ್ನು ಹೆಸರಿಸುತ್ತದೆ. ದಾನ ಪಡೆದ ವ್ಯಕ್ತಿಯು ಪವಿದ್ಧಕ ಗ್ರಾಮದಲ್ಲಿ ವಾಸವಾಗಿದ್ದ ಶಂಭುವೆಂದೂ, ಈತನಿಗೆ ಪಂಡುರಂಗಪಲ್ಲಿ ಗ್ರಾಮವನ್ನು ಎರಡು ಸಣ್ಣ ಕೊಪ್ಪಲುಗಳಾದ ಕಾಮ್ಯಕ ಮತ್ತು ಜೌಲಿಗಲ ಸಮೇತ ನೀಡಿದನೆಂದು ತಿಳಿದು ಬರುತ್ತದೆ. ಈ ಗ್ರಾಮವು ಕೊಲ್ಲಗಿರಿಯ ಪೂರ್ವಕ್ಕೆ ಆನೆ ನದಿಯ ದಂಡೆಯ ಮೇಲಿದೆ.

ಹಿಂಗ್ಣಿಬೆರ್ಡಿ ಪಟಗಳು ಪೂನಾ ಜಿಲ್ಲೆ ದೌಂಡ್‌ಪೇಟದ ಹಿಂಗ್ಣಿಬೆರ್ಡಿಯಲ್ಲಿ ದೊರಕಿದೆ. ಇದರ ಮೇಲೆ ಇರುವ ಮುದ್ರೆ ವಿಶೇಷವಾಗಿದೆ. ಕಮಂಡಲ (ಭೃಂಗಾರ), ಹುಲ್ಲಿನ ಗರಿಕೆಯಂತೆ ಕಾಣುವ ವಸ್ತುವಿದೆ. ಬಹುಶಃ ದರ್ಭೆಯಿರಬಹುದು. ವಿವಿಧ ವಿದ್ವಾಂಸರು ಇದನ್ನು ದಂಡವೆಂದು ಕರೆದಿದ್ದಾರೆ. ಹನ್ನೊಂದು ಮಣಿಗಳಿರುವ ಜಪಮಾಲೆಯನ್ನು ಮುದ್ರೆಯ ಮೇಲೆ ಕೆತ್ತಿದ್ದಾರೆ. ವಿಭುರಾಜ ದೊರೆಯು ತನ್ನ

ಆಳ್ವಿಕೆಯ ಮೂರನೆಯ ವರ್ಷ ವೈಶಾಖ ಪೌರ್ಣಮಿಯಂದು ದಾನವನ್ನು ನೀಡಿದ್ದಾನೆ. ಲಿಪಿಯ ಆಧಾರದ ಮೇಲೆ ಕ್ರಿ.ಶ ಐದನೇ ಶತಮಾನಕ್ಕೆ ಇದರ ಕಾಲವನ್ನು ನಿಗದಿಪಡಿಸಲಾಗಿದೆ. 'ಕೊಂಗಾರಕೊಟ್ಟನೆ' ವಿಷಯದಲ್ಲಿ ಕಮಲಿ ಭೂಹಕ ಎಂಬ ಗ್ರಾಮವನ್ನು ದಾನವಾಗಿ ಪಡೆದಿದ್ದನ್ನು ಉಲ್ಲೇಖಿಸುತ್ತದೆ. ದಾನವನ್ನು ಪಡೆದವನು ನನ್ನಸ್ವಾಮಿ ಎಂಬ ಬ್ರಾಹ್ಮಣ. ದಾನವನ್ನು ನೀಡಿದ ವ್ಯಕ್ತಿ ಸ್ತ್ರೀಯಾಗಿದ್ದು ಈಕೆಯನ್ನು ದೇವರಾಜ ದೊರೆಯ ಮಹಾರಾಣಿ ಶ್ಯಾಮಲಾಂಗಿ ಎಂದು ಬ್ರಹ್ಮಾನಂದ ದೇಶಪಾಂಡೆ ಮತ್ತು ಎಂ.ಜಿ, ದೀಕ್ಷಿತರು ತಿಳಿಸಿದ್ದಾರೆ. ಆದರೆ ಈಕೆಯನ್ನು ಶಾಸನವು ವಿಭುರಾಜನ ಪತ್ನಿ ಎಂದು ಸ್ಪಷ್ಟವಾಗಿ ತಿಳಿಸುತ್ತದೆ (EL. Vol. XXIX, p 174-177).

ರಾಷ್ಟ್ರಕೂಟೇಶ್ವರಾಣಾ ಮನ್ವವಾಯಯೋಲಂಕರೇಣ

ಶ್ರೀಮತಾ ಮಹಾರಾಜ ವಿಭುರಾಜಾನುಜ್ಞಯಾ

ಸ್ವಕುಶಲನಭಸ್ಥಲಾಲಂಕರಣೀ (?) (ಣ್ಯಾ) ಶ್ಯಾವಲಜ್ಗೀ

ಮಹಾದೇವ್ಯ (ವ್ಯಾ) ಮಾತಾಪಿತ್ರೋಃ ಪುಣ್ಯಾಭಿವೃದ್ಧಯೇ

ಮೀರಾಶಿಯವರು ಸಂಸ್ಕೃತ ಕಾವ್ಯ "ಕುಂತಳೇಶ್ವರ ದೌತ್ಯ"ದಲ್ಲಿ ಬರುವ ದೊರೆಯನ್ನು ಮಾನಪುರದ ರಾಷ್ಟ್ರಕೂಟ ದೊರೆಗೆ ಸಮೀಕರಿಸಿದ್ದಾರೆ (ABORI. Vol. XXVII). ಕುಂತಳಗಿರಿಯು ಮಹಾರಾಷ್ಟ್ರದ ಓಸ್ಮಾನಾಬಾದ್ ಜಿಲ್ಲೆಯಲ್ಲಿದ್ದು, ಸೋಲಾಪುರದ ಗಡಿಭಾಗಕ್ಕೆ ಬರುತ್ತದೆ. ಇದರಿಂದ ಕುಂತಳ ಪ್ರದೇಶವು ಬನವಾಸಿಯ ಉತ್ತರ ಭಾಗದಲ್ಲಿತ್ತು ಎಂಬ ವಿಚಾರವು ತಿಳಿದುಬರುತ್ತದೆ. ಪಂಡುರಂಗಪಲ್ಲಿ ಶಾಸನದಲ್ಲಿ ಮಾನಾಂಕನು ವಿದರ್ಭ ಮತ್ತು ಅಶ್ಮಕಗಳನ್ನು ಗೆದ್ದಿದ್ದನೆಂದು ಉಲ್ಲೇಖಿಸುತ್ತದೆ. ಈ ಪ್ರದೇಶಗಳನ್ನು ಆ ಕಾಲಕ್ಕೆ ಆಳುತ್ತಿದ್ದವರು ನಂದಿವರ್ಧನ ಮತ್ತು ವತ್ಸಗುಲ್ಮದ ವಾಕಾಟಕರು. ಇದನ್ನು ವಾಕಾಟಕರ ದಾಖಲೆಗಳೂ ತಿಳಿಸುತ್ತವೆ. (C.I.I. OP cit Vol. I. p 3-11) ವಾಕಾಟಕ ದೊರೆ ನರೇಂದ್ರಸೇನನು ಕುಂತಳದ ರಾಜಕುಮಾರಿ ಅಜಿತ ಭಟ್ಟಾರಿಕಾಳನ್ನು ಮದುವೆಯಾಗಿದ್ದನು. ಈಕೆ ಮಾನಪುರದ ರಾಷ್ಟ್ರಕೂಟ ದೊರೆ ಅಭಿಮನ್ಯುವಿನ ಮಗಳಾಗಿದ್ದಳು.

ಮಾನಪುರದ ರಾಷ್ಟ್ರಕೂಟರು ಮತ್ತು ಬನವಾಸಿಯ ಕದಂಬರ ಮಧ್ಯೆ ವೈರವಿದ್ದ ಉಲ್ಲೇಖವಿದೆ. ಮೃಗೇಶವರ್ಮನ ದಾಖಲೆಗಳಲ್ಲಿ ಇದನ್ನು ಗಮನಿಸಬಹುದು

(D.C. Sircar, Successors of the Satavahanas in the lower Deccan). ನಂತರದ ರಾಷ್ಟ್ರಕೂಟರ ದಾಖಲೆಗಳಲ್ಲಿ ತುಂಗ ಎಂಬ ಹೆಸರಿನ ದಾಖಲೆಗಳನ್ನು ಗಮನಿಸಿದರೆ ಮೃಗೇಶವರ್ಮನು ಮಾನಪುರದ ರಾಷ್ಟ್ರಕೂಟ ಅರಸ ಅಭಿಮನ್ಯುವಿನ ಮೇಲೆ ದಾಳಿ ಮಾಡಿದ್ದನೆಂದು ಊಹಿಸಬಹುದು.

ಇನ್ನು ಮಾನಪುರದ ರಾಷ್ಟ್ರಕೂಟರ ಕಾಲದ ಬಗ್ಗೆ ಹೇಳುವಾಗ ಇವರನ್ನು ಕ್ರಿ.ಶ. ಐದನೆಯ ಶತಮಾನಕ್ಕೆ ಸೇರಿಸುತ್ತಾರೆ. ಹೀಗೆ ನಿರ್ಧರಿಸುವಾಗ ಲಿಪಿಯನ್ನು ಆಧಾರವಾಗಿಟ್ಟುಕೊಂಡಿದ್ದಾರೆ. ಇದಲ್ಲದೆ ಒಂದೊಂದು ಪಟಕ್ಕೂ ಲಿಪಿಯಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳಿವೆ. ಹೀಗಾಗಿ ಕಾಲವನ್ನು ನಿರ್ಧಾರ ಮಾಡಲು ತೊಡಕುಗಳಿವೆ.

ವಿವಿಧ ವಿದ್ವಾಂಸರು ನೀಡುವ ವಂಶಾವಳಿಯಲ್ಲಿ ಅನೇಕ ಅಭಿಪ್ರಾಯಬೇಧಗಳು ಕಂಡುಬರುತ್ತವೆ. ಮೊದಲು ಎಂ.ಜಿ. ದೀಕ್ಷಿತರು ಮತ್ತು ಥೋಸರ್ ಅವರು ವಿಭುರಾಜನ ಪತ್ನಿ ಶ್ಯಾಮಲಾಂಗಿ ಎಂದು ಹೇಳಿದ್ದಾರೆ. ಹಾಗೆಯೆ ವಿಭುರಾಜನ ತಾತ ದೇವರಾಜನ ಪತ್ನಿಯನ್ನು ಪ್ರಭಾವತಿ ಎಂದು ಸೂಚಿಸಿದ್ದಾರೆ. ಇದೇ ವಿದ್ವಾಂಸರು ತಿದ್ದಿ ಬರೆದಿರುವ ವಂಶಾವಳಿಯಲ್ಲಿ(BISM. Shestha Sammelana Vrtta, p 63-67, M.G. Dikshit- Maharastratial Kahi Tamrpat va Shilalekha, p 5) ಶ್ಯಾಮಲಾಂಗಿಯನ್ನು ದೇವರಾಜನ ಪತ್ನಿಯಾಗಿ ತೋರಿಸಿದ್ದಾರೆ.

ಎಂ.ಜಿ. ದೀಕ್ಷಿತ್ ಮತ್ತು ಥೋಸರ್ ಅವರು ಮತ್ತೆ ಹೇಳಿರುವ (ಮೊದಲಿಗಿಂತ ಬೇರೆಯಾದ) ವಂಶಾವಳಿ:-



ಮಾನರಾಜ ಮತ್ತು ವಿಭುರಾಜ ಇಬ್ಬರೂ ಒಂದೇ ಎಂದು ಮಿರಾಶಿಯವರು ಸೂಚಿಸಿದ್ದಾರೆ. ಥೋಸರ್ ಮತ್ತು ದೀಕ್ಷಿತರು ಮಾನರಾಜನ ಮಗ ವಿಭುರಾಜ ಎಂದು ಸೂಚಿಸಿದ್ದಾರೆ. ಹಾಗೆಯೇ ಬ್ರಹ್ಮಾನಂದ ದೇಶಪಾಂಡೆಯವರು (Studies in The Rastrakuta Inscriptions Unpublished Thesis, Nagpur University) ನೀಡುವ ವಂಶಾವಳಿಯಲ್ಲಿ ಮಾನ II ಅಥವಾ ವಿಭುರಾಜ ಎಂದು ಸೂಚಿಸಿದ್ದಾರೆ. ಮಾನಾಂಕನನ್ನು ಒಂದನೆಯ ಈ ಮಾನಾಂಕ ಇರಬಹುದು ಎನ್ನುತ್ತಾರೆ.

ಬ್ರಹ್ಮಾನಂದ ದೇಶಪಾಂಡೆ ಮತ್ತು ದೀಕ್ಷಿತ್ ಎಂ.ಜಿ. ಹೇಳಿರುವ ವಂಶಾವಳಿ:-

ಮಾನಾಂಕ/ಮಾನ
(ಕ್ರಿ.ಶ. ೩೭೫–೪೦೦)

ದೇವರಾಜ
ಹೆಂ. ಶ್ಯಾಮಲಾಂಗಿ
(ಕ್ರಿ.ಶ. ೪೦೦–೪೨೫)

ಮಾನII
ಅಥವಾ ವಿಭುರಾಜ
(ಕ್ರಿ.ಶ. ೪೨೫–೪೪೦)

ಅವಿಧೇಯ
(ಕ್ರಿ.ಶ.೪೪೦–೪೫೫)

ಭವಿಷ್ಯ
(ಕ್ರಿ.ಶ.೪೫೫–೪೭೫)

ಅಭಿಮನ್ಯು
(ಕ್ರಿ.ಶ. ೪೭೫–೪೯೦)

ರಾಷ್ಟ್ರಕೂಟರ ಸಣ್ಣಪುಟ್ಟ ವಂಶಗಳ ಬಗ್ಗೆ ಬಿಶೇಷ್ವರನಾಥ ರೇವು ಅವರು ಅಧ್ಯಯನ ಮಾಡಿದ್ದಾರೆ. ಇದರಲ್ಲಿ ಅವರು ಮಾನಾಂಕ–ದೇವರಾಜ–ಭವಿಷ್ಯ–ಅಭಿಮನ್ಯು ಎಂದು ವಂಶಾವಳಿಯನ್ನು ಕೊಡುತ್ತಾರೆ (Reu Pandit Bisheshwar Nath, History of The Rastrakutas, Jaipur). ಇನ್ನು ಬೇರೆ ಯಾವ ವಿವರಗಳನ್ನು ಕೊಡುವುದಿಲ್ಲ. ಊಂಡಿಕಾವಾಟಿಕಾ ಶಾಸನದಲ್ಲಿರುವ ವಂಶಾವಳಿಯಲ್ಲಿ ಈ ನಾಲ್ಕು ಹೆಸರೇ ಇರುವುದು. ಶರಭಪುರದ ಶಾಸನದಲ್ಲಿ ಬಂದಿರುವ ಹೆಸರುಗಳು ಅರಸರ ಹೆಸರೇ ಅಥವಾ ಹೊಗಳಿಕೆಯೇ ಎಂಬುದು ಸ್ಪಷ್ಟವಾಗುವುದಿಲ್ಲ.

ಬಿಶೇಷ್ವರನಾಥ ರೇವು ಅವರು ಹೇಳಿರುವ ವಂಶಾವಳಿ:–

ಮಾನಾಂಕ

ದೇವರಾಜ

ಭವಿಷ್ಯ

ಅಭಿಮನ್ಯು

ದುಬ್ರೋಲಿ ಮತ್ತು ಎ.ಪಿ. ಮದನ್ ಅವರು ರಾಷ್ಟ್ರಕೂಟ ಮನೆತನಕ್ಕೆ ಪ್ರಸನ್ನ ಎನ್ನುವ ವ್ಯಕ್ತಿ ಮೂಲ ಪುರುಷ ಎಂದಿದ್ದಾರೆ. ಈತನಿಗೆ ಮಾನಾಂಕ ಎನ್ನುವ ಮಗನಿದ್ದನು ಆತ ಮಾನ ದೇಶದ ದೊರೆಯಾಗಿದ್ದನು ಎನ್ನುತ್ತಾರೆ (The History of The Rashtrakutas, Madan A.P.). ಮಾನನ ಮಗ ಸುದೇವರಾಜ ಎಂದು ತಿಳಿಸಿದ್ದಾರೆ. ಈತನಿಗೆ ಇಬ್ಬರು ಗಂಡು ಮಕ್ಕಳು, ಒಬ್ಬ ಜಯರಾಜ, ಇನ್ನೊಬ್ಬ ಭವಿಷ್ಯ. ಭವಿಷ್ಯನ ಮಗನೇ ಅಭಿಮನ್ಯುವೆಂದು ತಿಳಿಸಿದ್ದಾರೆ. ವಂಶಾವಳಿಯನ್ನು ತಿಳಿಸುವಾಗ ಶೋಭಾಪುರ ಅಥವಾ ಸೋಹಾಗ್‌ಪುರದವರ ವಂಶವನ್ನು ಸೇರಿಸಿ ತಿಳಿಸಿರುವುದರಿಂದ ಮಾನಾಂಕನನ್ನು ಮಾನಮಾತ್ರನೆಂದೂ, ದೇವರಾಜನನ್ನು ಸುದೇವರಾಜನೆಂದೂ ಕರೆದಿದ್ದಾರೆ. ಇಲ್ಲಿ ಶೋಭಾಪುರ(ಶರಭಪುರ)ದ ಶಾಸನವು ರಾಷ್ಟ್ರಕೂಟರಿಗೆ ಸಂಬಂಧಿಸಿದ್ದಲ್ಲವೆಂಬುದನ್ನು ಗಮನಿಸಬೇಕು.

ದುಬ್ರೋಲಿ ಮತ್ತು ಮದನ್ ಎ.ಪಿ. ಸೂಚಿಸಿರುವ ವಂಶಾವಳಿ:–

ಪ್ರಸನ್ನ(ರಾಷ್ಟ್ರಕೂಟ ಮನೆತನ)

ಮಾನಮಾತ್ರ (ಮಾನಾಂಕ)

ಮಾನಪುರದ ದೊರೆ

ಸುದೇವರಾಜ

ಜಯರಾಜ          ಭವಿಷ್ಯ

ಅಭಿಮನ್ಯು

ವಿವಿಧ ವಿದ್ವಾಂಸರು ರಾಷ್ಟ್ರಕೂಟ ವಂಶಾವಳಿಯ ಬಗ್ಗೆ ಚರ್ಚಿಸಿದ್ದಾರೆ. ವಿ. ವಿ. ಮಿರಾಷಿಯವರು ಕ್ರಿ.ಶ. ೩೬೦ – ೫೫೦ ರವರೆಗೆ ಇವರ ಕಾಲವನ್ನು ಹೇಳುತ್ತಾರೆ. ಈ ವಂಶಾವಳಿಯಲ್ಲಿ ದೆಜ್ಜ ಮಹಾರಾಜನನ್ನು ಸೇರಿಸಿದ್ದಾರೆ (Annals of the Bhandarkar Oriental Research Institute, Vol. XXVII, p 25 A). ಇನ್ನೊಮ್ಮೆ ಅವರೇ ತಿದ್ದಿ ಹೇಳುವ ವಂಶವಾಳಿಯಲ್ಲಿ ಕ್ರಿ.ಶ. ೩೭೫ರಿಂದ ೪೯೦ರವರೆಗೂ ನಿಗದಿಗೊಳಿಸಿದ್ದಾರೆ. ಈ ವಂಶಾವಳಿಯಲ್ಲಿ ದೆಜ್ಜ ಮಹಾರಾಜರನ್ನು ಕೈ ಬಿಡುತ್ತಾರೆ (Studies in The Rasthrakuta Inscriptions, Brahmananda Deshpande). ಮತ್ತೆ ಥೋಸರ್ ಮತ್ತು ದೀಕ್ಷಿತರು ತಿದ್ದಿ ಹೇಳಿರುವ ವಂಶಾವಳಿಯಲ್ಲಿ ಕಾಲವನ್ನು ಕ್ರಿ.ಶ. ೩೬೦ರಿಂದ ೫೫೦ರವರೆಗೆ ಎಂದು ಹೇಳಿದ್ದಾರೆ. ಇವರು ಮಾನಾಂಕನಿಂದ ಆರಂಭಿಸಿ ದೆಜ್ಜ ಮಹಾರಾಜನಿಗೆ ಕೊನೆಗೊಳಿಸಿದ್ದಾರೆ. ಮಿರಾಷಿಯವರು ದೆಜ್ಜನನ್ನು ಅಭಿಮನ್ಯುವಿನ ಮಗನೆಂದರೆ, ದೀಕ್ಷಿತರು ವಿಭುರಾಜ ಮತ್ತು ಶ್ಯಾಮಲಾಂಗಿಯವರ ಮಗನೆಂದಿದ್ದಾರೆ. ಇವರ ಪ್ರಕಾರ ಅಭಿಮನ್ಯುವಿನ ಕಾಲ ಕ್ರಿ.ಶ. ೪೭೦ರಿಂದ ೪೯೦. ಆದರೆ ವಿಭುರಾಜನ ಕಾಲ ಕ್ರಿ.ಶ. ೪೯೦ರಿಂದ ೫೨೦ ಮತ್ತು ದೆಜ್ಜನ ಕಾಲವನ್ನು ಕ್ರಿ.ಶ ೫೨೦ರಿಂದ ೫೫೦ ಎಂದಿದ್ದಾರೆ. ಇವರಿಬ್ಬರು ಮತ್ತೆ ರಚಿಸುವ ವಂಶಾವಳಿಯಲ್ಲಿ ದೆಜ್ಜನನ್ನು ಕೈ ಬಿಡುತ್ತಾರೆ. ಹಾಗೂ ಕಾಲವನ್ನು ಕ್ರಿ.ಶ.೩೭೫ರಿಂದ ೪೯೦ ಎಂದು ನಿಗದಿಗೊಳಿಸಿದ್ದಾರೆ (JESI. Vol. XXIII 1997, p 32-37).

ಮಿರಾಷಿ ವಿ.ವಿ. ಅವರು ಹೇಳಿರುವ ವಂಶಾವಳಿ:–

ಮಾನಾಂಕ(ಕ್ರಿ.ಶ. ೩೬೦–೪೦೦)

ದೇವರಾಜ(ಕ್ರಿ.ಶ. ೪೦೦–೪೨೫೪)

ಮಾನರಾಜ/ವಿಭುರಾಜ (ಕ್ರಿ.ಶ. ೪೨೫–೪೪೦)

ಅವಿಧೇಯ (ಕ್ರಿ.ಶ. ೪೪೦–೪೫೫)

ಭವಿಷ್ಯ (ಕ್ರಿ.ಶ. ೪೫೫–೪೭೦)

ಅಭಿಮನ್ಯು (ಕ್ರಿ.ಶ. ೪೭೦–೪೯೦)

ದೆಜ್ಜ ಮಹಾರಾಜ (ಕ್ರಿ.ಶ. ೫೩೦–೫೫೦)

ವಿವಿಧ ವಿದ್ವಾಂಸರು ನೀಡುವ ಮಾನಾಪುರದ ರಾಷ್ಟ್ರಕೂಟರ ವಂಶಾವಳಿ

೧. ಸ್ಟೆನ್ ಕೊನೋವ್




೨. ಎಂ.ಜಿ. ದೀಕ್ಷಿತ್




೩.



೪.




ಮೇಲಿನ ಚರ್ಚೆಗಳಲ್ಲಿ ಇರುವ ವಂಶಾವಳಿಗಳನ್ನೂ, ಶಾಸನಗಳ್ಳಲ್ಲಿರುವ ವಂಶಾವಳಿಗಳನ್ನೂ, ಗಮನಿಸಿದಾಗ, ದೆಜ್ಜಮಹಾರಜನನ್ನು ಬಿಟ್ಟು ಉಳಿದ ರಾಜರುಗಳನ್ನು ಕೆಳಕಂಡಂತೆ ತೋರಿಸಬಹುದಾಗಿದೆ.



## ೨. ಅಚಲಾಪುರದ ರಾಷ್ಟ್ರಕೂಟರು (ಕ್ರಿ.ಶ. ಸು. ೫೭೩ – ೭೩೧)

ಜೇಮ್ಸ್ ಪ್ರಿನ್ಸೆಪ್ ಅವರು ೧೮೩೭ರಲ್ಲಿ ರಾಷ್ಟ್ರಕೂಟರ ಹೊಸ ಶಾಖೆಯೊಂದನ್ನು ಕಂಡುಹಿಡಿದರು. ಇವರನ್ನು ವಿದರ್ಭದ ರಾಷ್ಟ್ರಕೂಟರೆಂದು ಗುರುತಿಸಲಾಗಿದೆ. ವಿದರ್ಭದ ರಾಷ್ಟ್ರಕೂಟರ ನಾಲ್ಕು ತಾಮ್ರಪಟಗಳಿವೆ. ಮೂರು ಮುದ್ರೆಗಳ ಮೇಲೆ ಗರುಡ ಲಾಂಛನವಿದೆ. ಇನ್ನೊಂದರ ಮೇಲೆ ಅಂಕುಶ ಮತ್ತು ಗಣದತ್ತಿ ಅಂದರೆ ಭೂದಾನ ಮಾಡುತ್ತಿರುವ ಚಿತ್ರವಿದೆ. ವಿದರ್ಭದ ರಾಷ್ಟ್ರಕೂಟರು ಕ್ರಿ. ಶ. ಸು. ೫೭೦ ರಿಂದ ಕ್ರಿ. ಶ. ೭೩೧ ರವರಗೆ ಆಳ್ವಿಕೆ ನಡೆಸಿದರೆಂದು ಹೇಳಬಹುದು. ವಿದರ್ಭದ ರಾಷ್ಟ್ರಕೂಟರನ್ನು ಬೇರೆ ಬೇರೆ ಹೆಸರುಗಳಿಂದ ಗುರುತಿಸುತ್ತಾರೆ. ವಿದರ್ಭದ ರಾಷ್ಟ್ರಕೂಟರು, ಅಚಲಾಪುರದ ರಾಷ್ಟ್ರಕೂಟರು, ಎಲಿಚಪುರದ ರಾಷ್ಟ್ರಕೂಟರು, ಮೂಲಕದ ರಾಷ್ಟ್ರಕೂಟರು, ಬೇರಾರಿನ ರಾಷ್ಟ್ರಕೂಟರು ಎಂಬುದಾಗಿ ಐದು ಹೆಸರುಗಳಿಂದ ಗುರುತಿಸುವುದರಿಂದ ಕೆಲವೊಮ್ಮೆ ಇವರೆಲ್ಲರೂ ಬೇರೆ ಬೇರೆಯ ರಾಷ್ಟ್ರಕೂಟ ವಂಶಗಳಿಗೆ ಸೇರಿರಬಹುದೆ ಎಂಬ ಅನುಮಾನ ಬರುವಂತಾಗುತ್ತದೆ. ಸಾಮಾನ್ಯವಾಗಿ ಆಳ್ವಿಕೆ ನಡೆಸುತ್ತಿರುವ ಪ್ರದೇಶ ಅಥವಾ ರಾಜಧಾನಿಯ ಮೂಲಕವೇ ಪ್ರಸಿದ್ಧರಾಗಿರುವುದರಿಂದ ಗುರುತಿಸುವುದರಲ್ಲಿ ಗಲಿಬಿಲಿಯಾಗುವ ಸಾಧ್ಯತೆಗಳಿವೆ. ಇನ್ನು ಕೆಲವು ರಾಷ್ಟ್ರಕೂಟ ವಂಶಗಳಿಗೂ ಇಂತಹ ಸಮಸ್ಯೆ ಎದುರಾಗಿದೆ.

ಅಚಲಾಪುರದ ರಾಷ್ಟ್ರಕೂಟರು ಮತ್ತು ಮಳಖೇಡದದ ರಾಷ್ಟ್ರಕೂಟರು ಕೆಲವು ವರ್ಷ ಸಮಕಾಲೀನರಾಗಿ ಆಳ್ವಿಕೆ ನಡೆಸಿದ್ದಾರೆ. ಅಲ್ಟೇಕರರು ಅಚಲಾಪುರ ಮತ್ತು ಮಳಖೇಡದ ರಾಷ್ಟ್ರಕೂಟರಿಬ್ಬರೂ ಒಂದೇ ಎಂದು ಹೇಳಿದ್ದಾರೆ. ಹೇಗೆಂದರೆ ಅಚಲಾಪುರದ ರಾಷ್ಟ್ರಕೂಟರು ಕ್ರಿ. ಶ.೫೭೯ ರಿಂದ ಕ್ರಿ. ಶ. ೬೫೦ ರವರಿಗೆ ಆಳ್ವಿಕೆ ನಡೆಸಿದ್ದರು ಎಂದಿದ್ದಾರೆ. ಆದರೆ ಶಾಸನಗಳು ಸಿಗುವ ಕಾಲಗಳನ್ನು ಗಮನಿಸಿದರೆ ಕ್ರಿ. ಶ. ೬೦೦ ರಿಂದ ಕ್ರಿ. ಶ. ೭೩೧ ರವರೆಗೆ ಇವರು ರಾಜ್ಯಭಾರ ಮಾಡುತ್ತಿದ್ದರು ಎಂದು ಹೇಳಬಹುದಾಗಿದೆ. ಅದೇ ರೀತಿ ಮಳಖೇಡದ ರಾಷ್ಟ್ರಕೂಟರ ಆಳ್ವಿಕೆಯ ಪ್ರಾರಂಭ ಈ ಹೊತ್ತಿಗಾಗಲೇ ಇತ್ತೆಂದು ಹೇಳಬಹುದು, ಹೇಗೆಂದರೆ ದಂತಿವರ್ಮನಿಗಿಂತ ಮುಂಚೆ ಐದು ಜನ ಅರಸರು ರಾಜ್ಯಭಾರ ಮಾಡಿದ್ದಾರೆ. ಅವರ ಹೆಸರುಗಳು ಕ್ರಮವಾಗಿ ದಂತಿವರ್ಮನ್, ಒಂದನೆಯ ಇಂದ್ರ, ಒಂದನೆಯ ಗೋವಿಂದ, ಒಂದನೆಯ ಕರ್ಕ,

ಎರಡನೆಯ ಇಂದ್ರ ಹಾಗೂ ಇವರ ಕಾಲ ಕ್ರಿ.ಶ. ೬೫೦ ರಿಂದ ೭೪೦ ರವರಗೆ ಎಂದು ಗುರುತಿಸಬಹುದಾಗಿದೆ. ಈ ಐದು ಜನರನ್ನು ಮೂಲಕದ ರಾಷ್ಟ್ರಕೂಟರು ಎಂದು ಕರೆದಿದ್ದಾರೆ. ಅಚಲಾಪುರದ ರಾಷ್ಟ್ರಕೂಟರು ಕ್ರಿ.ಶ. ೬೩೧ ರಿಂದ ೭೦೯ ರವರೆಗೂ ಇದ್ದರು. ಕೆಲವು ವಿದ್ವಾಂಸರು ಇವರ ಕಾಲವನ್ನು ಕ್ರಿ.ಶ. ೫೭೩ ರಿಂದ ೬೫೦ ರವರೆಗೆ ಹೇಳಿದ್ದಾರೆ. ಆದರೆ ಶಾಸನಗಳ ಆಧಾರದಿಂದ ಇವರ ಕಾಲವನ್ನು ಕ್ರಿ.ಶ. ೬೦೦ ರಿಂದ ೭೩೧ ರವರೆಗೂ ಹೇಳಬಹುದಾಗಿದೆ. ಹೇಗೆಂದರೆ ಮಳಖೇಡದ ರಾಷ್ಟ್ರಕೂಟ ಅರಸ ದಂತಿದುರ್ಗನ ಶಾಸನವು ಕ್ರಿ. ಶ. ೭೪೧ ರಲ್ಲಿ ಸಿಗುತ್ತದೆ. ಇದರಿಂದ ಅಚಲಾಪುರದ ರಾಷ್ಟ್ರಕೂಟರ ಮತ್ತು ಮಳಖೇಡದ ರಾಷ್ಟ್ರಕೂಟರ ಆರಂಭದ ದೊರೆಗಳು ಒಂದೇ ಕಾಲದಲ್ಲಿ ಬೇರೆ ಬೇರೆ ಕಡೆ ರಾಜ್ಯಭಾರ ಮಾಡುತ್ತಿದ್ದರು ಎಂದು ಊಹಿಸಬಹುದಾಗಿದೆ. ಜೊತೆಗೆ ಇವರ ಹೆಸರುಗಳಲ್ಲಿ ಕೂಡ ಗೋವಿಂದನ ಹೆಸರನ್ನು ಬಿಟ್ಟರೆ ಬೇರೆ ಹೆಸರುಗಳಲ್ಲಿ ಸಾಮ್ಯತೆ ಇಲ್ಲ. ಅಚಲಾಪುರದ ರಾಷ್ಟ್ರಕೂಟರನ್ನು ಉಲ್ಲೇಖಿಸುವ ಐದು ಶಾಸನಗಳು ದೊರೆತಿವೆ. ಇವನ್ನು ಕ್ರಮವಾಗಿ ಮುಲ್ತಾಯಿ (IA, vol. XVIII, p23), ಸಂಗಲೂದಾ (EI, vol. XXIX, p109-115), ತೀವರ್‌ಖೇಡ್ (EI, vol. XI, p276-80), ನಾಗಾರ್ಧನ್ (EI, vol XXVIII, No.1) ಮತ್ತು ನಾಗಪುರ (ARIE, 1974-75, No. A10) ಶಾಸನಗಳು ಎಂದು ಗುರುತಿಸಲಾಗಿದೆ.

ಮುಲ್ತಾಯಿಯು ಮಧ್ಯ ಪ್ರದೇಶದ ಬೇತುಲ್ ಜಿಲ್ಲೆಯಲ್ಲಿದೆ. ಮುಲ್ತಾಯಿ ತಾಮ್ರಪಟಗಳು ಕ್ರಿ.ಶ. ೭೦೯ ರಲ್ಲಿ ಹೊರಟಿವೆ. ಶಾಸನವು ಮೂರು ಪಟಗಳಲ್ಲಿದ್ದು ಉಂಗುರದಿಂದ ಸೇರಿಸಲಾಗಿದೆ. ಅದರ ಮೇಲೆ ಗರುಡ ಮುದ್ರೆ ಇದ್ದು ಕೆಳಗಡೆ ಯುದ್ಧ ಶೂರನೆಂದು ಕೊರೆದಿದ್ದಾರೆ. ಶಾಸನದ ಲಿಪಿಯು ಉತ್ತರ ಬ್ರಾಹ್ಮಿಯಾಗಿದೆ. ಈ ಶಾಸನದಲ್ಲಿ ರಾಷ್ಟ್ರಕೂಟರ ವಂಶಾವಳಿಯಿದೆ. ಇದರಲ್ಲಿ ದುರ್ಗರಾಜ, ಗೋವಿಂದರಾಜ, ಸ್ವಾಮಿಕರಾಜ, ನನ್ನರಾಜ ಯುದ್ದಶೂರ, ಎನ್ನುವ ಹೆಸರುಗಳಿವೆ. ಶ್ರೀಪ್ರಭ ಚತುರ್ವೇದಿ ಎಂಬ ಬ್ರಾಹ್ಮಣನಿಗೆ ಜಲವ್‌ಕುಹೆ ಎಂಬ ಗ್ರಾಮವನ್ನು ದತ್ತಿಯಾಗಿ ಕೊಟ್ಟದ್ದನ್ನು ದಾಖಲಿಸುತ್ತದೆ. ರಕ್ತಚತುರ್ವೇದನ ಮಗನು ಮಿತ್ರಚತುರ್ವೇದನ ಮೊಮ್ಮಗನು ಆಗಿರುವ ಈತ ಕೌತ್ಸಗೋತ್ರದವನು ಎಂದು ತಿಳಿದುಬರುತ್ತದೆ. ದಾನವನ್ನು ಕಾರ್ತಿಕ ಪೂರ್ಣಿಮೆಯಂದು ನೀಡಲಾಗಿದೆ.

ಸಂಗಲೂದಾ ಪಟಗಳು ಮಧ್ಯಪ್ರದೇಶದ ಅಕೋಲಾ ಜಿಲ್ಲೆ ಸಂಗಲೂದ ಎಂಬಲ್ಲಿ ಸಿಕ್ಕಿವೆ. ಅದರಲ್ಲಿ ಮೂರು ಪಟಗಳಿದ್ದು, ಅವುಗಳನ್ನು ಉಂಗುರದಿಂದ ಸೇರಿಸಿದ್ದಾರೆ. ಗರುಡ ಲಾಂಛನವಿದ್ದು ಅದರ ಕೆಳಗಡೆ ಯುದ್ಧಶೂರ ಎಂದು ಕೆತ್ತಲಾಗಿದೆ. ಕ್ರಿ.ಶ. ೬೯೩ ರಲ್ಲಿ ಕಾರ್ತಿಕ ಹುಣ್ಣಿಮೆಯಂದು ದಾನ ನೀಡಲಾಗಿದೆ. ಶಾಸನದ ಲಿಪಿಯು ದಕ್ಷಿಣ ಬ್ರಾಹ್ಮಿಯಲ್ಲಿದೆ. ವಂಶಾವಳಿಯಲ್ಲಿ ದುರ್ಗರಾಜ, ಗೋವಿಂದರಾಜ, ಸ್ವಾಮಿಕರಾಜ, ನನ್ನರಾಜ, ಯುದ್ಧಶೂರನ ಉಲ್ಲೇಖವಿದೆ. ಹರಗಣ ದ್ವಿವೇದಿ ಎಂಬ ಬ್ರಾಹ್ಮಣನಿಗೆ ವಟಪುರ ಗ್ರಾಮವನ್ನು ದಾನವಾಗಿ ನೀಡಿದ್ದನ್ನು ಉಲ್ಲೇಖಿಸಿದೆ. ತೈತ್ತಿರೀಯಶಾಖೆ, ಕೌಶಿಕಪ್ರವರದ, ವಾರೂಮಾಲಸ ಗೋತ್ರದ ವ್ಯಕ್ತಿಯಾಗಿದ್ದ, ಹರಗಣ ದ್ವಿವೇದಿಯೂ, ಭೂತಗಣಭಟ್ಟನ ಮಗನೂ, ದರ್ಮುಲ್ಲಕ ಚತುರ್ವೇದನ ಮೊಮ್ಮಗನೂ, ಆಗಿದ್ದನೆಂದು ತಿಳಿದು ಬರುತ್ತದೆ.

ತೀವರ್‌ಖೇಡ ಪಟಗಳು ಮಠದ ಗೋಡೆಯೊಂದರಲ್ಲಿ ದೊರೆಯಿತೆಂದು ತಿಳಿದುಬರುತ್ತದೆ. ಈ ಮಠ ಮುಲ್ತಾಯಿಯಿಂದ ೨೧ ಕಿಲೋಮೀಟರ್ ದೂರವಿರುವ ತಿವರ್‌ಖೇಡದಲ್ಲಿ ದೊರಕಿತು. ಎರಡು ಪಟಗಳಿದ್ದು ಉಂಗುರದಿಂದ ಸೇರಿಸಲಾಗಿದೆ. ಗರುಡ ಚಿಹ್ನೆ ಮತ್ತು ಯುದ್ಧಶೂರ ಎನ್ನುವ ಹೆಸರು ಮುದ್ರೆಯ ಮೇಲಿದೆ. ಶಾಸನದಲ್ಲಿ ಮೂರು ದಾನಗಳನ್ನು ನೀಡಿರುವ ವಿವರಗಳಿವೆ ಮತ್ತು ಎರಡು ಕಾಲಗಳನ್ನು ಕೊಡಲಾಗಿದೆ. ಕ್ರಿ. ಶ. ೬೩೧ ಮಹಾಕಾರ್ತಿಕ ಅಥವ ಕಾರ್ತಿಕ ಪೂರ್ಣಿಮೆಯಂದು ಒಂದು ದಾನವನ್ನು ನೀಡಿದ್ದಾರೆ. ಇನ್ನೊಂದು ದಾನವನ್ನು ಮಾಘಮಾಸದ ಸೂರ್ಯಗ್ರಹಣದಂದು ನೀಡಲಾಗಿದೆ. ಕ್ರಿ. ಶ ೬೩೧ ರಲ್ಲಿ ಮಾಘಮಾಸ ಅಂದರೆ ಫೆಬ್ರವರಿ ೭ ರಂದು ಸೂರ್ಯಗ್ರಹಣ ಬಂದಿತ್ತು. ಶಾಸನದ ಲಿಪಿ ಉತ್ತರದ ಓರೆ ಶೈಲಿಯಾಗಿದೆ. ಈ ಶಾಸನದಲ್ಲಿ ಮುಲ್ತಾಯಿ ಮತ್ತು ಸಂಗಲೂದಾ ಶಾಸನದ ವಂಶಾವಳಿಯಂತೆಯೇ ನೀಡಲಾಗಿದೆ. ಮೊದಲನೆಯ ದಾನದಲ್ಲಿ ತೀವರ್‌ಖೇಡಕ್ಕೂ ಮತ್ತು ಘುಂಖೇಟಕ್ಕು ನಡುವೆ ಇರುವ ಪ್ರದೇಶವನ್ನು ಮುಂದಿಭಟ್ಟ ಎಂಬ ಬ್ರಾಹ್ಮಣನಿಗೆ ದಾನ ಕೊಟ್ಟ ಉಲ್ಲೇಖವಿದೆ. ಈತ ಭಾರಧ್ವಾಜ ಗೋತ್ರ ಮಾಧ್ಯಂದಿನ ಶಾಖೆಯ ಸ್ವಾಮಿಭಟ್ಟನ ಮಗನೆಂದೂ ಉಲ್ಲೇಖಿಸಿದ್ದಾರೆ. ಎರಡನೆಯ ದಾನ ಘುಯ್‌ಖೇಟ ಗ್ರಾಮದ ಜಮೀನನ್ನು ಶಂಕರಗಣನು ದತ್ತಿಯಾಗಿ ನೀಡಿದ್ದನ್ನು ದಾಖಲಿಸುತ್ತದೆ. ಈ ಪ್ರದೇಶವು ಅಂಪನಿಯರಕ ನದಿಯ ದಕ್ಷಿಣ ದಡದಲ್ಲಿದೆಯೆಂದು

ಶಾಸನದಲ್ಲಿ ಸೂಚಿಸಲಾಗಿದೆ. ಇನ್ನು ಮೂರನೆಯ ದಾನವನ್ನು ಹಿರಿಯ ಅಧಿಕಾರಿಗಳು ನೀಡಿದ್ದಾರೆ. ನನ್ನರಾಜನ ಆಸ್ಥಾನದಲ್ಲಿ ಯುದ್ಧ ಮತ್ತು ಶಾಂತಿಗೆ ನಿಯೋಜಿಸಲಾದ ನರಸಿಂಗ ಎಂಬ ಮಂತ್ರಿಯೂ, ಗೋವಿಂದನೆಂಬ ಮಂತ್ರಿಯೂ, ಸರಸವಾಹಲ, ದರ್ಜವಾಹಲ ನದಿಯ ಪೂರ್ವದಡದಲ್ಲಿದ್ದ ಕರಾಂಜಮಲೆಯ ಎಂಬ ಪ್ರಸ್ಥಭೂಮಿಯನ್ನು ದೇಣಿಗೆಯಾಗಿ ನೀಡಿದ್ದನ್ನು ಉಲ್ಲೇಖಿಸುತ್ತದೆ.

ನಾಗಾರ್ಧನ್ ಶಾಸನವು ಮೂರು ಪಟಗಳಿಂದ ಕೂಡಿದ್ದು ಅಂಕುಶದ ಮುದ್ರೆಯಿರುವ ಉಂಗುರದಿಂದ ಸೇರಿಸಲಾಗಿವೆ. ಶಾಸನದಲ್ಲಿ ಎರಡು ಕಾಲಗಳ ಉಲ್ಲೇಖವಿದೆ. ಮೊದಲನೆಯದು ಚೈತ್ರ ಅಮಾವಾಸ್ಯೆ, ಆಷಾಡ ಸಂವತ್ಸರ ಸೂರ್ಯ ಗ್ರಹಣ ಎಂದಿದೆ. ಎರಡನೆಯದು ೩೨೨ ನೆಯ ಸಂ. ಕಾರ್ತಿಕ ಶುದ್ಧ ಪಂಚಮಿ ಎಂದು ಉಲ್ಲೇಖಿಸಿದೆ. ಈ ಕಾಲವನ್ನು ಕಲಚುರ್ಯರ ಕಾಲಕ್ಕೆ ಸೇರಿಸಿದರೆ ಮಾರ್ಚ್ ೧೯, ಕ್ರಿ. ಶ. ೫೭೩ ಕ್ಕೆ ಹೊಂದುತ್ತದೆ. ಹಿಂದೂ ಧರ್ಮದ ಪ್ರಕಾರ ಇದು ಗುರುಗ್ರಹದ ಕಾಲವಾದ ೧೨ನೆಯ ವರ್ಷದ ಆಷಾಢ ಎಂದೂ, ಸೂರ್ಯ ಗ್ರಹಣವು ಚೈತ್ರ ಅಮಾವಾಸ್ಯೆಯಂದು ಬಂದಿತ್ತೆಂದೂ ತಿಳಿದು ಬರುತ್ತದೆ. ಈ ಶಾಸನದಲ್ಲಿ ಯಾವುದೇ ರಾಜವಂಶದ ಹೆಸರನ್ನು ಕೊಡುವುದಿಲ್ಲ. ಆದರೆ ಸ್ವಾಮಿಕರಾಜ ಮತ್ತು ನನ್ನರಾಜರ ಹೆಸರುಗಳಿರುವುದರಿಂದ ರಾಷ್ಟ್ರಕೂಟರದೆಂದು ಊಹಿಸಬಹುದಾಗಿದೆ. ವಿದ್ವಾಂಸರು ಈ ಶಾಸನದ ಕಾಲವನ್ನು ಗುರುತಿಸಲು ಕಲಚುರ್ಯರ ಕಾಲವನ್ನು ಗಣನೆಗೆ ತೆಗೆದುಕೊಂಡಿದ್ದಾರೆ. ಶಾಸನವು ಉಲ್ಲೇಖಿಸುವ ಸ್ವಾಮಿಕರಾಜ ಮತ್ತು ನನ್ನರಾಜರು ಕ್ರಮವಾಗಿ ಮೂರು ಮತ್ತು ನಾಲ್ಕನೆಯ ಅರಸರಾಗುತ್ತಾರೆ. ಕಲಚುರಿ ಕಾಲದ ಪ್ರಕಾರ ಇವರಿಬ್ಬರೂ ಉಳಿದಿಬ್ಬರಿಗಿಂತ ಮುಂಚೆಯೇ ಇರುವಂತೆ ಅರ್ಥ ಬರುತ್ತದೆ. ಆದುದರಿಂದ ಈ ಕಾಲ ಗಣನೆಯು ಇಲ್ಲಿಗೆ ಹೊಂದುವುದಿಲ್ಲ. ಕಲಚುರ್ಯರ ಕಾಲವು ಕ್ರಿ. ಶ. ೨೫೧ ರಲ್ಲಿ ಪ್ರಾರಂಭವಾಗುತ್ತದೆ. ಶಾಸನದಲ್ಲಿ ೩೨೨ ನೆಯ ಸಂವತ್ಸರವನ್ನು ಕೊಡುವುದರಿಂದ, ಇವೆರಡನ್ನು ಕೂಡಿದಾಗ ೫೭೩ ಬರುತ್ತದೆ. ವಂಶಾವಳಿಯ ಪ್ರಕಾರ ನಾಗಾರ್ಧನ್ ಪಟಗಳನ್ನು ಈ ವಂಶದ ಮೊದಲಿನ ಪಟವೆಂದು ಭಾವಿಸಬೇಕಾಗುತ್ತದೆ. ಈ ಶಾಖೆಯವರು ನಂದಿವರ್ಧನವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು, ಪ್ರಾದೇಶಿಕವಾಗಿ ಆಳುತ್ತಿದ್ದರು ಎಂದು ಹೇಳಬಹುದು. ನಾಗಾರ್ಧನವು ವಾಕಾಟಕರ ರಾಜಧಾನಿಯಾಗಿದ್ದರಿಂದ, ಅಚಲಾಪುರದ ರಾಷ್ಟ್ರಕೂಟರು

ಕಾಲಕ್ರಮದಲ್ಲಿ ವಾಕಾಟಕರನ್ನು ಗೆದ್ದು ಆ ಪ್ರದೇಶವನ್ನು ಆಕ್ರಮಿಸಿಕೊಂಡರೆಂದು ಊಹಿಸಬಹುದಾಗಿದೆ. ಈ ಪಟಗಳಲ್ಲಿ ತಾವು ಯಾರ ಕೈಕೆಳಗೆ ಆಳುತ್ತಿದ್ದರು ಎಂಬುದನ್ನು ತಿಳಿಸಿಲ್ಲ. ಸ್ವಾಮಿಕ ಮತ್ತು ನನ್ನರಾಜರು ಹಾಗೂ ಒಂದನೆಯ ಪುಲಿಕೇಶಿಯು ಸಮಕಾಲೀನರೆಂದು ತಿಳಿದು ಬರುತ್ತದೆ. ನಂತರ ಮಂಗಳೀಶ ಮತ್ತು ಎರಡನೆಯ ಪುಲಿಕೇಶಿ ಈ ಪ್ರಾಂತ್ಯವನ್ನು ವಶಪಡಿಸಿಕೊಂಡರು. ಬಹುಶಃ ಬಾದಾಮಿ ಚಲುಕ್ಯರಿಗೂ ಕಲಚುರ್ಯರಿಗೂ ಯುದ್ಧವಾಗಿರಬಹುದು. ಬಾದಾಮಿಯ ಚಲುಕ್ಯ ದೊರೆಗಳು ವಿದರ್ಭವನ್ನು ವಶಪಡಿಸಿಕೊಂಡರು. ಈ ಸಂದರ್ಭದಲ್ಲಿ ಅಚಲಾಪುರದ ರಾಷ್ಟ್ರಕೂಟರು ಆಗಾಗ್ಗೆ ಬಾದಾಮಿ ಚಲುಕ್ಯರಿಗೆ ದಂಗೆ ಏಳುವ ಮೂಲಕ ತೊಂದರೆ ಕೊಡುತ್ತಿದ್ದರು. ಇದಕ್ಕೆ ಪೂರಕವಾಗಿ ಇಮ್ಮಡಿ ಪುಲಕೇಶಿಯ ಐಹೊಳೆ ಪ್ರಶಸ್ತಿ ಶಾಸನವು ಮಾಹಿತಿಯನ್ನು ನೀಡುತ್ತದೆ. ಅಪ್ಪಾಯಿಕ ಮತ್ತು ಗೋವಿಂದ ಎಂಬ ವೀರರು ತಮ್ಮ ಗಜಸೈನ್ಯವನ್ನು ತಂದು ಭೀಮರಥಿ ನದಿಯ ಉತ್ತರ ದಡದ ಪ್ರದೇಶದ ಮೇಲೆ ದಾಳಿ ಮಾಡಿದ್ದನ್ನು ವಿವರಿಸುತ್ತ, ಇವರಲ್ಲಿ ಒಬ್ಬನು ಪೂರ್ಣ ಪರಾಭವಗೊಂಡನು; ಇನ್ನೊಬ್ಬ ತನ್ನ ಶೌರ್ಯಕ್ಕೆ ಪುರಸ್ಕೃತನಾದನು ಎಂದು ತಿಳಿದುಬರುತ್ತದೆ. ಬಹುಶಃ ಈತ ಚಲುಕ್ಯರೊಂದಿಗೆ ರಾಜಿ ಮಾಡಿಕೊಂಡಿರಬಹುದು. ಶಾಸನದಲ್ಲಿ ಇವರ ವಂಶದ ಹೆಸರು ಹೇಳುವುದಿಲ್ಲವಾದ್ದರಿಂದ ಈ ರೀತಿಯಲ್ಲಿ ಊಹೆ ಮಾಡಬೇಕಾಗುತ್ತದೆ.

ಅಚಲಾಪುರದ ರಾಷ್ಟ್ರಕೂಟ ಕುಲದಲ್ಲಿ ದುರ್ಗರಾಜ, ಗೋವಿಂದರಾಜ, ಸ್ವಾಮಿಕರಾಜ ಎಂಬ ಮೂರು ಅರಸರು ಕ್ರಿ.ಶ. ೬೩೦ ರವರೆಗೆ ಪ್ರಾರಂಭದ ಬಾದಾಮಿ ಚಲುಕ್ಯರ ಕೈಕೆಳಗಿನ ಅಧಿಕಾರಿಗಳಾಗಿದ್ದರು. ಸ್ವಾಮಿಕರಾಜನ ಮಗನಾದ ನನ್ನರಾಜನು ಸಮರ್ಥ ದೊರೆಯಾಗಿದ್ದನು. ಇವನು ಬೀರಾರ ಪ್ರಾಂತಕ್ಕೆ ತೆರಳಿ ಹಲವಾರು ಯುದ್ಧಗಳಲ್ಲಿ ವಿಜಯಗಳಿಸಿದ್ದನು. ಚಲುಕ್ಯ ರಾಜನಾದ ಇಮ್ಮಡಿ ಪುಲಕೇಶಿ ಕಾಲದಲ್ಲಿ ಎಂದರೆ ಸುಮಾರು ಕ್ರಿ.ಶ. ೬೪೦ ರಲ್ಲಿ ಸ್ವಂತಂತ್ರನಾಗಲು ಪ್ರಯತ್ನ ನಡೆಸಿ ತನ್ನದೇ ಆದ ಅಚಲಾಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡಂತೆ ತೋರುತ್ತದೆ. ಅದು ಲಾಟೂರಿನಿಂದ ೨೨೫ ಮೈಲಿ ದೂರವಿದೆ. ಈಗ ಅದನ್ನು ಎಲಿಚಪುರ ಎಂದು ಕರೆಯಲಾಗುತ್ತಿದೆ.

ನನ್ನರಾಜ ತನ್ನ ಕುಲದಲ್ಲಿ ಸಾಮಂತ ಪದವಿಗೇರಿದವರಲ್ಲಿ ಮೊದಲಿನೆಯವನು. ಆದ್ದರಿಂದ ಇವನನ್ನೇ ರಾಷ್ಟ್ರಕೂಟ ಕುಲದ ಮೂಲ ಸ್ಥಾಪಕನೆಂದು ಭಾವಿಸಬಹುದು. ಇವರು ಗರುಡ ಲಾಂಛನರಾಗಿದ್ದರು. ಕ್ರಿ.ಶ. ೬೩೦ ರಿಂದ ೬೫೦ ರವರೆಗೆ ಈತ ರಾಜ್ಯವಾಳಿದನು. ನನ್ನರಾಜನ ತರುವಾಯ ಬಂದವನು ದಂತಿದುರ್ಗ. ದಂತಿವರ್ಮ ಆತನ ಇನ್ನೊಂದು ಹೆಸರು. ಈತ ನನ್ನರಾಜನ ಮಗನೋ ಅಥವಾ ಆತನ ಚಿಕ್ಕಪ್ಪನ ಮಗನೋ ಸರಿಯಾಗಿ ತಿಳಿಯದು. ಈ ರೀತಿ ಎರಡೂ ರಾಜವಂಶಗಳನ್ನು ಒಟ್ಟಿಗೆ ಗುರುತಿಸಿ ಹೇಳುವುದು ಗೊಂದಲಕ್ಕೆಡೆ ಮಾಡಿಕೊಡುತ್ತದೆ. ಇಂತಹ ಊಹೆಗಳಿಗೆ ಆಧಾರಗಳು ಸಾಲದು.

ದಂತಿವರ್ಮ ಕ್ರಿ.ಶ. ೬೫೦ ರಿಂದ ೬೬೫ ರವರೆಗೆ ಆಳಿದನು. ಈತನ ಕಾಲದ ಯಾವ ಶಾಸನವೂ ಇಲ್ಲ. ಇವನ ಕಾಲದ ನಂತರ ಅಂದರೆ ಸುಮಾರು ೮೦ ವರ್ಷಗಳ ನಂತರ ಹೊರಡಿಸಿದ ಶಾಸನಗಳು ದಂತಿವರ್ಮನ ವೀರಕಾರ್ಯಗಳನ್ನು ಹೊಗಳಿವೆ. ಆದರೆ ಇದಕ್ಕೆ ಚರಿತ್ರೆಯನ್ನು ಬರೆಯಲಾಗದು. ದಂತಿವರ್ಮನ ಮಗ ಇಂದ್ರನೂ, ಪೃಚ್ಛಕರಾಜನ ಮೊಮ್ಮಗ ಗೋವಿಂದರಾಜನೂ ಕ್ರಿ.ಶ.೬೬೫ರಿಂದ ೭೦೦ರವರೆಗೆ ಅರಸರಾಗಿದ್ದರು. ಇವರ ಬಗ್ಗೆ ನಮಗೆ ಹೆಚ್ಚಿನ ಮಾಹಿತಿ ತಿಳಿಯುವುದಿಲ್ಲ. ಒಂದನೆಯ ಗೋವಿಂದನು ಬಹುಶಃ ಶೈವನಾಗಿದ್ದಿರಬೇಕು. ಏಕೆಂದರೆ ಶಿವನ ಹೊರತು ಬೇರೆ ಯಾವ ದೊರೆಗೂ ಆತನ ತಲೆ ಬಾಗಿದವನೆಲ್ಲವೆಂದು ಶಾಸನಗಳು ವರ್ಣಿಸಿವೆ. ಗೋವಿಂದನ ನಂತರ ಅವನ ಮಗ ಕರ್ಕರಾಜನು ಪಟ್ಟಕ್ಕೆ ಬಂದನು. ಈತ ಕ್ರಿ.ಶ. ೭೦೦ ರಿಂದ ೭೧೫ ರವರೆಗೆ ರಾಜ್ಯವಾಳಿದನು. ಅವನ ಹೆಸರೆತ್ತಿದೊಡನೆಯೇ ಶತ್ರುಪತ್ನಿಯರ ಕಣ್ಣೀರು ಧಾರಾಕಾರವಾಗಿ ಸುರಿಯುತ್ತಿತ್ತಂತೆ. ಈ ವಿವರಗಳು ನಂತರದ ಶಾಸನಗಳಿಂದ ತಿಳಿಯುತ್ತವೆಯೇ ಹೊರತು ಇವನ ಕಾಲಕ್ಕೆ ಸಂಬಂಧಿಸಿದಂತೆ ನೇರವಾದ ಶಾಸನೋಕ್ತ ದಾಖಲೆಗಳೇನೂ ಇಲ್ಲ.

ಕರ್ಕರಾಜನಿಗೆ ಇಂದ್ರ, ಧ್ರುವ, ಕೃಷ್ಣ ಮತ್ತು ನನ್ನರಾಜ ಎಂಬ ನಾಲ್ಕು ಮಕ್ಕಳಿದ್ದರು. ಜ್ಯೇಷ್ಠನಾದ ಇಂದ್ರ ಅತ್ಯಂತ ಸಮರ್ಥನಾಗಿದ್ದನು. ಇವನು ಕ್ರಿ.ಶ.೭೧೫ರವರೆಗೆ ಅಧಿಕಾರದಲ್ಲಿದ್ದನು. ತಮ್ಮಂದಿರ ಸಹಾಯದಿಂದ ಬಹಳ ಬೇಗನೆ ತನ್ನ ರಾಜ್ಯವನ್ನು ಉತ್ತರಕ್ಕೆ ವಿಸ್ತರಿಸಿ, ಮಧ್ಯಪ್ರದೇಶದ ಭಾಗಗಳನ್ನು ವಶಪಡಿಸಿಕೊಂಡನು. ಇದೇ ಕಾಲಕ್ಕೆ ಅಂದರೆ ಕ್ರಿ.ಶ. ೬೯೭ ರಿಂದ ೭೩೩ ರ ಸುಮಾರಿನಲ್ಲಿ

ಗುಜರಾತಿನಲ್ಲಿ ಚಾಲುಕ್ಯದೊರೆ ವಿಜಯಾದಿತ್ಯನು ಆಳ್ವಿಕೆ ನಡೆಸುತ್ತಿದ್ದನು. ಇದರಿಂದ ಇಂದ್ರನ ವಿಜಯ ಗುಜರಾತಿನ ಚಲುಕ್ಯ ವಿಜಯಾದಿತ್ಯನನ್ನೇನು ಬಾಧಿಸಲಿಲ್ಲ. ಸಾಮಂತರು ತಮ್ಮ ಇಷ್ಟಬಂದಂತೆ ಇತರ ರಾಜರುಗಳನ್ನು ಗೆಲ್ಲಬಹುದಾಗಿತ್ತು. ಆದರೆ ಚಕ್ರಾಧಿಪತ್ಯಕ್ಕೆ ಧಕ್ಕೆ ತಾರದಿದ್ದರೆ ಸರಿ ಎಂಬ ನಿಲುವಿತ್ತೆಂದು ತಿಳಿದುಬರುತ್ತದೆ.

ಒಂದನೆಯ ಇಂದ್ರನ ರಾಜ್ಯವು ವೃದ್ಧಿಗೊಳ್ಳುತ್ತಿದ್ದಾಗ, ಅದರ ದಕ್ಷಿಣಕ್ಕೆ ಚಲುಕ್ಯ ರಾಜ್ಯವಿತ್ತು. ಪಶ್ಚಿಮಕ್ಕೆ ನವಸಾರಿಯನ್ನು ರಾಜಧಾನಿಯಾಗಿ ಹೊಂದಿದ್ದ ಗುಜರಾತ್ ಚಲುಕ್ಯ ರಾಜ್ಯವಿತ್ತು. ನಂದಿಪುರಿಯು ರಾಜ್ಯಧಾನಿಯಾಗಿದ್ದ ಗುರ್ಜರ ರಾಜ್ಯವೂ ಇತ್ತು. ಇವೆರಡೂ ರಾಜ್ಯಗಳು ಇಂದ್ರನ ರಾಜ್ಯಕ್ಕಿಂತ ಚಿಕ್ಕದಾಗಿದ್ದವು. ಇಂದ್ರನನ್ನು ಎದುರಿಸುವ ಶಕ್ತಿ ಇವರಿಗಿರಲಿಲ್ಲ. ನವಸಾರಿಯಲ್ಲಿ ಕ್ರಿ.ಶ. ೭೦೦ ರಿಂದ ೭೩೨ ರವರೆಗೆ ವಿಜಯಾದಿತ್ಯನು ಅರಸನಾಗಿದ್ದ. ಗೂರ್ಜರ ರಾಜನಾದ ಮೂರನೆಯ ಜಯಭಟನು ಇದೇ ಸಮಯದಲ್ಲಿ ನಂದೀಪುರಿಯ ದೊರೆಯಾಗಿದ್ದ. ವಲಭಿಯಲ್ಲಿ ಐದನೆಯ ಶಿಲಾದಿತ್ಯನು ರಾಜನಾಗಿದ್ದನು (ಕ್ರಿ.ಶ.೭೦೦–೭೪೦). ಉತ್ತರ ಗುಜರಾತಿನ ಕೈರಾ ಮತ್ತು ಪಂಚಮಹಲ ಪ್ರಾಂತಗಳು ಅವನ ಅಧೀನವಾಗಿದ್ದವು.

ಇಂದ್ರರಾಜನ ಆಳ್ವಿಕೆಗೆ ಸಂಬಂಧಿಸಿದಂತೆ ಇದುವರೆಗೆ ತಿಳಿದಿರುವುದು ಅವನ ರಾಕ್ಷಸ ವಿವಾಹದ ಸಂಗತಿ ಮಾತ್ರ. ಅವನು ಚಲುಕ್ಯ ರಾಜನೊಬ್ಬನನ್ನು ಜಯಿಸಿ ಅವನ ಮಗಳನ್ನು ಸ್ವಯಂವರ ಮಂಟಪದಿಂದ ಅಪಹರಿಸಿಕೊಂಡು ಬಂದನು. ಈಕೆಯನ್ನು ರಾಕ್ಷಸ ವಿವಾಹ ಪದ್ಧತಿಯಿಂದ ಮದುವೆಯಾದನು. ಭವಗಣಾ ಅಥವಾ ಭವನಾಗಾ ಎಂದು ಅವಳಿಗೆ ಹೆಸರುಗಳಿವೆ. ಚಲುಕ್ಯ ದೊರೆಯ ಹೆಸರೇನೋ ತಿಳಿದಿಲ್ಲ. ಪ್ರಾಯಶಃ ಭವನಾಗಾ ಮಂಗಲರಾಜ ವಿನಯಾದಿತ್ಯನ ಮಗಳು ಇಲ್ಲವೇ ಅವನ ಮಗನಾದ ಪುಲಕೇಶಿಯ ಮಗಳಿರಬಹುದೆಂದು ಡಾ॥ ಅಲ್ಟೇಕರರು ಅಭಿಪ್ರಾಯಪಡುತ್ತಾರೆ. ಈ ಘಟನೆ ನಡೆದದ್ದು ವಲಭಿಯ ಮೈತ್ರ ರಾಜ್ಯದ ಕೈರಾದಲ್ಲಿ. ಭವನಾಗಾಳ ನಿಶ್ಚಿತ ವರನು ಬಹುಶಃ ವಲಭಿಯ ರಾಜಕುಮಾರನಿರಬಹುದು ಎನ್ನುವ ವಿದ್ವಾಂಸರೂ ಇದ್ದಾರೆ. ಸ್ವಯಂವರಕ್ಕೂ, ನಿಶ್ಚಿತ ವಿವಾಹಕ್ಕೂ ಬಹಳ ವ್ಯತ್ಯಾಸವಿದೆ. ಇಲ್ಲಿನ ವಿವಾಹಕ್ಕೆ ಇಂದ್ರನಿಗೆ ಆಮಂತ್ರಣವಿರಲಿಲ್ಲ. ಇದನ್ನು ಅವಮಾನವೆಂದು ಭಾವಿಸಿದ ಇಂದ್ರನಿಗೆ, ರಾಜಕುಮಾರಿಯನ್ನು ಅಪಹರಿಸಿ ಮದುವೆಯಾಗುವ ಸಂದರ್ಭ ಒದಗಿಬಂದಿರಬಹುದು. ಡಾ॥ ಅಲ್ಟೇಕರರು ಈ ರೀತಿ ವ್ಯಕ್ತಪಡಿಸಿದ್ದಾರೆ. ರಾಕ್ಷಸವಿವಾಹವು ಶಾಸ್ತ್ರಸಮ್ಮತವಾದ

ಮತ್ತು ಕ್ಷತ್ರಿಯೋಚಿತವಾದ ವಿವಾಹವಾದ್ದರಿಂದ ಆಕೆಯ ತಂದೆ ಸುಮ್ಮನಿರಬೇಕಾಯಿತು. ಕ್ರಿ.ಶ. ೭೧೫ ರ ಸುಮಾರಿಗೆ ಈ ವಿವಾಹ ನಡೆಯಿತೆಂದು ಭಾವಿಸಬಹುದಾಗಿದೆ.

ಇಂದ್ರನು ಕ್ರಿ.ಶ. ೭೧೫ ರ ಕಾಲಕ್ಕೆ ಸಾಕಷ್ಟು ಬಲಿಷ್ಠನಾಗಿದ್ದನೆಂದು ಊಹಿಸಬಹುದು. ಏಕೆಂದರೆ ಗುಜರಾತದ ಚಾಲುಕ್ಯರನ್ನು ಮತ್ತು ವಲಭಿಯ ಮೈತ್ರಕರನ್ನು ಎದುರಿಸುವ ಸಾಮರ್ಥ್ಯವಿತ್ತು ಎಂದರೆ ಸಾಮಾನ್ಯವೇನಲ್ಲ. ಇದರಿಂದ ಇಂದ್ರನ ಪ್ರತಿಷ್ಠೆ ಮತ್ತಷ್ಟು ಹೆಚ್ಚಿತು. ಒಂದನೆಯ ಇಂದ್ರನಿಗೆ ಭವಗಣಾಳಲ್ಲಿ ಜನಿಸಿದ ಮಗನೇ ರಾಷ್ಟ್ರಕೂಟ ಸಾಮ್ರಾಜ್ಯದ ಅಧಿಕೃತ ಸ್ಥಾಪಕನಾದ ದಂತಿದುರ್ಗ.

ಅಚಲಾಪುರದ ರಾಷ್ಟ್ರಕೂಟರು ಮತ್ತು ಮಳಖೇಡದ ರಾಷ್ಟ್ರಕೂಟರನ್ನು ನೇರವಾಗಿ ಒಂದೇ ರೇಖೆಯಡಿಯಲ್ಲಿ ತರುವುದು ಅಷ್ಟು ಸಮಂಜಸವಲ್ಲವೆನಿಸುತ್ತದೆ. ಏಕೆಂದರೆ ನನ್ನ ಮತ್ತು ಶಂಕರಗಣರೆಂಬ ದೊರೆಗಳ ಉಲ್ಲೇಖ ಬಂದಾಗ ಇವರು ದಾಯಾದಿಗಳಂತೆಯೇ ಕಂಡುಬರುತ್ತಾರೆ. ಇನ್ನು ಆಳ್ವಿಕೆಯ ಪ್ರದೇಶವನ್ನೂ ಗಮನದಲ್ಲಿರಿಸಿಕೊಂಡರೆ, ದೂರದ ವ್ಯತ್ಯಾಸವನ್ನೂ ಗಮನಿಸಬೇಕಾಗುತ್ತದೆ. ಎಲ್ಲೋರ ಮತ್ತು ಮರಾಠವಾಡ ಪ್ರದೇಶಗಳಾಗಲೀ, ಅಥವಾ ಎಲಿಚಪುರವಾಗಲೀ ಒಂದೊಕ್ಕೊಂದು ಬಹಳ ದೂರವೇನು ಇಲ್ಲ. ಪಕ್ಕಪಕ್ಕದ ಊರುಗಳಲ್ಲಿಯೇ ರಾಜ್ಯವಾಳುವುದರಿಂದ ಯಾವ ಪುರುಷಾರ್ಥವನ್ನೂ ಸಾಧಿಸಿದಂತಾಗುವುದಿಲ್ಲ. ಆದ್ದರಿಂದ ಇವರಿಬ್ಬರನ್ನು ಬೇರೆಬೇರೆಯಾಗಿಯೇ ಗುರುತಿಸಬಹುದೇ ಹೊರತು ಒಂದೇ ಎನ್ನಲು ಸಾಧ್ಯವಿಲ್ಲ.

**ಅಚಲಾಪುರದ ರಾಷ್ಟ್ರಕೂಟರ ವಂಶಾವಳಿ:-**



## ೩. ಮಾನ್ಯಖೇಟದ ರಾಷ್ಟ್ರಕೂಟರು (ಕ್ರಿ.ಶ. ೭೩೫ - ೯೭೪)

ಧಾರನಾಥ ಧನಂ ಸದಾ ಬಹುಜನಂ ಪ್ರೋತ್ಫುಲ್ಲವಲ್ಲೀವನಂ ।

ಮಾನ್ಯಖೇಟಪುರಂ ಪುರಂದರಪುರೀಲೀಲಾಹರಂ ಸುಂದರಮ್ ॥

ಧಾರಾನಾಥ ನರೇಂದ್ರ ಕೋಪಶಿಖಿನಾಂ ದಗ್ಧಂ ವಿದಗ್ಧ ಪ್ರಿಯಂ।

ಕೇಡಾನೀಂ ವಸಂತಿ ಕರಿಷ್ಯತಿ ಪುನಃ ಶ್ರೀಪುಷ್ಪದಂತಃ ಕವಿಃ ॥

ಮಹಾಪ್ರಶಸ್ತಿ-೫೦

ನಗರದ ಸೌಂದರ್ಯವನ್ನು ವರ್ಣಿಸುವ ಈ ಸಾಲುಗಳು ರಾಷ್ಟ್ರಕೂಟರ ರಾಜಧಾನಿ ಮಾನ್ಯಖೇಟ ಅಥವಾ ಮಳಖೇಡವನ್ನು ಕುರಿತದ್ದಾಗಿವೆ. ಒಂದನೆಯ ಅಮೋಘವರ್ಷನ ಕಾಲಕ್ಕೆ ಮಳಖೇಡವು ರಾಜಧಾನಿಯಾಯಿತು. ಇದಕ್ಕೆ ಮುಂಚೆ ರಾಜಧಾನಿ ಯಾವುದೆಂದು ತಿಳಿಯದಿರುವುದರಿಂದ ರಾಷ್ಟ್ರಕೂಟರು ಮಳಖೇಡದ ರಾಷ್ಟ್ರಕೂಟರೆಂದೇ ಪ್ರಸಿದ್ಧರಾಗಿದ್ದಾರೆ. ಇವರು ಕ್ರಿ.ಶ.೭೩೫ ರಿಂದ ೯೭೪ ರವರೆಗೆ, ಸುಮಾರು ೨೪೩ ವರ್ಷಗಳ ಕಾಲ ಭಾರತದ ಹಲವು ಭಾಗಗಳಲ್ಲಿ ವಿಜೃಂಭಣೆಯಿಂದ ರಾಜ್ಯವಾಳಿದರೆಂದು ಹೇಳಬಹುದು.

### ದಂತಿವರ್ಮನ್ (ದಂತಿದುರ್ಗ ।)

ರಾಷ್ಟ್ರಕೂಟರ ಇತಿಹಾಸದಲ್ಲಿ ದಂತಿವರ್ಮನ ಹೆಸರು ಮೊಟ್ಟ ಮೊದಲನೆಯದಾಗಿದೆ. ಈತನ ಶಾಸನಗಳು ಸಿಗುವುದಿಲ್ಲ. ಆದರೆ ದಶಾವತಾರ ಗುಹೆಯಲ್ಲಿರುವ (Archaeological survey report of Western India, Vol. V, page 87; and Cave Temple Inscriptions, p92) ಶಾಸನದಲ್ಲಿ ಈತನನ್ನು ವರ್ಣಾಶ್ರಮಧರ್ಮದ ಪೋಷಕನೆಂದು ವರ್ಣಿಸಲಾಗಿದೆ. ಈತ ಒಳ್ಳೆಯ ಸ್ವಭಾವದ ಕರುಣಾಳುವಾಗಿದ್ದ. ಸ್ವತಂತ್ರ ದೊರೆಯಾಗಿದ್ದ. ಈತ ಬಹುಶಃ ಕ್ರಿ.ಶ. ೫೯೩ರಲ್ಲಿ ಆಳ್ವಿಕೆ ನಡೆಸುತ್ತಿದ್ದಿರಬಹುದೆಂದು ಊಹಿಸಲಾಗಿದೆ.

## ಇಂದ್ರರಾಜ । (ಪೃಚ್ಛಕರಾಜ)

ಒಂದನೆಯ ಇಂದ್ರರಾಜನು ದಂತಿವರ್ಮನ ಮಗನೆಂದು ತಿಳಿದುಬರುತ್ತದೆ. ದಶಾವತಾರದ ಗುಹೆಯ (Ibid) ಶಾಸನದಲ್ಲಿ ಮಾತ್ರ ಇವರಿಬ್ಬರ ಉಲ್ಲೇಖವಿದೆ. ಈ ಶಾಸನದಲ್ಲಿ ಇಂದ್ರರಾಜನು ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದನೆಂಬ ಅಂಶ ತಿಳಿದು ಬರುತ್ತದೆ. ಈತನಿಗೆ ಇಂದ್ರ ಪೃಚ್ಚಕರಾಜನೆಂಬ ಹೆಸರೂ ಇತ್ತೆಂದು ತಿಳಿದು ಬರುತ್ತದೆ.

## ಗೋವಿಂದರಾಜ ।

ಒಂದನೆಯ ಇಂದ್ರರಾಜನ ಮರಣದ ನಂತರ ಅವನ ಮಗ ಒಂದನೆಯ ಗೋವಿಂದರಾಜನು ಪಟ್ಟಕ್ಕೆ ಬರುತ್ತಾನೆ. ಐಹೊಳೆಯ ಶಾಸನದಲ್ಲಿ (EI. Vol. VI, P 5 - 6; 634AD) ಮಂಗಳೀಶನ ಕೊಲೆಯಾಗಿ, ಇಮ್ಮಡಿ ಪುಲಕೇಶಿಯು ಪಟ್ಟಕ್ಕೆ ಬಂದಾಗ ಗೋವಿಂದರಾಜ ಮತ್ತು ಆತನ ಸಂಗಡಿಗರು ಸಿಕ್ಕ ಅವಕಾಶವನ್ನು ಉಪಯೋಗಿಸಿಕೊಂಡರು. ಸೋಲಂಕಿಗಳ ದೌರ್ಬಲ್ಯವನ್ನು ಅರಿತು ಒಂದನೆಯ ಗೋವಿಂದರಾಜನು ತನ್ನ ಪೂರ್ವಜರ ರಾಜ್ಯವನ್ನು ಗಳಿಸಲು ಪ್ರಯತ್ನಿಸಿ ವಿಫಲನಾದನೆಂದು ತಿಳಿದುಬರುತ್ತದೆ. ಶಾಸನದಲ್ಲಿ

ಲಬ್ದ್ವಾಕಾಲಂ ಭುವಮುಪಗತೇಜೇತುಮಪಾಯಿಕಾಖ್ಯೇ

ಗೋವಿನ್ದೇ ಚ ದ್ವಿರದನಿಕರೈರುತಗಭ್ಯೋದಿ ಸ್ಥ್ಯಾ।

ಯಸ್ಯಾನೀಕೈರ್ಯುಧಿ ಭಯರಸಜ್ಞತ್ವಮೇಕಃ ಪ್ರಯಾತಃ

ತತ್ರಾವಾಪ್ತಂ ಫಲಮುಪಕೃತಸ್ಯಾಪರೇಣಾಪಿ ಸದ್ಯಃ।।

ಎಂದು ಹೇಳಿದೆ. ಇದರಿಂದ ಗೋವಿಂದರಾಜನು ಇಮ್ಮಡಿ ಪುಲಕೇಶಿಯ ಸಮಕಾಲೀನನಾಗಿದ್ದನೆಂಬ ಅಂಶವು ಸ್ಪಷ್ಟವಾಗುತ್ತದೆ. ಒಂದನೆಯ ಗೋವಿಂದರಾಜನಿಗೆ ವೀರನಾರಾಯಣನೆಂಬ ಇನ್ನೊಂದು ಹೆಸರಿತ್ತೆಂದು ತಿಳಿದುಬರುತ್ತದೆ.

## ಕರ್ಕರಾಜ (ಕಕ್ಕ ।)

ಒಂದನೆಯ ಗೋವಿಂದರಾಜನ ಉತ್ತರಾಧಿಕಾರಿಯಾಗಿ ಅವನ ಮಗ ಕರ್ಕರಾಜನು ಅಧಿಕಾರಕ್ಕೆ ಬಂದನು. ಈತ ವೈದಿಕ ಧರ್ಮದ

ಅನುಯಾಯಿಯಾಗಿದ್ದನು. ಈತನ ಕಾಲದಲ್ಲಿ ಅನೇಕ ಯಜ್ಞಾದಿಗಳು ಬ್ರಾಹ್ಮಣರಿಂದ ನಡೆಸಲ್ಪಡುತ್ತಿದ್ದವು. ಈತನಿಗೆ ಇಂದ್ರರಾಜ, ಕೃಷ್ಣರಾಜ ಮತ್ತು ನನ್ನ ಎಂಬ ಮೂರು ಮಕ್ಕಳಿದ್ದರು. ಈತನ ಕಾಲದ ಒಂದೇ ಒಂದು ಶಾಸನ ಸಿಕ್ಕಿದೆ (JESI., vol X, p 30ff, ಭಿಂದೋನ್) ಪಿಂಗಲಿಕಾದಲ್ಲಿ ತಂಗಿದ್ದಾಗ ಅಂದರೆ ಬೀಡು ಬಿಟ್ಟಿದ್ದಾಗ, ಈ ದಾನಶಾಸನವನ್ನು ಹೊರಡಿಸಲಾಗಿದೆ. ದಾನವನ್ನು ನೀಡಿದವನು ದುರ್ಗರಾಜನ ಮಗ ಸ್ವಾಮಿರಾಜನೆಂದು ಉಲ್ಲೇಖಿಸಿದೆ.

ದುರ್ಗರಾಜ ಮತ್ತು ಸ್ವಾಮಿರಾಜರು ಅಚಲಾಪುರದ ವಂಶಕ್ಕೆ ಸೇರಿದವರು. ಅಚಲಾಪುರದ ರಾಷ್ಟ್ರಕೂಟರ ವಂಶಾವಳಿಯಲ್ಲಿ ದುರ್ಗರಾಜನ ಮೊಮ್ಮಗ ಸ್ವಾಮಿಕರಾಜನಾಗಿದ್ದಾನೆ. ಪ್ರಸ್ತುತ ಶಾಸನದಲ್ಲಿ ಇವರಿಬ್ಬರನ್ನು ತಂದೆ ಮಗನೆಂದು ಗುರುತಿಸಲಾಗಿದೆ. ದುರ್ಗರಾಜನು ಪ್ರತಾಪಶೀಲ ಕರ್ಕರಾಜನ ಅನುಯಾಯಿಯಾಗಿದ್ದನೆಂಬ ವಿವರವಿದೆ. ಸ್ವಾಮಿರಾಜನು ಶೂರನಾಗಿದ್ದನು, ಶತ್ರುನಾಶಕನಾಗಿದ್ದನು ಎಂಬ ವಿಚಾರಗಳನ್ನು ತಿಳಿಸುತ್ತದೆ. ಶಾಸನದ ಆರಂಭದ ಎರಡು ಸಾಲುಗಳು ಅಳಿಸಿ ಹೋಗಿದ್ದರೂ, ನಂತರದ ಸಾಲುಗಳಲ್ಲಿ ಕರ್ಕರಾಜನ ವರ್ಣನೆಯಿದೆ. ಈತನು ಧರಿಸಿದ ಹೂವಿನ ಹಾರದಲ್ಲಿ ಈತ ಅನೇಕ ಯುದ್ಧಗಳಲ್ಲಿ ಕೊಂದ ಆನೆಗಳ ತಲೆಯ ಭಾಗವಿದೆಯೆಂದೂ ಅದರ ಭಾರದಿಂದ ಜೋತಾಡುತ್ತಿತ್ತೆಂದೂ ವರ್ಣಿಸಲಾಗಿದೆ. ವರ್ಣನೆಯು ಮುಂದುವರಿದು, ಈತನು ಪೂರ್ವದ ಬೆಟ್ಟದ ಮೇಲೆ ಏರುತ್ತಿರುವ ಚಂದ್ರನಂತಿದ್ದನು, ಈತನ ಪಾದವು ಶರಣಾಗತರಾಗಿದ್ದ ಅರಸರ ವಜ್ರಖಚಿತ ಕಿರೀಟಗಳ ಹೊಳಪಿನಿಂದ ಬೆಳಗುತ್ತಿತ್ತೆಂದು ಹೇಳಲಾಗಿದೆ. ಸ್ವಾಮಿರಾಜನು ಅರಸನ ಒಪ್ಪಿಗೆಯ ಮೇರೆಗೆ ಪುರೋಹಿತರು ಮತ್ತು ಸಂಧಿವಿಗ್ರಹಿಗಳ ಸಮ್ಮುಖದಲ್ಲಿ ದಾನ ನೀಡಿದನೆಂದು ಉಲ್ಲೇಖಿಸಿದೆ.

ಮೇಲಿನ ಶಾಸನದಿಂದ ಕೆಲವು ಹೊಸ ವಿಚಾರಗಳು ತಿಳಿದು ಬರುತ್ತವೆ. ಸಾಮಾನ್ಯವಾಗಿ ರಾಷ್ಟ್ರಕೂಟರ ವಂಶಾವಳಿಯನ್ನು ಒಂದನೆಯ ಗೋವಿಂದರಾಜನಿಂದ ಪ್ರಾರಂಭಿಸುವುದನ್ನು ಗಮನಿಸಿದ್ದೇವೆ. ಪ್ರಸ್ತುತ ಶಾಸನದಲ್ಲಿ ಕರ್ಕರಾಜನನ್ನು ಗೋವಿಂದರಾಜನ ಹಿರಿಯ ಮಗನೆಂದು ಹೇಳಿರುವುದರಿಂದ, ಈತನಲ್ಲದೆ ಇನ್ನೂ ಬೇರೆ ಮಕ್ಕಳಿದ್ದರೆಂಬ ವಿಚಾರವು ತಿಳಿದು ಬರುತ್ತದೆ. ಹಾಗೆಯೇ ಕರ್ಕರಾಜನ ಕಾಲಕ್ಕೆ ರಾಷ್ಟ್ರಕೂಟರು ಅರಸರಾಗಿಯೇ ಆಳ್ವಿಕೆ ನಡೆಸಿದ್ದರು. ಈತನನ್ನು "ಸ್ವಾಮಿನ್" ಎಂದು

ಕರೆಯಲಾಗಿದೆ. ಈತನಿಗೆ ಪಂಚಮಹಾಶಬ್ದ ಗೌರವವೂ ಪ್ರಾಪ್ತಿಯಾಗಿತ್ತೆಂಬ ವಿಷಯವೂ ತಿಳಿದುಬಂದಿದೆ. ಇವನ ಹಿಂದಿನವರಿಗೆ ಇಂತಹ ಗೌರವ ಪ್ರಾಪ್ತವಾಗಿರಲಿಲ್ಲವೆಂದು ಇದರಿಂದ ತಿಳಿದುಬರುತ್ತದೆ. ಚಿಂಚಪಲ್ಲಿ (ಈಗಿನ ಚಿಂಚೋಳಿ) ಮತ್ತು ಪಿಂಗಲಿಕಾ ತಟಾಕವನ್ನು ಬ್ರಾಹ್ಮಣನಿಗೆ ದಾನ ಮಾಡಿದುದನ್ನು ಈ ಶಾಸನವು ದಾಖಲಿಸುತ್ತದೆ. ಚಿಂಚಪಲ್ಲಿಯು ಗೋದಾವರಿ ನದಿಯ ದಕ್ಷಿಣ ಭಾಗದಲ್ಲಿತ್ತು. ಪಿಂಗಲಿಕಾವು ಪರ್ಬಾನಿಯ ಆಗ್ನೇಯ ಭಾಗಕ್ಕಿತ್ತು. ಈತನು ನೀಡಿರುವ ದಾನದ ಆಧಾರದ ಮೇಲೆ ಈತ ಮರಾಠವಾಡ, ಔರಂಗಾಬಾದ್, ಪರ್ಬಾನಿ ಪ್ರಾಂತಗಳನ್ನು ಆಳುತ್ತಿದ್ದನೆಂದು ಊಹಿಸಬಹುದಾಗಿದೆ. ಶಾಸನದ ಲಿಪಿಯ ಆಧಾರದಿಂದ ಈತನ ಕಾಲವನ್ನು ಏಳನೆಯ ಶತಮಾನದ ಕೊನೆಯ ಭಾಗ ಅಥವಾ ಎಂಟನೆಯ ಶತಮಾನದ ಮೊದಲ ಭಾಗಕ್ಕೆ ಹಾಕಬಹುದೆಂದು ವಿದ್ವಾಂಸರ ಅಭಿಪ್ರಾಯವಾಗಿದೆ (JESI. Vol X, 1983., Vol. 30-35, Ramesh K. V.)

### ಇಂದ್ರರಾಜ II

ಎರಡನೆಯ ಇಂದ್ರರಾಜನು ಒಂದನೆಯ ಕಕ್ಕನ ಹಿರಿಯ ಮಗನಾಗಿದ್ದಾನೆ. ಈತನ ರಾಣಿ ಚಲುಕ್ಯ ರಾಜಕುಮಾರಿಯಾಗಿದ್ದಳು. ಈ ಸಂಬಂಧದಿಂದ ರಾಷ್ಟ್ರಕೂಟರಿಗೂ ಚಲುಕ್ಯರಿಗೂ ಇದ್ದ ದ್ವೇಷ ಕೊನೆಗೊಂಡಿತ್ತು ಎಂಬ ವಿಚಾರ ಸ್ಪಷ್ಟವಾಗುತ್ತದೆ. ಮುಂದಿನ ದಿನಗಳಲ್ಲಿ ದ್ವೇಷ ಉಂಟಾಗಲು ಅನೇಕ ಕಾರಣಗಳು ಉದ್ಭವವಾಗಿರಬಹುದು. ಅಥವಾ ಅಧಿಕಾರ ದಾಹವೇ ಮೂಲಕಾರಣವಾಗಿರಬಹುದು. ದಂತಿದುರ್ಗನ ಶಾಸನದಲ್ಲಿ ಈತನ ಬಗ್ಗೆ ತಿಳಿದರೂ ಇವನ ಕಾಲದ ಶಾಸನಗಳೊಂದೂ ಸಿಕ್ಕಿಲ್ಲದಿರುವುದು ದುರ್ದೈವದ ಸಂಗತಿಯಾಗಿದೆ. ಈತ ಖೇಟಕಮಂಡಲ (ಕೈರಾ) ದಿಂದ ಚಾಲುಕ್ಯ ರಾಜಕುಮಾರಿ ಭವಗಣಾ ಅಥವಾ ಭವನಾಗಳನ್ನು ಹಾರಿಸಿಕೊಂಡು ಬಂದು ರಾಕ್ಷಸ ರೀತಿಯಿಂದ ವಿವಾಹವಾದ ವಿಷಯ ಎಲ್ಲರಿಗೂ ತಿಳಿದ ವಿಚಾರವಾಗಿದೆ. ಆದ್ದರಿಂದ ಮೊದಲು ಇದ್ದ ಸ್ನೇಹ ಸಂಬಂಧಗಳಲ್ಲಿ ವೈರತ್ವವು ಮೂಡಿತೆಂದು ಭಾವಿಸಲು ಅವಕಾಶಗಳಿವೆ ಅಥವಾ ತನ್ನ ಮಾಂಡಳೀಕನಿಗೆ ರಾಜಕುಮಾರಿಯನ್ನು ಕೊಡುವುದು ಇಷ್ಟವಿರಲಿಲ್ಲವೆಂದು ಭಾವಿಸಬಹುದಾಗಿದೆ.

## ದಂತಿದುರ್ಗ (ಕ್ರಿ.ಶ. ೭೩೫–೭೫೫)

ಇಂದ್ರರಾಜನ ನಂತರ ಪಟ್ಟಕ್ಕೆ ಬಂದವನು ದಂತಿದುರ್ಗ. ಇವನು ಬಾದಾಮಿ ಚಲುಕ್ಯರ ದೊರೆ ಇಮ್ಮಡಿ ವಿಕ್ರಮಾದಿತ್ಯನ ಸಮಕಾಲೀನನಾಗಿದ್ದವನು. ಅರಬರ ದಾಳಿಯನ್ನು ಚಲುಕ್ಯ ದೊರೆಯು ತಡೆಗಟ್ಟುವಾಗ ಇದ್ದ ಪರಿಸ್ಥಿತಿಯನ್ನು ದಂತಿದುರ್ಗನು ಕೆಲವು ಪ್ರದೇಶಗಳನ್ನು ಗೆದ್ದುಕೊಡುವುದರ ಮೂಲಕ ಉಪಯೋಗಿಸಿಕೊಂಡನು. ಎಲ್ಲೋರದ ಶಾಸನವು ದಂತಿದುರ್ಗನು ಕಾಂಚಿ, ಕಳಿಂಗ, ಕೋಸಲ, ಶ್ರೀಶೈಲ, ಮಾಳವ ಮತ್ತು ಲಾಟಗಳನ್ನು ಜಯಿಸಿದನೆಂದು ತಿಳಿಸುತ್ತದೆ. ದಂತಿದುರ್ಗನು ಮಳಖೇಡದ ರಾಷ್ಟ್ರಕೂಟರವನಾಗಿದ್ದು, ಬಾದಾಮಿ ಚಲುಕ್ಯರ ಇಮ್ಮಡಿ ಕೀರ್ತಿವರ್ಮನ ಮಾಡಳೀಕನಾಗಿ ಎಲ್ಲೋರದ ಸುತ್ತಲ ರಾಜ್ಯಕ್ಕೆ ಒಡೆಯನಾಗಿದ್ದನು. ಚಲುಕ್ಯರ ಮಾಂಡಳೀಕನಾಗಿದ್ದರಿಂದ ಅವರ ಪರವಾಗಿ ಶತ್ರುಗಳ ವಿರುದ್ಧ ಹೋರಾಡಿ ಜಯವನ್ನು ಪಡೆದನು. ಉಜ್ಜಯಿನಿಯಲ್ಲಿ ಹಿರಣ್ಯಗರ್ಭದಾನವನ್ನು ಮಾಡಿದಂತೆ ಉಲ್ಲೇಖವಿದೆ. ದಂತಿದುರ್ಗನು ಮಳಖೇಡದ ರಾಷ್ಟ್ರಕೂಟ ವಂಶದ ಸ್ಥಾಪಕನೆಂದು ಇತಿಹಾಸಕಾರರು ಗುರುತಿಸಿದ್ದಾರೆ.

ದಂತಿದುರ್ಗನ ಕಾಲವನ್ನು ಡಾ॥ ಅಲ್ಟೇಕರ್ ಅವರು ಕ್ರಿ.ಶ. ೭೪೫–೭೫೬ ಎಂದೂ ಉಳಿದ ವಿದ್ವಾಂಸರು ಕ್ರಿ.ಶ. ೬೩೫–೭೫೬ ಎಂದೂ ಸೂಚಿಸಿದ್ದಾರೆ. ದಂತಿದುರ್ಗನ ಶಾಸನವೊಂದು ಎಲ್ಲೋರದಲ್ಲಿ (EI, vol XXV, pp 125, 741 AD) ದೊರೆತಿದೆ. ಕ್ರಿ.ಶ. ೭೪೯ ರಲ್ಲಿ ಮಾನೋರ್ ನಲ್ಲಿ (IHQ., vol XXXV, 1959. no.3) ಶಾಸನವೊಂದು ಸಿಕ್ಕಿದ್ದು ಇದರಲ್ಲಿ ದಂತಿದುರ್ಗನು ರಾಜ್ಯವಾಳುತ್ತಿದ್ದಂತೆಯೂ ಇವನಿಗೆ 'ಖಡ್ಗಾವಲೋಕ' ಎಂಬ ಬಿರುದಿದ್ದಂತೆ ಉಲ್ಲೇಖಿಸಿದೆ. ಈ ಶಾಸನದಲ್ಲಿ ತನ್ನನ್ನು ಪೃಥ್ವೀವಲ್ಲಭ ಎಂದು ಕರೆದುಕೊಂಡಿದ್ದಾನೆ. ಈ ಎರಡು ಬಿರುದುಗಳನ್ನು ಚಲುಕ್ಯರಿಂದ ಪಡೆದಿರಬಹುದೆಂದು ಊಹಿಸಲಾಗಿದೆ. ಕ್ರಿ. ಶ. ೭೫೩ರ ಸಾಮನಗಡ ಶಾಸನದಲ್ಲಿ ತನ್ನ ಹಿರಿಯರ ಹೆಸರನ್ನು ಹೇಳಿದ್ದು, ಗೋವಿಂದರಾಜನಿಂದ ಆರಂಭಿಸಿ, ಕರ್ಕರಾಜ – ಇಂದ್ರರಾಜ ಇವರ ಹೆಸರುಗಳನ್ನು ತಿಳಿಸುತ್ತಾನೆ. ಇಂದ್ರರಾಜನ ರಾಣಿ ಸೋಮವಂಶಕ್ಕೆ ಸೇರಿದ ಸಳುಕನ ಮಗಳು. ಇವರ ಮಗನೇ ದಂತಿದುರ್ಗ ಎಂದಿದೆ. ದಂತಿದುರ್ಗನ ಐದು ಶಾಸನಗಳು ಸಿಗುತ್ತವೆ.

ಕ್ರಿ.ಶ. ೭೪೯ರ ಮಸೋರ್ ಶಾಸನವು (IHQ. VO. XXXV. NO. 3. 1959) ಶ್ರೀಪುರ ವಿಷಯದಲ್ಲಿದ್ದ ತಂಬಸಾಹೋಕಾ ಗ್ರಾಮವನ್ನು ಖಂಡಸ್ಫುಟಿತ ಜೀರ್ಣೋದ್ಧಾರಕ್ಕಾಗಿ ದಾನಮಾಡಿದ್ದನ್ನು ದಾಖಲಿಸುತ್ತದೆ. ಶ್ರೀಪುರದ ಮಹಾಜನರು ಈ ದಾನವನ್ನು ನೀಡಿದ್ದಾರೆಂಬುದು ಗಮನಿಸಬೇಕಾದ ಅಂಶವಾಗಿದೆ.

ಕ್ರಿ. ಶ. ೭೫೩ ರ ಸಾಮನಗಡ್ ಶಾಸನವು (IA. VOL. XI, PP-110) ರಾಷ್ಟ್ರಕೂಟ ವಂಶಾವಳಿಯ ಗೋವಿಂದರಾಜನನ್ನು, ಕಕ್ಕರಾಜ, ಇಂದ್ರರಾಜ ಎಂಬ ಮೂರು ಹೆಸರುಗಳನ್ನು ಸೂಚಿಸುತ್ತದೆ. ಗೋವಿಂದರಾಜನನ್ನು ರಾಜಸಿಂಹದಂತಿದ್ದನೆಂದು ಹೇಳಿ, ಕೈಯಲ್ಲಿರುವ ಖಡ್ಗದ ತುದಿಯ ಹೊಳಪಿನಂತೆ ಯುದ್ಧಗಳಲ್ಲಿ ಶೋಭೆಯನ್ನು ತರುತ್ತಿದ್ದನು ಎಂದಿದೆ. ಅವನ ಮಗ ಗುಣಸಂಪನ್ನನಾದ ಕಕ್ಕರಾಜ. ಈತನ ಕಾಲದಲ್ಲಿ ಜನರು ನಿರಾತಂಕವಾಗಿದ್ದು, ಹೋಮ ಹವನಾದಿಗಳನ್ನು ಶಾಂತಿವಾಚನ್ನು ಮಾಡುತ್ತಾ ನೆಮ್ಮದಿಯಿಂದ ಇದ್ದರು. ಕರ್ಕರಾಜನು ದಾನಾದಿಗಳನ್ನು ಮಾಡುತ್ತಿದ್ದು, ಜೊತೆಗೆ, ಶತ್ರುಗಳನ್ನೂ ನಿಗ್ರಹಿಸುತ್ತಿದ್ದನು. ಇವನಿಗೆ, ರಾಷ್ಟ್ರಕೂಟ ವಂಶದಲ್ಲಿ ಕನಕಾದ್ರಿಯಂತಿರುವ, ಇಂದ್ರರಾಜನೆಂಬ ಮಗನು ಹುಟ್ಟಿದನು. ಇಂದ್ರರಾಜನ ಹೆಂಡತಿಯು ಸೋಮಾನ್ವಯಿಗಳಾದ ಸಳುಕ ದೊರೆಯ ಮಗಳಾಗಿದ್ದಳು. ಯುವತಿಗಣದ ಸ್ಪರ್ಧೆಯಲ್ಲಿ (ಸ್ವಯಂವರದಲ್ಲಿ) ವಿಜಯೀ ಇಂದ್ರರಾಜನನ್ನು ವರಿಸಿದಳು. ಇವರಿಗೆ ಹುಟ್ಟಿದ ಮಗನೇ ದಂತಿದುರ್ಗ. ಈತ ಶತ್ರುಗಳಿಗೆ ಸಿಂಹಸ್ವರೂಪಿಯಾಗಿದ್ದನು. ಈತನ ಆನೆಗಳು ಮಾಹಿ, ಮಹಾನದೀ ಮತ್ತು ರೇವಾನದಿಗಳಲ್ಲಿ ಮನಸೋ ಇಚ್ಛೆ ವಿಹರಿಸಿದವು. ಅಂದರೆ ಈತ ಮಾಹಿ ಮಹಾನದಿಗಳು ಹರಿಯುತ್ತಿದ್ದ ಸ್ಥಳಗಳಲ್ಲಿದ್ದ ಅರಸರನ್ನೆಲ್ಲ ಸೋಲಿಸಿದ್ದನೆಂದು ಭಾವಿಸಬಹುದು. ಅಪರಿಮಿತ ಮಾತೃಭಕ್ತಿಯ ಈತನು, ನಾಲ್ಕು ಲಕ್ಷ ಗ್ರಾಮಗಳಿದ್ದ ರಾಜ್ಯವನ್ನು ಆಳುತ್ತಿದ್ದನೆಂದು ಶಾಸನವು ತಿಳಿಸುತ್ತದೆ. ದಂತಿದುರ್ಗನ ತಾಯಿಯು ಈ ನಾಲ್ಕು ಲಕ್ಷ ಗ್ರಾಮಗಳಲ್ಲೂ ದಾನ ಮಾಡಿದ್ದಳೆಂದು ತಿಳಿದುಬರುತ್ತದೆ. ಇಂದ್ರನ ಮರಣಾನಂತರ, ಇಂದ್ರನ ಪತ್ನಿಯು ಮಗನ ಪೋಷಣೆಯಲ್ಲಿದ್ದು, ದಾನಾದಿಗಳನ್ನು ಮಾಡುತ್ತ ದೈವಚಿಂತನೆಯಲ್ಲಿದ್ದಳೆಂದು ಭಾವಿಸಬಹುದು. ಈಕೆ ಸೋಮವಂಶದವಳೆಂದು ತಿಳಿದಿದೆ. ಸಂಜಾನ ಶಾಸನವು (EI VOL. XVIII, P-235) ತಿಳಿಸುವ ರಾಜಕುಮಾರಿಯು ಬೇರೆಯೆಂದು ಭಾವಿಸಬಹುದು. ಏಕೆಂದರೆ ಅದರಲ್ಲಿ

ಇಂದ್ರರಾಜನು ಖೇಟಕಮಂಡಲದ ಯುದ್ಧದಲ್ಲಿ ಚಲುಕ್ಯ ರಾಜಕುಮಾರಿಯನ್ನು ಅಪಹರಿಸಿಕೊಂಡು ಹೋಗಿ ರಾಕ್ಷಸ ರೀತಿಯ ವಿವಾಹ ಮಾಡಿಕೊಂಡನೆಂಬ ಉಲ್ಲೇಖವಿದೆ. ಇವರು ಗುಜರಾತ್‌ನ ಚಲುಕ್ಯರಿರಬಹುದೆಂದು ವಿದ್ವಾಂಸರು ಊಹಿಸುತ್ತಾರೆ (ಆರ್. ಎಸ್. ಪಂಚಮುಖಿ, ಕರ್ನಾಟಕ ಇತಿಹಾಸ). ಕಾಂಚಿ, ಕೇರಳ, ಚೋಳ, ಪಾಂಡ್ಯ, ಶ್ರೀಹರ್ಷ, ವಜ್ರಟ, ಕರ್ನಾಟಕಬಲ, ಈ ಎಲ್ಲರನ್ನೂ ಸೋಲಿಸಿದನೆಂದು ಈ ಶಾಸನವು ತಿಳಿಸುತ್ತದೆ. ಇಲ್ಲಿನ ವಿಶೇಷವೇನೆಂದರೆ, ಕರ್ನಾಟಕ ಬಲವು ಅಚಿಂತ್ಯವೂ (ಚಿಂತನೆಗೆ ನಿಲುಕದ್ದು), ಅಜೇಯವೂ (ಜಯಿಸಲು ಆಗದ್ದು) ಆಗಿತ್ತೆಂಬುದು. ಅದನ್ನು ಕೂಡ ಸೋಲಿಸಿದ ಹೆಗ್ಗಳಿಕೆ ಇವನದು. ಎಲ್ಲೋರದ ಶಾಸನದ ಹೊತ್ತಿಗೆ ಈ ವಿಚಾರವು ಬರುವುದಿಲ್ಲ. ಕ್ರಿ. ಶ. ೭೪೯ ರ ಮನೋರ್ ಪಟಗಳೂ ಈ ವಿಚಾರದಲ್ಲಿ ಮೌನವಾಗಿವೆ. ಆದ್ದರಿಂದ ದಂತಿದುರ್ಗನು ದಕ್ಷಿಣದ ಅರಸರನ್ನು ಸೋಲಿಸಿದ್ದು ಕ್ರಿ. ಶ. ೭೪೯ ಮತ್ತು ೭೫೩ ರ ನಡುವೆ ಎಂದು ತಿಳಿಯುತ್ತದೆ. ತುಲಾಪುರುಷ ದಾನವನ್ನು ಮಾಡಿದನೆಂದು ತಿಳಿದುಬರುತ್ತದೆ. ತಂದೆ ತಾಯಿಯರ ಯಶೋಭಿವೃದ್ಧಿಗಾಗಿ ಕೊಪ್ಪಾರ ೫೦೦ರಲ್ಲಿದ್ದ, ದೆಳುವಾಡ ಗ್ರಾಮವನ್ನು ದಾನ ಮಾಡಿದ್ದನ್ನು ಶಾಸನವು ತಿಳಿಸುತ್ತದೆ.

ಇಂದ್ರರಾಜನ ಕಾಲದಲ್ಲಿ ಚಲುಕ್ಯ ಮನೆತನದೊಡನೆ ಯುದ್ಧಮಾಡುವ ಪ್ರಸಂಗ ಬಂದಿರುವ ಸಾಧ್ಯತೆಗಳಿವೆ. ಗುಜರಾತಿನ ಮೇಲೆ ದಂಡೆತ್ತಿ ಬಂದಿದ್ದ ತಾಜಿಕರನ್ನು (ಮುಸಲ್ಮಾನರು) ಎದುರಿಸಲು ದಂತಿದುರ್ಗನೂ ಸಹಾಯ ಮಾಡಿದ್ದರಿಂದ ಅವನ ಪರಾಕ್ರಮಕ್ಕೆ ಮೆಚ್ಚಿ ಪ್ರೀತಿಯಿಂದ ಖಡ್ಗಾವಲೋಕ, ಪೃಥ್ವೀವಲ್ಲಭ ಎಂಬ ಬಿರುದುಗಳನ್ನು ಕೊಟ್ಟಿರಬಹುದು. ಈತನ ತಾಯಿ ಭವಗಣಾ ಅಥವಾ ಭವನಾಗಾಳು ಚಲುಕ್ಯ ರಾಜಕುಮಾರಿಯಾದ್ದರಿಂದ, ದಂತಿದುರ್ಗ ಸಹಾಯಕ್ಕೆ ಹೋಗಿರಬಹುದೆಂದು ವಿದ್ವಾಂಸರು ಊಹಿಸುತ್ತಾರೆ (ಆರ್. ಎಸ್. ಪಂಚಮುಖಿ, ಕರ್ನಾಟಕ ಇತಿಹಾಸ, ಪು- ೨೮೮).

ದಕ್ಷಿಣದ ಅರಸರನ್ನು ಬಾದಾಮಿ ಚಲುಕ್ಯ ಇಮ್ಮಡಿ ಕೀರ್ತಿವರ್ಮನ ಕಾಲದಲ್ಲಿ ಸೋಲಿಸಿದ್ದನೆಂಬುದು ಸ್ಪಷ್ಟವಾಗಿ ತಿಳಿದಿದೆ. ಅಮೋಘವರ್ಷನ ಸಂಜಾನ್ ಶಾಸನದಲ್ಲಿ, ದಂತಿದುರ್ಗನು ಉಜ್ಜಯನಿಯಲ್ಲಿ ಹಿರಣ್ಯಗರ್ಭದಾನ (ತುಲಾಭಾರ / ತುಲಾಪುರುಷದಾನ) ವನ್ನು ಮಾಡಿದಾಗ ಗೂರ್ಜರರು ಮತ್ತು ಇನ್ನೂ ಅನೇಕ

ಅರಸರನ್ನು ದ್ವಾರಪಾಲಕರನ್ನಾಗಿ ಮಾಡಿಕೊಂಡಿದ್ದನೆಂಬ ವಿಚಾರವು ತಿಳಿದುಬರುತ್ತದೆ. ಇದರ ಆಧಾರದಿಂದ ದಂತಿದುರ್ಗನು ಮಾಳವ ಪ್ರದೇಶ ಮತ್ತು ಸುತ್ತಮುತ್ತಲಿನ ಅನೇಕ ಪ್ರದೇಶಗಳನ್ನು ಆಕ್ರಮಿಸಿದ್ದನೆಂದು ಊಹಿಸಬಹುದಾಗಿದೆ.

ದಂತಿದುರ್ಗನಿಗೆ ಗಂಡು ಮಕ್ಕಳಿಲ್ಲದಿದ್ದರಿಂದ ಅವನ ಚಿಕ್ಕಪ್ಪ ಒಂದನೆಯ ಕೃಷ್ಣರಾಜನು ಪಟ್ಟಕ್ಕೆ ಬಂದನೆಂದು ತಿಳಿದುಬರುತ್ತದೆ. ದಂತಿದುರ್ಗನನ್ನು ರಾಷ್ಟ್ರಕೂಟವಂಶದ ಸ್ಥಾಪಕನೆಂದು ಕರೆದರೂ ಇಡಿಯಾಗಿ ಬಾದಾಮಿ ಚಲುಕ್ಯರ ಸಾಮ್ರಾಜ್ಯವು ಕೈಗೆ ಬಂದಿರಲಿಲ್ಲವೆಂದು ತಿಳಿಯುತ್ತದೆ. ಈತನ ನಂತರ ಬಂದ ಒಂದನೆಯ ಕೃಷ್ಣರಾಜನು ದಂತಿದುರ್ಗನ ಕೆಲಸವನ್ನು ಮುಂದುವರಿಸಿ ಸಾಮ್ರಾಜ್ಯವನ್ನು ಗಳಿಸಿಕೊಳ್ಳುವುದರಲ್ಲಿ ಯಶಸ್ವಿಯಾದನು.

## ಕೃಷ್ಣ ೧ (ಕ್ರಿ.ಶ.೭೫೬-೭೭೨)

ದಂತಿದುರ್ಗನ ಕಾರ್ಯವನ್ನು ಮುಂದುವರೆಸಿ ಇಡೀ ಸಾಮ್ರಾಜ್ಯವನ್ನು ತನ್ನದಾಗಿಸಿಕೊಂಡವನು ದಂತಿದುರ್ಗನ ಚಿಕ್ಕಪ್ಪನಾದ ಒಂದನೆಯ ಕರ್ಕ. ದಂತಿದುರ್ಗನಿಗೆ ಮಕ್ಕಳಿರಲಿಲ್ಲ. ಆದ್ದರಿಂದ ಸಿಂಹಾಸನಕ್ಕೆ ಉತ್ತರಾಧಿಕಾರಿಯಾಗಿ ಕ್ರಿ. ಶ. ೭೫೬ ರಲ್ಲಿ ಒಂದನೆಯ ಕೃಷ್ಣನು ಪಟ್ಟಕ್ಕೇರಿದನು. ಇದೇ ಸಮಯದಲ್ಲಿ ದಕ್ಷಿಣ ಗುಜರಾತಿನ ಪ್ರಾಂತ್ಯಕ್ಕೆ ಒಡೆಯನಾಗಿದ್ದ ತನ್ನ ಕಿರಿಯ ಸಂಬಂಧಿ ಇಮ್ಮಡಿ ಕರ್ಕನನ್ನು ಸೋಲಿಸಿದನು. ಗುಜರಾತಿನ ರಾಷ್ಟ್ರಕೂಟರ ಶಾಖೆ ೧ ರ ಇಮ್ಮಡಿ ಕರ್ಕನು ಮಳಖೇಡದ ಚಕ್ರವರ್ತಿ ಒಂದನೆ ಕೃಷ್ಣನ ಬಿರುದುಗಳನ್ನು ಧರಿಸತೊಡಗಿದಾಗ ಕೃಷ್ಣನು ಇಮ್ಮಡಿ ಕರ್ಕನನ್ನು ಸೋಲಿಸಿದನು. ಗುಜರಾತ್ ಪ್ರಾಂತಕ್ಕೆ ತನ್ನ ಅಧಿಕಾರಿಗಳನ್ನು ನೇಮಿಸಿದನು. ಅದೇ ರೀತಿ ಚಲುಕ್ಯ ವಿರೊಧಿಯಾಗಿದ್ದ ರಾಹಪ್ಪನೆಂಬುವನನ್ನು ಸಹ ಎದುರಿಸಬೇಕಾಯಿತು. ಕೆಲವು ವಿದ್ವಾಂಸರು ಇಮ್ಮಡಿ ಕರ್ಕನನ್ನೇ ರಾಹಪ್ಪ ಎಂದಿದ್ದಾರೆ. ಆದರೆ ಇವನು ರಾಹಪ್ಪನಲ್ಲದಿದ್ದರೂ ಒಬ್ಬ ಅಧಿಕಾರಿಯೆಂದು ಊಹಿಸಬಹುದಾಗಿದೆ. ಇಮ್ಮಡಿ ಕರ್ಕನು ದಂಗೆ ಎದ್ದ ಸಮಯವನ್ನು ಉಪಯೋಗಿಸಿಕೊಂಡು ಕ್ರಿ.ಶ. ೭೫೭ ರಲ್ಲಿ ಬಾದಾಮಿ ಚಲುಕ್ಯ ಇಮ್ಮಡಿ ಕೀರ್ತಿವರ್ಮನು ಮತ್ತೆ ಯುದ್ಧಕ್ಕೆ ಬಂದನು. ಭೀಮಾ ನದಿಯವರಗೆ ಬೆನ್ನಟ್ಟಿಹೋದ ಒಂದನೆಯ ಕೃಷ್ಣನು ಕೀರ್ತಿವರ್ಮನನ್ನು ಸೋಲಿಸಿದನು. ಇಮ್ಮಡಿ ಕೀರ್ತಿವರ್ಮನನ್ನೇ

ರಾಹಪ್ಪನೆನ್ನುವ ವಿದ್ವಾಂಸರಿದ್ದಾರೆ. ರಾಹಪ್ಪನನ್ನು ಸೋಲಿಸಿದಾಗ ಆತನಿಂದ ಪಾಲಿಧ್ವಜ ಕಿತ್ತುಕೊಂಡನೆಂದು ಧಾರಾವರ್ಷ ಧ್ರುವನ ಪಿಂಪರಿ ಶಾಸನವು ಹೇಳುತ್ತದೆ (EI., vol X, no.19, p 81, 785 AD). ಪಾಲಿಧ್ವಜವು ಬಾದಾಮಿ, ಚಲುಕ್ಯರದಾಗಿದ್ದು, ನಂತರ ರಾಷ್ಟ್ರಕೂಟರ ಲಾಂಛನವಾಗಿ ಕೊನೆಯವರೆಗೂ ಇತ್ತು.

ಕ್ರಿ. ಶ. ೭೫೮ ರ ಪೂನಾ ಪಟಗಳಲ್ಲಿ (BISM Qly, vol VIII, p 166-7, 758 AD) ರಾಷ್ಟ್ರಕೂಟರ ವಂಶಾವಳಿ ಇದೆ. ಇದರಲ್ಲಿ ಗೋವಿಂದರಾಜ, ಕರ್ಕರಾಜ, ಇಂದ್ರರಾಜ, ದಂತಿದುರ್ಗರ ಹೆಸರುಗಳಿವೆ. ಕಾಂಚಿ, ಕೇರಳ, ಚೋಳ, ಪಾಂಡ್ಯ, ಶ್ರೀಹರ್ಷ, ವಜ್ರಟರನ್ನು ಸೋಲಿಸುವ ವಿಧಾನದಲ್ಲಿ ದಕ್ಷರಾಗಿದ್ದ ಕರ್ನಾಟಕ ಬಲವು ಅನಂತವೂ, ಅಜೇಯವೂ ಆಗಿತ್ತೆಂದು ತಿಳಿದು ಬರುತ್ತದೆ. ಕರ್ಕರಾಜನ ಮಗ ಕೃಷ್ಣರಾಜ. ಈತನಿಗೆ ಶುಭತುಂಗ ಎಂಬ ಬಿರುದಿತ್ತೆಂದು ತಿಳಿದು ಬರುತ್ತದೆ. ಪುಣ್ಯವಿಷಯದಲ್ಲಿದ್ದ ವೋಪಸ್ವಳು ಗ್ರಾಮವನ್ನು ವಜ್ಜ್ಮಡೀ ದೀಕ್ಷಿತ, ರಾಮದೀಕ್ಷಿತನ ಪುತ್ರನಾದ ಪೂಗಡಿಭಟ್ಟನೆಂಬ ಕೌಂಡಿನ್ಯ ಗೋತ್ರದವನಿಗೆ ನೀಡಲಾಯಿತೆಂಬ ವಿವರವಿದೆ.

ಬಾದಾಮಿ ಚಲುಕ್ಯರ ಇಮ್ಮಡಿ ಕೀರ್ತಿವರ್ಮನನ್ನು ಸೋಲಿಸಿದ ನಂತರ ಒಂದನೆಯ ಕೃಷ್ಣನು ಕೊಂಕಣದ ಕಡೆಗೆ ದಂಡೆತ್ತಿ ಹೋದನು. ಅಲ್ಲಿನ ಅರಸನನ್ನು ಸೋಲಿಸಿ, ಶಿಲಾಹಾರ ದೊರೆ ಸಣಫುಲ್ಲನನ್ನು ಮಾಂಡಳೀಕನನ್ನಾಗಿ ನಿಯಮಿಸಿದನು. ಶಿಲಾಹಾರರು ಕೊನೆಯವರೆಗೂ ರಾಷ್ಟ್ರಕೂಟರ ವಿಧೇಯ ಸಾಮಂತರಾಗಿದ್ದರು. ಇದರಿಂದ ಮರಾಠಿ ಭಾಷೆಯನ್ನಾಳುವ ಪ್ರದೇಶಗಳಲ್ಲದೆ ಮಧ್ಯಪ್ರದೇಶದ ಕೆಲವು ಭಾಗಗಳೂ ಕೃಷ್ಣನ ಸಾಮ್ರಾಜ್ಯಕ್ಕೆ ಸೇರಿದವೆಂದು ತಿಳಿದು ಬರುತ್ತದೆ. ಕ್ರಿ. ಶ. ೭೬೮ ರಲ್ಲಿ ದಕ್ಷಿಣದ ಕಡೆಗೆ ಬಂದು ತಲಕಾಡಿನ ಗಂಗರನ್ನು ಎದುರಿಸಿದನು. ತಳೆಗಾಂವ್ ತಾಮ್ರಪಟವು ಮನ್ನೆ (ಮಣ್ಣೆ) ಅಥವಾ ಮಾನ್ಯಪುರದಿಂದ ಹೊರಡಿಸಿದ್ದಾಗಿದೆ. ಒಂದನೆಯ ಕೃಷ್ಣನು ಗಂಗವಾಡಿಯ ಮೇಲೆ ದಂಡೆತ್ತಿ ಹೋಗಿದ್ದನು ಮತ್ತು ಗಂಗರ ರಾಜಧಾನಿಯಾದ ಮಣ್ಣೆಯನ್ನು ಸ್ವಲ್ಪಕಾಲ ವಶಪಡಿಸಿಕೊಂಡಿದ್ದನು. ಗಂಗ ಶ್ರೀಪುರುಷನು ಬೆಂಬಲಿಗರಾದ ಶ್ರೀ ರೇವಮ್ಮ, ಸಿಯಗಲ್ಲ, ಮುಂತಾದವರೊಡನೆ ಸೇರಿ ಶತ್ರುವನ್ನು ಎದುರಿಸಿದನು. ಗಂಗರ ನೆಲೆವೀಡಾಗಿದ್ದ ಮಣ್ಣೆಯವರೆಗೆ ನುಗ್ಗಿದ್ದ ಕೃಷ್ಣನು ಅಲ್ಲಿಂದ ಹಿಂದಿರುಗಬೇಕಾಯಿತು. ಒಂದನೆಯ ಕೃಷ್ಣನು ಆಕ್ರಮಿಸಿದ್ದ ಅನೇಕ ಪ್ರದೇಶಗಳು ಕೈಬಿಟ್ಟುಹೋದವು. ತಳೆಗಾಂವ್ ಶಾಸನದಲ್ಲಿ(EI., vol XIV, 768 AD)

ಒಂದನೆಯ ಕೃಷ್ಣನು ಮಣ್ಣೆ ನಗರದಲ್ಲಿ ಬೀಡುಬಿಟ್ಟಿದ್ದಾಗ, ಕರಹಾಟ ೧೦,೦೦೦ ವನ್ನು ಪೂಣಕ ವಿಷಯದಲ್ಲಿದ್ದ ಭಯಕೋಪರಾ, ಅರಲುವ ಮತ್ತು ಸಿಂದಿಗ್ರಾಮ, ತಡವಳೀ ಗ್ರಾಮಗಳನ್ನು ಗೋವಿಂದರಾಜನ ಕೋರಿಕೆಯ ಮೇರೆಗೆ ಬ್ರಾಹ್ಮಣರಿಗೆ ದಾನ ಮಾಡಿದನೆಂಬ ವಿವರವಿದೆ. ಹತ್ತಿಮತ್ತೂರಿನ ಶಾಸನವು (EI, vol VI, no.16, pp 160 - 198) ಸುರಗೆಯೂರಿನಲ್ಲಿ ವಾಸಿಸುತ್ತಿದ್ದ ಎಱೆಯ ಮತ್ತು ದಾಸಮ್ಮರು ಮಟ್ಟಿವುರದ ಊರಳಿವಿನಲ್ಲಿ ಸತ್ತರೆಂಬ ಉಲ್ಲೇಖವಿದೆ. ಇದಲ್ಲದೆ, ಮಲ್ಲೇನಹಳ್ಳಿ (ಕ್ರಿ. ಶ. ೭೬೦), ಮುತ್ತಳ್ಳಿ (ಕ್ರಿ. ಶ. ಸುಮಾರು ೭೭೫) ಗಳಲ್ಲಿ ಅನೇಕ ಸಂಖ್ಯೆಗಳಲ್ಲಿ ಗೋಸಾಸಗಳು ಕಂಡುಬರುತ್ತವೆ.

ಒಂದನೆಯ ಕೃಷ್ಣನ ಕಾಲದಲ್ಲಿ ನಡೆದ ಅನೇಕ ಯುದ್ಧಗಳಲ್ಲಿ ಯುವರಾಜ ಗೋವಿಂದನು ಭಾಗವಹಿಸಿದ್ದನು. ವೆಂಗಿಯನ್ನು ಆಕ್ರಮಿಸಲು ಕೃಷ್ಣನು ಮಗನನ್ನು ಕಳುಹಿಸಿದನು. ಕ್ರಿ. ಶ. ೭೬೯ ರಲ್ಲಿ ವೆಂಗಿಯ ವಿಷ್ಣುವರ್ಧನನನ್ನು ಎರಡನೆಯ ಗೋವಿಂದನು ಸೋಲಿಸಿದನು. ಕೃಷ್ಣ ಸಂಗಮದಲ್ಲಿ ವಿಜಯ ಸ್ಕಾಂದಾವಾರದಲ್ಲಿ ಬೀಡುಬಿಟ್ಟಿದ್ದಾಗ, ನಾಲ್ಕನೆಯ ವಿಷ್ಣುವರ್ಧನನು ಶರಣಾಗತನಾದನೆಂದು ಶಾಸನವು ತಿಳಿಸುತ್ತದೆ. ನಾಲ್ಕನೆಯ ವಿಷ್ಣುವರ್ಧನನ ಮಗಳು ಶೀಲಭಟ್ಟಾರಿಕೆಯು ಎರಡನೆಯ ಗೋವಿಂದನ ತಮ್ಮ ಧ್ರುವನ ಹೆಂಡತಿಯಾಗಿದ್ದಳು.

ಔರಂಗಾಬಾದ್ ಜಿಲ್ಲೆಯ ಪ್ರದೇಶದಲ್ಲಿ, ಒಂದನೆಯ ಕೃಷ್ಣನ ಕಿರಿಯ ಸೋದರನಾದ ನನ್ನ ಗುಣಾವಲೋಕನು ಅಧಿಕಾರದಲ್ಲಿದ್ದನು. ಬೋಧಗಯಾದ ರಾಷ್ಟ್ರಕೂಟ ದೊರೆ ನನ್ನ ಗುಣಾವಲೋಕನ ಕಾಲವು ಕ್ರಿ. ಶ. ೮೮೫ ರಿಂದ ಕ್ರಿ. ಶ ೮೯೫ರ ಸುಮಾರಿನಲ್ಲಿ ಬರುತ್ತದೆ. ಆದ್ದರಿಂದ ಇಲ್ಲಿದ್ದ ಕಿರಿಯ ಸೋದರ ಎನ್ನುವ ಬದಲು, ಬಿರುದು ಎನ್ನಬಹುದು. ನಮಗೆ ತಿಳಿದಿರುವಂತೆ ಗುಜರಾತ್ ಶಾಖೆಯ ಒಂದನೆಯ ಕೃಷ್ಣನಿಗೆ ಕಿರಿಯ ಸೋದರನಿಲ್ಲ. ಆಥವಾ ನನ್ನ ಗುಣಾವಲೋಕನೆಂಬುದು ಬಿರುದಾಗಿರಬಹುದು. ಖಡ್ಗಾವಲೋಕ, ಪ್ರತಾಪವಲೋಕ, ಮುಂತಾದ ಬಿರುದುಗಳು ರಾಷ್ಟ್ರಕೂಟರಿಗೆ ಇತ್ತು. ಆದ್ದರಿಂದ ನನ್ನ ಗುಣಾವಲೋಕನೆಂಬುದೂ ಬಿರುದಾಗಿತ್ತು ಎನ್ನಬಹುದು. ಇದು ನನ್ನರಾಜನ ಬಿರುದಾಗಿತ್ತು. ಇನ್ನೂ ಒಂದು ವಿಚಾರವೆಂದರೆ ನನ್ನ ಗುಣಾವಲೋಕನ ಮಗ ಶಂಕರಗಣನೂ ಅಧಿಕಾರದಲ್ಲಿದ್ದು, ಧ್ರುವನ

ಬೆಂಬಲಿಗನಾಗಿದ್ದನೆಂದು ತಿಳಿದುಬರುತ್ತದೆ. ನನ್ನಗುಣಾವಲೋಕನು ಮಳಖೇಡದ ಒಂದನೆಯ ಕಷ್ಣನ ಸೋದರನೆಂದು ತಿಳಿದುಬರುತ್ತದೆ.

ಕ್ರಿ. ಶ. ೭೬೫ ರ ಬಾರ್ಸೀ ಶಾಸನ (JESI, vol XI, pp 106 ff & plates) ದ ಆರಂಭದಲ್ಲಿ ಪೂನಾ ಶಾಸನದಲ್ಲಿರುವ ಪಾಠವೇ ಇದೆ. ವಂಶಾವಳಿಯಾದನಂತರ ಜ್ಯೇಷ್ಠ ಅಮಾವಾಸ್ಯೆ ಸೂರ್ಯಗ್ರಹಣದಂದು ಅಮರಕಂಟಕದಲ್ಲಿ ವಲ್ಲಭರಾಜನು ನಿಗುಣಲೂರ ವಿಷಯದಲ್ಲಿದ್ದ ವಟಗ್ರಾಮ ಮತ್ತು ಅದೇ ವಿಷಯದ ಆಗ್ನೇಯಕ್ಕಿದ್ದ ಶಿವಕ್ಕಡಾ ಮತ್ತು ಕಿಣಿಹಿ ಕಾಗಾರ ಗ್ರಾಮಗಳನ್ನು ದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಕ್ರಿ. ಶ. ೭೭೨ ರ ಭಂಡಕ ಶಾಸನವು (EI, vol XIV, no.6, p121) ಗೋವಿಂದರಾಜನಿಂದ ವಂಶಾವಳಿಯನ್ನು ಪ್ರಾರಂಭಿಸುತ್ತದೆ. ಒಂದನೆಯ ಇಂದ್ರರಾಜನ ಬಗ್ಗೆ ಹೇಳುವಾಗ "ಆಮ್ಲಾನವಕ್ತ್ರೈಸ್ತ್ರಿ ಜಗತ್ಪ್ರವೀಣ್ಯೈಃ ಸ(;) ಗೇವ್ಯತೇ ಶ್ರೀ (:) ಸ್ವಜನ್ಯೈರಜಸ್ನಂ ॥ ಪೂರಿತಾಶಾಶುಚಿರ್ಧ್ವೈಸ್ತಧಾನ್ತ ಜ್ಯೋತ್ಸ್ನೇವ ಮಾತೃತ (: ।) ರಾಜ್ಞಿ ಸೋಮಾನ್ವಯ ತಸ್ಯ ಪಿತೃತಶ್ಚಚುಲುಕ್ಯಜಃ ॥ ಶ್ರೀಮದ್ಭವಗಣಾ ನಾಮ ಸಾ (ಧ್ವೀ) ನಾಮುಪಮಾದಂ ། " ಎನ್ನುತ್ತದೆ. ತಾಯಿ ಸೋಮವಂಶದ ಹೆಣ್ಣುಮಗಳು, ಹೆಂಡತಿ ಚುಲುಕ್ಯ ರಾಜಕುಮಾರಿ ಎಂಬ ವಿಚಾರವು ತಿಳಿದುಬರುತ್ತದೆ. ಇವರ ಮಗ ದಂತಿದುರ್ಗ. ಇವನಲ್ಲಿ ಮಾತೃಭಕ್ತಿಯ ಪರಾಕಾಷ್ಟತೆಯನ್ನು ಕಾಣಬಹುದು. ಈತನ ತಾಯಿ ನಾಲ್ಕು ಲಕ್ಷ ಗ್ರಾಮಗಳುಳ್ಳ ಸಾಮ್ರಾಜ್ಯದ ಪ್ರತಿ ಗ್ರಾಮದಲ್ಲಿಯೂ ಭೂದಾನಗಳನ್ನು ಮಾಡಿದ್ದಳೆಂಬ ಉಲ್ಲೇಖವು ಬರುತ್ತದೆ. ನಾಂದೀಪುರಿಯಲ್ಲಿ ಬೀಡುಬಿಟ್ಟಿದ್ದಾಗ, ಣಗಣಪುರಿ ಗ್ರಾಮವನ್ನು ದಾನಮಾಡಿದನೆಂಬ ಉಲ್ಲೇಖವಿದೆ. ಉತ್ತರದಲ್ಲಿ ದೇವತಟಾಕ, ಪಶ್ಚಿಮದಲ್ಲಿ ರಾಜಿಣೀ ತಟಾಕ, ಪಶ್ಚಿಮದಲ್ಲಿ ನದಿ ಮತ್ತು ನಿವರ್ತನಗಳು ಣಗಣಪುರಿಯ ಮೇರೆಗಳು.

ಒಂದನೆಯ ಕೃಷ್ಣನು ಎಲ್ಲೋರದಲ್ಲಿ ಕೊರೆಸಿರುವ ಏಕಶಿಲಾದೇವಾಲಯದಿಂದ ಬಹಳ ಪ್ರಸಿದ್ಧನಾಗಿದ್ದಾನೆ. ಪ್ರಾಯಶಃ ಇವನ ಕಾಲದಲ್ಲಿ ಆರಂಭವಾಗಿ, ರಾಷ್ಟ್ರಕೂಟರ ಆಳ್ವಿಕೆಯ ಉದ್ದಕ್ಕೂ ಇದರ ನಿರ್ಮಾಣ ಕಾರ್ಯ ನಡೆದಿದೆ ಎನ್ನಬಹುದು. ಈತನಿಗೆ ಅಕಾಲವರ್ಷ, ಶುಭತುಂಗ, ಮುಂತಾದ ಬಿರುದುಗಳಿದ್ದವು. ಗೋವಿಂದನ ವಾಣಿ ದಿಂಡೋರಿ (IA., vol XI, pp156 ff & plates) ಶಾಸನದಲ್ಲಿ "ಸಮುದ್ರಮಥನವಾದಾಗ ಲಕ್ಷ್ಮಿಯನ್ನು ಹೇಗೆ ಪಡೆದರೋ ಅದೇ ರೀತಿ ವಲ್ಲಭನು

ಎಂದರೆ ಒಂದನೆಯ ಕೃಷ್ಣನು ಬಾದಾಮಿ ಚಲುಕ್ಯರ ರಾಜ್ಯಲಕ್ಷ್ಮಿಯನ್ನು ಪಡೆದನು" ಎಂದು ವರ್ಣಿಸಿದೆ. ಒಂದನೆಯ ಕೃಷ್ಣನಿಗೆ ಗೋವಿಂದರಾಜ ಮತ್ತು ಧ್ರುವರಾಜ ಎಂಬ ಇಬ್ಬರು ಮಕ್ಕಳಿದ್ದರು. ಕೃಷ್ಣನ ನಂತರ ಎರಡನೆಯ ಗೋವಿಂದನು ಪಟ್ಟಕ್ಕೆ ಬಂದನು. ದಂತಿದುರ್ಗನು ಆರಂಭಿಸಿದ ಕಾರ್ಯವನ್ನು ಯಶಸ್ವಿಗೊಳಿಸಿ ಸಾಮ್ರಾಜ್ಯವನ್ನು ವಿಸ್ತರಿಸಿದ ಕೀರ್ತಿ ಒಂದನೆಯ ಕೃಷ್ಣನದಾಗಿದೆ. ಕೃಷ್ಣನು ಸುಮಾರು ಕ್ರಿ. ಶ. ೭೭೩ ರಲ್ಲಿ ನಿಧನನಾದನು.

## ಶಂಕರಗಣ

ರಾಷ್ಟ್ರಕೂಟರ ಶಾಸನಗಳಲ್ಲಿ ಸಿಗುವ ಶಂಕರಗಣನೆಂಬ ವ್ಯಕ್ತಿಯು ವಿದ್ವಾಂಸರಿಗೆ ಬಹಳ ಕುತೂಹಲವನ್ನು ಮೂಡಿಸಿದ್ದಾನೆ. ಈತ ಯಾರು ಎನ್ನುವುದರಿಂದ ಹಿಡಿದು, ಶಂಕರಗಣರು ಎಷ್ಟು ಜನರಿದ್ದರು ಎನ್ನುವುದು ವಿದ್ವಾಂಸರ ಚರ್ಚೆಗೆ ವಸ್ತುವಾಗಿದೆ. ತ್ರಿಪುರಿಯ ಕುಲಚುರಿಯಲ್ಲಿ ಇಬ್ಬರು ಶಂಕರಗಣರು, ಸರಯುಪಾರದ ಕುಲಚುರಿಗಳಲ್ಲಿ ಮೂವರು ಶಂಕರಗಣರು, ದೋಡದ ಗುಹಿಲರ ಒಬ್ಬ ಶಂಕರಗಣ ಇಷ್ಟೂ ಜನರು ರಾಷ್ಟ್ರಕೂಟರ ಶಾಸನಗಳಲ್ಲಿ ವಿವಿಧ ಕಾಲಗಳಲ್ಲಿ ಸಿಗುವ ಶಂಕರಗಣರ ಸಮಕಾಲೀನರಾಗಿ ಬರುತ್ತಾರೆ.

ಶಂಕರಗಂಡರಸರು ಮೂರು ಮಂದಿ ಎಂದು ಡಾ।। ಎಂ.ಎಂ. ಕಲಬುರ್ಗಿಯವರು ಗುರುತಿಸಿದ್ದಾರೆ. (ಆಂಧ್ರಪ್ರದೇಶದ ಕನ್ನಡ ಶಾಸನಗಳು – ಒಂದು ಅಧ್ಯಯನ, ಡಾ।। ಕೆ.ಆರ್.ಗಣೇಶ್, ಪು ೩೪). ಮೊದಲನೆಯ ಶಂಕರಗಂಡರಸನ ಅವಧಿ ೯೫೦ ಕ್ಕೆ, ಎರಡನೆಯ ಶಂಕರಗಂಡ ಅಥವಾ ಶಂಕರಗಂಡರಸ ೯೨೫ – ೯೬೪ ರ ಮಧ್ಯದ ಅವಧಿ, ಮೂರನೆಯ ಶಂಕತಗಂಡರಸನ ಕಾಲ ಗೊತ್ತಿಲ್ಲ. ದೌಲತಾಬಾದ್ ಶಾಸನದಲ್ಲಿ (EI., Vol IX, no.26, p 193) ನನ್ನಗುಣಾವಲೋಕನ ಮಗ ಶಂಕರಗಣನು ಬರುತ್ತಾನೆ. ಈ ಶಾಸನ ಶಕ ೭೧೫ (ಕ್ರಿ.ಶ. ೭೯೩) ರದಾಗಿದ್ದು ಕೃಷ್ಣನ ತಮ್ಮ ನನ್ನಗುಣಾವಳೋಕನ ಮಗ ಶಂಕರಗಣನೆಂದು ತಿಳಿಸಲಾಗಿದೆ.

ಮೊಟ್ಟಮೊದಲು ಬರುವ ಶಂಕರಗಣ ಅರಸನು ಇವನಾಗಿದ್ದು, ಈತನಿಗೆ ಸಮರಾವಲೋಕನೆಂಬ ಬಿರುದಿತ್ತು. ಇವನು ನನ್ನರಾಜನ (ಗುಣಾವಲೋಕ) ಮಗನೂ, ಒಂದನೆಯ ಕರ್ಕರಾಜನ ಮೊಮ್ಮಗನೂ ಆಗಿದ್ದಾನೆ. ಇವನ ನಂತರ ಇನ್ನೊಬ್ಬ

ಶಂಕರಗಣನು ಬರುತ್ತಾನೆ. ಈತ ರಣಾವಲೋಕ ಸ್ತಂಭನ ಮಗನಾಗಿದ್ದು, ಈತನಿಗೂ ಸಮರಾವಲೋಕನೆಂಬ ಬಿರುದಿತ್ತೆಂದು ತಿಳಿದುಬರುತ್ತದೆ. ಶಂಕರಗಂಡನೆಂಬ ಹೆಸರಿನ ವ್ಯಕ್ತಿಯ ಉಲ್ಲೇಖವು ಮೂರನೆಯ ಇಂದ್ರ ಮತ್ತು ಮೂರನೆಯ ಕೃಷ್ಣನ ಕಾಲದ ಶಾಸನಗಳಲ್ಲಿ ಸಿಗುತ್ತವೆ. ಅವನನ್ನು ರಣಾವಲೋಕ ಸ್ತಂಭನ ಮಗನೆನ್ನಬಹುದು.

ಖಂಡೇಬಾಗೂರಿನ ಶಾಸನದಲ್ಲಿ (ARIE., 1958-59, no.B565, 924 AD) ಮಹಾಸಾಮಂತ ಶಂಕರಗಂಡನು ಬನವಾಸಿ – ೧೨,೦೦೦ ವನ್ನು ಆಳುತ್ತಿದ್ದನೆಂಬ ಉಲ್ಲೇಖವಿದೆ. ಲಕ್ಷ್ಮೇಪುರ ಶಾಸನದಲ್ಲಿ (ರಾಷ್ಟ್ರಕೂಟ ಸಾಮಂತ ಚಲ್ಲಕೇತನರು, ಕ್ರಿ.ಶ. ೯೨೪) ಬನವಾಸಿ ಪನ್ನಿರ್ಚ್ಛಾಸಿರವನ್ನು ಶಂಕರಗಂಡ ಮತ್ತು ಬಂಕೇಯರು ಎರಡು ಭಾಗ ಮಾಡಿಕೊಂಡು ಆಳುತ್ತಿದ್ದರೆಂಬ ಉಲ್ಲೇಖವಿದೆ. ಹಾವಣಗಿ ಶಾಸನವು (ARIE., 1949 – 50, no. B86) ಮಹಾಸಾಮಂತಾಧಿಪತಿ ಶಂಕರಗಂಡನು ಬನವಾಸಿ ನಾಡನ್ನು ಆಳುತ್ತಿದ್ದುದನ್ನು ದಾಖಲಿಸುತ್ತದೆ. ಇವನಿಗೆ ಜಯಧೀರ, ಭುವನೈಕರಾಮ, ಅಭಿಮಾನಧವಳ ಮುಂತಾದ ಬಿರುದುಗಳಿದ್ದವು ಎಂದು ತಿಳಿದುಬರುತ್ತದೆ. ಇದೇ ಊರಿನ ಇನ್ನೊಂದು ಶಾಸನವು (ARIE., 1949-50, no. B 90) ಶಂಕರಗಂಡನು ಸ್ಮಾರಕ ಶಿಲೆಯೊಂದನ್ನು ನೆಡಿಸಿದನೆಂದು ತಿಳಿಸುತ್ತದೆ. ಮೇಲಿನ ಬಿರುದುಗಳ ಜೊತೆಗೆ ರಟ್ಟರ ಮೇರುವೆಂಬ ಇನ್ನೊಂದು ಬಿರುದನ್ನು ಉಲ್ಲೇಖಿಸಿದೆ.

ಮೂರನೆಯ ಕೃಷ್ಣನ ತಾಳಗುಂದದ ಶಾಸನದಲ್ಲಿ (EC., vol VII, part I, Sk 183) ಬನ್ದರ ಬಲ್ಲಹನು ಆಳ್ವಿಕೆ ನಡೆಸಿದ್ದಾಗ ಶಂಕರಗಂಡನು ಬನವಾಸಿ ನಾಡನ್ನಾಳುತ್ತಿದ್ದನೆಂಬ ಉಲ್ಲೇಖವಿದೆ. ಅಕಾಲವರ್ಷ ಕನ್ನರದೇವನ ಉಪ್ಪಿನಬೆಟಗೇರಿ ಶಾಸನದಲ್ಲಿ (ARIE, 1955-56, no. B 200) ಮಹಾಸಾಮಂತಾಧಿಪತಿ ರಟ್ಟವಂಶದ ಶಂಕರಗಂಡರಸನು ಕುಪಣದಲ್ಲಿ ತಾನು ಕಟ್ಟಿಸಿದ ಜಯಧೀರ ಜಿನಾಲಯದ ಉಪಯೋಗಕ್ಕೆ ನೀಡಿದ ದಾನವನ್ನು ದಾಖಲಿಸುತ್ತದೆ. ಕೃಷ್ಣನ ಕ್ಯಾಸನೂರು ಶಾಸನದಲ್ಲಿ (EI., vol XVI, no.21, p 283) ಪಂಚಮಹಾಶಬ್ದ ಮಹಾಸಾಮಂತಾಧಿಪತಿ ಶಂಕರಗಂಡನು ಬನವಾಸಿ ನಾಡಾಳುತ್ತಿದ್ದುದನ್ನು ಉಲ್ಲೇಖಿಸಿದೆ. ಇದೇ ಊರಿನ ಇನ್ನೊಂದು ಶಾಸನವು (EI., vol XVI, p 284-85 c. 974 AD) ನಿತ್ಯವರ್ಷ ಅಮೋಘವರ್ಷನು ಆಳ್ವಿಕೆ ನಡೆಸುತ್ತಿದ್ದಾಗ ಶಂಕರಗಂಡನು ಬನವಾಸಿ

ನಾಡನ್ನಾಳುತ್ತಿದ್ದನೆಂದು ದಾಖಲಿಸುತ್ತದೆ. ಕ್ರಿ.ಶ. ೯ ನೆಯ ಶತಮಾನದ ಜಪರ್‌ಗಡ್ ಶಾಸನದಲ್ಲಿ (ARIE., 1958-59, No.B 131; IAP, Wr. no. 2) ರಾಷ್ಟ್ರಕೂಟ ದೊರೆಯ ಹೆಸರು ಅಸ್ಪಷ್ಟವಾಗಿದೆ. ಇದೊಂದು ಪ್ರಶಸ್ತಿ ಶಾಸನವಾಗಿದ್ದು ಶಂಕರಗಂಡನೆಂಬುವವನು ಒಂದು ಗ್ರಾಮವನ್ನು ಕಟ್ಟಿಸಿ, ದೇವಿಯನ್ನು ಪ್ರತಿಷ್ಠಾಪಿಸಿ ದ್ದನ್ನು ದಾಖಲಿಸುತ್ತದೆ. ಇಂದ್ರಪಾಲನಗರಮ್ (ತುಮ್ಮಲಗುಡಂ) ಶಾಸನದಲ್ಲಿ (IAP, Wr. no. 3) ಜಯಧೀರ ಜಿನಾಲಯಕ್ಕೆ ರಟ್ಟಮಹಾರಾಜ ಶಂಕರಗಂಡನು ನೀಡಿದ ದಾನವನ್ನು ಉಲ್ಲೇಖಿಸಿದೆ. ಕ್ರಿ.ಶ. ೯ ನೆಯ ಶತಮಾನದ ಆಕನೂರು ಶಾಸನವು (ARIE, 1983-84, No. B5) ಅಸ್ಪಷ್ಟವಾಗಿದೆ. ಶಂಕರಗಂಡರಸನು ಕೊಲ್ಲಿಪಾಕ ಪನ್ನಿರ್ಚ್ಛಾಸಿರವನ್ನು ಆಳುತ್ತಿದ್ದುದನ್ನು ಉಳ್ಳೆಖಿಸಿದೆ.

ಮೇಲಿನ ಶಾಸನಗಳನ್ನು ಗಮನಿಸಿದಾಗ ಮಳಖೇಡದ ರಾಷ್ಟ್ರಕೂಟರ ವಂಶಾವಳಿಯಲ್ಲಿ ನಾಲ್ಕು ಜನ ಶಂಕರಗಣ ಅಥವಾ ಶಂಕರಗಂಡರಸರು ಬರುತ್ತಾರೆ. ಇವರ ಬಗ್ಗೆ ಹೆಚ್ಚಿನ ದಾಖಲೆಗಳಿಲ್ಲದಿರುವುದರಿಂದ ವಂಶಾವಳಿಯಲ್ಲಿ ಇವರಿಗೆ ಸರಿಯಾದ ಸ್ಥಾನವನ್ನು ಕೊಡುವಲ್ಲಿ ವಿಫಲರಾಗುತ್ತೇವೆ. ನನ್ನಗುಣಾವಲೋಕನ ಮಗನಾದ ಇವನು, ಅಧಿಕಾರದಲ್ಲಿದ್ದು ಧ್ರುವನಿಗೆ ಸಹಾಯಕನಾಗಿರುತ್ತಾನೆಂದು ತಿಳಿದುಬರುತ್ತದೆ. ನನ್ನ ಗುಣಾವಲೋಕನು ಔರಂಗಾಬಾದ್ ಪ್ರದೇಶದಲ್ಲಿ ಅಧಿಕಾರದಲ್ಲಿದ್ದನು. ಇದರಿಂದ ಇನ್ನೊಂದು ತಿಳಿಯುವ ಹೊಸ ವಿಚಾರವೆಂದರೆ ಶಂಕರಗಣನು ಧಾರಾವರ್ಷ ಧ್ರುವನ ಸಹಾಯಕನಾಗಿರದೆ, ಒಂದನೆಯ ಕೃಷ್ಣನ ಸೋದರ ಧ್ರುವನ ಬೆಂಬಲಿಗನಾಗಿದ್ದನೆಂದು ಹೇಳಬಹುದಾಗಿದೆ.

## ಗೋವಿಂದ II

ಒಂದನೆಯ ಕೃಷ್ಣನ ಮಗ ಇಮ್ಮಡಿ ಗೋವಿಂದನು ಪರಾಕ್ರಮಿಯೂ, ಒಳ್ಳೆಯ ಸೇನಾನಿಯೂ ಆಗಿದ್ದನು. ಈತನಿಂದ ಬಹಳಷ್ಟು ಕಾರ್ಯಗಳನ್ನು ನಿರೀಕ್ಷಿಸಿದ್ದವರಿಗೆ ಬಹಳ ನಿರಾಸೆಯಾಯಿತು. ಕಾರಣ, ಅಧಿಕಾರದ ಮದ, ಐಶ್ವರ್ಯ ಇವನನ್ನು ವಿಲಾಸಿಯನ್ನಾಗಿಸಿತು. ಇವನ ತಮ್ಮನಾದ ಧ್ರುವನು ರಾಜ್ಯಭಾರದ ವ್ಯವಸ್ಥೆಯನ್ನು ನೋಡಿಕೊಳ್ಳಬೇಕಾಯಿತು. ಇದರ ಉಪಯೋಗವನ್ನು ಪಡೆದುಕೊಂಡ ಧ್ರುವನು ಬೆಂಬಲಿಗರ ನೆರವಿನಿಂದ ದಂಗೆಯೆದ್ದು ಇಮ್ಮಡಿ ಗೋವಿಂದನಿಂದ ಅಧಿಕಾರವನ್ನು

ಕಿತ್ತುಕೊಂಡನೆಂದು ತಿಳಿದುಬರುತ್ತದೆ. ಈ ಪರಿಸ್ಥಿತಿಯಲ್ಲಿ ಇಮ್ಮಡಿ ಗೋವಿಂದನು ಪೂರ್ವ ಚಾಲುಕ್ಯರ ಮತ್ತು ಪಲ್ಲವರ ಸಹಾಯವನ್ನು ಕೋರಿದನೆಂದು ವಿದ್ವಾಂಸರು ಊಹಿಸಿದ್ದಾರೆ.

ಎರಡನೆಯ ಗೋವಿಂದನು ಒಂದನೆಯ ಕೃಷ್ಣನ ನಂತರ ಉತ್ತರಾಧಿಕಾರಿಯಾಗಿ ಬಂದನು. ಈತನ ಕಾಲದ ಮೂರು ಶಾಸನಗಳು ಸಿಕ್ಕಿವೆ. ಇದರಲ್ಲಿ ಅಲಾಸ್ ತಾಮ್ರಪಟವು ಕ್ರಿ.ಶ. ೭೭೦ ರಲ್ಲಿ ಹಾಕಿಸಿದ್ದು ವೆಂಗಿಯ ಚಲುಕ್ಯರ ಮೇಲೆ ಈತ ಯುದ್ಧ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಈ ಯುದ್ಧವು ನಡೆದಾಗ ಈತ ಯುವರಾಜನಾಗಿದ್ದನು. ಈತನ ತಂದೆ ಇಂದನೆಯ ಕೃಷ್ಣನು, ಇಮ್ಮಡಿ ಗೋವಿಂದನ ಪರಾಕ್ರಮವನ್ನು ಮೆಚ್ಚಿ ವೆಂಗಿರಾಜ್ಯದ ಮೇಲೆ ದಾಳಿಮಾಡಲು ಕಳುಹಿಸಿದನು. ಯುದ್ಧದಲ್ಲಿ ಗೆದ್ದ ಎರಡನೆಯ ಗೋವಿಂದನು ಸಂಗಮದಲ್ಲಿ ಬೀಡುಬಿಟ್ಟಿದ್ದನು. ಆಗ ಧ್ರುವರಾಜನ ಮೊಮ್ಮಗನೂ, ದಂತಿವರ್ಮನ ಮಗನೂ ಆಗಿದ್ದ ಮಾನಾವಲೋಕ ರತ್ನವರ್ಷ ವಿಜಯಾದಿತ್ಯನ ವಿನಂತಿಯಂತೆ ಅಲಕ್ತ ವಿಷಯದಲ್ಲಿದ್ದ ಉತ್ತುರ ಗ್ರಾಮ ಮತ್ತು ಅರಸಿಯವಾಡ ಗ್ರಾಮಗಳನ್ನು ಜಗ್ಗು ಎಂಬ ಬ್ರಾಹ್ಮಣನಿಗೆ ದಾನ ಮಾಡಿದನೆಂದು ತಿಳಿದುಬರುತ್ತದೆ. ಅರಸಿಯವಾಡವು ಕುರುಂದವಾಡದ ಹತ್ತಿರವಿದ್ದ ಅಲಾಸವಾಗಿದೆ.

ಕಡಬದ ಶಾಸನದಿಂದ (EI., vol IV, p 332 , 813 AD) ಇವನಿಗೆ ಪ್ರಭೂತವರ್ಷನೆಂಬ ಬಿರುದಿರುವುದು ತಿಳಿದುಬರುತ್ತದೆ. ಈ ಶಾಸನದ ಸತ್ಯತೆಯ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಇವನು ಪಟ್ಟವೇರಿದ ಸ್ವಲ್ಪಕಾಲಕ್ಕೆ ಈತನ ತಮ್ಮ ಧ್ರುವನು ಸಿಂಹಾಸನವನ್ನು ಕಸಿದುಕೊಂಡನೆಂದು ಡಾ।। ಬೂಲ್ಹರರು ತಿಳಿಸಿದ್ದಾರೆ.

ಆದರೆ ಶಾಸನಗಳ ಆಧಾರದಿಂದ ತಿಳಿದುಬರುವ ಅಂಶವೇನೆಂದರೆ ತಮ್ಮನ ಸಾಮರ್ಥ್ಯವನ್ನು ಅರಿತಿದ್ದರಿಂದ ಇಮ್ಮಡಿ ಗೋವಿಂದನು ಅಧಿಕಾರವನ್ನು ಬಿಟ್ಟುಕೊಟ್ಟನು ಎಂಬುದೇ ಆಗಿದೆ. ಧ್ರುವನ ಶಾಸನಗಳಲ್ಲಿ "ತಾನು ಅಣ್ಣನಿಂದ ಸಿಂಹಾಸನವನ್ನು ಬಲಾತ್ಕಾರದಿಂದ ಕಸಿಯಲಿಲ್ಲ" ಎಂಬ ವಿಚಾರ ಬರುತ್ತದೆ.

## ಕರ್ಕರಾಜ II

ಕ್ರಿ.ಶ. ೭೭೯ ರ ಧುಲಿಯಾ ತಾಮ್ರಪಟದಲ್ಲಿ ಎರಡನೆಯ ಗೋವಿಂದನು ರಾಜ್ಯಭಾರ ಮಾಡುತ್ತಿದ್ದುದನ್ನು ಉಲ್ಲೇಖಿಸಿದೆ. ಅವನ ತಮ್ಮ ಧ್ರುವರಾಜನ ಮಗನಾದ ಕರ್ಕರಾಜನು ಗೋವಿಂದನ ಆಜ್ಞೆಯ ಮೇರೆಗೆ ಸಿನ್ದೀ ನಗರದಲ್ಲಿ ವಾಸಿಸುತ್ತಿದ್ದನು. ಆ ಸಮಯದಲ್ಲಿ ಭಟ್ಟಚಂದ್ರಾದಿತ್ಯನ ಮಗನಿಗೆ ನಾಸಿಕ ವಿಷಯದಲ್ಲಿದ್ದ ನಕ್ಬಲ್ಲ ಗ್ರಾಮವನ್ನು ದಾನ ಮಾಡಿದನೆಂದು ತಿಳಿದುಬರುತ್ತದೆ.

ಕರ್ಕನು ಎಷ್ಟು ವರ್ಷ ರಾಜ್ಯಭಾರ ಮಾಡಿದನೆಂಬುದು ಸ್ಪಷ್ಟವಿಲ್ಲ. ಆದರೆ ೫ – ೬ ವರ್ಷಗಳಷ್ಟಾದರೂ ರಾಜ್ಯಭಾರ ಮಾಡಿರಬಹುದು. ಏಕೆಂದರೆ ತಂದೆ ಮತ್ತು ಚಿಕ್ಕಪ್ಪನ ಆಳ್ವಿಕೆಯ ಕಾಲದಲ್ಲಿದ್ದ ಪರಿಸ್ಥಿತಿಯ ಪರಿಣಾಮ ಈತನಿಗೆ ಅಧಿಕಾರವನ್ನು ತಂದುಕೊಟ್ಟಿರಬಹುದು.

ಇದರಿಂದ ಧ್ರುವನ ಮಗ ಕರ್ಕನು ಕೂಡ ಕೆಲವು ಪ್ರದೇಶಗಳಲ್ಲಿ ಆಳ್ವಿಕೆ ನಡೆಸಿದ್ದನೆಂದು ತಿಳಿದುಬರುತ್ತದೆ. ಇವನನ್ನು ಇಮ್ಮಡಿ ಕರ್ಕನೆಂದು ಕರೆಯಬಹುದಾಗಿದೆ. ಕ್ರಿ.ಶ. ೯೭೨ ರಿಂದ ೯೭೭ ರವರೆಗೆ ಬರುವ ಕರ್ಕನನ್ನು ಎಲ್ಲರೂ ಇಮ್ಮಡಿ ಕರ್ಕನೆಂದು ಗುರುತಿಸುತ್ತಾರೆ. ಆದರೆ ಅವನನ್ನು ಮುಮ್ಮಡಿ ಕರ್ಕನೆಂದು ಗುರುತಿಸುವುದು ಅನಿವಾರ್ಯವಾಗಿದೆ.

[ಕ್ರಿ.ಶ. ೮೧೭ರ ಬರೋಡ ಶಾಸನವು (ARIE., 1959-60, No. A –27) ಲಾಟಮಂಡಲದ ರಾಜಧಾನಿಯಾದ ಖೇಟಕಮಂಡಲದಿಂದ ಹೊರಡಿಸಲಾಗಿದ್ದು ಭರೂಕಚ್ಛ ವಿಷಯದ ಮಜ್ಜಾ(ಸ್)ತಣಿ ಎಂಬ ಗ್ರಾಮವನ್ನು ವಸಿಷ್ಠ ಗೋತ್ರದ ಋಗ್ವೇದದ ವಿದ್ಯಾರ್ಥಿ ಶ್ರೀಭಟ್ಟ ಎನ್ನುವ ಬ್ರಾಹ್ಮಣ ಭಟ್ಟನಿಗೆ ನೀಡಿದುದನ್ನು ಉಲ್ಲೇಖಿಸಿದೆ. ಶಾಸನದಲ್ಲಿ "ಶ್ರೀ ಕರ್ಕರಾಜಸ್ಯ ಇಂದ್ರರಾಜಸುತಸ್ಯ" ಎನ್ನುವ ಹಸ್ತಾಕ್ಷರವಿದೆ.]

ಇಲ್ಲಿ ಬರುವ ಕರ್ಕರಾಜನು ಗುಜರಾತಿನ ರಾಷ್ಟ್ರಕೂಟರ ಎರಡನೆಯ ಶಾಖೆಯವನಾಗಿದ್ದಾನೆ.

**ಧ್ರುವ (ಕ್ರಿ.ಶ.೭೭೫ – ೭೮೬)**

ಧ್ರುವನು ಒಂದನೆಯ ಕೃಷ್ಣನ ಮಗನಾಗಿದ್ದಾನೆ ಮತ್ತು ಎರಡನೆಯ ಗೋವಿಂದನ ತಮ್ಮ. ಧ್ರುವನು ಪಟ್ಟಾಭಿಷೇಕವಾದೊಡನೆಯೇ ಯುದ್ಧ ಮಾಡಿದನೆಂದು ತೋರುತ್ತದೆ. ತಮಿಳುನಾಡಿನ ಕುಳಿದಿಕ್ಕಿ (ಉತ್ತರ ಆರ್ಕಾಟ್) ಶಾಸನದಿಂದ ಕ್ರಿ. ಶ. ೭೮೩ರಲ್ಲಿ ಪಲ್ಲವ ನಂದಿವರ್ಮನನ್ನು ರಾಷ್ಟ್ರಕೂಟರು ಸೋಲಿಸಿದರೆಂದು ತಿಳಿದುಬರುತ್ತದೆ. ಈ ದಾಳಿಯನ್ನು ತನ್ನ ತಮ್ಮನ ಮಿತ್ರರನ್ನು ಸೋಲಿಸುವುದಕ್ಕಾಗಿಯೇ ಮಾಡಿದ್ದನೆಂದು ವಿದ್ವಾಂಸರು ತಿಳಿಸುತ್ತಾರೆ. ಧ್ರುವನು ದಕ್ಷಿಣದ ದಂಡಯಾತ್ರೆಯನ್ನು ಮಾಡುವ ಕಾಲಕ್ಕೆ ಗಂಗ ಶ್ರೀಪುರುಷನು ಸ್ವತಂತ್ರನಾಗಿದ್ದನು. ನಂತರ ಶಿವಮಾರನು ರಾಷ್ಟ್ರಕೂಟರ ಸಾಮಂತನಾಗಲು ಒಪ್ಪಲಿಲ್ಲ. ಆದ್ದರಿಂದ ಅವನನ್ನು ಸೆರೆಹಿಡಿದನು. ಶ್ರೀ ಪುರುಷನು ಇರುವವರೆಗೆ ಧ್ರುವನು ಗಂಗಮಂಡಲದ ತಂಟೆಗೆ ಹೋಗಲಿಲ್ಲ. ನಂತರ ಧ್ರುವನು ಎರಡನೆಯ ಶಿವಮಾರನ ಮೇಲೆ ಯುದ್ಧಕ್ಕೆ ಹೋದಾಗ ಮುದುಗುಂದೂರಿನಲ್ಲಿ ಯುದ್ಧನಡೆಯಿತು. ಈ ಯುದ್ಧದಲ್ಲಿ ಎರಡನೆಯ ಶಿವಮಾರನು ಧ್ರುವನನ್ನು ಸೋಲಿಸಿದನೆಂಬ ವಿವರವು, ಶಿವಮಾರನ ಮಗ, ಮಾರಸಿಂಹನ ಶಾಸನಗಳಲ್ಲಿ (MAR, ೧೯೨೪ ಆಲೂರು, ಗಂಜಾಂ, ಮಣ್ಣೆ ಶಾಸನಗಳು) ಇವೆ. ಆದರೆ ಇದಕ್ಕೆ ವಿರುದ್ಧವಾಗಿ ರಾಷ್ಟ್ರಕೂಟರ ಶಾಸನಗಳು ಹೇಳುತ್ತವೆ. ಯಾರಿಂದಲೂ ಸೋಲದ ಎರಡನೆಯ ಶಿವಮಾರನನ್ನು ಧ್ರುವರಾಜನು ಸೋಲಿಸಿ ಸೆರೆಯಲ್ಲಿಟ್ಟನೆಂದು ತಿಳಿದುಬರುತ್ತದೆ. ಈ ವಿವರಗಳು ಧ್ರುವನ ಮಗ ಮೂರನೆಯ ಗೋವಿಂದನ ರಾಧನಪುರ (EI, vol XXIII, p 204 & plates), ವಾಣಿ ದಿಂಡೋರಿ (IA, vol XI, pp156ff & plates) ಶಾಸನಗಳಲ್ಲಿವೆ. ರಾಷ್ಟ್ರಕೂಟ ಯುವರಾಜನಾದ ಸ್ತಂಭನನ್ನು ಗಂಗರಾಜ್ಯದ ಅಧಿಕಾರಿಯಾಗಿ ನಿಯಮಿಸಿದನು.

ಧ್ರುವನು ಉತ್ತರದ ದಿಗ್ವಿಜಯವನ್ನು ಮುಗಿಸಿ, ನಂತರ ದಕ್ಷಿಣದೆಡೆಗೆ ನಡೆದನು ಎನ್ನುವ ವಿದ್ವಾಂಸರು ಅನೇಕರಿದ್ದಾರೆ. ಇನ್ನು ಕೆಲವರು ದಕ್ಷಿಣದ ದಂಡಯಾತ್ರೆಯನ್ನು ಮುಗಿಸಿ ಉತ್ತರದ ದಿಗ್ವಿಜಯಕ್ಕೆ ಹೋದನು ಎನ್ನುತ್ತಾರೆ. ಕ್ರಿ. ಶ. ೭೮೦ರ ಭೋರ್ ಸ್ಟೇಟ್ ಮ್ಯೂಜಿಯಮ್ ಶಾಸನದಲ್ಲಿ (EI., vol XXII, p 176 & plates, 780 AD) ಈತ ಕಂಚೀ ಗಂಗ, ವೆಂಗೀ, ಮಾಲವ, ಮುಂತಾದ ಪ್ರದೇಶಗಳನ್ನು ವಶಪಡಿಸಿಕೊಂಡನೆಂಬ ಉಲ್ಲೇಖವಿದೆ. ನಂತರ "ಪರಮಭಟ್ಟಾರಕಮಹಾರಾಜಾಧಿರಾಜ

ಪರಮೇಶ್ವರ ಪರಮಭಟ್ಟಾರಕ ಶ್ರೀಮದ (ದ್) ಅಕಾಲವರ್ಷದೇವ ಪಾದಾನುದ್ಯಾತ ಪರಮಭಟಾರಕ ಮಹಾರಾಜಾಧಿರಾಜ ಪರಮೇಶ್ವರ ಶ್ರೀ ಧಾರಾವರ್ಷ ಧ್ರುವರಾಜ ನಾಮ [ಮಾ] ಶ್ರೀ ನಿರುಪಮ ದೇವ [:]" ಎನ್ನುವ ಉಲ್ಲೇಖವಿದೆ. ಒಂದನೆ ಕೃಷ್ಣನು ಆಳ್ವಿಕೆಯಲ್ಲಿದ್ದಾಗಲೇ ಧ್ರುವನೂ ಕೂಡ ಒಂದು ಪ್ರದೇಶಕ್ಕೆ ಒಡೆಯನಾಗಿದ್ದನ್ನು ಇದು ಸೂಚಿಸುತ್ತದೆ. ನೀರಾ ನದೀ ಸಂಗಮದಲ್ಲಿ ಬೀಡು ಬಿಟ್ಟಿದ್ದಾಗ, ಕರಹಾಡದಲ್ಲಿ ವಾಸವಾಗಿದ್ದ ಬ್ರಾಹ್ಮಣನಿಗೆ ಮೂಲವಿಷಯದಲ್ಲಿದ್ದ 'ಲಘುವಿಂಗ' ಗ್ರಾಮವನ್ನು ದಾನಮಾಡಿದನು ಎಂದು ಉಲ್ಲೇಖಿಸಿದೆ. ಮೇರೆಗಳನ್ನು ಹೇಳುವಾಗ ಮೂಲಪಟ್ಟಣದ ದಕ್ಷಿಣದಲ್ಲಿ ಲಯಣಗಿರಿ, ಪಶ್ಚಿಮದಲ್ಲಿ ಬೃಹದ್ವಿಂಗಕ ಗ್ರಾಮ, ಉತ್ತರದಲ್ಲಿ ನೀರಾ ನಾಮ ನದಿಗಳನ್ನು ಹೆಸರಿಸುತ್ತದೆ. "ಲಯಣಗಿರಿ"ಯು ಬೌದ್ಧ ಗುಹೆಗಳಿದ್ದ ಬೆಟ್ಟಗಳನ್ನು ಸೂಚಿಸುತ್ತದೆ. ಇದೇ ಕಾಲದ ಆಲಂಪುರ ಶಾಸನದಲ್ಲಿ (APGAS no.99) ಶ್ರೀವಾಗಿಲು ನಿರ್ಮಾಣ ಮಾಡಿದ್ದನ್ನು ದಾಖಲಿಸುತ್ತದೆ.

ಅಂತ:ಕಲಹಗಳು ನಡೆದು ಅಧಿಕಾರ ಸ್ವೀಕರಿಸಿದಾಗ ಮೊದಲು ಅಡ್ಡಬಂದವರನ್ನು ಸೋಲಿಸುವ ಕ್ರಿಯೆ ಸಹಜವಾದದ್ದು ಎನಿಸುತ್ತದೆ. ಏಕೆಂದರೆ ಮೊದಲು ಇವರನ್ನು ಹತೋಟಿಯಲ್ಲಿಡದಿದ್ದರೆ, ಉತ್ತರ ದಿಗ್ವಿಜಯ ಯಶಸ್ವಿ ಆಗುತ್ತಿರಲಿಲ್ಲ. ಅಲ್ಲಿಂದ ಹಿಂದಿರುಗುವಷ್ಟರಲ್ಲಿ ಇಲ್ಲಿನ ಪರಿಸ್ಥಿತಿಯೇ ಬೇರೆಯಾಗಿರುತ್ತಿತ್ತು. ಇವುಗಳನ್ನು ಗಮನಿಸಿದಾಗ ಧ್ರುವನ ಕಾಲದಲ್ಲಿ ಕೂಡ ಅಂತಃ ಕಲಹಗಳು ಮುಂದುವರೆದಿರುವುದು ಕಂಡುಬರುತ್ತದೆ. ಅಣ್ಣನನ್ನು ಪದಚ್ಯುತಿಗೊಳಿಸುವುದಷ್ಟೇ ಅಲ್ಲ, ಆತನ ಮಿತ್ರರನ್ನೂ ನಿಗ್ರಹಿಸುವ ಪ್ರಯತ್ನ ಮಾಡಿರುವುದು ವಿಶೇಷ. ಇದನ್ನು ದಿಗ್ವಿಜಯವೆಂದು ಕರೆಯಲು ಸಾಧ್ಯವಿಲ್ಲ. ಉತ್ತರದ ಕಡೆಗೆ ಹೊರಟಿದ್ದು ದಿಗ್ವಿಜಯ. ಶೂರನಾದ ಧ್ರುವನು ಪೂರ್ವಜರ ಪದ್ಧತಿಯನ್ನು ಮುಂದುವರೆಸಿದನೆಂದು ತಿಳಿಯಬಹುದು.

ಉತ್ತರದಲ್ಲಿ ಕನೋಜಿನ ಮೇಲಿನ ಅಧಿಕಾರಕ್ಕಾಗಿ ಅಂತಃಕಲಹ ನಡೆಯುತ್ತಿತ್ತು. ಮಾಳವದಲ್ಲಿ ಆಳುತ್ತಿದ್ದ ಗೂರ್ಜರ ಪ್ರತೀಹಾರ ದೊರೆ ವತ್ಸರಾಜನು ದಾಳಿಮಾಡಿ ಕನೋಜದ ದೊರೆ ಇಂದ್ರಾಯುಧನನ್ನು ಸೋಲಿಸಿದನು. ಅಲ್ಲಿಂದ ಹಿಂದಿರುಗುತ್ತಿದ್ದಾಗ ಬಂಗಾಲದ ಧರ್ಮಪಾಲನು ಕನೋಜನ್ನು ಮುತ್ತಿದನು. ವತ್ಸರಾಜನು ಅವನನ್ನು ಸೋಲಿಸಿದನು. ಕನೋಜದಲ್ಲಿದ್ದ ಅಂತಃಕಲಹದ ಜೊತೆಗೆ

ವತ್ಸರಾಜ, ಧರ್ಮಪಾಲರ ಅಧಿಕಾರ ದಾಹವೂ ಸೇರಿ ಮತ್ಸರ ಹೆಚ್ಚಾಗಿತ್ತು. ಯುದ್ಧ ಸಿದ್ಧತೆಯೂ ಆಗಿತ್ತು. ಗೌಹರಾಜ ಧರ್ಮಪಾಲನು ಕನೋಜಿನವರೆಗೆ ಬಂದಿದ್ದರಿಂದ ವತ್ಸರಾಜನು ಸೈನ್ಯ ಸಮೇತ ಕನೋಜಿನವರೆಗೆ ನಡೆದನು. ಕನೋಜದ ಅರಸನಾಗಿದ್ದ ಇಂದ್ರಾಯುಧನು ಬಹಳ ದುರ್ಬಲನಾಗಿದ್ದನು. ಆದ್ದರಿಂದ ವತ್ಸರಾಜ, ಧರ್ಮಪಾಲರಿಗೆ ಹೋರಾಡುವ ಅವಕಾಶ ಸಿಕ್ಕಿತು. ಈ ಯುದ್ಧದಲ್ಲಿ ಧರ್ಮಪಾಲನು ಸೋತನು.

ಇದೇ ಸಮಯಕ್ಕೆ ಧ್ರುವನು ಕೂಡ ಕನೋಜಿನ ಒಡೆತನಕ್ಕೆ ಇಬ್ಬರ ಮಧ್ಯೆ ಮೂರನೆಯವನಾಗಿ ತಲೆ ಹಾಕಿದನು. ವತ್ಸರಾಜ ಮತ್ತು ಧರ್ಮಪಾಲರಿಗಿಂತ ಶೂರನಾದ ಧ್ರುವನು ತನ್ನ ಸೈನ್ಯದೊಂದಿಗೆ ನರ್ಮದೆಯನ್ನು ದಾಟಿ ವತ್ಸರಾಜನನ್ನು ಎದುರಿಸಿದನು. ಆಗ ನಡೆದ ಯುದ್ಧದಲ್ಲಿ ವತ್ಸರಾಜನು ಸೋತನು. ಸೋತ ವತ್ಸರಾಜನು ಯುದ್ಧಭೂಮಿಯಿಂದ ಓಡಿ ರಾಜಪುಟಾಣದ ಮರುಭೂಮಿಯಲ್ಲಿ ತಲೆತಪ್ಪಿಸಿಕೊಂಡು ಅಲೆಯಬೇಕಾಯಿತು. ಬಂಗಾಲದ ಧರ್ಮಪಾಲನು ಧ್ರುವನನ್ನು ಎದುರಿಸಿದರೂ ಸೋಲಬೇಕಾಯಿತು. ತೀವ್ರವಾದ ಕದನದಲ್ಲಿ ಧರ್ಮಪಾಲನ ಸೈನ್ಯ ದಿಕ್ಕಾಪಾಲಾಯಿತು. ಧರ್ಮಪಾಲನು ತನ್ನ ಶ್ವೇತ ಛತ್ರವನ್ನು ಬಿಟ್ಟು ಯುದ್ಧಭೂಮಿಯಿಂದ ಓಡಿಹೋದನು. ಧ್ರುವನು ರಾಜ ಚಿಹ್ನೆಗಳಾದ ಎರಡು ಶ್ವೇತಛತ್ರಗಳನ್ನು ವಶಪಡಿಸಿಕೊಂಡನು. ಧ್ರುವನು ವಿಜಯೀ ಸೈನ್ಯದೊಂದಿಗೆ, ಗಂಗಾ, ಯಮುನಾ ನದಿಗಳ ದಡದಲ್ಲಿ ಕೆಲವು ವಾರಗಳನ್ನು ಕಳೆದನು. ಅದರ ನೆನಪಿಗಾಗಿ ಹಾಗೂ ದಿಗ್ವಿಜಯದ ನೆನಪಿಗಾಗಿ ಗಂಗಾ ಯಮುನಾ ನದಿಗಳ ಚಿಹ್ನೆಗಳನ್ನು ತನ್ನ ಸಾಮ್ರಾಜ್ಯ ಸೂಚಕ ಧ್ವಜದಲ್ಲಿ ಅಳವಡಿಸಿಕೊಂಡನು. ಅಂದರೆ ಈ ಚಿಹ್ನೆಗಳನ್ನು ಯಾರಿಂದಲೂ ಕಸಿದಿಲ್ಲ. ಈ ವಿಷಯದ ಆಧಾರದಿಂದ ಎಲ್ಲೋರದ ಕೈಲಾಸ ದೇವಾಲಯದಲ್ಲಿರುವ ಗಂಗಾ ಯಮುನೆಯರ ವಿಗ್ರಹಗಳು ಈ ವಿಜಯದ ದ್ಯೋತಕಗಳೆಂದು ಭಾವಿಸಬಾರದೇಕೆ? ಇದರಿಂದ ಮೊದಲನೆಯ ಕೃಷ್ಣನು ಕೊರೆಸಲು ಪ್ರಾರಂಭಿಸಿದ ಗುಹಾಲಯವು ಧ್ರುವನ ಕಾಲದಲ್ಲಿ ಕೂಡ ಮುಂದುವರೆದಿರಬಹುದು ಎನ್ನಲು ಸಾಧ್ಯವಿದೆ.

ಕನೋಜದ ಮೇಲಿನ ವಿಜಯದಿಂದ ಧ್ರುವನ ಕೀರ್ತಿ ಹೆಚ್ಚಿತು. ಯಾವುದೇ ಅಡೆತಡೆಗಳಿಲ್ಲದೆ ಕನೋಜವನ್ನು ವಶಪಡಿಸಿಕೊಳ್ಳಬಹುದಾಗಿತ್ತು. ಆದರೂ ಹಾಗೆ ಮಾಡದೆ ದಿಗ್ವಿಜಯದಿಂದ ತೃಪ್ತಿ ಹೊಂದಿ, ಅಪಾರ ಧನಕನಕಗಳೊಂದಿಗೆ

ಹಿಂದಿರುಗಿದನು. ಕನೋಜಿನ ಒಡೆತನಕ್ಕೆ ಬೇರೆಯವರನ್ನು ಕೂಡಿಸಿ ನಿಶ್ಚಿಂತೆಯಿಂದ ಹಿಂದಿರುಗಿದ ಧ್ರುವನ ಮನಸ್ಸಿನಲ್ಲಿ ಏನಿತ್ತೆಂದು ತಿಳಿಯುವುದಿಲ್ಲ. ಕನೋಜಿನ ಸಿಂಹಾಸನಕ್ಕಾಗಿ ನಡೆದ ಹೋರಾಟಗಳನ್ನು ಕಂಡು ಹಿಂದೆ ಸರಿದನೆ? ತನ್ನ ಶೌರ್ಯ ಪ್ರದರ್ಶನಕ್ಕಾಗಿ ಒಮ್ಮೆ ಗೆದ್ದು, ಮುಂದೆ ಅದರ ತಡೆಗೆ ಮನಸ್ಸು ಕೊಡಲು ನಿಶ್ಚಯಿಸಿರಬಹುದೇ?. ಕನೋಜ್ ನಗರವು ಅಂದಿನ ಕಾಲಕ್ಕೆ ಬಹಳ ಸಮೃದ್ಧವಾಗಿತ್ತು ಮತ್ತು ಅದರ ಅಧಿಕಾರವನ್ನು ವಹಿಸಲು ಎಲ್ಲರೂ ಆಸೆಯಿಂದಿದ್ದರು. ಧ್ರುವನ ಪ್ರತಿಕ್ರಿಯೆಯನ್ನು ಕಂಡಾಗ, ಕನೋಜನ್ನೂ ಸೇರಿಸಿಕೊಂಡಂತಹ ವಿಶಾಲ ಸಾಮ್ರಾಜ್ಯವನ್ನು ಪಾಲಿಸಲು ಅಳುಕಿದನೆ, ಅಥವಾ ಬೇರೇನಾದರೂ ಕಾರಣವಿರಬಹುದೇ?

ಕ್ರಿ. ಶ. ೭೮೫ರ ಪಿಂಪರಿ ಪಟವು (EI., volX, pp81 ff & plates) ರಾಷ್ಟ್ರಕೂಟರ ವಂಶಾವಳಿಯನ್ನು ಹೇಳುತ್ತದೆ. ರಾಹಪ್ಪನೆಂಬುವನನ್ನು ಸೋಲಿಸಿದ ನಂತರ ಪಾಲೀಧ್ವಜವನ್ನು ವಶಪಡಿಸಿಕೊಂಡನು. ವಿಜಯಸ್ಕಂಧಾ ವಾರದಲ್ಲಿದ್ದಾಗ ವಟನಗರಿಕಾ-೮೪ರಲ್ಲಿದ್ದ ಲೀಲಾಗ್ರಾಮವನ್ನು ಬ್ರಾಹ್ಮಣರಿಗೆ ದಾನಮಾಡಿದನು. ಈ ಶಾಸನದಲ್ಲಿ ಮಹಾಸಂಧಿವಿಗ್ರಹಾಧಿಕಾರಿಗೆ ಪಂಚಮಹಾಶಬ್ದ ಗೌರವವಿದ್ದುದನ್ನು ದಾಖಲಿಸಿದೆ. ದಾನ ಮಾಡಿದ ಗ್ರಾಮಗಳು ಹಿಂದಿನ ನೀಲಗವ್ಹಾಣ (ನೀಲಾಗ್ರಾಮ) ಮತ್ತು ವಟನಗರ (ವಾಣಿ).

ಧ್ರುವನು ತನ್ನ ರಾಜಧಾನಿಗೆ ಮರಳುತ್ತಿದ್ದಾಗ ಹಾದಿಯಲ್ಲಿ ವೆಂಗಿಯನ್ನು ಮುತ್ತಿದನು. ಅಲ್ಲಿನ ದೊರೆ ವಿಷ್ಣುವರ್ಧನನು ಯುದ್ಧಕ್ಕೆ ಅವಕಾಶವನ್ನು ಕೊಡದೆ ಸ್ನೇಹ ಹಸ್ತವನ್ನು ನೀಡಿದನು. ಜೊತೆಗೆ ತನ್ನ ಮಗಳು ಶೀಲಭಟ್ಟಾರಿಕೆಯನ್ನು ಧ್ರುವನಿಗೆ ವಿವಾಹ ಮಾಡಿಕೊಟ್ಟನು. ಶೀಲಭಟ್ಟಾರಿಕೆಯು ಗುಣದಲ್ಲಿ ಮತ್ತು ಆಡಳಿತದಲ್ಲಿ ದಕ್ಷಳಾಗಿದ್ದ ಸ್ತ್ರೀಯಾಗಿದ್ದಳೆಂದು ಶಾಸನಗಳಿಂದ ತಿಳಿದು ಬರುತ್ತದೆ. ಕ್ರಿ. ಶ. ೭೮೭ರ ಜೇಥ್ವಾಯಿ ಪಟಗಳಲ್ಲಿ (EI., vol XXII, no.17, pp 98 ff & plates) ಧ್ರುವನ ಹೆಂಡತಿಯಾದ, ವೆಂಗಿ ಚಾಳುಕ್ಯ ವಿಷ್ಣುವರ್ಧನನ ಮಗಳಾಗಿದ್ದ ಶೀಲಮಹಾದೇವಿಯು, ನಾಂದೀಪುರ ವಿಷಯದಲ್ಲಿದ್ದ ಕೋಲಪದ್ರ ಗ್ರಾಮವನ್ನು ದಾನ ಮಾಡಿದ್ದುದನ್ನು ಉಲ್ಲೇಖಿಸುತ್ತದೆ. ಮಹಾಸಂಧಿವಿಗ್ರಹಾಧಿಕಾರಿ ಗುಣಭರನನ್ನು ಹೆಸರಿಸುತ್ತದೆ. ಧ್ರುವನಿಗೆ ಕರ್ಕ, ಸ್ಥಂಭ (ಕಂಬಯ್ಯ), ಗೋವಿಂದ-III, ಇಂದ್ರರೆಂಬ ನಾಲ್ಕು ಮಕ್ಕಳಿದ್ದರು. ರೈಸರ ಪ್ರಕಾರ ಧ್ರುವನಿಗೆ ಮೂರು ಜನ ಮಕ್ಕಳು. ಕಂಬ

ಅಥವಾ ಸ್ಥಂಬ (ಗಂಗವಾಡಿ ಪ್ರದೇಶವನ್ನು ಆಳಿದವನು), ಎರಡನೆಯವನು ಇಂದ್ರರಾಜ, ಮೂರನೆಯ ಮಗ ಮೂರನೆಯ ಗೋವಿಂದ. ಹಿರಿಯ ಮಗನು ಮೊದಲೇ ತೀರಿಹೋಗಿದ್ದನು. ಕೊನೆಯ ಮಗನಾದ ಮೂರನೆಯ ಗೋವಿಂದನು ತಂದೆಯ ದಿಗ್ವಿಜಯದಲ್ಲಿ ಸಾಕಷ್ಟು ನೆರವಾಗಿದ್ದನು. ಅವನ ದಕ್ಷತೆ, ಪರಾಕ್ರಮಗಳನ್ನು ಕಂಡ ಧ್ರುವನು ಗೋವಿಂದನನ್ನೇ ಉತ್ತರಾಧಿಕಾರಿಯನ್ನಾಗಿ ಮಾಡಲು ನಿರ್ಧರಿಸಿದನು ಮತ್ತು ತಾನು ಬದುಕಿರುವಾಗಲೇ ಈ ಕೆಲಸವಾಗಬೇಕೆಂದು ಯೋಚಿಸಿದನು. ಆದರೆ ಗೋವಿಂದನೇ ನಿರಾಕರಿಸಿದ್ದರಿಂದ ಸುಮ್ಮನಾಗಬೇಕಾಯಿತು. ಸಾಮ್ರಾಜ್ಯವನ್ನಾಳಲು ದಕ್ಷನಾಗಿದ್ದ ಮೂರನೆಯ ಗೋವಿಂದನಿಗೆ ಯುವರಾಜ ಪದವಿ ಸೂಚಕ ಕಂಠಿಕೆಯನ್ನು ನೀಡಿದನು. ಅದಕ್ಕೆ ಗೋವಿಂದನು ತಂದೆಯೇ ರಾಜ್ಯದ ಅಧಿಕಾರ ನಿನಗೇ ಇರಲಿ, ನಿನ್ನ ಆಜ್ಞಾ ರೂಪದಲ್ಲಿರುವ ಈ ಕಂಠೀ ಹಾರವು ಸಾಕು ಎಂದನೆಂದು ಮಣ್ಣೆ ಶಾಸನವು (EI., vol XXIII, pp293, 802 AD) ರಾಧನಪುರ ಶಾಸನ (EI., vol VI, pp 239, 808 AD) ಗಳು ಉಲ್ಲೇಖಿಸುತ್ತವೆ. ಆದುದರಿಂದ, ಎರಡನೆಯ ಮಗನಾದ ಕರ್ಕನು ಪಟ್ಟಕ್ಕೆ ಬಂದನು.

ಗೋವಿಂದನು ಪದವಿಯನ್ನು ನಿರಾಕರಿಸಲು ಕಾರಣವನ್ನು ಊಹಿಸಬಹುದು. ತಂದೆಯ ಮುಂದೆ ರಾಜ್ಯಕ್ಕಾಗಿ ಕಲಹ ಬೇಡವೆಂದು ಗೋವಿಂದನು ಭಾವಿಸಿರಬಹುದು. ಕ್ರಿ. ಶ. ೭೯೩ ರಲ್ಲಿ ಧ್ರುವನು ಮರಣಹೊಂದಿದಾಗ ಸ್ಥಂಭನು ಗೋವಿಂದನ ಪಟ್ಟಾಭಿಷೇಕವನ್ನು ವಿರೋಧಿಸಿದನು. ಇದನ್ನು ಕಂಡಾಗ ತನ್ನ ತಂದೆಯ ಎದುರಿನಲ್ಲಿಯೇ ರಾಜ್ಯಕ್ಕಾಗಿ ಕಿತ್ತಾಟವಾಗುವುದು ಬೇಡವೆಂದು ಗೋವಿಂದನು ಪದವಿಯನ್ನು ನಿರಾಕರಿಸಿದನೆಂಬುದು ಸ್ಪಷ್ಟವಾಗುತ್ತದೆ. ಧ್ರುವನು ತನ್ನ ಸಾಮ್ರಾಜ್ಯವನ್ನು ವಿಸ್ತರಿಸುವುದರ ಮೂಲಕ ರಾಷ್ಟ್ರಕೂಟರ ಕೀರ್ತಿಯು ಹೆಚ್ಚುವಂತೆ ಮಾಡಿದನು. ಈತನಿಗೆ ಧಾರಾವರ್ಷ, ಶ್ರೀವಲ್ಲಭ ನಿರುಪಮ, ಕಲಿವಲ್ಲಭ, ಇದ್ದತೇಜ, ನರೇಂದ್ರದೇವ, ಮುಂತಾದ ಬಿರುದುಗಳಿದ್ದವೆಂದು ತಿಳಿದುಬರುತ್ತದೆ.

ಧ್ರುವನ ಕಾಲದಲ್ಲಿ ಅನೇಕ ಗೋಸಾಸಗಳು, ತುರುಗಾಳಗ ಶಾಸನಗಳನ್ನು ಹಾಕಿರುವುದು ಕಂಡುಬರುತ್ತದೆ. ಇವುಗಳು ಕ್ರಿ.ಶ.೭೭೦ – ೭೮೦ರ ನಡುವೆ ಹಾಕಿಸಿದಂತವುಗಳಾಗಿವೆ. ಸೇನಾವರರು ರಾಷ್ಟ್ರಕೂಟರ ಮಾಂಡಳೀಕರಾಗಿದ್ದರೆಂದು ತಿಳಿದುಬರುತ್ತದೆ. ಮುತ್ತಳ್ಳಿ ಜೇನು ಮರಡಿಯ (ನೇಗಿನಹಾಳ ಪ್ರಬಂಧಗಳು ಪು–

೪೭೮, ಸಿ. ಸಿ, ನೇಗಿನಹಾಳ) ಶಾಸನದಲ್ಲಿ ಸೇನಾವರರ ಮಾರಕ್ಕರಸನು ಬನವಾಸಿ ಪನ್ನಿರ್ಚ್ಛಾಸಿರವನ್ನು ಆಳುತ್ತಿದ್ದನೆಂಬ ಉಲ್ಲೇಖವಿದೆ. ಅದೇ ರೀತಿ ಧಾರಾವರ್ಷ ಧ್ರುವನು ಪೃಥ್ವಿಯನ್ನು ಏಕಛತ್ರ ಛಾಯೆಯಿಂದ ಆಳುತ್ತಿದ್ದನೆಂಬ ಅಂಶವನ್ನು ತಿಳಿಸುವುದರಿಂದ ಕ್ರಿ. ಶ. ೭೭೦ರ ಹೊತ್ತಿಗಾಗಲೇ ಧ್ರುವನ ಆಳ್ವಿಕೆಯು ಪ್ರಾರಂಭವಾಗಿತ್ತೆಂಬುದು ಧೃಡವಾಗುತ್ತದೆ.

ಮೇಲಿನ ಅಂಶದ ಬಗ್ಗೆ ಇನ್ನೂ ವಿವರವಾಗಿ ಹೇಳುವುದಾದರೆ ಕ್ರಿ. ಶ. ೭೭೩ರಲ್ಲಿ ಒಂದನೆಯ ಕೃಷ್ಣನು ನಿಧನನಾದನೆಂದು ತಿಳಿದು ಬರುತ್ತದೆ. ಎರಡನೆಯ ಗೋವಿಂದನ ಆಳ್ವಿಕೆಯ ಕಾಲ, ಕ್ರಿ. ಶ. ೭೭೩ ರಿಂದ ಕ್ರಿ. ಶ. ೭೮೦ ರ ವರೆಗೆ ಎಂಬುದು ತಿಳಿದಿರುವ ವಿಷಯ. ಎರಡನೆಯ ಗೋವಿಂದನ ಒಂದೇ ಒಂದು ತಾಮ್ರಪಟವು ಸಿಕ್ಕಿದ್ದು ಅದರ ಕಾಲ ಕ್ರಿ. ಶ. ೭೭೦ ಆಗಿರುವುದರಿಂದ ಒಂದನೆಯ ಗೋವಿಂದನ ವಿಲಾಸೀ ಜೀವನದ ಕಲ್ಪನೆಯು ಮೂಡುತ್ತದೆ. ಮುತ್ತಳ್ಳಿಯ ಇನ್ನೊಂದು ಶಾಸನವು ಮಾರಕ್ಕರಸನನ್ನು ಉಲ್ಲೇಖಿಸುತ್ತದೆ. ಆದಿತ್ಯ ಸೇನ ಪಂಡಿತರು ಕುನ್ದಮುಗೆಯನ್ನು ಆಳುತ್ತಿದ್ದನು. ಆದೇ ಊರಿನ ಇನ್ನೊಂದು ಶಾಸನವು ಕುನ್ದಮುಗೆಯನ್ನು ದೇವೇಂದ್ರಸೇನ ಪಂಡಿತರಾಳುತ್ತಿದ್ದರೆಂಬ ವಿವರವನ್ನು ನೀಡುತ್ತದೆ.

ಕಛವಿಯ ಶಾಸನವು (KRIPR, 1953-57, p 65, no.1) ಮದೆಯೂರಿನ ಮಾರನು ಬನವಾಸಿ – ೧೨೦೦೦ವನ್ನು ಆಳುತ್ತಿದ್ದನೆಂದು ತಿಳಿಸುತ್ತದೆ. ಕ್ರಿ. ಶ. ೭೮೦ರ ನರೇಗಲ್ಲು ಶಾಸನವು (EI., volVI, no. 16, p 169 - 198) ಧ್ರುವನ ಆಳ್ವಿಕೆಯಲ್ಲಿ ಮಾರಕ್ಕರಸನು ಬನವಾಸಿ ಪನ್ನಿರ್ಛಾಸಿರವನ್ನು ಆಳುತ್ತಿದ್ದನು. ನರೆಯಂಗಲ್ಲು ಸಾಸಿರ್ವರ ತುಱುಗೋಳಿನಲ್ಲಿ ದೊಮ್ಮರಕಾಡವನನ್ನು ಉಲ್ಲೇಖಿಸುತ್ತದೆ. ಸಿಡೇನೂರು ಶಾಸನವು (SII., vol XX, no. 10) ಧ್ರುವ ( ಧೋರಪ್ಪರಸ) ನು ಆಳ್ವಿಕೆ ನಡೆಸುತ್ತಿರುವಾಗ ಮಾರಕ್ಕರಸನು ಬನವಾಸಿ – ಪನ್ನಿರ್ಛಾಸಿರವನ್ನು ಬಿನಎತಿಅಬ್ಬೆ ಊರನ್ನಾಳುತ್ತಿದ್ದಳು ಎಂಬ ವಿವರವನ್ನು ಕೊಡುತ್ತದೆ. ಕಾಲದ ಉಲ್ಲೇಖವಿಲ್ಲದ ಮಟಕೆರೆ ಶಾಸನವು (EC vol III, p 46), ಧಾರಾವರ್ಷ ಶ್ರೀವಲ್ಲಭ ಧ್ರುವನು ಆಳ್ವಿಕೆ ನಡೆಸುತ್ತಿದ್ದಾಗ ಕಂಭರಸನು ೯೬,೦೦೦ ವನ್ನು ಆಳುತ್ತಿದ್ದನೆಂದು ಹೇಳಿದೆ (ಬಹುಶ: ಬನವಾಸಿ ೯೬,೦೦೦). ಕ್ರಿ.ಶ.೭೭೮–೭೯ರ ಪಟ್ಟದಕಲ್ಲು ಶಾಸನವು (IA., vol XI, p 124), ಧಾರಾವರ್ಷ,

ಕಲಿವಲ್ಲಭನು ಆಳ್ವಿಕೆ ನಡೆಸುತ್ತಿದ್ದಾಗ, ಲೋಕಮಹಾದೇವಿಯರ ದೇಗುಲದ ಸೂಳೆ ಗೋಯಿನ್ದಪೊಡ್ಡಿಯ ಮಗಳು ಬಾಡಿ (ಳಿ) ಪೊಡ್ಡಿ ಎನ್ನುವವಳು ನೀಡಿದ ಗೋಸಾಸ, ಹಸ್ತಿರಥ, ಅಶ್ವರಥ, ಉಭಯಮುಖಿ ದಾನಗಳನ್ನು ನೀಡಿದುದನ್ನು ಉಲ್ಲೇಖಿಸುತ್ತದೆ.

## ರಣಾವಲೋಕ ಕಂಬಯ್ಯ

ಧ್ರುವ ನಿರುಪಮನ ಮಗನೇ ಕಂಭ ಅಥವಾ ರಣಾವಲೋಕ ಕಂಬಯ್ಯ. ಕ್ರಿ.ಶ. ೮೦೮ ರ ದೇವನೂರು ಶಾಸನದಲ್ಲಿ (EC., vol III (R) NJ No. 278) ಕಂಬಯ್ಯನ ತಂದೆ, ಧಾರಾವರ್ಷ ಧ್ರುವನ ಪರಾಕ್ರಮವನ್ನು ವರ್ಣಿಸಲಾಗಿದೆ. ರಣಾವಲೋಕ ಕಂಭರಾಜನು ಪುನ್ನಾಡು ಎಡೆನಾಡು ವಿಷಯ, ತಲವನ ನಗರಗಳ ಪ್ರಾಂತ್ಯವನ್ನು ಅಳುತ್ತಿದ್ದನೆಂಬ ವಿವರವು ತಿಳಿದುಬರುತ್ತದೆ. ಈತನಿಗೆ ಶೌಚಾಚಾರಪ್ರಭು, ಪರೋಪಕಾರ ಕರುಣಾಕರ ಮುಂತಾದ ಬಿರುದುಗಳಿದ್ದವೆಂದು ತಿಳಿದುಬರುತ್ತದೆ. ಕಂಭನು ತಲವನ ನಗರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನೆಂದು ತಿಳಿದುಬರುತ್ತದೆ.

ಧಾರಾವರ್ಷ ಧ್ರುವನು ತನ್ನ ಉತ್ತರಾಧಿಕಾರಿಯಾಗಿ ಹಿರಿಯ ಮಗನಾದ ಕಂಭನನ್ನು ಬಿಟ್ಟು, ಮೂರನೆಯ ಗೋವಿಂದನನ್ನು ಸಿಂಹಾಸನದಲ್ಲಿ ಕೂಡಿಸಲು ನೋಡಿದಾಗ ಗೋವಿಂದನು ನಿರಾಕರಿಸುತ್ತಾನೆ. ಮುಂದೆ ಸಿಂಹಾಸನಕ್ಕಾಗಿ ಅಂತ:ಕಲಹಗಳಾಗುತ್ತವೆ. ಮೂರನೆಯ ಗೋವಿಂದನು ಸೆರೆಯಲ್ಲಿದ್ದ ಗಂಗ ಇಮ್ಮಡಿ ಶಿವಮಾರನನ್ನು ಬಿಡುಗಡೆಗೊಳಿಸಿ, ಕಂಭನ ವಿರುದ್ಧ ಪ್ರಚೋದಿಸಿ, ಕಳಿಸಿದಾಗ ಶಿವಮಾರನು ಕಂಭನ ಪರವಾಗಿ ಸೇರಿಕೊಂಡನು. ಆಗ ನಡೆದ ಯುದ್ಧದಲ್ಲಿ ಕಂಭನನ್ನು ಸೋಲಿಸಿ ಶಿವಮಾರನನ್ನು ಮತ್ತೆ ಸೆರೆಮನೆಗೆ ಹಾಕಿದನು. ಗಂಗವಾಡಿ ಪ್ರದೇಶದ ಆಳ್ವಿಕೆಯನ್ನು ಕಂಭನಿಗೆ ವಹಿಸಿಕೊಟ್ಟನು. ಮೂರನೆಯ ಗೋವಿಂದನ ಬಗ್ಗೆ ವಿವರಿಸುವಾಗ ಈ ಸಂದರ್ಭವನ್ನು ವಿವರವಾಗಿ ಹೇಳಲಾಗಿದೆ.

ಕೊಂಡಕುಂದಾನ್ವಯ, ಸೀರ್ಮಲಗೆಗೂರುಗಣ, ಕುಮಾರಣಂದಿ ಭಟ್ಟಾರಕರ ಶಿಷ್ಯ, ಎಳವಾಚಾರ್ಯ ಗುರು, ಇವರ ಶಿಷ್ಯ ವರ್ದ್ಧಮಾನ ಗುರುವಿಗೆ ಗ್ರಾಮ ದಾನವನ್ನು ಮಾಡಿದನೆಂಬ ಅಂಶವು ತಿಳಿದುಬರುತ್ತದೆ. ಷಣ್ಣವತಿ ಸಹಸ್ರ ವಿಷಯದಲ್ಲಿದ್ದ ವದನಗುಪ್ಪೆ ಗ್ರಾಮವನ್ನು ದಾನವಾಗಿ ನೀಡಿದನು. ಕಂಭನು ತನ್ನ ಮಗ

ಶ್ರೀಶಂಕರಗಂಡನ ವಿಜ್ಞಾಪನೆಯ ಮೇರೆಗೆ ಈ ದಾನವನ್ನು ನೀಡಿದನೆಂದು ತಿಳಿದುಬರುತ್ತದೆ. ಪ್ರಸ್ತುತ ಶಾಸನದಿಂದ ನಮಗೆ ರಣಾವಲೋಕ ಕಂಬಯ್ಯನು ನಿರ್ದಿಷ್ಟ ಪ್ರಾಂತ್ಯವನ್ನು ಆಳುತ್ತಿದ್ದನೆಂಬ ವಿಚಾರವಲ್ಲದೇ, ಈತನಿಗೆ ಶಂಕರಗಂಡನೆಂಬ ಮಗನಿದ್ದನೆಂಬ ಅಂಶವು ತಿಳಿದುಬರುತ್ತದೆ. ಇದರಿಂದ ಮೂರನೆಯ ಗೋವಿಂದನು ಆಳ್ವಿಕೆ ನಡೆಸುತ್ತಿದ್ದಾಗಲೂ ಇವರು ಪುನ್ನಾಡು ಏಡೆನಾಡು ಪ್ರದೇಶಗಳನ್ನು ಆಳುತ್ತಿದ್ದರೆಂದು ತಿಳಿದುಬರುತ್ತದೆ. ರಾಷ್ಟ್ರಕೂಟರ ವಂಶಾವಳಿಯಲ್ಲಿ ಕಂಭನ ಹೆಸರು ಸೇರಿಸಿದ್ದಾರೆ. ಆದರೆ ಶಂಕರಗಂಡನ ಹೆಸರನ್ನು ಸೇರಿಸಿಲ್ಲ. ಅದು ಕಂಭನ ಬಿರುದು ಎಂದುಬಿಡುತ್ತಾರೆ.

ಶ್ರವಣಬೆಳಗೊಳದ ಶಾಸನದಲ್ಲಿ (EC., vol II, No.38 (35)) ರಣಾವಲೋಕ ಕಂಬಯ್ಯನು ಪೆರ್ಗಟ್ಟಿಪ್ಪು ೧,೦೦೦ ವನ್ನು ಆಳುತ್ತಿದ್ದಾಗ ಸೇನ ಅಡಿಗಳ್ ಜೈನ ಮುನಿಗೆ ಗೋವಿಂದಪ್ಪಾಡಿಪ್ರದೇಶವನ್ನು ದಾನವಾಗಿ ನೀಡಿದುದನ್ನು ತಿಳಿಸುತ್ತದೆ.

## ಗೋವಿಂದ ೩ (ಕ್ರಿ.ಶ. ೭೯೩–೮೧೪)

ಧ್ರುವನ ಆಸೆಯಂತೆ ಗೋವಿಂದನು ಸಿಂಹಾಸನವನ್ನು ವಹಿಸಿಕೊಂಡನು. ಇದಕ್ಕೆ ಸ್ತಂಭನ ವಿರೋಧವಿತ್ತು. ಸ್ತಂಭನು ತನ್ನ ಕಡೆಯ ಹನ್ನೆರಡು ಜನ ಸಾಮಂತರು, ಹಿತೈಷಿಗಳ ಗುಂಪಿನೊಂದಿಗೆ ಗೋವಿಂದನ ಮೇಲೆ ಆಕ್ರಮಣ ಮಾಡಿದನು. ಇಂತಹ ಪ್ರತಿಕ್ರಿಯೆಯನ್ನು ನಿರೀಕ್ಷಿಸಿಯೇ ಇದ್ದ ಗೋವಿಂದನು, ಸೆರೆಯಲ್ಲಿದ್ದ ಗಂಗ ಇಮ್ಮಡಿ ಶಿವಮಾರನನ್ನು ಬಿಡುಗಡೆಗೊಳಿಸಿದನು.

ಆಲೂರು ಶಾಸನದಲ್ಲಿ (MAR., 1924, pp 74, no.80, 798 AD)

"ಪತಿರಪ್ಯಜಡಾಸಯ: ಶೀತಕರೋಪ್ಯನಾಲಂಗಿತ

ಮಲಿ [ನ] ಭಾವೋ ರಾಷ್ಟ್ರಕೂಟ ಪಲ್ಲವಾನ್ವಯ ತಿಲಕಾಭ್ಯಾಮ್ಮೂ

ರ್ದ್ಧಾಭಿಷಿಕ್ತ ಗೋವಿನ್ದರಾಜ ನನ್ದಿವರ್ಮಾಭಿಧೇಯಾಭ್ಯಾಮಸಮನುಷ್ಠಿತ

ರಾಜ್ಯಾಭಿಷೇಕಾಭ್ಯಾಮ್ ನಿಜಕರಘಟಿತ ಪಟ್ಟ ವಿ–

ಭೂಷಿತ ಲಲಾಟಪಟ್ಟೋ ವಿಖ್ಯಾತವಿಮಲಗಂಗಾನ್ವಯ ನಭ [ಸ್ಥಲ –

ಗಭ] ಸ್ತಿಮಾಲೀ ಕೌಗಣಿ ಮಹಾರಾಜಾಧಿರಾಜ ಪರಮೇಶ್ವ

ರ ಶ್ರೀ ಶಿವಕುಮಾರದೇವ: ತತ್ಪುತ್ರ:"

ಶಿವಮಾರನ ಪಟ್ಟಾಭಿಷೇಕ ಕ್ರಿ.ಶ.೭೮೮ರಲ್ಲಿ ಆಯಿತು ಎಂದು ದಾಖಲಾಗಿದೆ. ಇದೇ ಶಾಸನದಲ್ಲಿ ಮಾರಸಿಂಹನು ಯುವರಾಜನಾಗಿ ರಾಜ್ಯಭಾರ ಮಾಡುತ್ತಿದ್ದನೆಂದು ಹೇಳಿದೆ. ರಾಧನಪುರ ಶಾಸನದಲ್ಲಿಈ ಬಗ್ಗೆ ವಿವರಣೆಯಿದೆ. ಶಿವಕುಮಾರನನ್ನು ಕಂಬನ ವಿರುದ್ಧ ಹೋರಾಡಲು ಗೋವಿಂದನು ಪ್ರಚೋದಿಸಿದನು. ಹಾಗೆ ಹೊರಟ ಶಿವಮಾರನು ಕಂಬನನ್ನೇ ವಹಿಸಿಕೊಂಡು ಗೋವಿಂದನಿಗೆ ತಿರುಗಿ ಬಿದ್ದನು. ನಂತರ ನಡೆದ ಯುದ್ಧದಲ್ಲಿ ಗೋವಿಂದನು ಶಿವಮಾರನನ್ನು ಮತ್ತೆ ಬಂಧಿಸಿ ಸೆರೆಯಲ್ಲಿಟ್ಟನು.

ನೇಸರಿಕಾ ತಾಮ್ರಪಟಗಳಲ್ಲಿ (EI., vol XXIV, p 123, 805 AD) ಮೂರನೆಯ ಗೋವಿಂದನು ಪಾಂಡ್ಯ, ಪಲ್ಲವ, ಚೋಳ, ಗಂಗ ಕೇರಳ, ಆಂಧ್ರ, ವೆಂಗಿ, ಚಾಲುಕ್ಯ, ಮೌರ್ಯ, ಗೂರ್ಜರ, ಕೋಸಲ ಆವಂತಿ ಮತ್ತು ಸಿಂಹಳದ ಅರಸರನ್ನು ಸೋಲಿಸಿ, ಅವರ ರಾಜಚಿಹ್ನೆಗಳನ್ನು ವಶಪಡಿಸಿಕೊಂಡನೆಂದು ತಿಳಿದುಬರುತ್ತದೆ. ಕಂಬನು ಗೋವಿಂದನ ವಿರುದ್ಧ ಹೋರಾಡಿದಾಗ ದಕ್ಷಿಣದ ಕೆಲವು ಅರಸರೂ ಅವನಿಗೆ ಸಹಾಯ ಮಾಡಿರಬಹುದು. ಮೂರನೆಯ ಗೋವಿಂದನು ಕಂಬಯ್ಯನನ್ನು ಸೋಲಿಸಿದರೂ ಕ್ಷಮಿಸಿ ಮತ್ತೆ ಅವನಿಗೆ ಗಂಗವಾಡಿಯ ಅಧಿಕಾರಿವನ್ನು ಕೊಟ್ಟನು. ಈ ರೀತಿ ಇವರ ಅಂತಃಕಲಹವು ಕೊನೆಗೊಂಡಿತು.

ಹನ್ನೆರಡು ದೊರೆಗಳ ಪಟ್ಟಿಯಲ್ಲಿ ಕಂಚಿಯ ಪಲ್ಲವರು, ವೆಂಗಿಯ ಚಾಲುಕ್ಯರು, ಉತ್ತರದ ವತ್ಸರಾಜ, ಉತ್ತರ ಕೊಂಕಣದ ಶಿಲಾಹಾರ ಅರಸ್ ಇನ್ನೂ ಮುಂತಾದವರು ಇದ್ದು, ಇವರು ಸ್ತಂಭನಿಗೆ ಸಹಾಯ ಮಾಡಿದರು. ಮೊದಲು ಸ್ತಂಭನು ದಾಳಿ ಮಾಡಿದಾಗ ಗೊವಿಂದನು ತಾನು ಹೋಗದೆ ತನ್ನ ದಳವಾಯಿಯನ್ನು ಕಳುಹಿಸಿಕೊಟ್ಟನು. ಅವನು ಸೋತು ಹಿಂದಿರುಗಿದಾಗ ಎಚ್ಚೆತ್ತನು. ಈ ಹನ್ನೆರಡು ದೊರೆಗಳನ್ನು ಗಂಗರ ವೀರಗಲ್ಲುಗಳಲ್ಲಿ ಪನ್ನಿರ್ವರ ದಂಡು ಎಂದು ಕರೆಯಲಾಗಿದೆ. ಎರಿಗಲ್ಯಾಡಿ ಚೋಳರು, ರಾಮರಾಜವಾಡಿಯ ಅರಸರು, ಗಂಗರು ಮುಂತಾದವರು ಈ ಪಟ್ಟಿಯಲ್ಲಿ ಬರುತ್ತಾರೆ. ರಾಷ್ಟ್ರಕೂಟರ ದಂಡನ್ನು ಅಷ್ಟಬಲವೆಂದು ಕರೆದಿದೆ (EC. IX, No. 34, 1905).

ಕಂಬಯ್ಯನು ದಂಗೆಯೆದ್ದ ಬಗ್ಗೆ ಪೈಠಾಣ ಶಾಸನವು (EI. Vol. III, p103, 794AD) ಮೌನವಾಗಿದೆ. ಈ ದಂಗೆಯು ನಂತರ ಪ್ರಾರಂಭವಾಗಿರಬೇಕು. ಏಕೆಂದರೆ ಕ್ರಿ.ಶ.೮೦೭ರ ನಂತರದ ಶಾಸನಗಳಲ್ಲಿ ದಂಗೆಯ ವಿಚಾರ ಬರುತ್ತದೆ. ಕ್ರಿ.ಶ.೭೯೪ ಮತ್ತು ೮೦೭ರ ನಡುವೆ ಕಂಬಯ್ಯನು ದಂಗೆಯೆದ್ದಿರಬಹುದೆಂದು ಸುಲಭವಾಗಿ ಊಹಿಸಬಹುದಾಗಿದೆ. ಆದರೆ ಕ್ರಿ.ಶ.೮೦೨ರ ಮಣ್ಣೆಯ ಶಾಸನವು ಕಂಬಯ್ಯನು ಗಂಗವಾಡಿ ಪ್ರದೇಶವನ್ನು ಮಾಂಡಲಿಕನಾಗಿ ಆಳುತ್ತಿದ್ದನೆಂದು ತಿಳಿಸುತ್ತದೆ. ಅಂದರೆ ಕ್ರಿ.ಶ.೭೯೪ ಮತ್ತು ೮೦೨ರ ನಡುವೆ ಕಲಹವಾಗಿರಬಹುದು.

ಮೂರನೆಯ ಗೋವಿಂದನು ದಕ್ಷಿಣದ ದಿಗ್ವಿಜಯವನ್ನು ಮುಗಿಸಿ ನಂತರ ಉತ್ತರದ ಕಡೆಗೆ ಹೊರಟನು. ಅತ್ತ ಉತ್ತರದಿಂದ ಧ್ರುವನು ಹಿಂತಿರುಗಿ ಬಂದ ಮೇಲೆ ಕೂಡ, ಪಾಲ–ಪ್ರತಿಹಾರರ ನಡುವೆ ಹೋರಾಟಗಳು ನಡೆದೇ ಇದ್ದವು. ಧ್ರುವನು ಹಿಂದಿರುಗಿದ ಬಳಿಕ, ಹಿಂದೆ ಸೋತಿದ್ದ ಧರ್ಮಪಾಲನು ಮತ್ತೆ ಕನೋಜಿನ ಮೇಲೆ ಆಕ್ರಮಣ ಮಾಡಿದನು. ಇಂದ್ರಾಯುಧನನ್ನು ಸೋಲಿಸಿ, ಅವನ ಪ್ರತಿಸ್ಪರ್ಧಿಯಾಗಿದ್ದ ಮತ್ತು ತನ್ನ ಅಧೀನದಲ್ಲಿದ್ದ ಚಕ್ರಾಯುಧನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿದನು. ಪ್ರತಿಹಾರ ವತ್ಸರಾಜನ ನಂತರ ಅಧಿಕಾರಕ್ಕೆ ಬಂದ ಇಮ್ಮಡಿ ನಾಗಭಟನು ಕನೋಜಿನ ಮೇಲೆ ದಾಳಿ ಮಾಡಿ ಚಕ್ರಾಯುಧನನ್ನು ಪದವಿಯಿಂದ ಇಳಿಸಿದನು. ಧರ್ಮಪಾಲನನ್ನು ಹಿಂದಕ್ಕೆ ಅಟ್ಟಿದನು. ಇಂತಹ ಸಂದರ್ಭದಲ್ಲಿ ಪ್ರವೇಶಿಸಿದ ಗೋವಿಂದನು ನಾಗಭಟನ ದಂಡನ್ನು ಧೂಳಿಪಟ ಮಾಡಿದನು. ನಾಗಭಟನು ಗಂಗಾ ಬಯಲಿನಿಂದ ಓಡಿದರೆ, ಚಕ್ರಾಯುಧನು ಶರಣಾಗತನಾದನು. ಪರಿಸ್ಥಿತಿಯ ಜೊತೆಗೆ ಅನುಭವವೂ ಸೇರಿದ್ದ ಧರ್ಮಪಾಲನು ಜಾಣತನದಿಂದ ಗೋವಿಂದನಿಗೆ ತಲೆಬಾಗಿ ಹಿಂದೆ ಸರಿದನು. ಈ ದಂಡಯಾತ್ರೆಯು ಹಿಮಾಲಯದ ತಪ್ಪಲಿನವರೆಗೂ ಸಾಗಿತ್ತು. ಉತ್ತರಭಾರತವು ರಾಷ್ಟ್ರಕೂಟರ ದಾಳಿಯ ಬಲಕ್ಕೆ ಕುಸಿಯಿತು. ಈ ದಂಡಯಾತ್ರೆಯು ಸುಮಾರು ಕ್ರಿ.ಶ.೮೦೦ರಲ್ಲಿ ನಡೆಯಿತು.

ಗೋವಿಂದನಿಗೆ ಉತ್ತರದಲ್ಲಿ ಬಹಳ ಕಾಲ ತಂಗಿರಲು ಸಾಧ್ಯವಿರಲಿಲ್ಲ. ಏಕೆಂದರೆ ದಂಡಯಾತ್ರೆಗೆ ಹೊರಡುವ ಮುನ್ನ ಮುನ್ನೆಚ್ಚರಿಕೆಯಿಂದ ತಮ್ಮನಾದ ಇಂದ್ರನನ್ನು ಗುಜರಾತಿನ ಪ್ರಾಂತ್ಯಾಧಿಕಾರಿಯನ್ನಾಗಿ ನೇಮಿಸಿದ್ದನು. ಅಲ್ಲದೆ

ತಾನಿಲ್ಲದಿರುವಾಗ ರಾಜ್ಯವನ್ನು ಕಾಪಾಡುವ ಹೊಣೆಯನ್ನು ಅವನಿಗೆ ಒಪ್ಪಿಸಿದ್ದನು. ತನ್ನ ಶಕ್ತಿಪ್ರದರ್ಶನ, ಸೈನ್ಯಸಂಘಟನಾ ಚಾತುರ್ಯವನ್ನು ಪರಿಚಯಿಸಿದ್ದನೆನ್ನಬಹುದು.

ಗೋವಿಂದನು ಗುಜರಾತ್ ಪ್ರಾಂತ್ಯದಲ್ಲಿದ್ದ ಚಾಳುಕ್ಯ ಅರಸನನ್ನು ಸೋಲಿಸಿದನು. ಚಾಳುಕ್ಯ ದೊರೆಯು ಓಡಿಹೋಗಿದ್ದರಿಂದ ತನ್ನ ತಮ್ಮನಾದ ಇಂದ್ರನಿಗೆ ಸೌರಾಷ್ಟ್ರದ ಅಧಿಕಾರವನ್ನು ಕೊಟ್ಟಿದ್ದೇ ಅಲ್ಲದೆ ಲಾಟ ಪ್ರಾಂತವನ್ನು ಗುಜರಾತಿಗೆ ಜೋಡಿಸಿದನು. ಅಲ್ಲಿಂದ ಮುಂದೆ ಮಾಳವದ ಕಡೆಗೆ ಮುಂದುವರಿದನು. ಹಿಂದೆ ಧ್ರುವನಿಂದ ಸೋತು ಓಡಿಹೋಗಿದ್ದ ದೊರೆ ಹಿಂದಕ್ಕೆ ಬಂದು ತನ್ನ ರಾಜ್ಯವನ್ನು ಮತ್ತೆ ಗಳಿಸಿಕೊಂಡು ಸಂಚು ಮಾಡುತ್ತಿದ್ದುದರಿಂದ ಗೋವಿಂದನು ತನ್ನ ಗಮನವನ್ನು ಅತ್ತ ಹರಿಸಬೇಕಾಯಿತು. ಆದರೆ ರಾಷ್ಟ್ರಕೂಟ ಚಕ್ರವರ್ತಿ ದಂಡೆತ್ತಿ ಬರುತ್ತಾನೆಂಬ ಸೂಚನೆ ಸಿಕ್ಕಿದೊಡನೆಯೇ ಅವನು ಶರಣಾಗತನಾಗಿ ವಾರ್ಷಿಕ ಕಪ್ಪಕಾಣಿಕೆಯನ್ನು ನೀಡಲು ಒಪ್ಪಿಕೊಂಡನು. ಈ ಘಟನೆ ನಡೆದುದು ಕ್ರಿ.ಶ.೮೦೭ರ ಸುಮಾರಿಗೆ ಎನ್ನಬಹುದು.

ಉತ್ತರದ ದಂಡೆಯಾತ್ರೆಯಿಂದ ಹಿಂದಿರುಗುವಾಗ ವಿಂಧ್ಯಪರ್ವತದ ತಪ್ಪಲಿನಲ್ಲಿದ್ದ ಶ್ರೀಭವನ (ಈಗಿನ ಬ್ರೋಚ್ ಜಿಲ್ಲೆಯ ಸರ್ಬಾನ್)ದಲ್ಲಿ ಮಹರಾಜ ಸರ್ವನು ಶರಣಾಗಿ ಅವನನ್ನು ಸ್ವಾಗತಿಸಿದನು. ಅಲ್ಲಿ ಸುಮಾರು ಹತ್ತು ತಿಂಗಳ ಕಾಲ ತಂಗಿದ್ದನು. ಇದೇ ಸಮಯದಲ್ಲಿ ಅವನಿಗೆ ಪುತ್ರೋತ್ಸವವಾಯಿತು. ಶರ್ವ ಮಹಾರಾಜನ ಮೇಲಿನ ಅಭಿಮಾನದಿಂದ ಪುತ್ರನಿಗೆ ಶರ್ವನೆಂದೇ ಹೆಸರಿಟ್ಟನು. ಅವನೇ ಮುಂದೆ ಅಮೋಘವರ್ಷ ನೃಪತುಂಗನೆಂಬ ಹೆಸರಿನಿಂದ ಪ್ರಸಿದ್ಧನಾದವನು.

ವೆಂಗಿಯ ಇಮ್ಮಡಿ ವಿಜಯಾದಿತ್ಯನು ಕ್ರಿ.ಶ.೭೯೯ರಲ್ಲಿ ಪಟ್ಟಕ್ಕೆ ಬಂದಾಗ ಸ್ವತಂತ್ರನಾಗಲು ಪ್ರಯತ್ನಪಟ್ಟಿದ್ದನು. ಇದನ್ನು ತಿಳಿದ ಗೋವಿಂದನು ವಿಜಯಾದಿತ್ಯನ ಸಹೋದರನಾದ ಭೀಮ ಸಳುಕಿಯ ಪರವಹಿಸಿದನು. ಹೀಗೆ ಅವನ ವ್ಯವಹಾರದಲ್ಲಿ ಸೇರಿದ್ದೇ ಅಲ್ಲದೆ ಕದನಕ್ಕೆ ಸಿದ್ಧನಾಗಿಯೂ ಇದ್ದನು. ಆಗ ಆರಂಭವಾದ ಸಹೋದರರ ಕಲಹವು ಬಹಳ ಕಾಲ ಮುಂದುವರೆಯಿತು. ಗೋವಿಂದನು ಉತ್ತರದಲ್ಲಿ ಯುದ್ಧ ನಿರತನಾಗಿದ್ದಾಗ, ದಕ್ಷಿಣದಲ್ಲಿ ಗಂಗ, ಪಲ್ಲವ, ಪಾಂಡ್ಯ, ಕೇರಳದ ದೊರೆಗಳು ರಾಷ್ಟ್ರಕೂಟರ ಸಾರ್ವಭೌಮತ್ವವನ್ನು ಧಿಕ್ಕರಿಸಲು ಪ್ರಯತ್ನಿಸಿದರು. ಉತ್ತರದಿಂದ ಹಿಂದಿರುಗಿ ಬಂದ ಗೋವಿಂದನು ಕ್ರಿ.ಶ.೮೦೩-೮೦೪ರಲ್ಲಿ ಕಂಚಿಗೆ ದಾಳಿ ಮಾಡಿದನು. ಆಗ ಇವನ ಶೌರ್ಯವನ್ನು ಕಂಡ ಸಿಂಹಳದ ದೊರೆಯು ಇವನಿಗೆ ಶರಣಾದನು. ತನ್ನ

ಹಾಗೂ ತನ್ನ ಮಂತ್ರಿಯೊಬ್ಬನ ವಿಗ್ರಹಗಳನ್ನು ಸ್ನೇಹದ ಗುರುತಾಗಿ ನೀಡಿದನು. ಇವನ್ನು ಕಂಚಿಯ ಶಿವದೇವಾಲಯದಲ್ಲಿ ಸ್ಥಾಪಿಸಿದರು. ಕ್ರಿ.ಶ. ೮೧೦ ರ ಮಣ್ಣೆಯ ತಾಮ್ರಪಟಗಳಿಂದ ದಂತಿವರ್ಮನೆಂಬುವವನು ಗೋವಿಂದನ ಮಹಾಸಾಮಂತ-ನಾಗಿದ್ದನೆಂದು ತಿಳಿದುಬರುತ್ತದೆ. ಈತನನ್ನೇ ವಿದ್ವಾಂಸರು ಪಲ್ಲವ ದಂತಿವರ್ಮನೆಂದಿದ್ದಾರೆ. ಕ್ರಿ.ಶ. ೮೦೪ ರ ರಾಮೇಶ್ವರದ ಶಾಸನವು(IA. Vol. XI, p126) ಮೂರನೆಯ ಗೋವಿಂದನು ಕಂಚಿಯ ದಂತಿಗನನ್ನು ಸೋಲಿಸಿದನು; ಅವನಿಂದ ಬರತಕ್ಕ ಪೊಗದಿಯನ್ನು ತಗೆದುಕೊಂಡು ಹಿಂದಿರುಗಿ ಬರುವಾಗ ತುಂಗಭದ್ರಾ ನದಿಗಳು ಕೂಡುವ ಸ್ಥಳದಲ್ಲಿ (ಈಗಿನ ಆನವರಿ) ರಾಮೇಶ್ವರ ತೀರ್ಥದಲ್ಲಿ ಬೀಡುಬಿಟ್ಟಿದ್ದನು. ಈ ಸಂದರ್ಭದಲ್ಲಿ ಕುರುಬಕುಲದ ಶಿವಧಾರಿ ಗೊರವನಿಗೆ ಬಾದಾಮಿ ಚಲುಕ್ಯರ ಎರಡನೆಯ ಕೀರ್ತಿವರ್ಮನು ನೀಡಿದ್ದ ದತ್ತಿಯನ್ನು ಪುನಃ ಊರ್ಜಿತಗೊಳಿಸಿದನು.

ಗೋವಿಂದನ ಉತ್ತರಾಧಿಕಾರಿಯಾಗಬೇಕಿದ್ದ ಅಮೋಘವರ್ಷನು ಇನ್ನೂ ಕಿರಿಯನಾಗಿದ್ದರಿಂದ ಗುಜರಾತಿನಲ್ಲಿ ಪ್ರಾಂತಾಧಿಕಾರಿಯಾಗಿದ್ದನು. ಗೋವಿಂದನು ತನ್ನ ತಮ್ಮನ ಮಗನಾದ ಕರ್ಕ ಸುವರ್ಣವರ್ಷನನ್ನು ಅವನ ಪೋಷಕನಾಗಿ ನಿಯಮಿಸಿದನು. ಗೋವಿಂದನಿಗೆ ಜಗತ್ತುಂಗ, ಜಗದ್ರುದ್ರ, ಪ್ರಭೂತವರ್ಷ, ಶ್ರೀವಲ್ಲಭ, ಜಿನವಲ್ಲಭ ಕೀರ್ತಿನಾರಾಯಣ, ತ್ರಿಭುವನಧವಳ ಮುಂತಾದ ಬಿರುದುಗಳಿದ್ದವು. ಈತನಿಗೆ ಗಾಮುಂಡಬ್ಬೆ ಎಂಬ ಪತ್ನಿಯಿದ್ದಳು. ಕ್ರಿ.ಶ. ೮೧೪ ರಲ್ಲಿ ಗೋವಿಂದನು ಮರಣಹೊಂದಿದನು. ತನ್ನ ತಂದೆ ಧ್ರುವನಿಗಿಂತಲೂ ಪರಾಕ್ರಮಿಯಾಗಿದ್ದ ಗೋವಿಂದನು ಸ್ವಲ್ಪಕಾಲದವರೆಗೆ ಆಸೇತುಹಿಮಾಚಲಪರ್ಯಂತ ರಾಜ್ಯವಾಳಿದನು. ಇಡೀ ಭರತವರ್ಷದಲ್ಲಿ ಇವನಿಗೆ ಸರಿಸಮಾನರಾದ ದೊರೆಗಳು ಅಂದು ಯಾರೂ ಇರಲಿಲ್ಲ. ಮೂರನೆಯ ಗೋವಿಂದನು ರಾಷ್ಟ್ರಕೂಟ ದೊರೆಗಳಲ್ಲೆಲ್ಲ ಅತ್ಯಂತ ಸಮರ್ಥ ಮತ್ತು ಶೂರನಾಗಿದ್ದನು. ಕನೂಜಿನಿಂದ ಕನ್ಯಾಕುಮಾರಿಯವರೆಗೆ, ಬನಾರಸ್‌ನಿಂದ ಬ್ರೋಚಿನವರೆಗೆ ಈತನ ರಾಜ್ಯವಿತ್ತು. ವೆಂಗಿಯ ರಾಜ್ಯಪಾಲನನ್ನು ಕೂಡಾ ಈತನೇ ನೇಮಿಸಿದನು. ಇವನ ನಂತರ ರಾಷ್ಟ್ರಕೂಟರ ಪ್ರತಿಷ್ಠೆ, ಕೀರ್ತಿ ಆ ಮಟ್ಟಕ್ಕೇರಲಿಲ್ಲ.

ಕ್ರಿ.ಶ.೭೯೪ ರ ಪೈಠಣ ಶಾಸನವು (EI. Vol. III, p103) ಗೋವಿಂದನು ಪ್ರತಿಷ್ಠಾನದ ಸಮೀಪದಲ್ಲಿ ಬೀಡುಬಿಟ್ಟಿದ್ದಾಗ ಗೋದಾವರಿಯಲ್ಲಿ ಸ್ನಾನ ಮಾಡಿ, ದಾನ ನೀಡಿದನು. ಪಂಚಮಹಾಯಜ್ಞಗಳನ್ನು ಯಥಾವಿಧಿಯಾಗಿ ನಡೆಸುವುದಕ್ಕೆ ಹಲವು

ಬ್ರಾಹ್ಮಣರಿಗೆ, ಪ್ರತಿಷ್ಠಾನ ಭುಕ್ತಿಯಲ್ಲಿದ್ದ ಸಾರಾಕಚ್ಛ-೧೨ ಕ್ಕೆ ಸೇರಿದ್ದ ಲಿಂಬಾರಾಮಿಕ ಎಂಬ ಗ್ರಾಮವನ್ನು ದಾನ ಮಾಡಿದನು. ಹಾಗೂ ಕ್ರಿ.ಶ. ೮೦೦ ರ ಅಂಜನಾವತಿ ತಾಮ್ರ ಶಾಸನವು (EI. Vol. XXXII, p157) ಗೋವಿಂದನು ಮಯೂರಖಿಂಡಿ ರಾಜಧಾನಿಯಲ್ಲಿದ್ದಾಗ ಬ್ರಾಹ್ಮಣರಿಗೆ ದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಸೂರ್ಯಗ್ರಹಣದಂದು ಅಚಲಪುರ ವಿಷಯದಲ್ಲಿದ್ದ ಅಂಜನಾವತಿ ಗ್ರಾಮವನ್ನು ವಿಭಾಗಿಸಿ ಹದಿಮೂರು ಜನ ಬ್ರಾಹ್ಮಣರಿಗೆ ದಾನ ಮಾಡಿದನು. ಕುಕ್ಕೈಕ ಎಂಬ ಮಹಾಸಂದಿವಿಗ್ರಹಿಯು ಈ ಶಾಸನವನ್ನು ಬರೆದನು. ಕ್ರಿ.ಶ. ೮೦೩ ರ ಝಾರಿಕಾ ತಾಮ್ರ ಶಾಸನವು ಗೋವಿಂದನು ಆಲಂಪುರದ ಹತ್ತಿರ ತುಂಗಭದ್ರಾ ತೀರದಲ್ಲಿ ವಿಜಯಸ್ಕಂಧಾವಾರದಲ್ಲಿ ಬೀಡುಬಿಟ್ಟಿದ್ದನು. ಈ ಸಂಧರ್ಭದಲ್ಲಿ ತನ್ನ ತಂದೆ ತಾಯಿಗಳಿಗೂ ಪುಣ್ಯವಾಗಬೇಕೆಂದು, ಪ್ರೋಣ ವಿಷಯದಲ್ಲಿದ್ದ ಝಾರಿಕಾ ಗ್ರಾಮವನ್ನು, ಧಾರಾಶಿವದಲ್ಲಿ ವಾಸವಾಗಿದ್ದ ತ್ರೈವಿದ್ಯ ಸಾಮಾನ್ಯ ಕಾಶ್ಯಪ ಗೋತ್ರದ ಭಟ್ಟ ರಿಶಿಯಪ್ಪನಿಗೆ ನೀಡಿದನು.

ಗೋವಿಂದನು ಮಯೂರಖಿಂಡಿಯಲ್ಲಿ ಬೀಡುಬಿಟ್ಟಿದ್ದಾಗ, ಮಳಖೇಡದ ಸುತ್ತಲೂ ಕಟ್ಟಿಸಲಾರಂಭಿಸಿದ ಕೋಟೆಯ ಗೋಡೆಯನ್ನು ಕಟ್ಟಿ ಮುಗಿಸಬೇಕೆಂದು ವೆಂಗಿಯ ದೊರೆಗೆ ಅಪ್ಪಣೆ ಮಾಡಿದನೆಂದು ರಾಧನಪುರ ಶಾಸನವು ಹೇಳುತ್ತದೆ. ಹೀಗೆ ಮಾಡಲು ಕಾರಣವೇನಿರಬಹುದೆನ್ನುವ ಬಗ್ಗೆ ವಿದ್ವಾಂಸರು (ರಾ.ಹ.ದೇಶಪಾಂಡೆ) ವೆಂಗಿಯ ಚಾಲುಕ್ಯರು ತಾವು ಮಾತುಕೊಟ್ಟಿದ್ದಂತೆ ವಾರ್ಷಿಕ ಕಪ್ಪವನ್ನು ೨-೩ ವರ್ಷ ಕೊಡದೇ ಹೋಗಿರಬಹುದು, ಅಥವಾ ಬಾದಾಮಿ ಚಾಳುಕ್ಯ ವಂಶದ, ಸಾಮಂತರೊಡನೆ ಒಳಸಂಚು ನಡೆಸಿರಬಹುದಾದ ವಿಶ್ವಸನೀಯ ಸುದ್ದಿ ತಿಳಿದುದರಿಂದ ಹಾಗೆ ಅಪ್ಪಣೆ ಮಾಡಿರಬಹುದು ಎಂದು ಅಭಿಪ್ರಾಯಪಡುತ್ತಾರೆ. ಮುಂದೆ ಗೋವಿಂದನು ವೆಂಗಿಯ ಚಾಳುಕ್ಯರ ಮೇಲೆ ಯುದ್ದ ಮಾಡುವುದರಿಂದ ಆತ ಗೋವಿಂದನ ಅಪ್ಪಣೆಯನ್ನು ಸಂಪೂರ್ಣವಾಗಿ ಪಾಲಿಸಲಿಲ್ಲವೆಂದು ಊಹಿಸಬಹುದು. ಅಮೋಘವರ್ಷನಿಗಿಂತ ಮೊದಲು ಅಂದರೆ ಮೂರನೆಯ ಗೋವಿಂದನು ತನ್ನ ಕಾಲದಲ್ಲೇ ಮಳಖೇಡವನ್ನು ರಾಜಧಾನಿಯಾಗಿ ಮಾಡಿಕೊಂಡಿದ್ದನೆನ್ನಬಹುದು.ತನ್ನ ದಿಗ್ವಿಜಯಗಳಿಂದ ತೃಪ್ತನಾಗಿದ್ದ ಗೋವಿಂದ ಜಯಭೇರಿಗಳೊಂದಿಗೆ ಹೊಸ ರಾಜಧಾನಿಗೆ ಬಂದನು.

ಕ್ರಿ.ಶ.೮೦೫ ರ ನೇಸಾರಿಕಾ ತಾಮ್ರಪಟವು (EI. Vol. XXXIV, P-15, p123) ದೊರೆಯುಲು ಸುಗುಟೂರು ಗ್ರಾಮದಲ್ಲಿದ್ದಾಗ ಚಂದಗಢ ವಿಷಯದಲ್ಲಿದ್ದ ನೇಸಾರಿಕಾ ಗ್ರಾಮವನ್ನು ದಾನಮಾಡಿದ್ದನ್ನು ಉಲ್ಲೇಖಿಸಿದೆ. ಸಿಂದಮಂಗಳದ ನಾಗಹಸ್ತಿಯ ವಿಜ್ಞಾಪನೆಯ ಮೇರೆಗೆ ತೈತ್ತಿರೀಯ ಶಾಖೆಯ ತ್ರಿವೇದ ಶಿವನಾಗಭಟ್ಟನಿಗೆ ಈ ದಾನವನ್ನು ನೀಡಲಾಯಿತು. ಈತ ಇಕ್ಷುಗ್ರಾಮದಲ್ಲಿ ವಾಸಮಾಡುತ್ತಿದ್ದನು. ಸಿಸವಾಯಿ ತಾಮ್ರ ಶಾಸನದಲ್ಲಿ (EI. Vol. XXIII, p204) ದೊರೆಯು ಮಯೂರಖಂಡಿಯಿಂದ ನೀಡಿದ ದಾನವನ್ನು ಉಲ್ಲೇಖಿಸುತ್ತದೆ. ಕ್ರಿ.ಶ.೮೦೭ರಲ್ಲಿ ಧಾರಾಶಿವ ಗ್ರಾಮದಲ್ಲಿ ವಾಸವಾಗಿದ್ದ ಅನ್ನಸಾವಿ ಭಟ್ಟನ ಮಗ, ಕಶ್ಯಪ ಗೋತ್ರದ ರಿಶಿಯಪಭಟ್ಟನೆಂಬ ಬ್ರಾಹ್ಮಣನಿಗೆ ದಾನ ಮಾಡಿದನು. ಸಿಸವಾಯಿ ಗ್ರಾಮವು ಮಾಣಕ ವಿಷಯದಲ್ಲಿತ್ತು ಎಂದು ತಿಳಿದುಬರುತ್ತದೆ. ಕ್ರಿ.ಶ. ೮೦೮ ರ ವಾಣಿ ದಿಂಡೋರಿ ಶಾಸನವು (IA. Vol. XI, p156) ಮಯೂರಖಂಡಿಯಿಂದ ಹೊರಟಿದೆ. ಗೋವಿಂದನು ನಾಶಿಕ ದೇಶದ ವಟನಗರ ವಿಷಯದಲ್ಲಿದ್ದ ರಿಂಬಕ(ಅಂಬಕ) ಗ್ರಾಮವನ್ನು ಬ್ರಾಹ್ಮಣನಿಗೆ ದಾನಮಾಡಿದನು. ಈತ ಭಾರದ್ವಾಜ ಗೋತ್ರದ ತೈತ್ತಿರೀಯ ಶಾಖೆಯ ಚಾತುರ್ವಿದ್ಯಸಮಾಮ್ನಾಯದ ಚತುರ್ವೇದಿ ದಾಮೋದರ ಭಟ್ಟನೆಂದು ತಿಳಿದುಬರುತ್ತದೆ.

ಕ್ರಿ.ಶ. ೮೦೮ ರ ರಾಧನಪುರ ತಾಮ್ರಪುಟಗಳಲ್ಲಿ (EI. Vol. VI, p239) ಪಂಚಮಹಾಯಜ್ಞಗಳನ್ನು ನಡೆಸುವುದಕ್ಕೆ, ಸೂರ್ಯಗ್ರಹಣದ ನಿಮಿತ್ತ ರಾಸಿಯನ ಭುಕ್ತಿಯಲ್ಲಿದ್ದ ರಟ್ಟಜ್ಜುಣ ಗ್ರಾಮವನ್ನು ತಿಗವಿ ಗ್ರಾಮದ ತ್ರಿವೇದಿ ಪರಮೇಶ್ವರ ಭಟ್ಟನಿಗೆ ದಾನ ಮಾಡಿದನು. ಅಹಮದ್‌ನಗರ ಜಿಲ್ಲೆ ಕರ್ಜತ ತಾಲ್ಲೂಕಿನಲ್ಲಿ ಈಗಿರುವ ರಾಸಿನ ಎಂಬ ಹಳ್ಳಿಯೇ ಅಂದಿನ ರಾಸಿಯನ ಭುಕ್ತಿಯ ಮುಖ್ಯ ಭಾಗವಾಗಿತ್ತೆಂದು ತಿಳಿದುಬರುತ್ತದೆ. ಹೀಗೆ ಡಾ|| ಬುಹ್ಲರ್ ಅವರು ಅಭಿಪ್ರಾಯಪಡುತ್ತಾರೆ. ಬಾದಾಮಿ ಚಾಲುಕ್ಯ ವಿಜಯದಿತ್ಯನ ನೆರೂರ ಶಾಸನದಲ್ಲಿ ಕಂಡುಬರುವ ರಾಸೆನ ನಗರವು ಇದೇ ಆಗಿರಬಹುದು. ಕ್ರಿ.ಶ.೮೦೯ರ ಬಹುಲಾವಾರ ತಾಮ್ರಶಾಸನವು (SMHD 3. 270, p8, No. 11) ಮಯೂರಖಂಡಿಯಿಂದ ಹೊರಟಿದ್ದು ಖೇಡವಿಷಯದಲ್ಲಿ ಕೆಲವು ಗ್ರಾಮಗಳನ್ನು ಮೂವರು ಬ್ರಾಹ್ಮಣರಿಗೆ ರಾಜನು ದಾನಮಾಡಿದನೆಂದು ತಿಳಿಸುತ್ತದೆ.

ಕ್ರಿ.ಶ. ೮೧೦ ರ ಬಹುಲಾವಾರ ತಾಮ್ರಶಾಸನವನ್ನು (EI. II, p13, SMHD-2, 13) ಮಯೂರಖಂಡಿಯಿಂದ ಹೊರಡಿಸಲಾಗಿದೆ. ಗೋವಿಂದನು ವತ್ಸಗೋತ್ರದ ಮಹೀಧರಭಟ್ಟನಿಗೆ ಬಹುಲಾವರ ಗ್ರಾಮವನ್ನು ದಾನಮಾಡಿದನು. ಈ ವ್ಯಕ್ತಿಯ ನಿಂವಸ್ಥಲದಲ್ಲಿ ವಾಸವಾಗಿದ್ದನೆಂದು ತಿಳಿದುಬರುತ್ತದೆ. ಕ್ರಿ.ಶ. ೮೧೨ ರ ಸಿಸರ್ಶೊ(ಲೋಹರಾ) ತಾಮ್ರಶಾಸನವು (EI. Vol. XXIII, p212) ಸೂರ್ಯಗ್ರಹಣದ ದಿನ ಲೋಹರ ಗ್ರಾಮವನ್ನು ಧರಶಿವದಲ್ಲಿ ವಾಸವಾಗಿದ್ದ ರಿಶಿಯಪ್ಪಭಟ್ಟನಿಗೆ ದಾನಮಾಡಿದನು. ರಿಶಿಯಪ್ಪಭಟ್ಟನು ನಾನ್ನೂರು ಭಾಗಗಳಲ್ಲಿ ಅದನ್ನು ಹಂಚಿ ಬೇರೆ ಬೇರೆ ಬ್ರಾಹ್ಮಣರಿಗೆ ದಾನ ಮಾಡಿದನು. ಕೊನೆಗೆ ನಾನೂರು ನಿವರ್ತನ ಭೂಮಿಯನ್ನು ತನ್ನ ವಶದಲ್ಲಿ ಇಟ್ಟುಕೊಂಡಿದ್ದು ಉಳಿದುದನ್ನು ಬ್ರಹ್ಮದೇಯವಾಗಿ ನೀಡಿದನೆಂದು ತಿಳಿದುಬರುತ್ತದೆ. ಈ ಶಾಸನವು ಮಯೂರಖಿಂಡಿಯಿಂದ ಹೊರಟಿದೆ. ಕ್ರಿ.ಶ. ೮೧೩ ರ ಕಡಬ ಶಾಸನವು (EI. Vol. IV, p332) ಮಯೂರಖಿಂಡಿಯಿಂದ ಹೊರಟಿದ್ದ ಗೋವಿಂದನು ಅರ್ಕಕೀರ್ತಿ ಎಂಬ ಜೈನಮುನಿಗೆ ದಾನಮಾಡಿದ್ದನ್ನು ಉಲ್ಲೇಖಿಸುತ್ತದೆ. ಗಂಗಮಂಡಲದ ಚಾಕಿರಾಜನ ವಿಜ್ಞಾಪನೆಯ ಮೇರೆಗೆ ಈ ದಾನವನ್ನು ನೀಡಲಾಯಿತು. ಜಿನೇಂದ್ರ ದೇವರ ಪೂಜೆಗಾಗಿ ಕುಣಿಗಲ್ ವಿಷಯದ ಅಧಿಪತಿಯಾದ ವಿಮಲಾದಿತ್ಯನ ಶನಿಪೀಡಾಪರಿಹಾರಕ್ಕಾಗಿ ಈ ದಾನಮಾಡಿದನು. ಬಲವರ್ಮನೆಂಬ ಚಾಲುಕ್ಯ ಅರಸನಿಗೆ ಯಶೋವರ್ಮನೆಂಬ ಮಗನಿದ್ದನು. ಅವನು ಗಂಗಮಂಡಲದ ಅಧಿಪತಿಯಾದ ಚಾಕಿರಾಜನೆಂಬುವವನ ತಂಗಿಯನ್ನು ಮದುವೆ ಮಾಡಿಕೊಡಿದ್ದನು. ಅವರ ಮಗನೇ ವಿಜಯಾದಿತ್ಯ. ಈ ವಿಜಯಾದಿತ್ಯನು ದೊಡ್ಡವನಾಗಿ ಕುನುಂಗಿ ದೇಶವನ್ನು ಆಳುತ್ತಿದ್ದಾಗ ಅವನಿಗೆ ಶನೇಶ್ವರನು ಕಾಡತೊಡಗಿದನು. ವಲ್ಲಭೇಂದ್ರನು (ಗೋವಿಂದ III) ಮಯೂರಖಿಂಡಿಯಲ್ಲಿ ತನ್ನ ವಿಜಯೀ ಪಾಳೆಯವನ್ನು ಹಾಕಿಕೊಂಡಿದ್ದನು. ಚಾಕಿರಾಜನ ಬಿನ್ನಹವನ್ನು ಮನ್ನಿಸಿ ವಿಮಲಾದಿತ್ಯನಿಗೆ ಉಂಟಾಗಿದ್ದ ಶನೇಶ್ವರ ಕಾಟವನ್ನು ಹೋಗಲಾಡಿಸುವುದಕ್ಕಾಗಿ, ಮಾನ್ಯಪುರದ ಜೈನಗುಡಿಗೆ ಇಡಿಗೂರ ವಿಷಯದಲ್ಲಿದ್ದ ಬಲಮಂಗಲವೆಂಬ ಹಳ್ಳಿಯನ್ನು ಇನಾಮು ಹಾಕಿಕೊಟ್ಟನು. ಬೆಂಗಳೂರಿನ ಬಳಿಯ ನಂದಿದುರ್ಗ ಮತ್ತು ನಂದಿಗ್ರಾಮಗಳನ್ನು ಮೂರನೆಯ ಗೋವಿಂದನ ಕಾಲದಲ್ಲಿ ಬಾಣ ಮನೆತನದ ಬಾಣ ವಿದ್ಯಾಧರನೆಂಬುವವನು ಆಳುತ್ತಿದ್ದನು.

ಕ್ರಿ.ಶ. ೮೧೩ ರ ತೋರ್ಖೇಡೆ ಶಾಸನದಲ್ಲಿ (EI. Vol. III, p53) ಗುಜರಾತದ ಮಾಂಡಲಿಕ ಮತ್ತು ಗೋವಿಂದರಾಜನ ಅಧಿಕಾರಿ, ಮಹಾಸಾಮಂತ ಸಲುಕಿ ಕುಲದ ಬುದ್ಧವರಸನು ಶ್ರೀಹರಖಿ-೧೨ಕ್ಕೆ ಸೇರಿದ ಗೋವಟ್ಟಣ ಗ್ರಾಮವನ್ನು ದಾನಮಾಡಿದ ಉಲ್ಲೇಖವಿದೆ. ಕೃಷ್ಣನ ಮಗ ನನ್ನನು ಈ ಶಾಸನವನ್ನು ಬರೆದನು. ಸೀಹರಖೀ-೧೨ ಬಡೋದೆಯ ನೆರೆಯಲ್ಲಿರುವ ಸೇರ್ಖಿಯಾಗಿರಬಹುದು. ಹೂಲಿಹಳ್ಳಿ ಶಾಸನದಿಂದ (ARIE. 1930-34, p231) ರಾಜಾದಿತ್ಯನು ಬನವಾಸಿ-೧೨೦೦೦ ಪ್ರಾಂತವನ್ನು ಗೋವಿಂದನ ಮಾಂಡಲಿಕನಾಗಿ ಆಳುತ್ತಿದ್ದನೆಂದು ತಿಳಿದುಬರುತ್ತದೆ. ಕನ್ನೆಲೂರಿನ ಶಾಸನವು (IAP. Cud-1, No. 87) ಮೂರನೆಯ ಗೋವಿಂದನು ರಾಜ್ಯಭಾರ ಮಾಡುತ್ತಿರುವಾಗ ರೇವಯರಸನು ಬಹುಶಃ ರೇನಾಡಿನ ಭಾಗವನ್ನು ಆಳುತ್ತಿದ್ದುದನ್ನು ಉಲ್ಲೇಖಿಸುತ್ತದೆ.

## ಅಮೋಘ ವರ್ಷ- I (ಕ್ರಿ.ಶ. ೮೧೪-೮೮೦)

ಮೂರನೆಯ ಗೋವಿಂದನ ಮಗ ಒಂದನೆಯ ಅಮೋಘವರ್ಷ. ಕ್ರಿ.ಶ. ೮೧೪ ರಲ್ಲಿ ಈತ ಸಿಂಹಾಸನವನ್ನೇರಿದಾಗ ಹದಿನಾಲ್ಕು ವರ್ಷ ವಯಸ್ಸಿನ ಬಾಲಕನಾಗಿದ್ದನು. ಇವನ ಪರವಾಗಿ ರಾಜ್ಯಭಾರವನ್ನು ಹೊತ್ತಿದ್ದ ಕರ್ಕ ಅನೇಕ ತೊಂದರೆಗಳನ್ನು ಎದುರಿಸಬೇಕಾಯಿತು. ಕ್ರಿ.ಶ. ೮೧೭ ರಲ್ಲಿ ದಂಗೆಯೊಂದು ಪ್ರಾರಂಭವಾಯಿತು. ಅತೃಪ್ತರಾಗಿದ್ದ ಅನೇಕ ಅಧಿಕಾರಿಗಳು, ಸಾಮಂತರು, ಬಂಧುವರ್ಗಗಳು ಸೇರಿದ್ದರಿಂದ ದಂಗೆಕೋರರ ಸಂಖ್ಯೆಯೂ ಹೆಚ್ಚಾಗಿತ್ತು. ಇದೇ ಸಮಯಕ್ಕಾಗಿ ಕಾಯುತ್ತಿದ್ದ ಪೂರ್ವ ಚಾಲುಕ್ಯ ದೊರೆ ವಿಜಯಾದಿತ್ಯನು ಬಹುಶ: ಅಮೋಘವರ್ಷನ ಮೇಲೆ ದಾಳಿಮಾಡಿ ರಾಜಧಾನಿಯನ್ನು ಕೊಳ್ಳೆ ಹೊಡೆದನು. ಮತ್ತು ರಾಜಾಧಿರಾಜ, ರಾಜಪರಮೇಶ್ವರ ಮುಂತಾದ ಚಕ್ರವರ್ತಿ ಸೂಚಕ ಬಿರುದುಗಳನ್ನು ತಾನು ಧರಿಸಿಕೊಂಡನೆಂದು ವಿದ್ವಾಂಸರಿಂದ ತಿಳಿದು ಬರುತ್ತದೆ (Eastern Chalukyas, p57-64, GangulyD.C.).

"ದೃಷ್ಟಾತನ್ನವರಾಜ್ಯ ಮೂರ್ಜಿತ ಬೃಹದ್ದರ್ಮ ಪ್ರಭಾವಂ ನೃಪಂ ಭೂಯ: ಷೋಡಶರಾಜ್ಯವತ್ಸ್ಯಯುಗ ಪ್ರಾರಂಭ ಇತ್ಯಾಕುಲ: ನಶ್ಯನ್ನಂತರನುಪ್ರವಿಶ್ಯ ವಿಷಮೇ ಮಾಯಾಮಯೋಸೌಕಲಿ: ಸಾಮಂತಾನ್ ಸಚಿವಾನ್ ಸಬಾಂಧವ ಜನಾನಕ್ಸೋಭಯತ್

ಸ್ವೀಕೃತಾನ್. ಶಠಮಂತ್ರಂ ಪ್ರವಿಧಾಯ ಕೂಟಶಪಥೈರೀಶ ಸ್ವತಂತ್ರಾ: ಸ್ವಯಂ ವಿನಿಹತ್ಯೋಚಿತಯುಕ್ತಕಾರಿ (ದಿ ಪುರುಷಾನ್ ಸರ್ವೇ ಸ್ವಯಂಗ್ರಹಿಣ: ಪರೋಷಿದ್ದುಹಿತಾ ಸ್ವಸೇತಿನ ಪುನರ್ಭೇದ: ಪಶೂನಾಮಿವ ಪ್ರಭುರೇವಂ ಕಲಿಕಾಲ ತ್ಯವಸಿತಂ ಸ್ವದತ್ತಮುದ್ವೃತ್ತತ: )".

ಮೇಲಿನ ಶ್ಲೋಕಗಳು ಅಮೋಘವರ್ಷನ ರಾಜ್ಯದಲ್ಲಿ ಉಂಟಾದ ದಂಗೆಯನ್ನು ಚಿತ್ರಿಸುತ್ತದೆ. ಕಲಿಯು (ವೈರಿದೊರೆ) ಕಪಟತನದಿಂದ ಅಧಿಕಾರಿಗಳು ಪ್ರಜೆಗಳನ್ನು ಕೊಂದು ತಾವೇ ಸ್ವತಂತ್ರರಾಗಲು ಪ್ರಯತ್ನಿಸುವಂತೆ ಪ್ರಚೋದಿಸಿದನು. ಪಾಶವೀ ಕೃತ್ಯದಲ್ಲಿ ಅಸಕ್ತರಾದವರಿಗೆ ಯಾವುದೇ ಸಂಬಂಧಗಳು ಅಂದರೆ ಪರಸ್ತ್ರೀ, ಅಕ್ಕ, ತಂಗಿ, ಮಗಳು, ಸೊಸೆ ಎನ್ನುವ ಬೇಧವಿಲ್ಲದೆ ಉದ್ಧಟತನದಿಂದ ವರ್ತಿಸಿದರು. ಕಲಿಯು ತನ್ನ ಪ್ರಬಲತೆಯನ್ನು ತೋರಿಸಿಕೊಟ್ಟನು. ಈ ಸಂದರ್ಭದಲ್ಲಿ ರಟ್ಟ ದೊರೆ ಅಮೋಘವರ್ಷನು ಪಾತಾಳಮಲ್ಲ ಎಂಬುವವನ ಸಹಾಯದಿಂದ ಶತೃಗಳನ್ನು ನಿಗ್ರಹಿಸಿದನು. ಶಾಂತಿಯೂ ಮೂಡುವಂತೆ ಮಾಡಿದನು. ಪುರಾಣ ಪುರುಷರಾದ ಜೀಮೂತವಾಹನ, ಶಿಬಿ ಚಕ್ರವರ್ತಿಗಳಂತೆ ಅಮೋಘವರ್ಷನೆಂಬ ಈ ವೀರನಾರಾಯಣನು ಲೋಕದ ಒಳಿತಿಗಾಗಿ ತನ್ನ ಎಡಗೈಯ ಹೆಬ್ಬೆರಳನ್ನು ಕೊಲ್ಲಾಪುರದ ಮಹಾಲಕ್ಷ್ಮಿಗೆ ಅರ್ಪಿಸಿದನು. ಇದರಿಂದ ಅಮೋಘವರ್ಷನ ಪ್ರತಾಪವೂ ಅವನ ಸ್ವಭಾವವೂ ತಿಳಿದು ಬರುತ್ತದೆ. ಬಹುಶ: ಪಾತಾಳಮಲ್ಲನೆಂಬದು ಗುಜರಾತಿನ ರಾಷ್ಟ್ರಕೂಟ ದೊರೆ ಕರ್ಕನ ಬಿರುದಾಗಿರಬಹುದು. ಏಕೆಂದರೆ, ಬಾಲಕ ಅಮೋಘವರ್ಷನನ್ನು ಇವನ ತಂದೆ ಮೂರನೇ ಗೋವಿಂದನು ಗುಜರಾತಿನ ರಾಷ್ಟ್ರಕೂಟ ದೊರೆ ಕರ್ಕನಿಗೆ ಒಪ್ಪಿಸಿದ್ದರಿಂದ, ಅವನು ಸಹಾಯ ಮಾಡಿದನೆಂದು ಭಾವಿಸಬಹುದಾಗಿದೆ. ಈ ಸಂದರ್ಭದಲ್ಲಿ ಗುಜರಾತಿನಲ್ಲಿದ್ದ ದಾಯಾದಿಗಳು ಕೂಡ ದಂಗೆಯಲ್ಲಿ ಪಾಲ್ಗೊಂಡಿದ್ದರು.

ಅಮೋಘವರ್ಷನ ರಾಜಧಾನಿ ಯಾವುದಾಗಿತ್ತೆಂದು ತಿಳಿದು ಬರುವುದಿಲ್ಲ. ಬಹುಶ: ಮಳಖೇಡವೇ ಆಗಿರಬಹುದು. ಏಕೆಂದರೆ ಮೂರನೆಯ ಗೋವಿಂದನ ಕಾಲದಲ್ಲಿಯೇ ಮಳಖೇಡದ ಕೋಟೆಯ ಗೋಡೆಯನ್ನು ಕಟ್ಟುತ್ತಿದ್ದ ಉಲ್ಲೇಖವನ್ನು ಶಾಸನಗಳು ನೀಡುತ್ತವೆ. ಆದ್ದರಿಂದ ನೃಪತುಂಗನು ಮಾನ್ಯಖೇಟದಲ್ಲಿದ್ದನೆಂದು ತಿಳಿಯಬಹುದು.

ಸಂಜಾನ ಶಾಸನವು (EI Vol. XVIII p234, 871 AD) ಅಮೋಘವರ್ಷನ ಸ್ಥಿತಿಗತಿಗಳನ್ನು, ಅವನ ಗುಣ ಸ್ವಭಾವ ಮತ್ತು ಅಂದಿನ ಪರಿಸ್ಥಿತಿಯ ಬಗ್ಗೆ ಸ್ಪಷ್ಟ ಚಿತ್ರಣವನ್ನು ನೀಡುತ್ತದೆ. ಪ್ರಸ್ತುತ ದಾಳಿಯ ವಿಚಾರಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಅಮೋಘವರ್ಷನ ಜೀವಕ್ಕೇ ಅಪಾಯವಾದಾಗ ಆತನನ್ನು ರಾಜಧಾನಿಯ ಹೊರಗೆಲ್ಲೋ ಗುಪ್ತವಾಗಿ ಇಟ್ಟು ಕಾಪಾಡಬೇಕಾಯಿತು. ಯಾವ ರೀತಿಯಿಂದ ತೊಂದರೆಗಳಾದವು ಎಂಬುದು ಖಚಿತವಾಗಿ ತಿಳಿದು ಬಂದಿಲ್ಲ. ಮೂರು ವರ್ಷಗಳು ಇಂತಹ ಅನೇಕ ಪರಿಸ್ಥಿತಿಗಳನ್ನು ಎದುರಿಸಿದ ಕರ್ಕನು ಕ್ರಿ.ಶ.೮೨೧ ರ ವೇಳೆಗೆ ಅಮೋಘವರ್ಷನಿಗೆ ಪಟ್ಟಾಭಿಷೇಕ ಮಾಡಿ ರಾಜ್ಯವನ್ನು ಒಪ್ಪಿಸಿದನು. ಐದಾರು ವರ್ಷಗಳಲ್ಲಿ ರಾಜ್ಯಕ್ಕೆ ಇದ್ದ ಕಂಟಕವನ್ನು ಹೋಗಲಾಡಿಸಿ ಶಾಂತಿಯನ್ನು ಸ್ಥಾಪಿಸಿದನು.

ಇನ್ನೊಮ್ಮೆ, ಅಮೋಘವರ್ಷನು ವೆಂಗಿ ಚಾಳುಕ್ಯ ಅರಸ ಗುಣಗ ವಿಜಯಾದಿತ್ಯನೊಡನೆ ಹೋರಾಡಬೇಕಾಯಿತು. ಈ ವಿಷಯದ ಬಗ್ಗೆ ಪೂರ್ವ ಚಾಲುಕ್ಯ ಮನೆತನದ ಒಂದನೆಯ ಅಮ್ಮರಾಜನ ಶಾಸನದಲ್ಲಿ ಹೇಳಿದೆ. ವೆಂಗಿಯ ವಿಜಯಾದಿತ್ಯನು ಭೀಮ ಸಳುಕಿಯನ್ನು ಹೊರದೂಡಿ ತನ್ನ ಅಧಿಕಾರವನ್ನು ಪಡೆದಿದ್ದನು. ಈತ ಹನ್ನೆರಡು ವರ್ಷಗಳ ಕಾಲ ರಾಷ್ಟ್ರಕೂಟರೊಡನೆ ಹೋರಾಡಿದನೆಂದು ತಿಳಿದು ಬರುತ್ತದೆ. ಇವನ ನಂತರ ಇವನ ಮೊಮ್ಮಗನಾದ ಗುಣಗ ವಿಜಯಾದಿತ್ಯನು ಈ ಹೋರಾಟಗಳನ್ನು ಮುಂದುವರೆಸಿದನು. ನಂತರ ಅಮೋಘವರ್ಷನ ಜೊತೆ ವಿಂಗವಲ್ಲಿಯಲ್ಲಿ ನಡೆದ ಕದನದಲ್ಲಿ ಗುಣಗನು ಸೋತು ಸಾಮಂತನಾದನು. ಕ್ರಿ.ಶ. ೮೩೦ ರ ಹೊತ್ತಿಗೆ ಗುಣಗ ವಿಜಯಾದಿತ್ಯನನ್ನು ಸಂಪೂರ್ಣವಾಗಿ ಅಮೋಘವರ್ಷನು ಸೋಲಿಸಿದನು. ಮುಂದೆ ರಾಷ್ಟ್ರಕೂಟರ ಪರವಾಗಿ ಗಂಗರ ವಿರುದ್ಧ ದಂಡಯಾತ್ರೆ ಮಾಡಿದನು. ಇವರ ಮಧ್ಯೆ ವೈವಾಹಿಕ ಸಂಬಂಧಗಳೂ ಬೆಳೆದವು. ವಿಜಯಾದಿತ್ಯನ ಮಗನಾದ ಐದನೆಯ ವಿಷ್ಣುವರ್ಧನನ ಪತ್ನಿ ರಾಷ್ಟ್ರಕೂಟ ವಂಶದ ರಾಜಕುಮಾರಿಯಾಗಿದ್ದಳು.

ದಕ್ಷಿಣ ಕರ್ನಾಟಕದಲ್ಲಿ ಗಂಗ ರಾಚಮಲ್ಲನು ಗಂಗವಾಡಿ ಪ್ರದೇಶವನ್ನು ಆಳುತ್ತಿದ್ದನು. ಅವನ ರಾಜ್ಯದ ಉತ್ತರ ಭಾಗ ರಾಷ್ಟ್ರಕೂಟರ ಸ್ವಾಧೀನದಲ್ಲಿತ್ತು. ಅಲ್ಲಿ ಚೆಲ್ಲಕೇತನ ವಂಶದ ಬಂಕೇಶನು ಅಧಿಕಾರ ನಡೆಸುತ್ತಿದ್ದನು. ಆ ಭಾಗವನ್ನು

ವಶಪಡಿಸಿಕೊಳ್ಳಲು ರಾಚಮಲ್ಲನು ಪ್ರಯತ್ನಿಸಿ ವಿಫಲನಾದನು. ನಂತರ ನೀತಿಮಾರ್ಗ ಎಱೆಯಂಗನೂ ಪ್ರಯತ್ನಿಸಿದನು. ಎಱೆಯಂಗನಿಗೆ ಅನುಕೂಲಕರವಾದ ಸನ್ನಿವೇಶವೊಂದು ಉಂಟಾದಾಗ, ಅದನ್ನು ಉಪಯೋಗಿಸಿಕೊಂಡು ಗಂಗವಾಡಿಯ ಉತ್ತರಭಾಗವನ್ನು ಆಕ್ರಮಿಸಿಕೊಂಡನು. ಗುಜರಾತಿನಲ್ಲಿ ಎದ್ದಿದ್ದ ದಂಗೆಯೊಂದನ್ನು ಅಡಗಿಸಲು ಬಂಕೇಯನನ್ನು ಗಂಗವಾಡಿಯಿಂದ ಹಿಂದಕ್ಕೆ ಕರೆಸಿಕೊಂಡಿದ್ದರಿಂದ ಹೀಗಾಯಿತು. ಅಮೋಘವರ್ಷನು ಪೂರ್ವ ಚಾಲುಕ್ಯ ಗುಣಗ ವಿಜಯಾದಿತ್ಯನ ನೆರೆವಿನಿಂದ ಗಂಗರನ್ನು ಸೋಲಿಸಿದನು. ಹೋಗುತ್ತಿರುವಾಗಲೇ ನೊಳಂಬದೊರೆ ಮಂಗಿಯನ್ನು ಸೋಲಿಸಿ ನಂತರ ಎಱೆಯಂಗನನ್ನು ಎದುರಿಸಿದನು. ನಿರಂತರವಾಗಿ ಗಂಗರೊಡನೆ ನಡೆಯುತ್ತಿದ್ದ ಕದನಗಳನ್ನು ನಿಲ್ಲಿಸಬೇಕೆಂದು ನಿರ್ಧರಿಸಿದ ಅಮೋಘವರ್ಷನು ಎಱೆಯಂಗನ ತಪ್ಪನ್ನು ಕ್ಷಮಿಸಿ, ಅವನ ಮಗ ಬೂತುಗನಿಗೆ ತನ್ನ ಮಗಳು ಚಂದ್ರೋಬಲಬ್ಬೆಯನ್ನು ವಿವಾಹ ಮಾಡಿ ಕೊಟ್ಟನು. ಇಲ್ಲಿಗೆ ಅವರ ವೈಮನಸ್ಯ ಕರಗಿ ಸ್ನೇಹದಿಂದಿರತೊಡಗಿದರು.

ಈ ಸಂದರ್ಭದಲ್ಲಿ ಚಲ್ಲಕೇತನ ಮನೆತನದ ಬಂಕೇಶನು ಅಮೋಘವರ್ಷನಿಗೆ ಬಹಳ ಸಹಾಯ ಮಾಸಿದನು. ಬಂಕೇಶನ ಆಜ್ಞೆಯಂತೆ ಗಂಗವಾಡಿಯನ್ನು ನಿರ್ಮೂಲ ಮಾಡಲಾಯಿತು. ಬಂಕೇಶನಿಗೂ ಗಂಗರಾಜನಿಗೂ ಆದ ಯುದ್ಧವು ಸುಮಾರು ಕ್ರಿ. ಶ. ೮೫೫ ರಿಂದ ೮೬೦ ರ ಮಧ್ಯದಲ್ಲಿ ನಡೆದಿರಬೇಕು. ಇದಕ್ಕೆ ಆಧಾರವಾಗಿ ಗಂಗರ ಶಾಸನಗಳಲ್ಲಿ ಗಂಗ ನೀತಿಮಾರ್ಗನು ರಾಜರಾಮುಡುವಿನಲ್ಲಿ ರಾಷ್ಟ್ರಕೂಟ ಸೈನಿಕರನ್ನು ಸೋಲಿಸಿದನೆಂದು ಉಲ್ಲೇಖಿಸಲಾಗಿದೆ.

ಅಮೋಘವರ್ಷನು ಶೂರನಾಗಿರಲಿಲ್ಲ. ಆದರೂ ತನ್ನ ರಾಜ್ಯವನ್ನು ಪುನಃ ಸಂಪಾದಿಸಿ ಶಾಂತಿಯ ವಾತಾವರಣವನ್ನು ತಂದನು. ಈತನು ಪಾಲರ ವಿರುದ್ಧವೂ ಯುದ್ಧ ಮಾಡಿದನೆಂದು ತಿಳಿದುಬರುತ್ತದೆ.

ಅಮೋಘವರ್ಷ ನೃಪತುಂಗನಿಗೆ ವೀರನಾರಾಯಣ, ಅತಿಶಯಧವಳ, ಮಹಾರಾಜಷಂಡ, ನೀತಿನಿರಂತರ ವಿವರಣ, ಉದಾರಚರಿತ ಮುಂತಾದ ಬಿರುದುಗಳಿದ್ದವು. ಶಂಖ, ರೇವಕನಿರ್ಮಡಿ, ಚಂದ್ರೋಬಲಬ್ಬಾ ಎನ್ನುವ ಮೂವರು ಹೆಣ್ಣುಮಕ್ಕಳೂ, ದುದ್ದಯ್ಯ ಮತ್ತು ಎರಡನೆಯ ಕೃಷ್ಣ ಎಂಬ ಗಂಡುಮಕ್ಕಳು ಇದ್ದರು.

ಯುದ್ಧ ವಿಜಯಗಳಿಗಿಂತ ಸಾಂಸ್ಕೃತಿಕ ವಿಷಯಗಳಲ್ಲಿ ಇವನು ವಿಜಯಿಯಾಗಿದ್ದಾನೆ. ಅಮೋಘವರ್ಷನು ಸಾಹಿತ್ಯ ಪ್ರಿಯನೂ ಸಾಹಿತ್ಯ ಪೋಷಕನೂ ಆಗಿದ್ದನು. ಅವನ ಆಸ್ಥಾನದಲ್ಲಿ ಅನೇಕ ಜೈನ ವೈದಿಕ ಸಾಹಿತಿಗಳಿದ್ದರು. ಇವರು ಅನೇಕ ಕೃತಿಗಳನ್ನು ಬರೆದಿದ್ದು ಸಾಹಿತ್ಯ ಚರಿತ್ರೆಗೆ ಅಮೂಲ್ಯ ಕಾಣಿಕೆಯನ್ನಿತ್ತಿದ್ದಾರೆ.

ಸಂಜಾನ ಶಾಸನದಲ್ಲಿ 'ಯೇನಾತ್ಯಾಜಿ ತನುಃ ಸ್ವರಾಜ್ಯಮಸಕೃತು' ಎಂದು ಹೇಳಲಾಗಿದೆ. ಆಧ್ಯಾತ್ಮದೆಡೆಗೆ ಮನಸ್ಸಿದ್ದ ನೃಪತುಂಗನು ಅನೇಕ ಬಾರಿ ಸಿಂಹಾಸನವನ್ನು ತ್ಯಜಿಸಿದ್ದನೆಂದು ತಿಳಿದುಬರುತ್ತದೆ. ಧರ್ಮಸಮನ್ವಯಕಾರನಾಗಿದ್ದ ಈತ ಜೈನಧರ್ಮವನ್ನು ಅವಲಂಭಿಸಿದ್ದನು.

## ದುದ್ದಯ್ಯ

ಕ್ರಿ.ಶ. ಸುಮಾರು ೯ ನೆಯ ಶತಮಾನದ ರಾಮದುರ್ಗಾ ಶಾಸನವು (SII. Vol. IX, No. 54) ಒಂದನೆಯ ಅಮೋಘವರ್ಷನಿಗೆ ದುದ್ದಯ್ಯನೆಂಬ ಮಗನಿದ್ದುದನ್ನು ದಾಖಲಿಸುತ್ತದೆ. "ಸ್ವಸ್ತ್ಯಮೋಘವರಿಷ ಶ್ರೀಪೃಥಿವೀವಲ್ಲಭ ಮಹಾರಾಜಾಪರಮೇಶ್ವರ ಭಟಾರರ ಮಗ ದುದ್ದಯ್ಯ ಇನ್ದವಲಿ[ಮೊ]ದಲಾಗೆ ಪನ್ನೆರಡು ಮಣ್ಡಲಿಗ ಕೊಟ್ಟ ಸ್ಥಿತಿ..." ಎಂದು ಉಲ್ಲೇಖಿಸುತ್ತದೆ.

## ಕೃಷ್ಣ II (ಕ್ರಿ.ಶ. ೮೭೫ – ೯೧೨)

ಒಂದನೆಯ ಅಮೊಘವರ್ಷನ ನಂತರ ಎರಡನೆಯ ಕೃಷ್ಣನು ಪಟ್ಟಕ್ಕೆ ಬಂದನು. ಇವನು ಪಟ್ಟಕ್ಕೆ ಬರುವ ಹೊತ್ತಿಗೆ ಸಾಕಷ್ಟು ವಯಸ್ಸಾಗಿತ್ತೆಂದು ಊಹಿಸಬಹುದಾಗಿದೆ. ಇವನಿಗೆ ಅಕಾಲವರ್ಷ, ಶುಭತುಂಗ ಎನ್ನುವ ಬಿರುದುಗಳಿದ್ದವು.

ಸೌಂದತ್ತಿಯ ಶಾಸನವನ್ನು (SII Vol XX No. 13) ಗಮನಿಸಿದಾಗ ಎರಡನೆಯ ಕೃಷ್ಣನ ಆಳ್ವಿಕೆಯು ಕ್ರಿ. ಶ. ೮೭೫ ರ ಹೊತ್ತಿಗಾಗಲೇ ಆರಂಭವಾಗಿತ್ತು ಎನ್ನುವ ಸಂಗತಿಯು ತಿಳಿಯುತ್ತದೆ. ಶಾಸನದಲ್ಲಿ ಉಲ್ಲೇಖಿತನಾಗಿರುವ ಮೇಙಡನು ರಟ್ಟವಂಶದ ಮೂಲಪುರುಷ ಮತ್ತು ಮಳಖೇಡದ ರಾಷ್ಟ್ರಕೂಟರಿಗೆ ಸಾಮಂತನಾಗಿದ್ದನೆಂದು ತಿಳಿದುಬರುತ್ತದೆ. ಮೇಙಡನ ಮಗ ಪೃಥ್ವೀರಾಮನು, ತಾನೇ ಕಟ್ಟಿಸಿದ ಜಿನೇಂದ್ರ ಭವನಕ್ಕೆ ಕೊಟ್ಟ ಭೂದಾನವನ್ನು ತಿಳಿಸುತ್ತದೆ. ದಾನಿಯು ಇಂದ್ರ

ಕೀರ್ತಿಮುನಿ, ಗುಣಕೀರ್ತಿ ಮುನೀಶ್ವರರ ಶಿಷ್ಯನಾಗಿದ್ದು ನಂತರ ಕಾರೇಯಗಣದ ಮಿಳಾಪ ತೀರ್ಥದ ಮುಳ್ಳಭಟ್ಟಾರಕರ ಶಿಷ್ಯನಾಗಿದ್ದನೆಂದು ತಿಳಿದುಬರುತ್ತದೆ. ಕ್ರಿ. ಶ. ೮೭೮ ರ ಹಿರೇಬಿದ್ರಿ ಶಾಸನವು (SII Vol XX No. 14) ಶುಭತುಂಗನ (ಕೃಷ್ಣ II) ಆಳ್ವಿಕೆಯಲ್ಲಿ ಪೇಟ್ಟಿತಿಗೆಯ ದುಗ್ಗತಿ ಗವುಂಡನ ಮಗ ನಾಗತಿ ಸಾಲತ್ತಿಯು ತುಱುಗೋಳಿನಲ್ಲಿ ಸತ್ತಿದ್ದನ್ನು ದಾಖಲಿಸುತ್ತದೆ. ಕ್ರಿ. ಶ. ೮೮೩ ರ ಶೀರುಂಜ ಶಾಸನವು (SII Vol XI Pt. I No. 19) ಅಕಾಲವರ್ಷನ (ಕೃಷ್ಣ II) ಆಳ್ವಿಕೆಯ ಐದನೆಯ ವರ್ಷದಲ್ಲಿ ಕಿಡಲೆ ಪ್ರದೇಶಕ್ಕೆ ಅಧಿಪತಿಯಾದ ಏಚಿಯಮ್ಮನು ತುರುಗೋಳಿನಲ್ಲಿ ಸತ್ತಿದ್ದನ್ನು ದಾಖಲಿಸುತ್ತದೆ. ಇದೇ ಕಾಲದ ಸೊರಟೂರು ಶಾಸನವು ಇನ್ದಪಯನು ನಾಡನ್ನಾಳುತ್ತಿದ್ದಾಗ ಪುರಿಗೆಟಿ ನಾಡಿನ ಸರಟವುರ (ಸೊರಟೂರು) ಐಯ್ವದಿಂಬರು ಮಿಱ್ದು ನಾಡಯಿಸೆ ಮಾಸಿಗರ ಚಿದಾಣ್ಣನು ಗೋಸಾಸಿಯಾದನೆಂದು ಉಲ್ಲೇಖಿಸುತ್ತದೆ. ಕ್ರಿ. ಶ. ೮೮೭ ರ ಕಾಡಜ್ಜಿಯ ಶಾಸನವು (EI Vol XI No.Dg. 17) ಕನ್ನರದೇವನ ಆಳ್ವಿಕೆಯಲ್ಲಿ ಮಯ್ದುಮರ ಸೂಳೆ ಕಾಡಚ್ಚಿಯ ವಂಶದ ಪರಕಯ್ಯನು ಅರಸನ ಸಮ್ಮುಖದಲ್ಲಿ ಭೂದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ.

ಕ್ರಿ. ಶ. ೮೯೨ ರ ಬೆಟಗೇರಿ ಶಾಸನದಲ್ಲಿ (SII Vol XI Pt. I No. 21) ಅಕಾಲವರ್ಷನ ಆಳ್ವಿಕೆಯಲ್ಲಿ ಮಂಗತೋರಣನು ಬೆಳ್ವೊಲನಾಡನ್ನು ಆಳುತ್ತಿದ್ದನು. ಆಗ ನಾಗಥೋರನು ದಾಳಿ ಮಾಡಿದಾಗ ಕಲಿಗಳ್ಳನು ಎದುರಿಸಿ ಸತ್ತಿದ್ದನ್ನು ದಾಖಲಿಸುತ್ತದೆ. ಸ್ತ್ರೀಯೊಬ್ಬಳು (ಬಹುಶಃ ಪತ್ನಿ) ಕಲ್ಲನ್ನು ನೆಡಿಸಿದಳೆಂದು ತಿಳಿದುಬರುತ್ತದೆ. ಕ್ರಿ. ಶ. ೮೯೩ ರ ಮಂಚಾಲ ಶಾಸನವು (SII Vol IX Pt. I No. 55) ಶುಭತುಂಗನ (ಕೃಷ್ಣ II) ಸೂಮಂತ ಕಣ್ಣನು ಸಿಂದೆವಾಡಿ–೧೦೦೦ ವನ್ನು ಆಳುತ್ತಿದ್ದಾಗ ನೀಡಿದ ದಾನವನ್ನು ಉಲ್ಲೇಖಿಸಿದೆ. ಕ್ರಿ. ಶ. ೮೯೬ ರ ಮೇವುಂಡಿ ಶಾಸನವು (SII Vol XI Pt. I No. 22) ಅಕಾಲವರ್ಷನ ಆಳ್ವಿಕೆಯಲ್ಲಿ ಮಹಾಸಾಮಂತ ಯಾದವವಂಶದ ಕೇಕಜ್ಜನು ಕೋಗಳಿ–೫೦೦, ಮಾಸಿಯವಾಡಿ – ೧೪೦, ಪ್ರಾಂತಗಳನ್ನು ಆಳುತ್ತಿದ್ದನು. ರಾಜಧಾನಿಯಾದ ಮೆಱುವೀಡಿನಲ್ಲಿ ಇಂದ್ರ ವಿಮಾನ ಸಮಾನ ದೇವಸ್ಥಾನವನ್ನು ಕಟ್ಟಿಸಿ, ಮಹಾಜನರ ಅಧ್ಯಕ್ಷತೆಯಲ್ಲಿ ವೇದವಾಹನ ಭಟ್ಟಾರಕರ ಕಾಲನ್ನು ತೊಳೆದು ನೀಡಿದ ದಾನವನ್ನು ಉಲ್ಲೇಖಿಸುತ್ತದೆ.

ಕ್ರಿ. ಶ. ೮೯೬ ರ ಗುಡ್ಡದ ಚೆನ್ನಾಪುರ ಶಾಸನವು (ARIE. 1945-46 No.B 285) ಅಕಾಲವರ್ಷನು ರಾಜ್ಯಭಾರ ಮಾಡುತ್ತಿದ್ದಾಗ ಮಹಾಸಾಮಂತ ಲೋಕಟೆಯರಸನು ಬನವಾಸಿ ಪನ್ನಿರ್ಚ್ಛಾಸಿರವನ್ನು ಆಳುತಿದ್ದನು. ಚೆಲ್ಲಕೇತನ ವಂಶದಲ್ಲಿ ಹುಟ್ಟಿದ ಮೆಮ್ಮವರಸನು ಕುಂದಮಾರು ೩೦ ಅನ್ನು ಆಳುತ್ತಿದ್ದಾಗ ಚಂಡಯ್ಯನು ನಾಲ್ಗಾವುಂಡನಾಗಿದ್ದನು. ಆ ಸಮಯದಲ್ಲಿ ಕುಂದವುರದ ಅಮೃತೇಶ್ವರ ಎಂಬ ಉಲ್ಲೇಖ ಬಂದಿದೆ. ಇದೇ ಕಾಲದ ಹಲಸೂರು ಶಾಸನವು (ARIE. 1945-46 No.B 288) ಮಹಾಸಾಮಂತಾಧಿಪತಿ ಕನ್ನರವಲ್ಲಭನು ಆಳ್ವಿಕೆ ನಡೆಸುತ್ತಿದ್ದಾಗ, ಲೋಕಟೆಯು ಬನವಾಸಿ ಪನ್ನಿರ್ಚ್ಛಾಸಿರವನ್ನು ಆಳುತ್ತಿದ್ದನು. ತಿಂದೇಶ್ವರದ ಓಂಕಾರ ಶಿವಭಟಾರನು ಪಲಸೂರನ್ನು ಆಳುತ್ತಿದ್ದಾಗ, ಆದಿಗೋಪಯನು ಪಾನುಂಗಲ್ಲು ೫೦೦ ರ ನಾಲ್ಗಾವುಂಡನಾಗಿದ್ದಾಗ ಮಾರಮಯ್ಯ ಪೆರ್ಗಡೆಯಾಗಿದ್ದನು ಎಂಬ ವಿವರಗಳನ್ನು ನೀಡುತ್ತದೆ. ಕಾಲನಿರ್ದೇಶವಿಲ್ಲದ ಹೊನ್ನತ್ತಿಯ ಶಾಸನವು (SII.0Vol. XVIII, No. 17) ಲೋಕಟೆಯು ಬನವಾಸಿ ಪನ್ನಿರ್ಚ್ಛಾಸಿರವನ್ನು, ಅವನ ಮಗ ಕಲಿವಿಟ್ಟನು ಪುನವಂತಿ ೧೨ ವಿಭಾಗವನ್ನು ಆಳುತ್ತಿದ್ದ ಹಾಗೂ ಅಯ್ಚಣ್ಣನು ನಾಲ್ಗಾವುಂಡನಾಗಿದ್ದಾಗ ಪಾಲಯ್ಯ, ಬಾಸಯ್ಯರೆಂಬುವರು ನೀಡಿದ ಭೂದಾನಗಳನ್ನು ಉಲ್ಲೇಖಿಸುತ್ತದೆ. ಕ್ರಿ. ಶ. ೮೯೩-೯೪ ರ ಮಂತ್ರಾಲಯ ಶಾಸನವು (KI. Vol. V, B.R.Gopal) ಅಕಾಲವರ್ಷನ ಆಳ್ವಿಕೆಯಲ್ಲಿ ಸಾಮಂತನಾದ ಸೇನಣ್ಣನು ಸಿಂಧವಾಡಿ ೧೦೦೦ ವನ್ನು ಆಳುತ್ತಿದ್ದನೆಂದು ಉಲ್ಲೇಖಿಸಿದೆ.

ಕ್ರಿ. ಶ. ೮೯೭ ರ ಚಿಂಚಲಿ ಶಾಸನವು (SII Vol XI Pt. I No. 24) ನಿರುಪಮ, ಗೋವಿಂದ, ಜಗತ್ತುಂಗರನ್ನು ಹೆಸರಿಸುತ್ತದೆ. "ಕೇರಳ ಮಾಳವಗೌಡಾ[ನ್] ಸಗೂರ್ಜ್ಜರಾ[ನ್] ಚಿತ್ರಕೂಟ ಗಿರಿದುರ್ಗ್ಗಸ್ಥಾ[ನ್] ಬದ್ವಾ ಕಾಂಚೀಶಮಥ ಸ ಕೀರ್ತಿನಾರಾಯಣೋ ಜಾತಃ [॥] ಅರಿನೃಪತ ಮಕುಟಘಟ್ಟಿತ ಚರಣವನ್ದಿತ ಶೌರ್ಯ್ಯಃ ವಂಗಾಂಗ ಮಗಧ ಮಾಳವ ವೆಂಗೀ [ಶಾದ್ಯೈರ್ಚ್ಚಿತೋ]ತಿಶಯಧವಳಃ" ಎನ್ನುವುದರ ಮೂಲಕ ಅತಿಶಯಧವಳನ (ಕೃಷ್ಣ II) ಕೀರ್ತಿಯನ್ನು ಶೌರ್ಯವನ್ನು ಉಲ್ಲೇಖಿಸುತ್ತದೆ.

ಕೃಷ್ಣನು ಪಟ್ಟಕ್ಕೇರುವ ಹೊತ್ತಿಗೆ ಮಧ್ಯವಯಸ್ಸನ್ನು ಮೀರಿದ್ದನು ಎನ್ನಬಹುದು. ಹಿಂದೆ ಉತ್ತರಭಾರತದಲ್ಲಿ ಧ್ರುವ ಹಾಗೂ ಗೋವಿಂದರಿಂದ ಸೋಲನ್ನು ಅನುಭವಿಸಿದ್ದ ಪ್ರತೀಹಾರ ಭೋಜನು ಇಮ್ಮಡಿ ಕೃಷ್ಣನು ಪಟ್ಟಕ್ಕೇರಿದ ಕೂಡಲೇ ಯುದ್ಧ ಮಾಡಲು ಬಂದನು. ಆರಂಭದಲ್ಲಿ ಇಮ್ಮಡಿ ಕೃಷ್ಣನು ಸೋತು ಹೋದನು. ನಂತರ ಭೋಜನು ಗುಜರಾತಿನ ರಾಷ್ಟ್ರಕೂಟರ ಮೇಲೆ ಯುದ್ಧವನ್ನು ಮಾಡಲು ನಡೆದನು. ಗುಜರಾತಿನ ರಾಷ್ಟ್ರಕೂಟ ದೊರೆ ಕೃಷ್ಣನ ಮುಂದೆ ಭೋಜನು ಸೋಲಬೇಕಾಯಿತು. ಕೃಷ್ಣನು ಉಜ್ಜಯಿನಿಯವರಗೆ ಭೋಜನನ್ನು ಬೆನ್ನಟ್ಟಿಕೊಂಡು ಹೋದನು. ಮಾಳವ ರಾಜ್ಯವನ್ನು ಸೋಲಿಸಿ ಉಜ್ಜಯಿನಿಯನ್ನು ವಶಪಡಿಸಿಕೊಂಡನು. ಇಮ್ಮಡಿ ಕೃಷ್ಣನ ಎದುರಿನಲ್ಲೇ ಮಾಂಡಳಿಕ ಕೃಷ್ಣನ ಸೇನೆ ಭೋಜನ ಸೈನ್ಯವನ್ನು ಧ್ವಂಸ ಮಾಡಿತು. ಇದೇ ಕಾಲದಲ್ಲಿ ವೆಂಗಿಯಲ್ಲಿ ಮೂರನೆಯ ವಿಜಯಾದಿತ್ಯನು (ಕ್ರಿ. ಶ ೮೪೮–೮೯೨) ಅರಸನಾಗಿದ್ದನು. ಈತ ತನ್ನ ರಾಜ್ಯದ ಬಹಳಷ್ಟು ಭಾಗಗಳನ್ನು ಇಮ್ಮಡಿ ಕೃಷ್ಣನ ತಂದೆ ಅಮೋಘವರ್ಷನಿಂದ ಕಿತ್ತುಕೊಂಡಿದ್ದನು. ಜೊತೆಗೆ ದುರ್ಬಲರಾಗಿದ್ದ ಪಲ್ಲವ, ಚೋಳರನ್ನು ಸೋಲಿಸಿ ತನ್ನ ರಾಜ್ಯದ ಸಂಪತ್ತನ್ನು ವೃದ್ಧಿಗೊಳಿಸಿಕೊಂಡಿದ್ದನು. ಈತ ರಾಷ್ಟ್ರಕೂಟರ ಸಾಮಂತರಾದ ಗಂಗ, ನೊಳಂಬರ ಮೇಲೆ ಯುದ್ಧಕ್ಕೆ ಬಂದಾಗ ಎರಡನೆಯ ಕೃಷ್ಣನು ವಿಜಯಾದಿತ್ಯನ ಮೇಲೆ ಯುದ್ಧ ಮಾಡಲು ಸಿದ್ಧನಾದನು. ಆಗ ನಡೆದ ಯುದ್ಧದಲ್ಲಿ ನೊಳಂಬರು ಸೋತರು. ನೊಳಂಬ ಅಧಿಪತಿಯಾದ ಮಂಗಿಯು ಯುದ್ಧದಲ್ಲಿ ಮಡಿದನು. ಗಂಗರೂ ಸೋತರು. ಹಾಗೆಯೇ ಮುಂದುವರಿದ ವಿಜಯಾದಿತ್ಯನು ರಾಷ್ಟ್ರಕೂಟ ರಾಜ್ಯದ ಭಾಗವೊಂದನ್ನು ಆಕ್ರಮಿಸಿ ಅಲ್ಲಿ ಹಳೆಯ ಬಸ್ತಾರ್ ರಾಜ್ಯದಲ್ಲಿದ್ದ ಚಿತ್ರಕೂಟ ಕೋಟೆಯನ್ನು ನಾಶಮಾಡಿದನು (ಪಟ್ಟಣವನ್ನು ಸುಟ್ಟನು). ಅಲ್ಲಿಂದ ಮುಂದುವರಿದು ಕಿರಣಪುರವನ್ನು ಆಕ್ರಮಿಸಿದನು. ಆ ಸಮಯದಲ್ಲಿ ಕೃಷ್ಣನು ಅಲ್ಲಿ ಬೀಡುಬಿಟ್ಟಿದ್ದನು. ಡಾಹಲ (ಜಬ್ಬಲ್‌ಪುರ) ದ ಅಧಿಪತಿಯಾದ ಕಲಚುರಿ ಶಂಕರಗಣನ ಸೈನ್ಯವೂ ಅಲ್ಲಿ ಸೇರಿತ್ತು. ರಾಷ್ಟ್ರಕೂಟ, ಚೇದಿ ಸೈನ್ಯಗಳ ಜೊತೆ ವೆಂಗಿಯ ಸೈನ್ಯವು ಹೋರಾಡಿತು.

ಕಿರಣಪುರವು ಮಧ್ಯಪ್ರದೇಶದ ಬಾಲಾಘಾಟ್ ಜಿಲ್ಲೆಯಲ್ಲಿರುವ ಇಂದಿನ ಕಿರಣಪುರವೇ ಆಗಿದ್ದು ಅಲ್ಲಿ ಕದನವಾಯಿತು. ರಾಷ್ಟ್ರಕೂಟ ಮತ್ತು ಚೇದಿ ಸೈನ್ಯಗಳು ಸೋತು ಓಡಿದಾಗ ವಿಜಯಾದಿತ್ಯನು ಕಿರಣಪುರವನ್ನು ಸೂರೆಮಾಡಿ ನಗರವನ್ನು

ಸುಟ್ಟುಹಾಕಿದನು. ಹಾಗೆಯೇ ಅಚಲಾಪುರಕ್ಕೂ ಹೋಗಿ ಅದನ್ನೂ ಸುಟ್ಟನು. ಸೋಲನ್ನು ತಪ್ಪಿಸಿಕೊಳ್ಳಲಾಗದ ಎರಡನೆಯ ಕೃಷ್ಣನು ಮಾವನಾದ ಕೊಕ್ಕಲ್ಲನಲ್ಲಿ ಆಶ್ರಯವನ್ನು ಪಡೆಯಬೇಕಾಯಿತು. ಈ ಸೋಲಿನಿಂದ ರಾಷ್ಟ್ರಕೂಟರು ಹೆದರಿದರು. ಈ ಯುದ್ಧದಲ್ಲಿ ವಿಜಯಾದಿತ್ಯನ ಸೈನ್ಯದಲ್ಲಿ ಪ್ರಮುಖ ಪಾತ್ರವಹಿಸಿದ್ದ, ಸೇನಾಧಿಪತಿಯಾಗಿದ್ದ ಪಾಂಡುರಂಗನ (SII. Vol. I, 43; EI. Vol. IV, 238) ಶಾಸನವಲ್ಲದೆ ಇನ್ನೂ ಒಂದೆರಡು ಪೂರ್ವ ಚಾಲುಕ್ಯ ಶಾಸನಗಳು ಈ ಮಾತನ್ನು ಪುಷ್ಟೀಕರಿಸುತ್ತವೆ.

ವಿಜಯಾದಿತ್ಯನು ಮೊದಲು ದಕ್ಷಿಣ ದಿಗ್ವಿಜಯವನ್ನು ಮುಗಿಸಿ ನಂತರ ಉತ್ತರದ ಕಡೆಗೆ ನಡೆದಿರಬಹುದೆಂದು ಊಹಿಸಬಹುದು. ಆದರೆ ಈ ಕಾಲಕ್ಕೆ ರಾಷ್ಟ್ರಕೂಟರು ಮಳಖೇಡವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದರು. ವೆಂಗಿಯಲ್ಲಿ ಆಳುತ್ತಿದ್ದ ವಿಜಯಾದಿತ್ಯನು ದೂರದ ಮಧ್ಯಪ್ರದೇಶದಲ್ಲಿರುವ ಕಿರಣಪುರದಲ್ಲಿ ಯುದ್ಧ ಮಾಡುವ ಅಗತ್ಯವೇನಿತ್ತು? ಅಲ್ಲಿಯವರಗೆ ಹೋಗಿದ್ದೇಕೆ ಎನ್ನುವ ಪ್ರಶ್ನೆಯೊಂದೆಡೆಯಿದ್ದರೆ, ರಾಷ್ಟ್ರಕೂಟರು ಮತ್ತು ಚೇದಿ ಅರಸರು ಅಲ್ಲಿ ಬೀಡುಬಿಟ್ಟದ್ದ ಕಾರಣವೇನು ಎಂದು ತಿಳಿಯುವುದಿಲ್ಲ. ಹಾಗೆಯೇ ಅಚಲಾಪುರದ ರಾಷ್ಟ್ರಕೂಟರ ಶಾಖೆಯ ಅರಸರು ಯಾರಾದರೂ ಅಚಲಾಪುರದಲ್ಲಿ ಇದ್ದಿರಬಹುದೇ? ಕ್ರಿ. ಶ. ೮೮೦-೯೧ಳ ರಲ್ಲಿ ಈ ಶಾಖೆಯಿತ್ತೇ? ಶಾಖೆಯಿಲ್ಲದಿದ್ದರೆ ಅಚಲಪುರವನ್ನು ಸುಡುವ ಅಗತ್ಯವೇನಿರಬಹುದು? ಈ ಸಂದರ್ಭದಲ್ಲಿ ಕಿರಣಪುರ ಮತ್ತು ಅಚಲಾಪುರದ ಮಧ್ಯೆಯಿರುವ ದೂರವನ್ನು ಗಮನಿಸಬೇಕು.

ವೇಮುಲವಾಡದ ಚಾಲುಕ್ಯ ದೊರೆ ಬದ್ದೆಗನನ್ನು ಕೂಡ ವಿಜಯಾದಿತ್ಯನು ಸೋಲಿಸಿದನೆಂದು ವಿದ್ವಾಂಸರು ಹೇಳುತ್ತಾರೆ. ರಟ್ಟ ಅಥವಾ ರಾಷ್ಟ್ರಕೂಟ ದೊರೆಯಿಂದ ಪ್ರಚೋದಿತನಾಗಿ ಅವನು ನೊಳಂಬ ಗಂಗರ ಮೇಲೆ ಯುದ್ಧಕ್ಕೆ ಬಂದನೆಂದು ಹೇಳಲಾಗಿದೆ. "ರಟ್ಟೇಶ ಸಂಚೋದಿತ" ಎನ್ನುವ ಪದಗಳನ್ನು ವಿದ್ವಾಂಸರು "ರಟ್ಟದೊರೆಯಿಂದ ಆದೇಶಿತನಾಗಿ" ಎಂದು ಅರ್ಥೈಸಿದ್ದಾರೆ. ಆ ದೊರೆಯನ್ನು ಒಂದನೆಯ ಅಮೋಘವರ್ಷನೆಂದು ಗುರುತಿಸಿದ್ದಾರೆ. ಒಂದನೆಯ ಅಮೋಘವರ್ಷನಿಗೆ ಈ ರೀತಿಯ ಬುದ್ಧಿಯಿತ್ತೆ ಎಂಬುದು ಯೋಚಿಸಬೇಕಾದ

ವಿಷಯ. ಏಕೆಂದರೆ ಆತ ಯುದ್ಧಗಳು ಬೇಡವೆಂದು ವೈವಾಹಿಕ ಸಂಬಂಧಗಳ ಮೂಲಕ ಬಾಂಧವ್ಯ ಬೆಳೆಸಿ ಸೌಹಾರ್ದತೆಯಿಂದ ಇರುತ್ತಿದ್ದನು ಎಂಬುದು ಎಲ್ಲರಿಗೂ ತಿಳಿದ ವಿಚಾರ. ವಿಜಯಾದಿತ್ಯನು ಕ್ರಿ. ಶ. ೮೮೮ ರಲ್ಲಿ ಮಡಿದನು. ಕೆಲವು ಕಾಲದ ನಂತರ ಕೃಷ್ಣನು ಸೈನ್ಯವನ್ನು ಪುನಃ ಒಂದುಗೂಡಿಸಿಕೊಂಡು ಜೊತೆಗೆ ಗುಜರಾತಿನ ರಾಷ್ಟ್ರಕೂಟರ ಸೈನ್ಯವನ್ನೂ ಕರೆಸಿಕೊಂಡನು. ಒಂದು ಗುಂಪಿಗೆ ಗುಜರಾತಿನ ರಾಷ್ಟ್ರಕೂಟ ದೊರೆ ಕೃಷ್ಣನೂ ಇನ್ನೊಂದು ಗುಂಪಿಗೆ ವೇಮುಲುವಾಡದ ಚಾಲುಕ್ಯ ಬದ್ದೆಗನೂ ಸೇನಾಧಿಪತಿಗಳಾಗಿ ಹೊರಟರು. ಆಗ ವೆಂಗಿಯಲ್ಲಿ ಭೀಮನು ದೊರೆಯಾಗಿದ್ದನು. ಭೀಮನು ಈ ಯುದ್ಧದಲ್ಲಿ ಸೋತನು. ಪಂಪನ 'ವಿಕ್ರಮಾರ್ಜುನ ವಿಜಯ'ದಲ್ಲಿ ಈ ಯುದ್ಧದ ವರ್ಣನೆಯಿದೆ. ಭೀಮನನ್ನು ಕೆಲಕಾಲ ಬಂಧನದಲ್ಲಿಟ್ಟಿದ್ದರು. ನಂತರ ಅವನು ಸಾಮಂತನಾಗಿ ಉಳಿದುಕೊಂಡನು. ಇದನ್ನು ವೆಂಗಿಯ ಚಾಲುಕ್ಯರ ಶಾಸನಗಳು ಒಪ್ಪಿಕೊಂಡಿವೆ.

ಒಂದನೆಯ ಚಾಲುಕ್ಯ ಭೀಮನ (ಕ್ರಿ.ಶ. ೮೯೨–೯೨೩) ಕಾಲದಲ್ಲಿ ರಾಷ್ಟ್ರಕೂಟರೊಡನೆ ಆಗಾಗ ಮುಖಾಮುಖಿಯಾಗುತ್ತಿತ್ತು. ಪಂಪಭಾರತದ ಪ್ರಕಾರ ಬಹುಶಃ ಎರಡನೆಯ ಕೃಷ್ಣನ ಮಾಂಡಲಿಕನಾದ ಭೀಮನನ್ನು (ಚಾಲುಕ್ಯ ಭೀಮ) ಸೋಲಿಸಿ ಸೆರೆಹಿಡಿದನೆಂದು ತಿಳಿದುಬರುತ್ತದೆ. ಆಗ ಕೃಷ್ಣ ಆಂಧ್ರಪ್ರದೇಶದ ಅನೇಕ ಭಾಗಗಳನ್ನು ವಶಪಡಿಸಿಕೊಂಡನು. ನೆಲ್ಲೂರು ಜಿಲ್ಲೆಯವರೆಗೂ ಗಡಿಯನ್ನು ವಿಸ್ತರಿಸಿದನು. ಪೂರ್ವ ಚಾಲುಕ್ಯರ ನಾಡಿನಲ್ಲಿ ತನ್ನ ಅಧಿಕಾರಿಗಳನ್ನು ನೇಮಿಸಿದನು. ಭೀಮನ ಸೇನಾಧಿಪತಿಯಾಗಿದ್ದ ಪಂಡುರಂಗನು ಈ ಅಧಿಕಾರಿಗಳನ್ನು ಓಡಿಸಲು ಪ್ರಯತ್ನಿಸಿದನು. ಹತ್ತು ವರ್ಷಗಳ ನಂತರ ಭೀಮನು ಪುನಃ ಇತರ ಮಾಂಡಲಿಕರ ನೆರವಿನಿಂದ ಯುದ್ಧಕ್ಕೆ ಬಂದನು. ಈ ಸೈನ್ಯಕ್ಕೆ ಮಹಾಕಾಲನೆಂಬುವನು ಸೇನಾನಿಯಾಗಿದ್ದನು. ಪೂರ್ವ ಗೋದಾವರಿ ಜಿಲ್ಲೆಯ ನೆರವದ್ಯಪುರದಲ್ಲಿ ಯುದ್ಧ ನಡೆಯಿತು. ಚಾಲುಕ್ಯ ಭೀಮನ ಮಗನು ಕೃಷ್ಣನ ಸೈನ್ಯದ ಸೇನಾಧಿಪತಿ ಗುಂಡಯ್ಯನನ್ನು ಕೊಂದು ತಾನೂ ಮಡಿದನು.

ಭೀಮನು ರಾಷ್ಟ್ರಕೂಟರ ಕಡೆಯ ವಸೋಬೋಯ ಎಂಬಾತನಿಂದ ಹನ್ನೆರಡು ಆಯಕಟ್ಟಿನ ಸ್ಥಾನಗಳನ್ನು ವೆಂಗೀಪ್ರದೇಶದ ಕೋಟೆ ಕೊತ್ತಲಗಳನ್ನು ವಶಪಡಿಸಿಕೊಂಡರು. ನಂತರ ಎರಡನೆಯ ಕೃಷ್ಣ ಮತ್ತು ಅವನ ಸ್ನೇಹಿತರು (ಎಂ.ವಿ.

ಕೃಷ್ಣರಾವ್) ಕರ್ಣಾಟ ಮತ್ತು ಲಾಟ ದೊರೆಗಳನ್ನು ಸೋಲಿಸಿದನೆಂದು ಹೇಳಲಾಗಿದೆ. ಚಾಲುಕ್ಯ ಭೀಮನ ಈ ಯಶಸ್ಸು ಕೃಷ್ಣನ ಆಳ್ವಿಕೆಯ ಕೊನೆಯ ವರ್ಷಗಳಲ್ಲಿ ಆಗಿರಬಹುದೆಂದು ಊಹಿಸುತ್ತಾರೆ.

ಈ ಯುದ್ಧಗಳಿಂದ ಯಾವ ಪ್ರಯೋಜನವೂ ಆಗಲಿಲ್ಲ. ಇದರಲ್ಲಿ ತಾವು ಗೆದ್ದೆವೆಂದು ಚಾಲುಕ್ಯ ಶಾಸನಗಳು ಘೋಷಿಸಿಕೊಂಡಿವೆ.

ಕ್ರಿ.ಶ. ೯೦೨-೯೦೩ ರ ಮುಳಗುಂದ ಶಾಸನವು (EI. Vol. XIII, No. 15) ಜಿನಾಲಯಕ್ಕೆ ನೀಡಿದ ದಾನಗಳನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೯೦೪ ರ ಸಿಡಿಯನೂರು ಶಾಸನವು (SII. Vol. XX, No. 15) ಅಕಾಲವರ್ಷನ ಆಳ್ವಿಕೆಯಲ್ಲಿ ಲೋಕಟೆಯು ಬನವಾಸಿ ಪನ್ನಿರ್ಚ್ಛಾಸಿರವನ್ನು ಆಳುತ್ತಿದ್ದಾಗ ಪೊಂಬುಳ್ವದ ಮೇಲೆ ದಾಳಿ ಮಾಡಿ ಕೋಟೆಯನ್ನು ವಶಪಡಿಸಿಕೊಂಡನೆಂದೂ, ನಾಗವರ್ಮನು ಸಿಡಿಯನೂರನ್ನು ಆಳುತ್ತಿದ್ದನೆಂದೂ, ಸತ್ಯಳಿಗೆ ಎಪ್ಪತ್ತಕ್ಕೆ ಬಿಟ್ಟನು ನಾಟ್ಗಾವುಂಡನಾಗಿದ್ದನೆಂದು ಉಲ್ಲೇಖಿಸಿದೆ. ಕ್ರಿ.ಶ. ೯೦೬ ರ ವೆಂಕಟಾಪುರ ಶಾಸನವು (EI. Vol. XXVI, p59-62) ಅಮೋಘವರ್ಷ ಪೃಥ್ವಿವಲ್ಲಭನ ಆಳ್ವಿಕೆಯಲ್ಲಿ ಬೆಳ್ವೊಲ ಮುನೂಱನ್ನು ಮಹಾಸಿರಿವಂತನೂ, ಮುಳ್ಗುಂದ ಹನ್ನೆರಡನ್ನು ಮಾಯರಮ್ಮನು ಆಳುತ್ತಿದ್ದರು. ಸಿರಿವುರಕ್ಕೆ ಬಗೆಗನು ಪೆರ್ಗಾವುಂಡನಾಗಿದ್ದನೆಂದು ತಿಳಿದು ಬರುತ್ತದೆ. ಕ್ರಿ.ಶ. ೯೦೭-೯೦೮ ರ ದೇವಿಹೊಸೂರು ಶಾಸನವು (SII. Vol. XVIII, No. 16) ಅಕಾಲವರ್ಷನ ಆಳ್ವಿಕೆಯಲ್ಲಿ ರಾಜಾತಿಯು ಬನವಾಸಿ ನಾಡನ್ನಾಳುತ್ತಿದ್ದುದನ್ನು ಉಲ್ಲೇಖಿಸುತ್ತದೆ.

### ಜಗತ್ತುಂಗ ೨ (ಕ್ರಿ.ಶ. ೮೯೦-೯೧೨)

ಎರಡನೆಯ ಜಗತ್ತುಂಗನು ರಾಜ್ಯಭಾರ ಮಾಡಲಿಲ್ಲ ಎಂಬುದು ವಿದ್ವಾಂಸರ ಸಾಮಾನ್ಯ ಅಭಿಪ್ರಾಯ. ಈತ ತನ್ನ ತಂದೆ ಎರಡನೆಯ ಕೃಷ್ಣನಿಗಿಂತ ಮೊದಲೇ ನಿಧನನಾದ್ದರಿಂದ ರಾಜ್ಯವು ಮೊಮ್ಮಗನಾದ ಮೂರನೆಯ ಇಂದ್ರನಿಗೆ ಲಭಿಸಿತು ಎಂದು ಅಭಿಪ್ರಾಯ ಪಡುತ್ತಾರೆ.

ಎರಡನೆಯ ಕೃಷ್ಣನ ಆಳ್ವಿಕೆಯ ಉದ್ದಕ್ಕೂ ಯುದ್ಧಗಳು ನಡೆಯುತ್ತಲೇ ಇದ್ದವು. ಆತನ ಮೂವತ್ತ ನಾಲ್ಕು ವರ್ಷಗಳ ಆಳ್ವಿಕೆಯ ಕಾಲದಲ್ಲಿ ಜಗತ್ತುಂಗ ಕೂಡ ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದನೆಂದು ಊಹಿಸಲು ಆಧಾರಗಳಿವೆ.

ಜಗತ್ತುಂಗನ ತಾಯಿಯು ಚೇದಿ ವಂಶದವಳಾದ್ದರಿಂದ ಬಾದಾಮಿ ಚಲುಕ್ಯರು ರಾಷ್ಟ್ರಕೂಟರ ಮೇಲೆ ಯುದ್ಧ ಮಾಡಿದಾಗ ಕೊಕಲ್ಲನು ತನ್ನ ಮಗನನ್ನು ಸೈನ್ಯದೊಂದಿಗೆ ಕಳಿಸಿರಬಹುದು ಮತ್ತು ವಿಂಗವಲ್ಲಿ ಕದನದಲ್ಲಿ ಕೂಡ ಜಗತ್ತುಂಗನು ಭಾಗವಹಿಸಿರುವ ಸಾಧ್ಯತೆಗಳು ಇಲ್ಲದಿಲ್ಲ. ಮೂರನೆಯ ಇಂದ್ರನ ಜಂಬಗಾಂವ್ ಶಾಸನ (EI. XXXVI. P.29) ದಲ್ಲಿ ಜಗತ್ತುಂಗನು ಚೇದಿ ವಂಶದ ಕೊಕ್ಕಲ್ಲನ ಮಗಳು ಲಕ್ಷ್ಮಿಯನ್ನು ವಿವಾಹವಾಗಿದ್ದನ್ನು ತಿಳಿಸುತ್ತದೆ.

ವಂಶೇ ತಸ್ಯ ಸಪತ್ನವಂಶಪರಶೋ; ಕೊಕ್ಕಲ್ಲ ಭೂಪಾತ್ಮಜೋ ರಾಜಾ ಶ್ರೀರಣವಿಗ್ರಹः। ಸಮಭವಚ್ಚೇದೀಶ್ವರ: ಕೀರ್ತಿಮಾನ್। ಯಸ್ಯರಾತಿಪುರನ್ಧ್ರಿಮ ಣ್ಡನ ಮುಷ: ಸರ್ವೋಽಪಿ ಪೃಥ್ವೀಪತಿ: ಸೂರ್ಯಸ್ಸ್ಯೇನ್ದುರಿವ ಪ್ರಯಾತಿ ವಿಕಲ: ಪಕ್ಷಕ್ಷಯೇಮಣ್ಡಲಮ್ ॥೨೦॥ ಸಕಲಗುಣಗಣಾಧ್ವೇ(ಭ್ಧೇ)ರ್ವ್ವಿಸ್ಫುರ ದ್ಧಾಮಧಾಮ್ನ: ಕಲಿತ ಕಮಲಪಾಣಿಸ್ತಸ್ಯ ಲಕ್ಷ್ಮೀ: ಸುತಭೂತ್ । ಯದುಕುಲಕುಮುದೇನ್ದು: ಸುನ್ದರೀಚಿತ್ತಹರ್ತ್ತಾ ಹರಿರವ ಪರಿಣಿನ್ಯೇ ತಾಂ ಜಗತ್ತುಙ್ಗದೇವ: ॥೨೧ ॥

ಈತ ವೀರನೂ, ಕೀರ್ತಿವಂತನೂ, ಯದುಕುಲ ಕುಮುದನು ಆಗಿದ್ದನೆಂದು ವರ್ಣಿಸುತ್ತದೆ. ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದರಿಂದ ಯಾವುದಾದರೂ ಯುದ್ಧದಲ್ಲಿ ಸತ್ತಿರುವ ಸಾಧ್ಯತೆಯಿದೆ.

ಸಾಮ್ರಾಜ್ಯವನ್ನು ಇಡಿಯಾಗಿ ಆಳದಿದ್ದರೂ ತಂದೆಯ ಕಾಲದಲ್ಲಿಯೇ ಸಣ್ಣ ಪ್ರಾಂತವೊಂದರಲ್ಲಿ ಆಳುತ್ತಿದ್ದನೆಂಬುದನ್ನು ದಾಖಲೆಗಳ ಆಧಾರದಿಂದ ಒಪ್ಪಬಹುದು. ಈತನ ಕಾಲದಲ್ಲಿ ಹಾಕಿಸಿದ ನಾಲ್ಕು ಶಾಸನಗಳಿವೆ. ಮೂರು ಶಾಸನಗಳಲ್ಲಿ "ಸ್ವಸ್ತಿ ಶ್ರೀ ಜಗತುಙ್ಗ ಪೃಥಿವೀ ರಾಜ್ಯಾಂಗೆಯ್ಯೆ --" ಎನ್ನುವ ಉಲ್ಲೇಖವಿದೆ. ನಿಲೋಗಲ್ ಶಾಸನದಲ್ಲಿ (SII.XVIII.No.34), ಮತ್ತು ಹೂಲಿಹಳ್ಳಿ ಶಾಸನದಲ್ಲಿ (SII.XVIII.No.36) ಜಗತ್ತುಙ್ಗ ಭೂಮಿಯನ್ನು ಆಳುತ್ತಿರುವಾಗ ಬನವಾಸಿ ಪನ್ನಿರ್ಚ್ಛಾಸಿರವನ್ನು ರಾಜಾದಿತ್ಯನು ಆಳುತ್ತಿದ್ದನೆಂದು ತಿಳಿಸುತ್ತದೆ. ಬಂದನಿಕೆಯಲ್ಲಿ ಪೀಗನೆಂಬುವನು ನಾಡ್ಗಾವುಂಡನಾಗಿದ್ದನು ಎಂದಿದೆ. ಇದೇ ಉಲ್ಲೇಖ ನಿಲೋಗಲ್‌ನ ಇನ್ನೊಂದು ಶಾಸನ (SII.XVIII.No.35) ದಲ್ಲಿ ಕೂಡ ಬಂದಿದೆ. ಪೀಗನ ದಾಯಾದಿಗಳು ಬಂದು ಇರಿದಾಗ ತೋಱವರ್ ಕಲಿಯೆಂಬುವವನು ಹೋರಾಡಿ

ಮೂರು ಜನರನ್ನು ಮತ್ತು ಇನ್ನೂ ನಲವತ್ತೆರೆಡು ಜನರನ್ನು ಕೊಂದಿದ್ದನ್ನು ಈ ಶಾಸನ ಉಲ್ಲೇಖಿಸುತ್ತದೆ. ಇದರಲ್ಲಿ ಮೇಂಟಿ, ಕಡಿತಲೆ ಮುಂತಾದ ಉಲ್ಲೇಖವಿದ್ದು ಆ ಭಾಗವು ಹಾಳಾಗಿದೆ. ಹೂಲಿಹಳ್ಳಿಯ ಶಾಸನ, ಸೆರಿಯರ ಮಾರನು ಗಾವುಂಡನಾಗಿದ್ದಾಗ, ಬಚ್ಚರಕೊಂಡಮ್ಮ, ಅಲ್ಲರ ಅಱಿಮಂಡ (?) ಎಂಬ ವ್ಯಕ್ತಿಗಳನ್ನು ಹೆಸರಿಸುತ್ತವೆ. ಇವರುಗಳು ದಾನಮಾಡಿದ್ದನ್ನು ಉಲ್ಲೇಖಿಸುತ್ತದೆ. ಸಾವಿಕೇರಿಯ ಶಾಸನವು (ARIE 1947-48, NO.228-53) ಒಡೆದು ಹಾಳಾಗಿದ್ದು ಪಳುಕಿ ಮನೆತನದ ಉಲ್ಲೇಖ ಮತ್ತು ವೀರನೊಬ್ಬನ ಮರಣವನ್ನು ದಾಖಲಿಸುತ್ತದೆ.

ಮೇಲಿನ ದಾಖಲೆಗಳನ್ನು ಗಮನಿಸಿದಾಗ ಜಗತ್ತುಙ್ಗನು ಆಳ್ವಿಕೆ ನಡೆಸಿರುವುದು ಖಚಿತವಾಗುತ್ತದೆ. ಎರಡನೆಯ ಕೃಷ್ಣನ ಕಾಲವು ಕ್ರಿ.ಶ. ೮೮೦ ರಿಂದ ೯೧೪ ರವರೆಗಿದೆ. ಜಗತ್ತುಂಗನ ಮಗ ಮೂರನೆಯ ಇಂದ್ರನು (ಕ್ರಿ. ಶ. ೯೧೪ ರಿಂದ ೯೨೮ರವರೆಗೆ) ಆಳುತ್ತಿದ್ದುದನ್ನು ಉಲ್ಲೇಖಿಸಿದೆ. ಎರಡನೆಯ ಕೃಷ್ಣನ ತಂದೆ ಒಂದನೆಯ ಅಮೋಘವರ್ಷ ಅರವತ್ತನಾಲ್ಕು ವರ್ಷಗಳಷ್ಟು ದೀರ್ಘ ಕಾಲ ರಾಜ್ಯಭಾರ ಮಾಡಿರುವುದು ತಿಳಿದ ವಿಷಯ ಅವನು ಸಿಂಹಾಸನದಿಂದ ಇಳಿಯುವ ವೇಳೆಗೆ ಎಂಬತ್ತು ವರ್ಷದ ವೃದ್ಧನಾಗಿದ್ದ. ಎರಡನೆಯ ಕೃಷ್ಣ ಮುವತ್ತನೆಯ ವಯಸ್ಸಿನಲ್ಲಿ ಪಟ್ಟಕೇರಿದ್ದರೂ ಮುವತ್ತನಾಲ್ಕು ವರ್ಷ ಆಡಳಿತಾವಧಿಯನ್ನು ಸೇರಿಸಿದರೆ ಅರವತ್ತೈದನೆಯ ವಯಸ್ಸಿನವರೆಗೆ ರಾಜ್ಯಭಾರ ಮಾಡುತ್ತಿದ್ದನೆಂದು ಹೇಳಬಹುದು. ಮೂರನೆಯ ಇಂದ್ರ ಪಟ್ಟಕ್ಕೇರಿದಾಗ ಇಪ್ಪತ್ತು ವರ್ಷದ ಯುವಕನೆಂದರೂ ಜಗತ್ತುಂಗ ನಲವತ್ತು ವರ್ಷದವರೆಗೂ ಬದುಕಿದ್ದನೆನ್ನಬಹುದು. ಜಗತ್ತುಂಗನ ಆಳ್ವಿಕೆಯ ಕಾಲವನ್ನು ಕ್ರಿ.ಶ. ೮೯೦–೯೧೦ರವರೆಗೂ ನಿಗದಿಗೋಲಿಸಬಹುದೆನಿಸುತ್ತದೆ.

'ಸ್ವಸ್ತ್ಯಕಾಲವರ್ಷ ಪೃಥ್ವೀವಲ್ಲಭ ತತ್ಪಾದಪದ್ಮೋಪಜೀವಿ ಜಗತ್ತುಂಗನು ಎಡದೊರೆ ಇಚ್ಛಾಸಿರಮನಣುಗ ಜೀವಿತಮಾಗಿ ಆಳುತ್ತಿದ್ದಾಗ ವಿರೋಧಿಕೃತ ಸಂವತ್ಸರಂ ಪ್ರವರ್ತಿಸೆ' ಎಂಬ ಉಲ್ಲೇಖ ಮೇಲಿನ ಊಹೆಯನ್ನು ಸಮರ್ಥಿಸುತ್ತದೆ.

## ಮೂರನೆಯ ಇಂದ್ರ (ಕ್ರಿ.ಶ. ೮೮೯–೯೨೮)

ಕ್ರಿ.ಶ. ೯೧೫ ರ ಅಂತ್ಯದಲ್ಲಿ ಎರಡನೆಯ ಕೃಷ್ಣನು ಮರಣ ಹೊಂದಿದಾಗ, ಮೊಮ್ಮಗನಾದ ಮೂರನೆಯ ಇಂದ್ರನು ಪಟ್ಟಕ್ಕೇರಿದನು. ಇವನ ತಂದೆ ಜಗತ್ತುಂಗ

ಮೊದಲೇ ಮರಣ ಹೊಂದಿದ್ದರಿಂದ ಇಂದ್ರನಿಗೆ ರಾಜ್ಯವು ಲಭಿಸಿತು. ಇವನಿಗೆ ನಿತ್ಯವರ್ಷ, ರಟ್ಟಕಂದರ್ಪ, ಕೀರ್ತಿನಾರಾಯಣ ಮತ್ತು ರಾಜಮಾರ್ತಾಂಡ ಎಂಬ ಬಿರುದುಗಳಿದ್ದವು. ಕ್ರಿ.ಶ. ೯೧೫ ರಲ್ಲಿ ಕುರುಂದಕ ಎಂಬಲ್ಲಿ ಪಟ್ಟಬಂಧೋತ್ಸವವನ್ನು ಮಾಡಿಕೊಂಡನೆಂದು ಬಾಗುಮ್ರಾ ಶಾಸನದಲ್ಲಿ ಹೇಳಿದೆ. (JBBRAS, Vol XVIII, PP 253) ಕುರುಂದಕವು ಪವಿತ್ರ ಕ್ಷೇತ್ರವಾಗಿತ್ತು. ಇಲ್ಲಿ ಪಟ್ಟಬಂಧೋತ್ಸವವನ್ನು ಮಾಡಿಕೊಳ್ಳುವುದಕ್ಕೆ ಮೊದಲು ಮಳಖೇಡದಲ್ಲಿ ಸಿಂಹಾಸನವನ್ನೇರಿರಬೇಕು. ತಮ್ಮ ರಾಜಧಾನಿಯಿದ್ದರೂ ಬೇರೆಡೆ ಪಟ್ಟಬಂಧೋತ್ಸವ ಮಾಡಿಕೊಳ್ಳುವ ಸಂಪ್ರದಾಯ ಬಾದಾಮಿ ಚಲುಕ್ಯರಲ್ಲೂ ಇತ್ತೆಂದು ನೆನೆಪಿಸಿಕೊಳ್ಳಬಹುದಾಗಿದೆ. ತನ್ನ ಪಟ್ಟಬಂಧೋತ್ಸವಕ್ಕೆ ಮುಂಚೆಯೇ ಇಂದ್ರನು ಶತ್ರುಗಳನ್ನು ಸೋಲಿಸಿದ್ದನೆಂದು ಬಾಗುಮ್ರ ಶಾಸನದಲ್ಲಿ ಹೇಳಿದೆ.

ಮೂರನೆಯ ಇಂದ್ರನ ಶಾಸನಗಳು ಕ್ರಿ.ಶ.೮೯೯ ರಲ್ಲೇ ಸಿಕ್ಕಿರುವುದರಿಂದ, ಇವನು ಸಿಂಹಾಸನವನ್ನೇರುವುದಕ್ಕಿಂತ ೨೬ ವರ್ಷ ಮುಂಚೆಯೇ ಶಾಸನಗಳು ಸಿಗುತ್ತವೆ. ರಾಷ್ಟ್ರಕೂಟರ ಇತಿಹಾಸದಲ್ಲಿ ಉತ್ತರ ಭಾರತದ ಮೇಲೆ ದಾಳಿ ಮಾಡಿ ವಿಜಯ ಹೊಂದಿದ್ದು ಮೂರನೆಯ ಇಂದ್ರನ ಸಾಧನೆಯಾಗಿದೆ. ಪ್ರತೀಹಾರ ಭೋಜ ಮತ್ತು ಮಹೀಪಾಲರಲ್ಲಿ ಅಂತ:ಕಲಹವು ನಡೆಯುತ್ತಿದ್ದಾಗ ಇಂದ್ರನು ಕನೌಜಿಗೆ ಮುತ್ತಿಗೆ ಹಾಕಿದನು. ಆಗ ನಡೆದ ಯುದ್ಧದಲ್ಲಿ ಮಹೀಪಾಲನು ರಾಜ್ಯವನ್ನು ಬಿಟ್ಟು ಓಡಿಹೋಗಬೇಕಾಯಿತು. ಕನೌಜದ ಮೇಲೆ ನಡೆದ ದಂಡಯಾತ್ರೆಯಲ್ಲಿ ಮೂರನೆಯ ಇಂದ್ರನಿಗೆ ಸಹಾಯಕ್ಕಾಗಿ ಬಂದವರಲ್ಲಿ ವೇಮುಲವಾಡದ ಚಾಲುಕ್ಯ ದೊರೆ ಇಮ್ಮಡಿ ನರಸಿಂಹನು ಪ್ರಮುಖನಾಗಿದ್ದನು. ಈ ಯುದ್ಧದ ಬಗ್ಗೆ ಪಂಪಭಾರತದಲ್ಲಿ ಉಲ್ಲೇಖವಿದೆ. ಇಂದ್ರನು ಕನೌಜದಲ್ಲಿ ಹೆಚ್ಚು ಕಾಲ ಇರಲು ಸಾಧ್ಯವಿರಲಿಲ್ಲ. ಆದ್ದರಿಂದ ಹಿಂದಿರುಗಿದನು. ಮೂರನೆಯ ಇಂದ್ರನು ಹಿಂದಿರುಗಿದ ನಂತರ ಕನೌಜದ ಮಹೀಪಾಲನು ಚಂದೇಲ ವಂಶದ ದೊರೆ ಹರ್ಷನ ಸಹಾಯದಿಂದ ರಾಜ್ಯವನ್ನು ಮತ್ತೆ ಗಳಿಸಿದನು. ಈ ಸಂದರ್ಭದಲ್ಲಿ ಯುದ್ಧವೇನಾದರೂ ನಡೆಯಿತೇ? ಯುದ್ಧ ನಡೆದ ಸ್ಥಳ ಯಾವುದು? ಎಂದು ಸ್ಪಷ್ಟವಾಗಿ ತಿಳಿಯಲು ಆಧಾರಗಳು ಸಾಲವು.

ಕನೌಜದ ಮೇಲೆ ದಾಳಿ ಮಾಡುವ ಮೊದಲೇ ಮೂರನೆಯ ಇಂದ್ರನು ಪರಮಾರರ ಮೇಲೆ ದಾಳಿ ಮಾಡಿ ಉಪೇಂದ್ರನನ್ನು ಸೋಲಿಸಿ, ನಾಸಿಕ್ ಜಿಲ್ಲೆಯ

ಗೋವರ್ಧನವನ್ನು ವಶಪಡಿಸಿಕೊಂಡಿದ್ದನು. ನಂತರ ವೆಂಗಿಯಲ್ಲಿ ನಡೆದ ಅಂತಃಕಲಹದಲ್ಲಿ ತಲೆಹಾಕಿದರೂ ಏನೂ ಪ್ರಯೋಜನವಾಗಲಿಲ್ಲ. ಇದಲ್ಲದೇ ಸಣ್ಣಪುಟ್ಟ ಹೋರಾಟಗಳು, ಯುದ್ಧಗಳು ನಡೆಯುತ್ತಲೇ ಇದ್ದವೆಂದು ಶಾಸನಗಳಿಂದ ತಿಳಿದುಬರುತ್ತದೆ. ಇಂದ್ರವಲ್ಲಭನ ಆಳ್ವಿಕೆಯ ಕಾಲದಲ್ಲಿ ಮಹಾಸಾಮಂತನಾಗಿದ್ದ ಬಿರುದಱ ಱೊಟ್ಟ, ಬಿರುದರ ಮೈಕುತ್ತಿ ಬಿಜ್ಜನು ಕೋಗಳಿ – ೫೦೦, ಮಾಸಿಯವಾಡಿ – ೧೪೦ ಪ್ರದೇಶಗಳನ್ನು ಆಳುತ್ತಿದ್ದನು. ಕದಂಬಕುಲದ ಕಣ್ಣ ವಾರ ಮುದುದರ ದೇವಯ್ಯನ ಮಗ ಮಾಳಯ, ಕುಡಿಯರ ಅರ್ಜುನ, ನೊಳಂಬರ ಅಯ್ಯಪದೇವನ ಮಗ ಅಣ್ಣಿಗನು ಪಡುಗಲ್ಲನ್ನು ಮುತ್ತಿದಾಗ ಮಾಳಯ್ಯನು ಹೋರಾಡಿ ಸತ್ತಿದ್ದನ್ನು ದಾಖಲಿಸುತ್ತದೆ. (SII, Vol IX, Pt.I, No.57, 922 AD)

ಲಕ್ಷ್ಮೇಪುರದ ಶಾಸನದಲ್ಲಿ (ARIE., 1947 – 48, No. B 203, 922 AD) ಬನವಾಸಿ ಪನ್ನಿರ್ಚ್ಛಾಸಿರವನ್ನು ಎರಡುಭಾಗ ಮಾಡಿ, ಬಂಕೇಯ ಮತ್ತು ಶಂಕರಗಂಡರು ಆಳುತ್ತಿದ್ದರು. ಕದಂಬಕುಲದ ಅಜವರ್ಮರಸನು ನಾಡ ನಾಪ್ಗಾವುಂಡನಾಗಿದ್ದನು. ಅಣ್ಣದಿಂಬರು ಅಮ್ಮುಗೆಯ ತಿಳಿಗವಳ್ಳಿಯ, ಕಮ್ಮಾರ, ಹಲಗಟ್ಟೆಯ ಬವರಕ್ಕೆ ಮೂವತ್ತಿರ್ಚ್ಛಾಸಿರ ಮಾಸೆರ ಮಡಿದಲ್ಲಿ (?) ಕೇಸಂಗೆಱಿಯ ಬಣ್ಣ ಗೋವಿಗನು ಮಾಳೋಜದಾರದಲ್ಲಿ ಸತ್ತನೆಂದು ತಿಳಿಸುತ್ತದೆ. ಈ ವಾಕ್ಯದ ಅರ್ಥ ಸ್ಪಷ್ಟವಾಗುವುದಿಲ್ಲ. ಖಂಡೇಬಾಗೂರು ಶಾಸನದಲ್ಲಿ (ARIE. 1958-59, No.B-565, 924AD) ಮಹಾಸಾಮಂತ ಶಂಕರಗಂಡನು ಬನವಾಸಿ ೧೨೦೦೦ ವನ್ನು ಆಳುತ್ತಿದ್ದಾಗ, ಸೋಮರಾಜ ಭಟ್ಟಾರನೆಂಬ ವ್ಯಕ್ತಿ ಜಮೀನನ್ನು ದಾನ ಕೊಟ್ಟಿದ್ದನ್ನು ದಾಖಲಿಸುತ್ತದೆ. ಹಾವಣಗಿಯ ಶಾಸನವು (ARIE, 1949-50, No.B-86) ಇಂದ್ರನ ಆಳ್ವಿಕೆಯಲ್ಲಿ ಸಾಮಂತಾಧಿಪತಿಯಾಗಿದ್ದ ಶಂಕರಗಂಡನು ಬನವಾಸಿ ನಾಡನ್ನು ಆಳುತ್ತಿದ್ದನು. ಅವನಿಗೆ ಜಯಧೀರ, ಭುವನೈಕರಾಮ, ಅಭಿಮಾನಧವಳ ಮುಂತಾದ ಬಿರುದುಗಳಿದ್ದವು ಎಂದು ತಿಳಿಸುತ್ತದೆ. ಮೇಲೆ ಉಲ್ಲೇಖಿತ ಶಂಕರಗಂಡನಿಗೆ ರಟ್ಟರ ಮೇರು ಎಂಬ ಬಿರುದಿದ್ದುದನ್ನು ಉಲ್ಲೇಖಿಸಿದೆ (ARIE, 1949-50, No. B-90). ತಿರುಮೆಲ್ಲದ ಶಾಸನದಲ್ಲಿ (ARIE, 1949-50, No. B-277) ಇಂದ್ರನ ಸೇನಾನಿಯಾಗಿದ್ದ ಪೊನ್ನಿಗನನ್ನು ಹೆಸರಿಸಿ, ಅವನ ಶೌರ್ಯದ ಬಗ್ಗೆ ತಿಳಿಸುತ್ತದೆ.

ಬಾಗಾಳಿ ಶಾಸನವು (SII, Vol. IX, Part I, No. 59) ಲತ್ತಲೂರಪುರ ಪರಮೇಶ್ವರ, ಗರುಡ ಧ್ವಜಗಳನ್ನು ಉಲ್ಲೇಖಿಸುತ್ತದೆ. ಕಾಮಗೊಂಡನಹಳ್ಳಿಯ ಶಾಸನದಲ್ಲಿ (EC. Vol. XII, No. Si 27) ಇಂದ್ರರಾಜನ ಆಳ್ವಿಕೆಯಲ್ಲಿ ಯುದ್ಧವೊಂದು ನಡೆದಾಗ, ಹೋರಾಡಿದ ವೀರ ಪೊಱಗನ ಗುಣಗಳನ್ನು ವರ್ಣಿಸುತ್ತದೆ. ಈತ ದೊರೆಯು ಮೆಚ್ಚುವಂತೆ ಹೋರಾಡಿದನು. ಇವನಿಗೆ ವೀರರವೀರ, ಗಿಡೆಗಳಾಭರಣ, ನೆಡಿಕಲ್ಲ ಅಸುವನುಂ, ಎಚಿವಬೆಡೆಂಗನೆಂಬ ಬಿರುದುಗಳಿದ್ದುದನ್ನು ಉಲ್ಲೇಖಿಸಿದೆ. ಚಿತ್ರಭಾನು ಸಂವತ್ಸರ ಚೈತ್ರ ಅಷ್ಟಮಿ ಭಾನುವಾರದಂದು ಇಂದ್ರರಾಜನು ನೋಂಪಿಯನ್ನು ನೋಂತನು ಎಂದು ದಾಖಲಿಸುತ್ತದೆ.

ನಾಲ್ಕನೆಯ ಗೋವಿಂದನ ಕ್ಯಾಂಬೆ ಶಾಸನದಲ್ಲಿ (EI, Vol. VII, pp26 ff and plates, 930AD) ಮೂರನೆಯ ಇಂದ್ರನು ಮೇರು ಅಥವಾ ಮಹೋದಯವನ್ನು ನಾಶಮಾಡಿದನೆಂದು ಉಲ್ಲೇಖಿಸಿದೆ. ಡಾ|| ಭಗವಾನ್‌ಲಾಲ್ ಇಂದ್ರಜೀಯವರು ಮೇರುವನ್ನು ಕಾಠೇವಾಡದ ಮೇರ ಅಥವಾ ಮೇಹ್ರರಾಜನಾಗಿರಬಹುದೆಂದು ಹೇಳಿದ್ದಾರೆ(B.G. Vol. I, Part I). ಮೇರು ಮಹೋದಯಗಳು (ಕನೌಜ್) ಒಂದೇ ಎಂದು ಕಿಲ್‌ಹಾರ್ನರು ಅಹಿಪ್ರಾಯಪಟ್ಟಿದ್ದಾರೆ. (ಕರ್ನಾಟಕ ಇತಿಹಾಸ, ಪು ೩೩೮). ಮಿರಾಷಿಯವರು ಬ್ರಹ್ಮಾನಂದ ದೇಶಪಾಂಡೆ ಮುಂತಾದವರು ಇದರ ಬಗ್ಗೆ ವಿವಿಧ ಅಭಿಪ್ರಾಯಗಳನ್ನು ಕೊಟ್ಟಿದ್ದಾರೆ.

ಸಂಯಾನ ತಾಮ್ರ ಶಾಸನದಲ್ಲಿ ತಾಜಿಕರು (EI. Vol. XXXII, pp45 ff, 926AD) ಅವನ ಮಂಡಲಾಧಿಕಾರಿಗಳಾಗಿದ್ದರೆಂದು ತಿಳಿಸುತ್ತದೆ. ಕ್ರಿ.ಶ. ೯೨೬ ರ ಈ ಶಾಸನದಲ್ಲಿ ಎರಡನೆಯ ಕೃಷ್ಣನಿಂದ ಸಂಜಾನ ಮಂಡಲವನ್ನು ಪಡೆದು ಅದನ್ನು ತಾಜಿಕ ವಂಶದ ಮಧುಮತಿಯು (ಮಹಮ್ಮದ) ಆಳುತ್ತಿದ್ದನೆಂದು ತಿಳಿದುಬರುತ್ತದೆ. ಈ ಮಧುಮತಿಯು ಸುಗತಿಪನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನೆಂದು ತಿಳಿದುಬರುತ್ತದೆ. ಮೂರನೆಯ ಇಂದ್ರನ ಕಾಲದಲ್ಲಿಯೂ ಈತ ಇದ್ದನೆಂದು ತಿಳಿದುಬರುತ್ತದೆ. ಈತನ ತಂದೆ ಯಾರಹಾರ ಅಥವಾ ಹಿಯಾರಹಾರನೆಂದು

ತಿಳಿದುಬರುತ್ತದೆ. ಇದರಿಂದ ರಾಷ್ಟ್ರಕೂಟರ ಕಾಲದಲ್ಲಿ ಮುಸಲ್ಮಾನರೂ ಆಳ್ವಿಕೆ ನಡೆಸಿದ್ದರೆಂದು ತಿಳಿದುಬರುತ್ತದೆ.

ವೆಂಗಿಯ ಜೊತೆ ಯುದ್ಧಗಳು ಇಂದ್ರನ ಕಾಲದಲ್ಲಿಯೂ ಮುಂದುವರೆದಿತ್ತು. ಕ್ರಿ.ಶ. ೯೨೬ ರ ನಂತರ ಇಂದ್ರನು ಮರಣ ಹೊಂದಿದನು.

## ಅಮೋಘ ವರ್ಷ– II (ಕ್ರಿ.ಶ.೯೨೮–೯೨೯)

ರಾಷ್ಟ್ರಕೂಟ ದೊರೆಗಳಲ್ಲಿ ಅತ್ಯಂತ ಕನಿಷ್ಟ ಸಮಯ ಆಳಿದವನು ಇಮ್ಮಡಿ ಅಮೋಘ ವರ್ಷ. ಈತನ ಆಳ್ವಿಕೆ ಒಂದೇ ವರ್ಷದಲ್ಲಿ ಮುಗಿಯಿತು. ಇದಕ್ಕೆ ಕಾರಣಗಳು ಹಲವಾರಿರಬಹುದು. ಆದರೆ ಸ್ಪಷ್ಟವಾದ ಕಾರಣವನ್ನು ತಿಳಿಯಲು ನಾಲ್ಕನೆಯ ಗೋವಿಂದನ ಶಾಸನಗಳು ಸಹಾಯ ಮಾಡುತ್ತವೆ. ಅವನ ತಮ್ಮ ನಾಲ್ಕನೆಯ ಗೋವಿಂದನು ಬಲವಂತವಾಗಿ ಸಿಂಹಾಸನವನ್ನು ಕಸಿದುಕೊಂಡನೆಂದು ಆತನ ಶಾಸನಗಳ ಹೇಳಿಕೆಯಿಂದ ತಿಳಿದು ಬರುತ್ತದೆ.

ಕ್ರಿ.ಶ ೯೨೮–೨೯ರ ಶೀರಂಜ ಶಾಸನವು (SII. XVIII.No.24) ಇಮ್ಮಡಿ ಅಮೋಘ ವರ್ಷನ ಆಳ್ವಿಕೆಯನ್ನು ಉಲೇಖಿಸುತ್ತದೆ. ಅವನಿಗೆ ಪೃಥ್ವೀವಲ್ಲಭ ಎಂಬ ಬಿರುದು ಇದ್ದುದ್ದನ್ನು ದಾಖಲಿಸುತ್ತದೆ. ಅವನು ಆಳುತ್ತಿರುವಾಗ ಕಲಿವಿಟ್ಟರಸನು ಬೆಳ್ವೊಲ ೩೦೦ ಪ್ರದೇಶವನ್ನು ಆಳುತ್ತಿದ್ದುದನ್ನು ದಾಖಲಿಸುತ್ತದೆ. ಯುದ್ಧ ನಡೆದಿರುವ ವಿವರಗಳು ನಾಶವಾಗಿದ್ದು ವೀರನೊಬ್ಬ ಸ್ವರ್ಗಪಾಪ್ತನಾದನೆಂದು ಉಲ್ಲೇಖಿಸುತ್ತದೆ. ಇಮ್ಮಡಿ ಅಮೋಘವರ್ಷನ ಬಗ್ಗೆ ಇದಕ್ಕಿಂತ ಹೆಚ್ಚಿನ ಮಾಹಿತಿಯು ದೊರಕುವುದಿಲ್ಲ. ಇವನ ಕಾಲವನ್ನು ಕ್ರಿ.ಶ. ೯೧೪ ರಿಂದ ೯೨೪ ರ ವರೆಗೆ ಎಂದು ಗುರುತಿಸಿದ್ದಾರೆ. ಯಾವ ಅಧಾರದ ಮೇಲೆ ಹದಿನ್ಯೆದು ವರ್ಷಗಳಷ್ಟು ದೀರ್ಘಕಾಲ ಕೊಟ್ಟಿದ್ದಾರೆ ತಿಳಿಯದು.

## ಗೋವಿಂದ IV (ಕ್ರಿ.ಶ. ೯೧೮ – ೯೩೬)

ಮೂರನೆಯ ಇಂದ್ರನ ತಮ್ಮನಾದ ನಾಲ್ಕನೆಯ ಗೋವಿಂದನು ತನ್ನಣ್ಣ ಎರಡನೆಯ ಅಮೋಘವರ್ಷನಿಂದ ರಾಜ್ಯವನ್ನು ಕಿತ್ತುಕೊಂಡನೆಂದು ಎಲ್ಲರೂ ಅಭಿಪ್ರಾಯಪಡುತ್ತಾರೆ. ಶಾಸನಗಳು ಈತನನ್ನು ಹೊಗಳಿದರೂ ಈತ ಹೇಳಿಕೊಳ್ಳುವಂತಹ ಸಾಧನೆಯೇನ್ನೇನೂ ಮಾಡಲಿಲ್ಲ. ಚಾಲುಕ್ಯ ವಂಶಕ್ಕೆ ಸೇರಿದ್ದ

ಭಾಗಿಯವ್ವ ಎಂಬಾಕೆಯು ಗೋವಿಂದನ ಪತ್ನಿಯಾಗಿದ್ದಳೆಂದು ತಿಳಿದುಬರುತ್ತದೆ. ಇವನಿಗೆ ಪ್ರಭೂತವರ್ಷ, ನೃಪತಿತ್ರಿನೇತ್ರ, ನೃಪತುಂಗ, ವಿಕ್ರಾಂತನಾರಾಯಣ, ರಟ್ಟಕಂದರ್ಪ, ಸಾಹಸಾಂಕ, ತುರಗವೆಡಂಗ ಮುಂತಾದ ಬಿರುದುಗಳಿದ್ದವು. ಸುವರ್ಣಗಳನ್ನು ಹೆಚ್ಚಾಗಿ ದಾನ ಮಾಡುತ್ತಿದ್ದುದರಿಂದ ಸುವರ್ಣವರ್ಷ ಎಂಬ ಬಿರುದೂ ಇತ್ತು.

ಅಧಿಕಾರದಲ್ಲಿದ್ದರೂ, ಗೋವಿಂದನಿಗೇ ತಿಳಿಯದ ರೀತಿಯಲ್ಲಿ ಒಳಸಂಚು ನಡೆಯುತ್ತಿತ್ತೆಂದು ತಿಳಿದುಬರುತ್ತದೆ. ವೆಂಗಿಯಲ್ಲಿ ಯುದ್ಧಮಲ್ಲನನ್ನು ಪಕ್ಕಕ್ಕೆ ತಳ್ಳಿ ಭೀಮನು ಆಳತೊಡಗಿದಾಗ, ಐದನೆಯ ವಿಜಯಾದಿತ್ಯನು ಸಿಂಹಾಸನವನ್ನು ಪಡೆಯಲು ಪ್ರಯತ್ನಿಸಿದನು. ಆಗ ವಿಜಯಾದಿತ್ಯನಿಗೆ ಸಹಾಯ ಮಾಡುವುದಕ್ಕೆ ವೇಮುಲವಾಡದ ಅರಿಕೇಸರಿಯ ಮೇಲೆ ವಿನಾಕಾರಣ ದಂಡೆತ್ತಿಕೊಂಡು ಹೋದನು. ಈತನಿಗೆ ತನ್ನ ವಿರುದ್ಧ ನಡೆಯುತ್ತಿದ್ದ ಸಂಚುಗಳು ತಿಳಿಯಲಿಲ್ಲ. ಮೂರನೆಯ ಇಂದ್ರನ ಮಲಸೋದರನಾದ ಮೂರನೆಯ ಅಮೋಘವರ್ಷನನ್ನು ಸಿಂಹಾಸನದ ಮೇಲೆ ಕೂಡಿಸುವ ಪ್ರಯತ್ನವೂ ನಡೆಯುತ್ತಿತ್ತು. ಶರಣಾಗತನಾಗಿದ್ದ ವಿಜಯಾದಿತ್ಯನನ್ನು ಅರಿಕೇಸರಿಯು ಬಿಡದೇ ಹೋಗಿದ್ದು ಕೂಡ ಈ ಒಳಸಂಚಿನ ಒಂದು ಭಾಗವೇ ಆಗಿತ್ತು. ಅರಿಕೇಸರಿ ಮತ್ತು ಗಂಗ ಇಮ್ಮಡಿ ಬೂತುಗನ ಮುಂದಾಳತ್ವದಲ್ಲಿ ದಂಗೆಯು ಪ್ರಾರಂಭವಾದಾಗ ಗೋವಿಂದನಿಗೆ ಎದುರಿಸಲು ಸಾಧ್ಯವಾಗಲಿಲ್ಲ. ಸೋಲುವುದರ ಜೊತೆಗೆ ಸಾವಿಗೀಡಾಗುತ್ತಾನೆ.

ಕ್ರಿ.ಶ.ಸುಮಾರು ೯೩೦ರ ನಂದಿಗುಡಿ ಶಾಸನವು (EC., vol XI, No. DG.119) ನಾಲ್ಕನೆಯ ಗೋವಿಂದನಿಗೆ ಸುವರ್ಣವರ್ಷನೆಂಬ ಬಿರುದು ಇದ್ದುದನ್ನು ಉಲ್ಲೇಖಿಸುತ್ತದೆ. ಬದ್ದೆಗನು ಕದಂಬಳಿಗೆ–೧೦೦೦ವನ್ನು ಆಳುತ್ತಿದ್ದನು. ಗಂಗವಂಶದ ಚನ್ದಿ ಎಂಬ ವ್ಯಕ್ತಿಯೂ ಆಳ್ವಿಕೆ ನಡೆಸುತ್ತಿದ್ದನೆಂಬ ಉಲ್ಲೇಖವಿದೆ. ಕೀಱುಗಣಿಯಾದ ವ್ಯಕ್ತಿಗೆ ಪನ್ನಿರ್ಮತ್ತರು ನೆಲವನ್ನು ಸೂಳೆವಳ್ಳದ ಬಳಿ ಕೊಟ್ಟಿದ್ದನ್ನು ದಾಖಲಿಸುತ್ತದೆ. ಇದೇ ಕಾಲದ ದೊಡ್ಡಿಮಕಳ ಶಾಸನವು (SII, vol IX, pt.I, no. 60) ಗೋಯಿಂದರ ವಲ್ಲಭನು ಆಳ್ವಿಕೆ ನಡೆಸುತ್ತಿದ್ದಾಗ, ಆತನ ಮಹಾಸಾಮಂತ ಕನ್ನರನು ಸಿಂಧವಾಡಿ–೧೦೦೦ವನ್ನು ಆಳುತ್ತಿದ್ದನು. ಆ ಸಮಯದಲ್ಲಿ ನೀಡಿದ ಕೆಲವು ದಾನಗಳನ್ನು ಶಾಸನವು ಉಲ್ಲೇಖಿಸಿದೆ. ಇದೇ ಕಾಲದ ಅರಳೀಕಟ್ಟೆಯ ಅಪೂರ್ಣ ಶಾಸನವೊಂದು (ARIE.,

1958-59, No. B 536) ಮಾಟೂರ ವಂಶ ಮತ್ತು ಬ್ರಹ್ಮಕ್ಷತ್ರಕುಲದ ಮಾಚಿಯರಸನು ಮಹಾಸಾಮಂತನಾಗಿದ್ದುದನ್ನು ಉಲ್ಲೇಖಿಸುತ್ತದೆ. ಇದೇ ಸ್ಥಳದ ಇನ್ನೊಂದು ಶಾಸನವು (ARIE, 1958-59, No.B 538) ಸಹ ಮಾಟೂರ ವಂಶದ ಮಾಹಾಸಾಮಂತ ಮಾಚಿಯರಸನನ್ನು ಮತ್ತು ಮಾಚಿಯರಸನಿಗೆ ಸಾಮಂತನಾಗಿದ್ದ ಪೆರ್ಗಡೆ ಅರಿವರ್ಮನನ್ನು ಉಲ್ಲೇಖಿಸುತ್ತದೆ.

ಕ್ರಿ.ಶ. ೯೩೧ರ ತಂಬೂರು ಶಾಸನವು (ARIE., 1964-65, No. B 400) ತಮ್ಮಪುರದ ಅಣ್ಣಿಗನು ಹೋರಾಟದಲ್ಲಿ ಮಡಿದುದನ್ನು ದಾಖಲಿಸುತ್ತದೆ. ಆ ಕಾಲದಲ್ಲಿ ಕನ್ನಹ ಮಹಾರಾಜನು ಪಲಸಿಗೆ–೧೨೦೦೦ವನ್ನು ಆಳುತ್ತಿದ್ದನೆಂದು ತಿಳಿದುಬರುತ್ತದೆ. ಇದೇ ಕಾಲದ ಚಿರಸ್ತಹಳ್ಳಿ ಶಾಸನವು (SII., vol IX, Pt. I, No.61) ಗೊಯಿಂದರವಲ್ಲಭನು ಪೃಥ್ವಿಯನ್ನು ಆಳುತ್ತಿದ್ದಾಗ, ಅಯ್ಯಪಯ್ಯನು ಮಾಸವಾಡಿ ಮತ್ತು ಕೋಗಳಿನಾಡನ್ನು ಆಳುತ್ತಿದ್ದನು. ಪನ್ನಿರ್ಬ(?) [ಹನ್ನೆರಡು(?)] ಮಹಾಸಾಮಂತ ಲಚ್ಚಕೊಂಗಣಿಮ್ಬ ನಾಚಿಗ್ಗಾವುಂಡ, ಮಾಚಮನು ಆ ಊರ ಅಳಿವಿನಲ್ಲಿ ಶ್ರೀ ಮಣ್ಡಿಯಪಳ್ಳಿಯ ಸಿಂಗಮದೇವ ಎಱಿಯಮನ ಮಗ ಪಡಿಗನೂ ದಂಡಿನಲ್ಲಿ ಹೋರಾಡಿ ಮಡಿದುದನ್ನು ಉಲ್ಲೇಖಿಸುತ್ತದೆ. ಈ ಅಯ್ಯಪದೇವ ನೊಳಂಬ ವಂಶದ ಮಹೇಂದ್ರನ ಮಗ ಕ್ರಿ.ಶ. ೯೩೨ರ ಹಾಳಹರವಿ ಶಾಸನವು (SII., vol IX, Pt. I, No.62) ನಿತ್ಯವರ್ಷನು ರಾಜ್ಯಭಾರ ಮಾಡುತ್ತಿದ್ದಾಗ ಸಿಂಧವಾಡಿ–೧೦೦೦ವನ್ನು ಕನ್ನರನೆಂಬ ಸಾಮಂತನು ಆಳುತ್ತಿದ್ದನು. ಆಗ ಚಂದಿಯಬ್ಬೆಯು ನಂದಿಪುರದಲ್ಲಿ ಬಸದಿ ಮಾಡಿಸಿ, ಭೂದಾನ, ಸುವರ್ಣದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ.

ಕ್ರಿ.ಶ. ಸುಮಾರು ೯೩೩ರ ಕುರುಕುಂಟೆ ಶಾಸನವು (ARIE., 1976-77, No.B-145) ಕುಳುಕುಂಟೆಯ ಮಹಾಜನರನ್ನು ಮತ್ತು ಮುಡಿಲೆಯ ಭರತಯ್ಯ, ಅಪ್ಪುತಯ್ಯ, ನಿರಚನ್ದ್ರ, ನಾವುಗ ಮತ್ತಿತರರನ್ನು ಹೆಸರಿಸುತ್ತದೆ. ಇದೇ ಕಾಲದ ಸಾವಂತವಾಡಿ ಶಾಸನವನ್ನು ಮಾನ್ಯಖೇಟದಿಂದ ಹೊರಡಿಸಲಾಗಿದೆ. ರಾಮಪುರಿ–೭೦೦ರಲ್ಲಿದ್ದ ಲೋಹಗ್ರಾಮವನ್ನು ಕೇಶವ ದೀಕ್ಷಿತನಿಗೆ, ಕರರಹಿತವನ್ನಾಗಿ ಮಾಡಿ ಭೂದಾನವನ್ನು ಕೊಟ್ಟಿದ್ದನ್ನು ಉಲ್ಲೇಖಿಸಿದೆ. ಕ್ರಿ.ಶ.೯೩೫ರ ಸೊರಟೂರು ಶಾಸನವು (EC., Vol III, No. HL-21) ಗೋವಿಂದರವಲ್ಲಭನ ಆಳ್ವಿಕೆಯಲ್ಲಿ, ಸಾಂತರಸನು ಬನವಾಸಿ

ಪನ್ನಿರ್ಚ್ಛಾಸಿರವನ್ನು ಆಳುತ್ತಿದ್ದಾಗ, ಆಗ ಸಂಭವಿಸಿದ ವ್ಯಕ್ತಿಯ ಮರಣವನ್ನು ದಾಖಲಿಸುತ್ತದೆ. ಇದೇ ಕಾಲದ ಇದೇ ಪ್ರದೇಶದ ಇನ್ನೊಂದು ಶಾಸನವು (EC., vol III, HL-22) ಸುವರ್ಣವರ್ಷನು ಆಳ್ವಿಕೆ ನಡೆಸುತ್ತಿದ್ದಾಗ ಬನವಾಸಿ ಪನ್ನಿರ್ಚ್ಛಾಸಿರವನ್ನು ಛಲದಂಕರಾಮ ಸಾಂತರಸನು ಆಳುತ್ತಿದ್ದನು. ರಟ್ಟಪಳ್ಳಿಯನ್ನು ಬಹುಶಃ ಪೊಲಗನು ನೋಡಿಕೊಳ್ಳುತ್ತಿದನು. ಆ ಸಮಯದಲ್ಲಿ ವ್ಯಕ್ತಿಯೊಬ್ಬ ಸತ್ತಿದ್ದನ್ನು ಉಲ್ಲೇಖಿಸುತ್ತದೆ. ಇದೇ ಕಾಲದ ಸೊರಟೂರು ಶಾಸನವು (EC., Vol III, No. HL-23) ಮೇಲಿನ ಶಾಸನದ ವಿವರವನ್ನೇ ಕೊಡುತ್ತದೆ. ಸ್ವಲ್ಪ ಹೆಚ್ಚಿನ ವಿವರ ಎಂದರೆ ರಟ್ಟಪಳ್ಳಿಯ ಪೊಲಗನು ಕುಂದಗಾವುಂಡನ ಮುಂದೆ ನಿಂತು ಹೋರಾಡಿ ಸತ್ತನು ಮತ್ತು ಆತನ ತಾಯಿ ತಿರಿಯಕ್ಕನು ಕಲ್ಲನ್ನು ನೆಡಿಸಿದಳು ಎಂಬ ವಿವರಗಳಿವೆ.

ಕ್ರಿ.ಶ.೯೩೬ರ ತಾಳಗುಂದ ಶಾಸನದಲ್ಲಿ (EC., Vol VII, Pt I, No. SK 194) ಸಾಂತರ ಪೆರ್ಗಡೆಯನ್ನು ಉಲ್ಲೇಖಿಸಿದೆ ಮತ್ತು ಮಹಾಮಾತ್ಯನೊಬ್ಬನನ್ನು ಹೊಗಳುತ್ತದೆ. ನನ್ನಿವೆ(ಡಂ)ಗ, ಬೃಹಸ್ಪತಿ ಸಮಾನನಾದ ಪೆರ್ಗಡೆ ಪುಳಿದ್ಯುಮ್ಮನು ತಾಣಗುನ್ದೂರಿನಲ್ಲಿ(ತಾಳಗುಂದ) ಕೆರೆಕಟ್ಟಿಸಿ, ದಾನಗಳನ್ನು ನೀಡಿದ್ದನ್ನು ದಾಖಲಿಸುತ್ತದೆ. ಇದೇ ಸ್ಥಳದ ಇನ್ನೊಂದು ಶಾಸನದ (EC Vol VII, No. SK 322) ಪಾಠವು ಒಂದೇ ಆಗಿದೆ. ಕಾಲದ ಉಲ್ಲೇಖವಿಲ್ಲದ ಅರಳೀಕಟ್ಟೆಯ ಶಾಸನವು (ARIE., 1958-59, No. B 537) ಅಪೂರ್ಣವಾಗಿದೆ. ಮಾಟೂರ ವಂಶದ ಮಹಾಸಾಮಂತನನ್ನು ಉಲ್ಲೇಖಿಸುತ್ತದೆ. ಇದೇ ಸ್ಥಳದ ಇನೊಂದು ಶಾಸನದಲ್ಲಿ (ARIE., 1958-59, No. B 539) ವೀರಪುಲಿಯ ಮಗನಾದ ಮಾರಮ್ಮನ ಉಲ್ಲೇಖವಿದೆ. ಗ್ರಾಮದ ಮೇಲೆ ದಾಳಿಯ ಸಮಯದಲ್ಲಿ ಬಹುಶಃ ಈತ ಮಡಿದಿರಬಹುದು. ರೋಣದ ಶಾಸನವು (ARIE., 1984-85, No. B 540) "ಜಗದ್ವಿಖ್ಯಾತ ಕಿಷ್ಕಿಂಧಾಪುರವರೇಶ್ವರ, ಬಾಲಿವಂಶೋದ್ಭವಂ ತುರಗವೆಡಂಗಂ ಕಾಳಗಕೆ ನಡೆವುತ್ತು" ಎಂದು ಉಲ್ಲೇಖಿಸುತ್ತದೆ. ಕಿಷ್ಕಿಂಧಾಪುರವರೇಶ್ವರ, ವಾಲಿವಂಶದ ತುರುಗವೆಡಂಗ ಸಾನ್ತ್ವಯನು(?) ಕಾಳಗಕ್ಕೆ ಹೋಗುತ್ತಿರುವಾಗ (ಕಾಳಗ ನಡೆಯುತ್ತಿರುವಾಗ), ರೋಣದ ಮಹಾಜನರು 'ಮಹಾಜನರ ಕಾಲಂಕಚ್ಚು' ದಾನ ಕೊಟ್ಟಿದ್ದನ್ನು ಉಲ್ಲೇಖಿಸುತ್ತದೆ. ಇಲ್ಲಿ ಬಂದಿರುವ ಬಾಲಿವಂಶವೇ ಮಹಾಬಲಿ ವಂಶವಿರಬೇಕು. ಕಿಷ್ಕಿಂಧೆ ಬಹುಶಃ ಹಂಪೆಯ ಉತ್ತರಕ್ಕಿರುವ ಕಿಷ್ಕಿಂಧೆಯಿರಬೇಕು. ಇದು ಕಾಲದ ಉಲ್ಲೇಖವಿಲ್ಲದ ಶಾಸನವಾಗಿದೆ.

ಈತ ನಾಲ್ಕನೆಯ ಗೋವಿಂದ(ತುರುವೆಡಂಗ)ನ ಸಹಾಯಕ್ಕೆ ಬಂದ ದೊರೆಯಾಗಿರಬಹುದೆ?

ಮೇಲಿನ ಶಾಸನಗಳನ್ನು ಗಮನಿಸಿದಾಗ ಇವು ನಾಲ್ಕನೆಯ ಗೋವಿಂದನು ತನ್ನ ಮಹಾಸಾಮಂತರ ಮತ್ತು ಸಾಮಂತರ ಆಳ್ವಿಕೆಯಲ್ಲಿ ನೀಡಿದ ದಾನಶಾಸನಗಳಾಗಿವೆ. ಮತ್ತು ಸಣ್ಣ ಪುಟ್ಟ ದಾಳಿಗಳಲ್ಲಿ ಮಡಿದ ವ್ಯಕ್ತಿಗಳಿಗೆ ಹಾಕಿಸಿದ ವೀರಗಲ್ಲುಗಳು ಸಿಗುತ್ತವೆ. ಇವು ಗೋವಿಂದನ ಕಾಲದಲ್ಲಿ ನಡೆದ ಮುಖ್ಯರಾಜಕೀಯ ಚಟುವಟಿಕೆಗಳ ಬಗ್ಗೆ ಹೆಚ್ಚಿನ ಮಾಹಿತಿ ನೀಡುವುದಿಲ್ಲ. ಕೆಲವು ಶಾಸನಗಳಲ್ಲಿ ಮಾಟೂರ ವಂಶದ ಉಲ್ಲೇಖಗಳು ಬಂದಿವೆ. ರೋಣ ಶಾಸನದ ಕಿಷ್ಕಿಂಧಾಪುರವರೇಶ್ವರ, ಬಾಲಿವಂಶದ ತುರಗವೆಡಂಗನು ಯಾರೆಂದು ಸ್ಪಷ್ಟವಾಗುವುದಿಲ್ಲ. ನಾಲ್ಕನೆಯ ಗೋವಿಂದನಿಗೆ ತುರಗವೆಡಂಗ ಎಂಬ ಬಿರುದಿದ್ದರೂ ಕಿಷ್ಕಿಂಧಾಪುರವರೇಶ್ವರನಾಗುವುದು ಅಸಾಧ್ಯ.

ಇನ್ನೊಂದು ವಿಚಾರವೆಂದರೆ ಎರಡನೆಯ ಅಮೋಘವರ್ಷನು ಹದಿನೈದು ವರ್ಷ ಆಳಿರುವಂತೆ ವಿದ್ವಾಂಸರು ವಂಶಾವಳಿಯನ್ನು ನೀಡಿದ್ದಾರೆ (ಕ್ರಿ.ಶ.೯೧೪–೯೨೯). ಅಂದರೆ ಈತನ ಕಾಲದ ಒಂದೇ ಒಂದು ಶಾಸನ ಸಿಕ್ಕಿದೆ. ಶಿರುಂಜದ ಈ ಶಾಸನ (SII., vol XVIII, No.24)ವು 'ಅಮೋಘವರಿಷ ಪ್ರಿಥುವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕರ್ ರಾಜ್ಯಂಗೆಯ್ಯೆ......... ಕಲವಿಟ್ಟರಸರು ಬೆಳ್ವೊಲ ಮೂನೂಱ' ಎಂದು ಆತನ ಆಳ್ವಿಕೆ ಮತ್ತು ಆತನ ಆಳ್ವಿಕೆಯಲ್ಲಿ ಕಲವಿಟ್ಟರಸನು ಬೆಳ್ವೊಲ ಮೂನೂಱ ಭಾಗವನ್ನು ಆಳುತ್ತಿದ್ದನೆಂಬುದನ್ನು ಸೂಚಿಸುತ್ತದೆ. ಕ್ರಿ.ಶ.೯೧೪–೯೧೭ರ ಒಳಗೆ ಈತನ ಅಧಿಕಾರಾವಧಿ ಇದ್ದಿರಬಹುದೆಂದೂ, ಆ ಕಾಲದಲ್ಲಿ ಸಿಕ್ಕಿದ ಒಂದು ಶಾಸನವಿದೆಯೆಂದು ಭಾವಿಸಿದರೆ ಸಮಂಜಸವಾಗುತ್ತದೆ. ಆಗ ಎರಡನೆಯ ಅಮೋಘವರ್ಷನ ಆಡಳಿತಾವಧಿ, ತಂದೆಯ ಜೊತೆಯಲ್ಲಿ ಮೂರು ವರ್ಷವೆಂದು, ನಾಲ್ಕನೆಯ ಗೋವಿಂದನ ಆಡಳಿತಾವಧಿ ಹದಿನೆಂಟು ವರ್ಷಗಳೆಂದು ಹೇಳಬೇಕಾಗುತ್ತದೆ. ಅದಕ್ಕೆ ಪೂರಕವಾಗಿ ನಾಲ್ಕನೆಯ ಗೋವಿಂದನ ಶಾಸನಗಳು ದೊರೆಯುತ್ತವೆ. ಈ ಶಾಸನಗಳ ಆಧಾರದಿಂದ ಎರಡನೆಯ ಅಮೋಘವರ್ಷನ ಆಡಳಿತಾವಧಿಯನ್ನು ನಿರ್ಧರಿಸುವುದು ಸುಲಭವಾಗುತ್ತದೆ. ದೊರೆತಿರುವ ಶಾಸನಗಳಿಂದ ಇವನ ಕಾಲದಲ್ಲಿ ಕರ್ನಾಟಕದ ಹೊರಗೆ ಅಥವಾ ರಾಷ್ಟ್ರಕೂಟರ ಸಾಮ್ರಾಜ್ಯದ ಮೇಲೆ ನಡೆದ ಹೊರಗಿನ ದಾಳಿಗಳ ಬಗ್ಗೆ ಏನೂ ತಿಳಿಯುವುದಿಲ್ಲ.

## ಅಮೋಘ ವರ್ಷ – III (ಕ್ರಿ.ಶ.೯೩೬–೯೩೯)

ವೇಮುಲವಾಡದ ಚಾಲುಕ್ಯ ಅರಿಕೇಸರಿ ಮತ್ತು ಇಮ್ಮಡಿ ಬೂತುಗರ ನಾಯಕತ್ವದಲ್ಲಿ ನಡೆದ ಸಂಚಿಗೆ ಬಲಿಯಾದ ನಾಲ್ಕನೆಯ ಗೋವಿಂದನ ನಂತರ ಅಧಿಕಾರಕ್ಕೆ ಬಂದವನು ಮೂರನೆಯ ಅಮೋಘ ವರ್ಷ. ಈತನ ಕಾಲದ ಎರಡು ಶಾಸನಗಳು ಸಿಗುತ್ತವೆ. ನಾಲ್ಕನೆಯ ಗೋವಿಂದನು ಸಿಂಹಾಸನವನ್ನೇರಿದ ಮೇಲೆ ವಿಷಯ ಲಂಪಟನಾದ್ದರಿಂದ ಸಮಾಜದ ಒಳಿತಿಗಾಗಿ ಅವನನ್ನು ಅಧಿಕಾರದಿಂದ ಇಳಿಸಲು ನಿರ್ಧರಿಸಿ, ಎಲ್ಲರೂ ಸೇರಿ, ಉತ್ತಮಗುಣಿಯಾಗಿದ್ದ ಮೂರನೆಯ ಅಮೋಘವರ್ಷನನ್ನು ಪ್ರಾರ್ಥಿಸಿದಾಗ, ಆತ ತನ್ನ ಚೇದಿ ವಂಶದ ಬಂಧುಗಳ ಸಹಾಯದಿಂದ, ಮಳಖೇಡಕ್ಕೆ ಮುತ್ತಿಗೆ ಹಾಕಿದನು. ಗೋವಿಂದನ ನಡತೆಯಿಂದ ಬೇಸತ್ತಿದ್ದ ಜನ ಅಮೋಘ ವರ್ಷನನ್ನು ಹಾರ್ದಿಕವಾಗಿ ಸ್ವಾಗತಿಸಿದರು. ಅಮೋಘವರ್ಷನು ಕ್ರಿ.ಶ. ೯೩೬ ರಲ್ಲಿ ಸಿಂಹಾಸನವನ್ನೇರಿದನು. ಗೋವಿಂದನು ಸೆರೆಹಿಡಿಯಲ್ಪಟ್ಟನೆ ಅಥವಾ ಕೊಲ್ಲಲ್ಪಟ್ಟನೆ ಎಂಬುದು ಸರಿಯಾಗಿ ಗೊತ್ತಿಲ್ಲ. ಅಮೋಘವರ್ಷ ರಾಜನಾದಾಗ ಅವನಿಗೆ ೫೦ ವರ್ಷ ವಯಸ್ಸಾಗಿತ್ತು. ಧಾರ್ಮಿಕ ಸ್ವಭಾವದವನಾದ್ದರಿಂದ ಆಡಳಿತದಲ್ಲಿ ಹೆಚ್ಚಿನ ಆಸಕ್ತಿ ತೋರಲಿಲ್ಲ. ಇವನ ಮೂರು ವರ್ಷದ ಆಡಳಿತಾವಧಿಯಲ್ಲಿ ಮಹತ್ವಾಕಾಂಕ್ಷಿಯಾಗಿದ್ದ ಮೂರನೆಯ ಕೃಷ್ಣನು ಆಡಳಿತ ನಡೆಸುತ್ತಿದ್ದನು. ಗಂಗವಾಡಿಗೆ ಸೈನ್ಯವನ್ನು ಕಳುಹಿಸಿ ದೊರೆ ರಾಚಮಲ್ಲನನ್ನು ಅಧಿಕಾರದಿಂದ ಇಳಿಸಿ ಬೂತುಗನನ್ನು ಸಿಂಹಾಸನಕ್ಕೇರಿಸಲು ನಿರ್ಧರಿಸಿದನು. ಕ್ರಿ.ಶ. ೯೩೬ ರ ಮಾಸಣಗಿ ಶಾಸನದಲ್ಲಿ (ARIE 1960-61, B-440) ಅಮೋಘವರ್ಷನು ರಾಜ್ಯವಾಳುತ್ತಿರುವಾಗ ಕನ್ನಯ್ಯನು ನಾಡನ್ನಾಳುತ್ತಿದ್ದನು. ಬಾಸವೂರು ೧೪೦ ಕ್ಕೆ ಮಲ್ಲುಗನು ನಾಡಗಾವುಂಡನಾಗಿದ್ದನು. ಮಾಸಲಿಗೆಯ ಅವ್ವೆಯರ ಹುಣಿಸೆಯಮ್ಮ, ಅಮ್ಮಣ, ಅಣ್ಣಿಗರು ಕಾದಾಡುವಾಗ, ಅಮ್ಮಣನು ಕುದುರೆಯಿಂದಿರಿದು, ಕಡಿತಲೆಯಾದುದನ್ನು ದಾಖಲಿಸುತ್ತದೆ. ಮೂರನೆಯ ಕೃಷ್ಣನ ಬಗ್ಗೆ ಇದಕ್ಕಿಂತ ಹೆಚ್ಚಿನ ಮಾಹಿತಿ ದೊರಕುವುದಿಲ್ಲ.

## ಕೃಷ್ಣ III (ಕ್ರಿ.ಶ. ೯೩೯ ರಿಂದ ೯೬೭)

ಕ್ರಿ.ಶ. ೯೩೯ರಲ್ಲಿ ಅಮೋಘವರ್ಷನ ಮರಣಾನಂತರ ಕೃಷ್ಣನಿಗೆ ಪಟ್ಟಾಭಿಷೇಕವಾಯಿತು. ಮೂರನೆಯ ಕೃಷ್ಣನು ಚಿಕ್ಕವಯಸ್ಸಿನಿಂದಲೇ ರಾಜ್ಯದ ಹೊಣೆಯನ್ನು ಹೊತ್ತಿದ್ದನು. ಈತನ ತಂದೆ ಮೂರನೇ ಅಮೋಘವರ್ಷನು ತನ್ನ ಮಾವನ ಮನೆಯಲ್ಲಿಯೇ ಹೆಚ್ಚಾಗಿ ಇರುತ್ತಿದ್ದುದರಿಂದ ಈ ಪರಿಸ್ಥಿತಿಯು ಬಂದಿತ್ತು. ಕೃಷ್ಣನ ತಾಯಿ ಕಲಚುರಿ ವಂಶಕ್ಕೆ ಸೇರಿದವಳಾಗಿದ್ದಳು. ಇವನ ಪತ್ನಿ ಕೂಡ ಅದೇ ವಂಶಕ್ಕೆ ಸೇರಿದ್ದವಳು. ಹೀಗಿದ್ದರೂ ಕೂಡಾ ಕೃಷ್ಣನು ಕಲಚುರಿಯ ಸಾಹಸತುಂಗನೆಂಬ ರಾಜಕುಮಾರನ ಮೇಲೆ ದಂಡೆತ್ತಿ ಹೋಗಿ ಆತನನ್ನು ಸೋಲಿಸಿದನು. ಪರಿಣಾಮವಾಗಿ ಈ ಬಂಧುಗಳಲ್ಲಿ ವಿರಸ ಪ್ರಾರಂಭವಾಯಿತು. ಈ ವಿರಸದಿಂದಾಗಿ ಮುಂದೆ ಕೃಷ್ಣನು ಆಪತ್ತಿಗೆ ಸಿಕ್ಕಿದಾಗಲೂ ಅವರು ಸಹಾಯಕ್ಕೆ ಬರಲಿಲ್ಲ. ಕೊನೆಯಲ್ಲಿ ರಾಷ್ಟ್ರಕೂಟರ ಅಳಿವಿಗೆ ಸಹ ಅವರೇ ಕಾರಣರಾದರು.

ಕೃಷ್ಣನಿಗೆ ದೊರಕಿದ ಅಧಿಕಾರದ ಬಗ್ಗೆ ಲಲ್ಲೆಯನು ಪ್ರಶ್ನಿಸಿದಾಗ ಗಂಗ ಇಮ್ಮಡಿ ಬೂತುಗನು ಅವನನ್ನು ಸೋಲಿಸುತ್ತಾನೆ. ಲಲ್ಲೆಯನು ಯಾರೆಂಬುದು ತಿಳಿದಿಲ್ಲ. ವಿದ್ವಾಂಸರು ಇದನ್ನು ಆಂತರಿಕ ಕಲಹವೆನ್ನುತ್ತಾರೆ. ಲಲ್ಲೆಯನು ಸೋದರನೇ ಅಥವಾ ದಾಯಾದಿಯೆ ಎಂಬುದು ಖಚಿತವಾಗಿಲ್ಲ. ಕೃಷ್ಣನು ಆಂತರಿಕ ಕಲಹಗಳನ್ನು ಸರಿಪಡಿಸಿ ರಾಜ್ಯದಲ್ಲಿ ಶಾಂತಿ ನೆಲಸುವಂತೆ ಮಾಡಿದನು .

ಕಾಬೂಲಿನ ಶಾಹಿವಂಶದ ಲಗತೂರ್ಮಾನ್ ಎಂಬುವನ ಬ್ರಾಹ್ಮಣ ಮಂತ್ರಿ ಕಲ್ಲರ್ ಅಥವಾ ಲಲ್ಲೀಯ ಎಂಬುವವನಿದ್ದ. ಈತ ದೊರೆಯ ಸಿಂಹಾಸನವನ್ನು ಆಕ್ರಮಿಸುತ್ತಾನೆ. ಬಹುಶಃ ಪ್ರತಿಹಾರ ದೊರೆ ಮಿಹಿರಭೋಜನ ಬೆಂಬಲದಿಂದ ಲಲ್ಲೆಯನು ಮುಂದಿವರಿದಿರಬಹುದು ಎಂದು ವಿದ್ವಾಂಸರು ಊಹಿಸಿದ್ದಾರೆ. ನಂತರ ಕ್ರಿ.ಶ. ೮೭೦ರಲ್ಲಿ ಲಲ್ಲೆಯನು ಕಾಬೂಲನ್ನು ಕಳೆದುಕೊಂಡು ತನ್ನ ರಾಜಧಾನಿಯನ್ನು ಸಿಂಧೂನದಿ ತೀರದ ಉದಭಾಂಡಕ್ಕೆ ವರ್ಗಾಯಿಸಿದನು. ಈತನು ರಾಷ್ಟ್ರಕೂಟರ ರಾಜಕೀಯದಲ್ಲಿ ಕೈಹಾಕುತ್ತಾನೆ.

ಮೂರನೆಯ ಕೃಷ್ಣನ ಪಟ್ಟಾಭಿಷೇಕ ಕ್ರಿ.ಶ. ೯೩೯ರ ಸುಮಾರಿನಲ್ಲಿ ನಡೆದಿದೆಯೆಂದು ತಿಳಿದಿದೆ. ಕಾಬೂಲಿನ ಲಲ್ಲೆಯನು ಕ್ರಿ.ಶ. ೮೭೦ರಲ್ಲಿ ಸಿಂಧೂನದಿಯ

ಉದಭಾಂಡಕ್ಕೆ ತನ್ನ ರಾಜಧಾನಿಯನ್ನು ಬದಲಾಯಿಸಿದನೆಂಬ ಸಂಗತಿಯು ತಿಳಿಯುತ್ತದೆ. ಈತನು ರಾಷ್ಟ್ರಕೂಟರ ರಾಜಕೀಯದಲ್ಲಿ ಕೈಹಾಕಿರುವುದು ಅಸಂಭವ. ಏಕೆಂದರೆ ಕಾಲಗಳನ್ನು ಗಮನಿಸಿದಾಗ ೬೮-೬೯ ವರ್ಷಗಳಷ್ಟು ವ್ಯತ್ಯಾಸ ಕಂಡುಬರುತ್ತದೆ. ಆದ್ದರಿಂದ ಮೂರನೆಯ ಕೃಷ್ಣನ ಕಾಲದಲ್ಲಿದ್ದ ಲಲ್ಲೆಯನು ಬೇರೆಯವನು ಎಂದು ಹೇಳಬೇಕಾಗುತ್ತದೆ. ಕ್ರಿ.ಶ. ೮೭೦ ರ ಸುಮಾರಿಗೆ ಮಳಖೇಡದ ರಾಷ್ಟ್ರಕೂಟ ವಂಶದ ಅಮೋಘವರ್ಷನು ರಾಜ್ಯವಾಳುತ್ತಿದ್ದನು. ಇಮ್ಮಡಿ ಬೂತುಗನ ಕಾಲ ಸು. ಕ್ರಿ.ಶ. ೯೫೩.

ತನ್ನ ಹಿರಿಯರ ಹಾದಿಯಲ್ಲೇ ನಡೆದ ಕೃಷ್ಣನು ದಿಗ್ವಿಜಯಕ್ಕೆ ಹೊರಟು ದಕ್ಷಿಣ ಭಾರತದೆಡೆಗೆ ನಡೆದನು. ಇದಕ್ಕೆ ಕಾರಣವೂ ಇತ್ತು. ಪಲ್ಲವರ ಪ್ರಾಬಲ್ಯ ಇಳಿಮುಖವಾಗುತ್ತಾ ಹೋದಂತೆ ಅವರ ಸ್ಥಾನದಲ್ಲಿ ಚೋಳರು ಪ್ರಬಲರಾಗುತ್ತಿದ್ದರು. ತಂಜಾವೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಒಂದನೆಯ ಆದಿತ್ಯನು ಪಲ್ಲವ ಅಪರಾಜಿತನನ್ನು ಸೋಲಿಸಿ ತೊಂಡೈಮಂಡಲ ಪ್ರದೇಶಕ್ಕೆ ಅಧಿಪತಿಯಾದನು. ಈತನ ಮಗನೂ ಕೊಡ ಸಮರ್ಥನಾಗಿದ್ದು ರಾಜ್ಯವಿಸ್ತರಣೆ ಮಾಡುವಲ್ಲಿ ಉತ್ಸುಕನಾಗಿದ್ದನು. ಇವರ ರಾಜ್ಯವು ರಾಷ್ಟ್ರಕೂಟ ರಾಜ್ಯಕ್ಕೆ ಹೊಂದಿಕೊಂಡಂತೆಯೇ ಇದ್ದುದರಿಂದ ಆಗಾಗ್ಗೆ ಕದನಗಳಾಗುತ್ತಿದ್ದವು. ಇದಕ್ಕೂ ಹಿಂದೆ ವಲ್ಲಾಳದ ಕದನದಲ್ಲಿ ಪರಾಂತಕನು ಎರಡನೆಯ ಕೃಷ್ಣನನ್ನು ಸೋಲಿಸಿದ್ದನು. ನಾಲ್ಕನೆಯ ಗೋವಿಂದನಿಗೆ ಅಶ್ರಯ ಕೊಡುವುದರ ಮೂಲಕ ಮೂರನೆಯ ಅಮೋಘವರ್ಷ ಮತ್ತು ಕೃಷ್ಣನ ದ್ವೇಷಕ್ಕೆ ಕಾರಣವಾಗಿದ್ದನು. ಹಿಂದಿನ ದ್ವೇಷವನ್ನು ತೀರಿಸಿಕೊಳ್ಳುವುದು ಮೊದಲ ಕೆಲಸವಾಗಿದ್ದುದರಿಂದ ಕೃಷ್ಣನು ಅಲ್ಲಿಗೆ ಹೊರಟನು. ಎರಡನೆಯ ಕೃಷ್ಣನು ಸುಮಾರು ಕ್ರಿ.ಶ. ೯೧೨ರ ವೇಳೆಗೆ ಪರಾಂತಕನ ಮೇಲೆ ದಂಡೆತ್ತಿಹೋಗಿದ್ದನು. ಇದಕ್ಕೆ ಕಾರಣವೇನೆಂದರೆ, ಒಂದನೆಯ ಆದಿತ್ಯನ ನಂತರ ಹಿರಿಯರಾಣಿಯ ಪುತ್ರ ಆದಿತ್ತನ್ ಕನ್ನರದೇವನು ಪಟ್ಟಕ್ಕೆ ಬರದೆ ಪರಾಂತಕನು ಪಟ್ಟಕ್ಕೆ ಬಂದನು. ಕನ್ನರ ದೇವನು ಎರಡನೆಯ ಕೃಷ್ಣನಿಗೆ ಮೊಮ್ಮಗನಾಗಿದ್ದನು. ಪರಾಂತಕನ ವಿರುದ್ಧ ನಡೆದ ಹೋರಾಟದಲ್ಲಿ ಕೃಷ್ಣನು ಸೋತು ಹೋದನು.

ಕ್ರಿ.ಶ. ೯೩೦ರಲ್ಲಿ ಮೂರನೆಯ ಅಮೋಘವರ್ಷನ ಮರಣದ ನಂತರ ಮೂರನೆಯ ಕೃಷ್ಣನು ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಯಿತು. ನಾಲ್ಕನೆಯ ಗೋವಿಂದನು ತಾನು ಕಳೆದುಕೊಂಡ ಸಿಂಹಾಸನವನ್ನು ಮರಳಿ ಪಡೆಯಲು ಪರಾಂತಕನ

ಸಹಾಯವನ್ನು ಪಡೆದಿದ್ದು, ಅದರಲ್ಲಿ ಯಶಸ್ವಿಯಾಗದೆ ಮಡಿದಿರಬಹುದು. ತಮ್ಮ ಅಂತಃಕಲಹದಲ್ಲಿ ತಲೆಹಾಕಿದ ಪರಾಂತಕನ ಮೇಲೆ ಮೂರನೆಯ ಕೃಷ್ಣನಿಗೆ ಕೋಪವಿದ್ದುದರಿಂದಲೇ ಆತ ಪರಾಂತಕನ ವಿರುದ್ಧ ದಂಡೆತ್ತಿ ಹೋದನು. ಇದಕ್ಕೆ ಸಹಾಯಕವಾಗಿ ಪರಾಂತಕನಿಂದಲೇ ಸೋಲುಂಡಿದ್ದ ಬೇರೆ ಬೇರೆ ರಾಜವಂಶಗಳು ಕೂಡ ಯುದ್ಧಕ್ಕೆ ಸಿದ್ಧವಾದ್ದರಿಂದ, ಪರಾಂತಕನು ಎಚ್ಚೆತ್ತು ತನ್ನ ರಾಜ್ಯದ ಉತ್ತರ ಭಾಗದಲ್ಲಿ ರಕ್ಷಣೆಗಾಗಿ ಏರ್ಪಾಡು ಮಾಡಿಕೊಡನು. ರಾಜಾದಿತ್ಯನನ್ನು ರಕ್ಷಣೆಗೆ ಸೇನಾಸಮೇತವಾಗಿ ನಿಲ್ಲಿಸಿದನು. ಆತಕೂರು ಶಾಸನದಲ್ಲಿ ತಕ್ಕೋಲಂನಲ್ಲಿ ನಡೆದ ಯುದ್ಧದ ಬಗ್ಗೆ ವಿವರಣೆಯಿದೆ.

ಚಾಲುಕ್ಯ ದೊರೆ ಎರಡನೇ ಅಮ್ಮನು, ಯುದ್ಧಮಲ್ಲನ ಮಗ ಬಾದಪನಿಂದ ಸೋತನು. ಮೂರನೆಯ ಕೃಷ್ಣನ ಸಹಾಯದಿಂದ ಮತ್ತೆ ದೊರೆಯಾದನು. ಕೃಷ್ಣನ ಕೋಪಕ್ಕೆ ಪಾತ್ರನಾದ ಎರಡನೆಯ ಅಮ್ಮನು ಕಳಿಂಗಕ್ಕೆ ಹೋಗಬೇಕಾಯಿತು. ಆದರೂ ಕೆಲವು ಕಾಲದ ನಂತರ ಅವನ ರಾಜ್ಯವು ಅವನಿಗೆ ದೊರಕಿತು.

ಯುವರಾಜನಾಗಿದ್ದಾಗಲೇ ಚತುರ ಸೇನಾನಿ, ದಕ್ಷ ಆಡಳಿತಗಾರನಾಗಿದ್ದ ಕೃಷ್ಣನು ಅನೇಕ ಯುದ್ದಗಳನ್ನು ಮಾಡಿ ಜಯಗಳಿಸಿದನು. ವೆಂಗಿಯಲ್ಲಿ ಚಾಲುಕ್ಯರ ಅಂತಃಕಲಹಗಳು ಮುಂದುವರೆದಿದ್ದವು. ಎರಡನೆಯ ಅಮ್ಮನ ಪ್ರತಿಸ್ಪರ್ಧಿಯಾದ ಬಾದಪನು ಕೃಷ್ಣನ ಸಹಾಯನ್ನು ಕೇಳಿದನು. ಅಮ್ಮನ ಮಲಸಹೋದರನಾದ ದಾನಾರ್ಣವನಿಗೆ ನ್ಯಾಯವಾಗಿ ರಾಜ್ಯವು ಸೇರಬೇಕಾಗಿತ್ತು. ಕೃಷ್ಣನು ಬಾದಪನಿಗೆ ಸಹಾಯ ಮಾಡಿದ್ದರಿಂದ ರಾಜ್ಯವು ಬಾದಪನಿಗೆ ಸಿಕ್ಕಿತು. ಅಮ್ಮನು ತನ್ನ ಪ್ರಯತ್ನವನ್ನು ನಡೆಸುತ್ತಲೇ ಇದ್ದು, ಬಾದಪನ ಸಹೋದರನಾದ ತಾಳಿನನ್ನು ಯುದ್ಧದಲ್ಲಿ ಕೊಂದನು. ಇದರಿಂದ ಕೋಪಗೊಂಡ ಕೃಷ್ಣನು ವೆಂಗಿಯ ಮೇಲೆ ದಂಡೆತ್ತಿಹೋದನು. ಪರಿಣಮವಾಗಿ ರಾಜ್ಯವು ನ್ಯಾಯವಾಗಿ ಸಲ್ಲಬೇಕಾಗಿದ್ದ ದಾನಾರ್ಣವನಿಗೇ ಸಿಕ್ಕಿತು. ಹೀಗೆ ಸಮಕಾಲೀನ ದೊರೆಗಳಿಗೂ ಸಹಾಯ ಮಾಡುತ್ತಾ, ತನ್ನ ರಾಜ್ಯವನ್ನು ರಕ್ಷಿಸಿ ಬಲಿಷ್ಠವನ್ನಾಗಿ ಮಾಡಿದನು. ತನ್ಮೂಲಕ ರಾಷ್ಟ್ರಕೂಟರ ಕೀರ್ತಿಯು ಎಲ್ಲ ಕಡೆಗೂ ಹಬ್ಬಿತು.

ತಕ್ಕೋಲಮ್ ಎಂಬಲ್ಲಿ ರಾಷ್ಟ್ರಕೂಟರಿಗೂ ಚೋಳರಿಗೂ ಯುದ್ಧವಾಯಿತು. ಚೋಳರಾಜಾದಿತ್ಯ ಮತ್ತು ಅರಿಕುಲಕೇಸರಿ ಇವರಿಬ್ಬರೂ ಚೋಳ ಸೈನ್ಯದ

ಮುಖಂಡರಾಗಿದ್ದರು. ಘೋರವಾಗಿ ನಡೆದ ಯುದ್ದದಲ್ಲಿ ರಾಷ್ಟ್ರಕೂಟರ ಪರವಾಗಿ ಗಂಗ ಬೂತುಗನು ಅನೆಯ ಮೇಲೆ ಇದ್ದ ರಾಜಾದಿತ್ಯನನ್ನು ಕೊಂದನು. ನಾಯಕನ ಸಾವಿನಿಂದ ಹೆದರಿದ ಸೈನ್ಯ ದಿಕ್ಕಾಪಾಲಾಗಿ ಓಡಿತು. ಕೃಷ್ಣನು ಕಂಚಿಯಿಂದ ತಂಜಾವೂರಿನವರೆಗೆ ರಾಜ್ಯವನ್ನು ವಶಪಡಿಸಿಕೊಂಡನು. ಈ ವಿಜಯದಿಂದ "ಕಂಚಿಯುಂ ತಂಜೈಯುಂ ಕೊಂಡ" ಎಂಬ ಬಿರುದು ಕೃಷ್ಣನಿಗೆ ಸಿಕ್ಕಿತು. ಮೇಲ್ಪಾಡಿಯಲ್ಲಿ ಸೈನ್ಯ ಸಮೇತನಾಗಿ ಸ್ವಲ್ಪಕಾಲ ವಿಶ್ರಮಿಸಿದನು. ತನಗೆ ಸಹಾಯ ಮಾಡಿದ ಗಂಗ ಬೂತುಗನಿಗೆ ಬನವಾಸಿ ಪನ್ನಿಚ್ಚಾಸಿರ, ಬೆಳ್ವೊಲ, ಪುಲಿಗೆಱೆ ಪ್ರಾಂತಗಳ ಅಧಿಕಾರವನ್ನು ಕೊಟ್ಟನು. ವಿಜಯೀ ಸೈನ್ಯದೊಂದಿಗೆ ರಾಮೇಶ್ವರದವರಗೂ ಸಾಗಿ ಅಲ್ಲಿ ಕೃಷ್ಣೇಶ್ವರ ಮತ್ತು ಗಂಡಮಾರ್ತ್ತಂಡಾದಿತ್ಯ ದೇವಾಲಯಗಳನ್ನು ಕಟ್ಟಿಸಿದನು. ಕಂಚಿಯಲ್ಲಿ "ಕಾಲಪ್ರಿಯ" ಎಂಬ ದೇವಾಲಯವನ್ನು ಕಟ್ಟಿಸಿದನು.

ಕರಹಾಡ ಶಾಸನವು ಮೂರನೆಯ ಕೃಷ್ಣನು ರಾಜಕೀಯ ಚಾಣಾಕ್ಷತೆಯನ್ನು ವಿಶೇಷವಾಗಿ ಹೊಂದಿದ್ದನು ಎಂದು ತಿಳಿಸುತ್ತದೆ. ಚೋಳರನ್ನು ಗೆದ್ದ ನಂತರ ಆ ಪ್ರದೇಶವನ್ನು ತನ್ನ ಆಶ್ರಿತರಾದ ಬಾಣ, ವೈದುಂಬ ಮುಂತಾದವರಿಗೆ ಹಂಚಿದನು ಎಂಬುದು ತಿಳಿದೇ ಇದೆ. ತೊಂಡೈಮಂಡಲ ಪ್ರದೇಶವು ಸುಮಾರು ಹದಿನೈದು ವರ್ಷಗಳಷ್ಟು ದೀರ್ಘಕಾಲ ಚೋಳರ ಕೈತಪ್ಪಿತ್ತು. ಕೃಷ್ಣನ ಮರಣದ ನಂತರವೇ ಅವುಗಳನ್ನು ಅವರು ಹಿಂದಕ್ಕೆ ಪಡೆಯಲು ಸಾಧ್ಯವಾಯಿತು. ಈತ ಚೇರ, ಪಾಂಡ್ಯ, ಸಿಂಹಳದ ದೊರೆಗಳನ್ನೂ ಕೂಡ ಸೋಲಿಸಿ, ತನ್ನ ಅಧೀನದಲ್ಲಿರಿಸಿಕೊಂಡಿದ್ದ. ಸಿಂಹಳದ ಮೇಲಿನ ದಾಳಿ ಯಾವ ರೀತಿಯಲ್ಲಿತ್ತು ಎಂಬುದು ಸ್ಪಷ್ಟವಾಗಿಲ್ಲ. ಕೃಷ್ಣನ ಪರಾಕ್ರಮವನ್ನು ಕೇಳಿಯೇ ಶರಣಾಗತನಾದನೇ? ಅಥವಾ ಪ್ರತ್ಯಕ್ಷ ಯುದ್ಧ ನಡೆದಿರಬಹುದೇ ಎನ್ನುವ ಬಗ್ಗೆ ಅನುಮಾನವಿದೆ.

ತಮಿಳುನಾಡಿನ ಕೆಲವು ಭಾಗಗಳನ್ನು (ಉತ್ತರ ಮತ್ತು ದಕ್ಷಿಣ ಆರ್ಕಾಟ್, ಚೆಂಗಲ್‌ಪುಟ್ ಮುಂತಾದ ಪ್ರದೇಶ) ಹತ್ತು ವರ್ಷಗಳಿಗೂ ಹೆಚ್ಚು ಕಾಲ ಕೃಷ್ಣನು ಆಳಿದನು. ದಕ್ಷಿಣ ದಿಗ್ವಿಜಯದಿಂದ ಹುರುಪುಗೊಂಡ ಅವನ ಸೈನ್ಯ ಉತ್ತರಭಾರತದತ್ತ ನಡೆಯಿತು. ಉತ್ತರದ ದಿಗ್ವಿಜಯದಲ್ಲಿ ಕೃಷ್ಣನಿಗೆ ಸಹಾಯ ಮಾಡಿದವನು ಗಂಗಬೂತುಗನ ಮಗನಾದ ಎರಡನೆಯ ಮಾರಸಿಂಹ. ಉತ್ತರಭಾರತದಲ್ಲಿ ಆಗತಾನೆ ರಾಜಕೀಯದಲ್ಲಿ ಪ್ರವೇಶಿಸಿದ್ದ ಚಾಂದೇಲರನ್ನು ಸೋಲಿಸಿ, ಕಾಲಂಜರ ಮತ್ತು

ಚಿತ್ರಕೂಟದ ಕೋಟೆಗಳನ್ನು ಮಾರಸಿಂಹನು ವಶಪಡಿಸಿಕೊಂಡನು. ನಂತರ ಗೂರ್ಜರ ಪ್ರತಿಹಾರರನ್ನು ಸೋಲಿಸಿದುದೇ ಅಲ್ಲದೆ, ಪರಮಾರ ಸೀಯಕ ಹರ್ಷನನ್ನೂ ಸೋಲಿಸಿದನು. ಜಬ್ಬಲ್ಪುರದ ಸಮೀಪ ಜುರಾ ಎಂಬಲ್ಲಿ ದೊರೆತ ಕನ್ನಡದ ಪ್ರಶಸ್ತಿ ಶಾಸನವೊಂದು ಮೂರನೆಯ ಕೃಷ್ಣನ ಗುಣಗಳನ್ನು ಕೊಂಡಾಡುತ್ತದೆ.

ಎರಡನೆಯ ಎರೆಯಪನ ಮಗ ಇಮ್ಮಡಿ ಬೂತುಗನು ಕೃಷ್ಣನ ಸಹಾಯದಿಂದ ಪಟ್ಟಕ್ಕೆ ಏರಿದನು. ಇಮ್ಮಡಿ ಬೂತುಗನ ನಂತರ ಮೂರನೆಯ ಮಾರಸಿಂಹನು ಕೃಷ್ಣನಿಗೆ ವಿಧೇಯನಾಗಿದ್ದು, ಗುಜರಾತ್ ಮತ್ತು ಮಾಳವದ ದಂಡಯಾತ್ರೆಯಲ್ಲಿ ಸಹಾಯ ಮಾಡಿದ್ದನು.

ಚೆನ್ನೂರು ಶಾಸನವು (ARIE, 1959-60, No.B.1, 941AD), ಅಕಾಲವರ್ಷನು ರಾಜ್ಯಭಾರ ಮಾಡುತ್ತಿದ್ದಾಗ, ಚಾಲುಕ್ಯವಂಶದ ಗುಣಗರಸನ ಪುತ್ರ ಬದ್ದೆಗ ಗೋದಾವರಿ ನದಿಯ ದಡದಲ್ಲಿದ್ದ ಅಗ್ರಹಾರವನ್ನು ವನಯೂರಿನ ತಮ್ಮಯ್ಯನಿಗೆ ದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಬದ್ದೆಗನು ಅರಿಕೇಸರಿಯ ವಂಶಸ್ಥನೆಂದೂ, ಚಾಲುಕ್ಯ ಅರಸನಾಗಿದ್ದು ರಾಷ್ಟ್ರಕೂಟರ ಸಾಮಂತನಾಗಿದ್ದನೆಂದೂ, ದಾಖಲಿಸುತ್ತದೆ. ತ್ರಿಭುವನಮಲ್ಲ ಸಾಮಂತ ಚೂಡಾಮಣಿ ಎಂಬ ಉಲ್ಲೇಖವಿದೆ.

ಕ್ರಿ.ಶ. ೯೪೭ರ ಲಕ್ಷ್ಮೀಸಾಗರ (EC. Vol. XI, No. Cd 49)ಶಾಸನವು ಅಕಾಲವರ್ಷನು ರಾಜ್ಯಭಾರ ಮಾಡುತ್ತಿದ್ದಾಗ, ಮಹಾಸಾಮಂತ ಕನ್ನಯ್ಯನು ಕದಂಬಳಿಗೆ ೧,೦೦೦ ವನ್ನು ಆಳುತ್ತಿದ್ದನು. ಆತನ ವಂಶಾವಳಿಯನ್ನು (ಕನ್ನರ) ಅಜ, ಅತ್ರಿ, ಸೋಮ, ಬುಧ, ಪುರೂರವ, ನಹುಷ, ಯಯಾತಿ, ಯದು, ಕನ್ನರ, ನಿರುಪಮ, ಅರಿಕಾಮ, ಜಗತ್ತುಂಗ, ಅಮೋಘವರ್ಷ, ಇಂದ್ರ(ದೇವರಾಜ?), ಕನ್ನರ ಎಂದು ನೀಡುತ್ತದೆ. ಈ ವಂಶಾವಳಿಯಲ್ಲಿ ತನ್ನ ಹತ್ತಿರದವರು ಹಾಗೂ ನೇರವಾಗಿ ತನ್ನ ವಂಶಾವಳಿಗೆ ಸಂಬಂಧಿಸಿದವರನ್ನೂ ಹೆಸರಿಸಲಾಗಿದೆ.

ಕ್ರಿ.ಶ. ೯೫೦ ಆತಕೂರು ಶಾಸನವು (EC. Vol. VII, Mu 42: 950AD) ರಾಜ್ಯಭಾರ ಅಮೋಘವರ್ಷ(ಕೃಷ್ಣ III) ನಿಗೆ ಪೃಥ್ವೀವಲ್ಲಭ, ಪಾದಪಂಕಜಭ್ರಮ, ಅಂಕತ್ರಿಣೇತ್ರ, ಆನೆವೆಡಂಗ, ವನಗಜಮಲ್ಲ, ಕಚ್ಚೆಗ ಮುಂತಾದ ಬಿರುದುಗಳಿದ್ದುದನ್ನು

ದಾಖಲಿಸುತ್ತದೆ. ಕನ್ನರನು ಚೋಳರಾಜಾದಿತ್ಯನ ಮೇಲೆ ತಕ್ಕೋಲದಲ್ಲಿ ಯುದ್ಧ ಮಾಡಿದಾಗ ಆತನನ್ನು ಕೊಂದು ವಿಜಯಿಯಾದನೆಂದು ತಿಳಿದುಬರುತ್ತದೆ.

ಚೋಳರೊಡನೆ ಯುದ್ಧ ಮಾಡಿದಾಗ ಮೂರನೆಯ ಕೃಷ್ಣನ ಸಹಾಯಕ್ಕೆ ಸಾಮಂತ ನೊಳಂಬ ದೊರೆ ಇಱುವನೊಳಂಬ ದಿಲೀಪನು ಬಂದಿದ್ದನೆಂದು ಮಡಕಶಿರಾ ಶಾಸನವು ಉಲ್ಲೇಖಿಸಿದೆ. ಈತ ತನ್ನ ಕೊನೆಗಾಲದವರೆಗೂ ರಾಷ್ಟ್ರಕೂಟರಿಗೆ ನಿಷ್ಠೆಯಿಂದ ಇದ್ದನು. ಯುದ್ಧ ನಡೆದ ಸ್ಥಳವು "ಇಪಿಲಿ" ಯಾಗಿದ್ದು, ಕ್ರಿ.ಶ. ೯೪೮ರಲ್ಲಿ ಈ ಶಾಸನವನ್ನು ಹೊರಡಿಸಲಾಗಿದೆ. ಚೋಳರ ಮೇಲೆ ನಡೆದ ಯುದ್ಧದ ಬಗ್ಗೆ ಆತಕೂರು ಶಾಸನವನ್ನು ಕ್ರಿ.ಶ. ೯೫೦ರಲ್ಲಿ ಹಾಕಿಸಲಾಗಿದೆ. ಸಮಕಾಲೀನ ದಾಖಲೆಗಳಿಂದ ತಿಳಿದುಬರುವ ಮಾಹಿತಿಯಂತೆ ಚೋಳರು ಕ್ರಿ.ಶ. ೯೪೮ರಲ್ಲಿ ಬಿಜಯಿತಮಂಗಲದಲ್ಲಿ ನೊಳಂಬರ ಮೇಲೆ ಯುದ್ಧ ಮಾಡಿರುವ ಉಲ್ಲೇಖವಿದೆ (EC IX, Ht. 47). ಇದರ ಆಧಾರದಿಂದ ಹೇಳುವುದಾದರೆ ಚೋಳರು ನೊಳಂಬರ ಆಳ್ವಿಕೆಯ ಪ್ರದೇಶವನ್ನು ಮೇಲಿಂದ ಮೇಲೆ ಆಕ್ರಮಿಸಲು ಬರುತ್ತಿದ್ದರು. ಮೂರನೆಯ ಕೃಷ್ಣನು ಚೋಳರ ಮೇಲೆ ಯುದ್ಧ ಮಾಡಿದ್ದು ಸಾಮಂತರ ರಕ್ಷಣೆಯ ಜೊತೆ ದುಷ್ಟ ನಿಗ್ರಹವಾಗಿತ್ತೆಂದು ಹೇಳಬಹುದು.

ರಾಮೇಶ್ವರದ ಶಾಸನವು (IAP. Cud. I No. 88) ಕೃಷ್ಣನ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ. ರಾಷ್ಟ್ರಕೂಟ ವಂಶಾವಳಿಯನ್ನು ಸೂಚಿಸುತ್ತದೆ. ರಾಷ್ಟ್ರಕೂಟ – ದಂತಿದುರ್ಗ – ಸಾಹಸತುಂಗ – ಕೃಷ್ಣರಾಜ – ಪ್ರಭೂತವರ್ಷ – ಧ್ರುವ –ನಿರುಪಮ – ಜಗತ್ತುಂಗ – ಇಂದ್ರ – ಕೃಷ್ಣ – ರಟ್ಟಕಂದರ್ಪ ಎಂಬ ಹೆಸರುಗಳು ದೊರಕುತ್ತವೆ. ಕಾಪಲ್ಲೆಯ ಶಾಸನವು (ARSIE. 1934, No. B.170) ಸೆಮ್ಮಿಗೂರಿನ ಲೋಕರಸನ ಮಗ ಮಸರಸನ ಮೇಲೆ ಮಹಾರಾಜನು ಯುದ್ಧಕ್ಕೆ ಬಂದಾಗ ತಿಗಟಿ ಮುತ್ತರಸನು ತನ್ನ ನಾಯಕನ ಪರವಾಗಿ ವೀರಾವೇಶದಿಂದ ಹೋರಾಡಿ ಮಡಿದನೆಂದು ತಿಳಿಸುತ್ತದೆ.

ತಿರುಮಲೈಚ್ಚೇರಿ ಶಾಸನವು (EI. XXIII, No. 105) ಅಕಾಲವರ್ಷನ ಪ್ರಶಸ್ತಿಯಿಂದ ಆರಂಭವಾಗಿದೆ. ಮಾಳವ, ಕೋಶಲ, ಅಭೀರವಿಷಯ, ಸುವರ್ಣದ್ವೀಪ, ಸಿಂಙ್ಗಳದ್ವೀಪ, ಕಚ (ಕುಚ್/ಕವಿಡಿ?) ದೀಪವಿಜೇತ ಬಿರುದಾವಳಿಗಳನ್ನು ಉಲ್ಲೇಖಿಸುತ್ತದೆ. ದಕ್ಷಿಣ ದಿಗ್ವಿಜಯ ಕಾಲದಲ್ಲಿ ಚೋಳನನ್ನು ನಿರ್ಮೂಲ ಮಾಡಿ,

ಅವರ ಚೋಳಿಕ ವಿಷಯವನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡಿದ್ದನ್ನು ಉಲ್ಲೇಖಿಸುತ್ತದೆ. ಈತನು ಕಂದಪುರ ಪೇರಟೆಯಲ್ಲಿ ಕಾಳಪ್ರಿಯ ದೇವರ ದೇವಾಲಯವನ್ನು ಕಟ್ಟಿಸಿ ದೇವರಿಗೆ ಕೀರ್ತಿ ಮಾರ್ತಾಂಡ ಎಂಬ ಹೆಸರಿಟ್ಟು, ಪ್ರತಿಷ್ಠಾಪನೆಯ ಸಮಯದಲ್ಲಿ ಇದ್ದು, ವಿವಿಧ ಕೈಂಕರ್ಯಗಳಿಗೆ ಹಣ ನಿಗದಿಪಡಿಸಿದ್ದನ್ನು ಹೇಳುತ್ತದೆ.

ಮೂರನೆಯ ಕೃಷ್ಣನ ಸಾಧನೆಗಳನ್ನು ಗಮನಿಸಿದಾಗ, ರಾಷ್ಟ್ರಕೂಟರ ಇತಿಹಾಸದಲ್ಲಿ ಗೋವಿಂದ ಮೂರು ಮತ್ತು ನಾಲ್ಕರ ನಂತರ, ಈತನ ಕಾಲದಲ್ಲಿ ಸಾಮ್ರಾಜ್ಯವು ವಿಸ್ತಾರವಾಗಿತ್ತೆಂದು ಹೇಳಬಹುದು. ಈತನ ಶಾಸನಗಳೆಲ್ಲ ಹೆಚ್ಚಾಗಿ ದಾನಕ್ಕೆ ಸಂಬಂಧಿಸಿದ್ದಾಗಿವೆ. ತಮಿಳು ಬಾಷೆಯಲ್ಲಿರುವ ಕೃಷ್ಣನ ಶಾಸನಗಳು ದಾನಗಳನ್ನು ಕುರಿತು ಹೇಳುತ್ತವೆ. ಕರ್ನಾಟಕದಲ್ಲಿ ಗೋಸಾಸಗಳು, ವೀರಗಲ್ಲುಗಳು ಸಿಗುತ್ತವೆ. ಒಟ್ಟಿನಲ್ಲಿ ಮೂರನೆಯ ಕೃಷ್ಣನ ಆಳ್ವಿಕೆಯಲ್ಲಿ ಶಾಂತಿ ಸಮೃದ್ಧಿಗಳು ಹೆಚ್ಚಾಗಿ ಕಂಡುಬರುತ್ತವೆ. ಪೊನ್ನನ ಭುವನೈಕರಾಮಾಭ್ಯುದಯ' ಅಲ್ಲದೇ ಕನ್ನಡ, ಸಂಸ್ಕೃತ, ಪ್ರಾಕೃತ ಭಾಷೆಗಳಲ್ಲಿ ಸಾಹಿತ್ಯ ಗ್ರಂಥಗಳು ಈತನ ಕಾಲದಲ್ಲಿ ರಚನೆಯಾಗಿವೆ.

ಕೃಷ್ಣನ ನಂತರ ರಾಜಕೀಯ ಇತಿಹಾಸದಲ್ಲಿ ರಾಷ್ಟ್ರಕೂಟರ ಪ್ರಾಬಲ್ಯ ಕಡಿಮೆಯಾಗುತ್ತಾ ಬಂದಿತು. ಕಾರಣವೇನೆಂದರೆ, ನಂತರ ಬಂದ ಉತ್ತರಾಧಿಕಾರಿಗಳು ಸಾಕಷ್ಟು ಬುದ್ಧಿವಂತರೂ, ಬಲಶಾಲಿಗಳು ಆಗಿರಲಿಲ್ಲ. ಇದರಿಂದ ಸಾಮ್ರಾಜ್ಯದ ವಿಸ್ತಾರವಿರಲಿ, ರಕ್ಷಣೆ ಕೂಡ ಸಾಧ್ಯವಿಲ್ಲದೇ ಹೋಯಿತು. ಇಂತಹ ಸಮಯಕ್ಕೇ ಕಾಯುತ್ತಿದ್ದ ವೈರಿಗಳು ನಿರಾಯಾಸವಾಗಿ ಸಾಮ್ರಾಜ್ಯವನ್ನು ವಶಪಡಿಸಿಕೊಂಡರು. ಆದರೆ ಮೂರನೆಯ ಕೃಷ್ಣನ ಕಾಲದಲ್ಲಿ ರಾಷ್ಟ್ರಕೂಟರ ವಿರುದ್ಧ ನಿಲ್ಲಬೇಕಾದರೆ ಸಾಕಷ್ಟು ಯೋಚಿಸಬೇಕಾಗುತ್ತಿತ್ತು ಎನ್ನುವುದಂತೂ ಸತ್ಯ. ಕೃಷ್ಣನ ಸ್ವಭಾವವೂ ಕೂಡ ಒಳ್ಳೆಯದಾಗಿತ್ತು ಎನ್ನಲು ಸಾಕ್ಷಿಯಾಗಿ, ಮಧ್ಯಪ್ರದೇಶದಲ್ಲಿ ಸಿಕ್ಕಿರುವ ಜುರಾ ಪ್ರಶಸ್ತಿ ಶಾಸನವನ್ನು ನೋಡಬಹುದು. ಆಡಳಿತದಲ್ಲಿ ದಕ್ಷನಾಗಿದ್ದ ಕೃಷ್ಣನ ಕಾಲದಲ್ಲಿ ರಾಜ್ಯವು ಸುಭಿಕ್ಷವಾಗಿತ್ತು.

ಮೂರನೆಯ ಕೃಷ್ಣನ ಕಾಲವನ್ನು ರಾಷ್ಟ್ರಕೂಟರ ಆಳ್ವಿಕೆಯ ಉಚ್ಛ್ರಾಯ ಕಾಲವೆಂದು ಕರೆಯಬಹುದಾಗಿದೆ. ಈತನ ಹೆಸರು ಭಾರತದ ಇತಿಹಾಸದಲ್ಲಿ ಪ್ರಮುಖವಾದ ಹೆಸರುಗಳಲ್ಲೊಂದು. ಕೃಷ್ಣನು ಕ್ರಿ.ಶ. ೯೬೭ರಲ್ಲಿ ಮರಣಹೊಂದಿದನು.

## ಖೊಟ್ಟಿಗ (ಕ್ರಿ. ಶ. ೯೬೭ – ೯೭೨)

ಮೂರನೆಯ ಕೃಷ್ಣನ ಮಗ ಚಿಕ್ಕ ವಯಸ್ಸಿನಲ್ಲಿಯೇ ಸತ್ತಿದ್ದರಿಂದ ಸಿಂಹಾಸನವು ಕೃಷ್ಣನ ಸಹೋದರನಾದ ಖೊಟ್ಟಿಗನ ಪಾಲಾಯಿತು. ಮೂರನೆಯ ಕೃಷ್ಣನ ದಿಗ್ವಿಜಯದಿಂದಾಗಿ ಹುಟ್ಟಿಕೊಂಡಿದ್ದ ಅನೇಕ ವೈರಿಗಳು ಈ ಸಂದರ್ಭದಲ್ಲಿ ಕಾಣಿಸಿಕೊಂಡರು. ಅನೇಕ ಸಮಸ್ಯೆಗಳು ಕೃಷ್ಣನ ಮರಣದ ನಂತರ ಒಂದೊಂದಾಗಿ ಮೇಲೇಳತೊಡಗಿದವು. ಯಾವ ರೀತಿಯಿಂದಲೂ ಬಲಿಷ್ಠರಲ್ಲದ ಉತ್ತರಾಧಿಕಾರಿಗಳಿಂದಾಗಿ ರಾಷ್ಟ್ರಕೂಟ ಸಾಮ್ರಾಜ್ಯ ಅವನತಿಯತ್ತ ಸಾಗತೊಡಗಿತು.

ಖೊಟ್ಟಿಗನು ಕೇವಲ ಐದು ವರ್ಷಗಳ ಕಾಲ ಮಾತ್ರ ರಾಜ್ಯಭಾರ ಮಾಡಿದನು. ಕ್ರಿ. ಶ. ೯೬೭ರ ಕೊಳಗಲ್ಲು ಶಾಸನವು ಕೃಷ್ಣರಾಜನ ಸಾವಿನ ನಂತರ ರಾಜ್ಯವು ಖೊಟ್ಟಿಗನಿಗೆ ಲಭಿಸಿತೆಂದು ಹೇಳಿದೆ. "ಪರಲೋಕಂಗತೇ ತಸ್ಮಿನ್ನಾಮ್ನಾ ಕೃಷ್ಣ ನೃಪೇ ನಿಧೌ ರಾಜ್ಯೇ ಖೊಟ್ಟಿಗದೇವಸ್ಯ ಧರ್ಮಸೇತು: ಕಲೌ ಯುಗೇ॥" (ಕ.ವಿ.ಶಾ.ಸಂ–೧ ಬಳ್ಳಾರಿ) ಹೀಗಾಗಿ ಕೃಷ್ಣನು ಕ್ರಿ. ಶ. ೯೬೭ ರಲ್ಲಿ ಸತ್ತನೆಂಬುದು ಈ ಶಾಸನದಿಂದ ಸ್ಪಷ್ಟವಾಗುತ್ತದೆ. ಕ್ರಿ. ಶ. ೯೬೮ ರ ಕ್ಯಾಸಾಪುರ ಶಾಸನವು (SII Vol XI, No.CD 50) ಖೊಟ್ಟಿಗನು ಮನ್ನೆಖೇಡ (ಮಳಖೇಡ ಅಥವಾ ಮಾನ್ಯಖೇಟ) ದಲ್ಲಿ ರಾಜ್ಯಭಾರ ಮಾಡುತ್ತಿದ್ದುದನ್ನು ಉಲ್ಲೇಖಿಸುತ್ತದೆ. ಈತನಿಗೆ ನಿತ್ಯವರ್ಷದೇವ, ಚಲದಂಕಕಾರ ಎಂಬ ಬಿರುದುಗಳಿದ್ದವು. ಕದಂಬಳಿಗೆ – ೧೦೦೦, ಸಾರಮು ಮುಂತಾದ ಪ್ರದೇಶಗಳಲ್ಲಿ ಈತನ ಸಾಮಂತರು ಆಳುತಿದ್ದರು ಎಂದು ತಿಳಿದುಬರುತ್ತದೆ. ಕ್ರಿ. ಶ. ೯೬೮ ರ ಬೇವಿನಹಳ್ಳಿ ಶಾಸನದಲ್ಲಿ (EC Vol. XI No. CD 74) ಚಾಳುಕ್ಯ ವಂಶಾವಳಿಯಲ್ಲಿ ಕದನೈಕಸೂದ್ರಕನು ಮಂಗಳರಾಯನ ಮಗನೆಂದು ಉಲ್ಲೇಖಿಸುತ್ತದೆ. ನಂತರ ವಿಕ್ರಮಾದಿತ್ಯ, ಪಿಳ್ಳಿಮಯ್ಯ, ಕಲಿಕೊಂಕಣದೇವ, ರೇವಣ, ಬಿಕ್ಕಿಯಣ್ಣ, ಗೊಗ್ಗಿ, ಸೂದ್ರಕಾಂಕ ಎನ್ನುವ ಹೆಸರುಗಳ ಉಲ್ಲೇಖವಿದೆ. ಸೂದ್ರಕಾಂಕನ ಪತ್ನಿ ಜಕ್ಕಿಸುಂದರಿಯ ಗುಣಗಳನ್ನು ಹೊಗಳುತ್ತದೆ. ಇವರು ರಾಷ್ಟ್ರಕೂಟರ ಸಾಮಂತರಾಗಿದ್ದರು. ಮಹಾಸಾಮಂತ ಚಾಳುಕ್ಯ ಸರ್ವಜ್ಞನಾದ ಪಂದಿಗನು ಕದಂಬಳಿಗೆ – ೧೦೦೦ ಆಳುತ್ತಿದ್ದನೆಂದು ಉಲ್ಲೇಖಿಸುತ್ತದೆ. ಹೀಗೆ ಕಲ್ಯಾಣದ ಚಾಲುಕ್ಯ

ವಂಶವಲ್ಲದೆ, ಬೇರೆ ಚಾಳುಕ್ಯ ಶಾಖೆಗಳು ಇದ್ದದ್ದು ಇಂತಹ ಶಾಸನಗಳಿಂದ ತಿಳಿಯುತ್ತದೆ.

ಕ್ರಿ. ಶ. ೯೭೦ರ ಹಿರೇ ಹಂದಿಗೋಳದ ಶಾಸನವು (SII Vol XI Pt. I No. 43), ಖೊಟ್ಟಿಗನ ಆಳ್ವಿಕೆಯ ಕಾಲದಲ್ಲಿ ಕೊಂಗುಣಿವರ್ಮ ಮಾರಸಿಂಗ ಪೆರ್ಮಾಡಿಯ ಪುರಿಗೆಱೆ-೩೦೦, ಬೆಳ್ವೊಲ-೩೦೦ಗಳನ್ನು ಅಣುಗಜೀವಿತನಾಗಿ ಆಳುತ್ತಿದ್ದನೆಂದು ಉಲ್ಲೇಖಿಸುತ್ತದೆ. ವಚ್ಚಪಯ್ಯನ ಮಗ ಕೊಂತದ ಪೆಗ್ಗಱಯ್ಯ ಪಂದಿಗೊಳವನು ಅಚಳ ಪ್ರವೃತ್ತಿಯಿಂದ ಆಳುತ್ತಿದ್ದನೆಂದು ಉಲ್ಲೇಖಿಸುತ್ತದೆ. ಈ ಮಾರಸಿಂಹನು ಗಂಗಮಾರಸಿಂಹ – ರಾಷ್ಟ್ರಕೂಟರ ಪ್ರಭಾವಶಾಲಿ ಮಾಂಡಲೀಕರಲ್ಲಿ ಒಬ್ಬನಾಗಿದ್ದ.

ನಾಗಾವಿ ಶಾಸನದಿಂದ (SII Vol XI Pt. I No. 41) ಖೊಟ್ಟಿಗನಿಗೆ ರಟ್ಟತಿಲಕನೆಂಬ ಬಿರುದಿತ್ತೆಂದು ತಿಳಿದುಬರುತ್ತದೆ. ಮಾಂಡಳೀಕನಾದ ಕೊಂಗುಣಿವರ್ಮ ಪೆರ್ಮಾನಡಿಯ ಗಂಗವಾಡಿ – ೯೬,೦೦೦, ಪುರಿಗೆಱೆ – ೩೦೦, ಬೆಳ್ವೊಲ – ೩೦೦, ಕಿಸುಕಾಡು – ೭೦, ಬಾಗಡೆ – ೭೦ ಪ್ರದೇಶಗಳನ್ನು ಆಳುತ್ತಿದ್ದನು. ಪಾಪಕಲ್ಲ ಕುಲತಿಲಕನ ಮಗ ಕೊಱಗನನ್ನು ಹೆಸರಿಸುತ್ತದೆ. ಕೊಱಗನಿಗೆ ಸುವರ್ಣಛತ್ರ ಧ್ವಜಗಳಿದ್ದುದ್ದನ್ನು ಆತನಿಗೆ ಕಲಿಯುಗಭೀಮನೆಂಬ ಬಿರುದು ಇದ್ದುದನ್ನು ಉಲ್ಲೇಖಿಸುತ್ತದೆ. ಕೊಱಗನ ಮಗ ಬೋಱುಗನನ್ನು ಹೆಸರಿಸುತ್ತದೆ. ಇವನ ಪ್ರತಾಪವನ್ನು ವರ್ಣಿಸುತ್ತದೆ.

ಕ್ರಿ. ಶ. ೯೬೯ ನೆಯ ಸೋಮನಳ್ಳಿಯ ಶಾಸನವು (ARSIE 1940 No. B. 67) ಖೊಟ್ಟಿಗನಿಗೆ ಅಮೋಘವರ್ಷನೆಂಬ ಹೆಸರಿತ್ತು ಎಂಬುದರ ಬಗ್ಗೆ ಗಮನ ಸೆಳೆಯುತ್ತದೆ. ಕದಂಬ ವಂಶದ ಚಟ್ಟನೆಂಬುವವನು ಪೆರ್ಗಡೆಯಾಗಿ ಅಧಿಕಾರ ನೆಡೆಸುತ್ತಿದ್ದುದನ್ನು ದಾಖಲಿಸುತ್ತದೆ. ಕ್ರಿ. ಶ. ೯೭೧ ರ ಕುಡುತಿನಿ ಶಾಸನವು (SII Vol IX Pt. I No. 70) ಖೊಟ್ಟಿಗನು ರಾಜ್ಯಭಾರ ಮಾಡುತ್ತಿದ್ದಾಗ ರಾಜ್ಯವು ನಿಷ್ಕಂಟಕವಾಗಿತ್ತೆಂದು ತಿಳಿಸುತ್ತದೆ. ಕ್ರಿ. ಶ. ೯೭೧ ರ ಅದರಗುಂಚಿ ಶಾಸನವು (IA Vol XII P 255-256) ಪೆರ್ಮಾಡಿ ಮಾರಸಿಂಘದೇವನು ಗಂಗವಾಡಿ ೯೬,೦೦೦, ಪುರಿಗೆಱೆ – ೩೦೦, ಬೆಳ್ವೊಲ – ೩೦೦ ನ್ನು ಆಳುತ್ತಿದ್ದನು. ಪಞ್ಚಲ ದೇವನು ಸೆಬ್ಬಿ

೩೦ ನ್ನು ಆಳುತ್ತಿದ್ದನೆಂದು ಉಲ್ಲೇಖಿಸುತ್ತದೆ. ಖೊಟ್ಟಿಗನಿಗೆ ರಟ್ಟಕಂದರ್ಪ, ಚಿತ್ರವೆಂಡಗನೆಂಬ ಬಿರುದಿತ್ತೆಂದು ದಾಖಲಿಸುತ್ತದೆ.

ಕ್ರಿ. ಶ. ೯೭೧ ರ ಕಿತ್ತೂರು ಶಾಸನವು (SII Vol XVIII No. 33) ಗುತ್ತಿಯ ಗಂಗನು ಪುರಿಗೆಱೆ – ೩೦೦, ಬೆಳ್ವೊಲ – ೩೦೦ ನ್ನು, ಮುನುಱಿಕ್ಕ ಮಾರಸಿಂಗ ನಾಱ್ಗಾವುಂಡನಾಗಿದ್ದಾಗ ಕುಣ್ಮುಱಿರೆಱೆಯಮ್ಮನ ಮಗ ವಱೆವಿಟನು ಊರಳಿವಿನಲ್ಲಿ ಹೋರಾಡಿ ಸತ್ತಿದ್ದನ್ನು ಉಲ್ಲೇಖಿಸುತ್ತದೆ.

ಕ್ರಿ. ಶ. ೯೭೧ ರ ಹುಲಗೂರು ಶಾಸನವು (EI Vol XXXIV No. 12) ಖೊಟ್ಟಿಗನ ಆಳ್ವಿಕೆಯ ಕಾಲದಲ್ಲಿ ಗುತ್ತಿಯಗಂಗನು ಗಂಗವಾಡಿ – ೯೬,೦೦೦, ಪುರಿಗೆಱೆ – ೩೦೦, ಬೆಳ್ವೊಲ – ೩೦೦, ಕಿಸುಕಾಡು – ೭೦ ನ್ನು ಆಳುತ್ತಿದ್ದನು . ಈತನ ಪತ್ನಿ ದಾನಪದ್ಮಜೆ ಅಂಕಬ್ಬರಸಿಯು ಪುಲ್ಲಂಗೂರಿನ ಗರ್ವಿತ ಶತ್ರುಗಳನ್ನು ನಿಗ್ರಹಿಸಿ ಆಳ್ವಿಕೆ ನಡೆಸುತ್ತಿದ್ದಳೆಂಬ ವಿವರವು ತಿಳಿದುಬರುತ್ತದೆ. ಈಕೆ ಅನೇಕ ದಾನಗಳನ್ನು ನೀಡಿದುದನ್ನು ಉಲ್ಲೇಖಿಸುತ್ತದೆ. ಮಣಲರ ಆದಿತ್ಯ, ಮಾರಸಿಂಘಯ್ಯನು ಪ್ಯರಿಗೆಱೆ ೩೦೦ ಕ್ಕೆ ನಾಱ್ಗಾವುಂಡರಾಗಿದ್ದಾಗ ಗಂಗ ಮಹಾದೇವಿಯರಿಗೆ ಬಿನ್ನಹ ಮಾಡಿ, ಪುಲ್ಲಂಗೂರಬ್ಬೆಗೆ ಸೇರಿದ ಎಲ್ಲವನ್ನೂ ಬಿಡಿಸಿಕೊಂಡಿದ್ದನ್ನು ದಾಖಲಿಸುತ್ತದೆ.

ಖೊಟ್ಟಿಗನ ಕಾಲದ ಹದಿನೈದು ಶಾಸನಗಳು ಸಿಕ್ಕಿವೆ. ಅವು ಈತನು ರಾಜ್ಯಭಾರ ಮಾಡುತ್ತಿದ್ದುದನ್ನು ತಿಳಿಸುತ್ತದೆ. ಯುದ್ಧ, ಆಂತರಿಕ ಗಲಭೆ ಅಥವಾ ಸಮಕಾಲೀನ ದೊರೆಗಳಿಂದ ಉಂಟಾದ ತೊಂದರೆಗಳು, ಕಿರುಕುಳಗಳು ಮುಂತಾದ ಯಾವುದೇ ವಿಷಯವನ್ನು ಉಲ್ಲೇಖಿಸುವುದಿಲ್ಲ. ಈತನ ಕಾಲದಲ್ಲಿ ಹೊರಡಿಸಿರುವ ಶಾಸನಗಳೆಲ್ಲ ದಾನಶಾಸನಗಳು ಮತ್ತು ಗೋಸಾಸಗಳಾಗಿವೆ. ಈ ಶಾಸನಗಳನ್ನು ಗಮನಿಸಿದಾಗ (ಕ್ರಿ. ಶ. ೯೬೯ ರ ಸೋಮನಳ್ಳಿ ಶಾಸನ) ರಾಜ್ಯವು ನಿಷ್ಕಂಟಕವಾಗಿತ್ತು ಎಂದು ತಿಳಿದುಬರುತ್ತದೆ. ಅಂದರೆ ಅಲ್ಲಿಯವರೆಗೂ ವೈರಿಗಳು ಸುಮ್ಮನಿದ್ದರೆಂದು ಹೇಳಬೇಕಾಗುತ್ತದೆ.

ಕ್ರಿ. ಶ. ೯೩೯ ರಿಂದ ೯೬೭ ರವರೆಗೆ ಮೂರನೆಯ ಕೃಷ್ಣನ ಆಳ್ವಿಕೆಯು ನಡೆದಿದೆ. ೯೬೭ ರಿಂದ ೯೭೨ ರ ವರೆಗೆ ಖೊಟ್ಟಿಗನು ರಾಜ್ಯಭಾರ ಮಾಡುತ್ತಾನೆ. ಈ ಐದು ವರ್ಷಗಳ ಕಾಲ ಅವನು ರಾಜ್ಯವನ್ನು ವೈರಿಗಳ ಪಾಲಾಗಲು ಬಿಡದೇ

ಉಳಿಸಿಕೊಂಡಿದ್ದನೇ ಎನ್ನುವ ಸಂಶಯ ಬರುತ್ತದೆ. ಕೆಲವು ಶಾಸನಗಳು ತುಱುಗಾಳಗ ಮುಂತಾದ ಸಣ್ಣಪುಟ್ಟ ಕಾಳಗವನ್ನು ಹೇಳುವುದರಿಂದ ಯುದ್ಧಗಳು ನಡೆದಿಲ್ಲವೆಂದೇ ಹೇಳಬೇಕಾಗುತ್ತದೆ. ಜೊತೆಗೆ ಖೊಟ್ಟಿಗನು ಮಾನ್ಯಖೇಟದಲ್ಲಿಯೇ ರಾಜ್ಯಭಾರ ಮಾಡುತ್ತಿದ್ದನೆಂದೇ ಸ್ಪಷ್ಟವಾಗಿ ದಾಖಲಿಸಿರುವುದರಿಂದ ವೈರಿಗಳು ಒಳಗೇ ಸಂಚು ಮಾಡುತ್ತಿದ್ದರೆಂದು ಊಹಿಸಬಹುದು.

ಪ್ರತೀಹಾರ ಎರಡನೆಯ ಸೀಯಕನು ರಾಷ್ಟ್ರಕೂಟರ ಅಧಿಕಾರವನ್ನು ಕಿತ್ತುಹಾಕಲು ಯೋಚಿಸುತ್ತಿದ್ದಾಗಲೇ ಮೂರನೆಯ ಕೃಷ್ಣನ ಮರಣವು ಸಂಭವಿಸಿತು. ಈ ಸಮಯವನ್ನು ಉಪಯೋಗಿಸಿಕೊಂಡ ಸೀಯಕನು ಕೃಷ್ಣನ ಉತ್ತರಾಧಿಕಾರಿಯಾದ ಖೊಟ್ಟಿಗನಿಗೆ ತಲೆಬಾಗಲಿಲ್ಲ, ದಂಗೆಯೆದ್ದನು. ಖೊಟ್ಟಿಗನು ದಂಗೆಕೋರರ ವಿರುದ್ಧ ಹೋರಾಡಿದನು. ನರ್ಮದಾ ದಂಡೆಯ ಕಲಿಘಟ್ಟ ಎಂಬಲ್ಲಿ ಸೇನೆಗಳು ಸಂಧಿಸಿದವು. ಸೀಯಕನಿಗೆ ಪರಮಾರ ಕಂಕನು ಸಹಾಯ ಮಾಡಿದನು. ವೈರಿಯೊಂದಿಗಿನ ಯುದ್ಧದಲ್ಲಿ ಕಂಕನು ಮಡಿದನು. ಸೀಯಕನು ಬಹಳ ಕಷ್ಟಪಟ್ಟು ಶತ್ರುಗಳನ್ನು ಓಡಿಸಿದನು. ರಾಷ್ಟ್ರಕೂಟ ಖೊಟ್ಟಿಗನನ್ನು ಅವನ ರಾಜಧಾನಿಯಾದ ಮಾನ್ಯಖೇಟದವರೆಗೆ ಅಟ್ಟಿಸಿಕೊಂಡು ಬಂದನು. ಮೊದಲ ಬಾರಿಗೆ ಶತ್ರುಗಳ ಕೈಗೆ ಸಿಕ್ಕಿದ ಮಾನ್ಯಖೇಟವನ್ನು ಪರಮಾರರು ಕೊಳ್ಳೆಹೊಡೆದರು. ಗಂಗದೊರೆ ಎರಡನೆಯ ಮಾರಸಿಂಹನು ಸಾಹಸದಿಂದ ಚಕ್ರವರ್ತಿ ಖೊಟ್ಟಿಗನನ್ನು, ಅವನ ರಾಜಧಾನಿಯನ್ನು ರಕ್ಷಿಸಿದನು. ಮುಂದೆ ಖೊಟ್ಟಿಗನ ಬಗ್ಗೆ ತಿಳಿಯುವುದಿಲ್ಲ.

## ಕನ್ನರದೇವ IV

ಕ್ರಿ. ಶ. ೯೭೨ ರ ಹರೀಶಿ ಶಾಸನದಲ್ಲಿ (ಕರ್ನಾಟಕ ಶಾಸನ ಕಲೆ ಪು ೩೬, ಡಾ॥ ಎಚ್. ಆರ್. ರಘುನಾಥ ಭಟ್) ಖೊಟ್ಟಿಗದೇವನ ಮಗ ಕನ್ನರದೇವನು ರಾಜ್ಯಭಾರ ಮಾಡುತ್ತಿದ್ದಾಗ, ಚಟ್ಟಯ್ಯದೇವನು ಬನವಾಸಿ ಪನ್ನಿರ್ಚ್ಛಾಸಿರವನ್ನು ಪಾಲಿಸುತ್ತಿದ್ದನೆಂಬ ಉಲ್ಲೇಖವಿದೆ. ದೇವಯ್ಯನೆಂಬುವನು ನೂರು ಊರುಗಳ ಗಾವುಂಡನಾಗಿದ್ದನೆಂದು ದಾಖಲಿಸುತ್ತದೆ.

ರಾಷ್ಟ್ರಕೂಟರ ಆಳ್ವಿಕೆಯು ಖೊಟ್ಟಿಗನ ಕಾಲಕ್ಕೆ ಮುಗಿದುಹೋಗಿತ್ತು ಎಂದೇ ಎಲ್ಲರೂ ತಿಳಿದಿದ್ದರು. ಹರೀಶಿಯ ಶಾಸನವು ಸಿಕ್ಕಿದ ನಂತರ ನಾಲ್ಕನೆಯ

ಕನ್ನರದೇವನು ಕೂಡ ರಾಜ್ಯಭಾರ ಮಾಡಿದ್ದನೆಂದು ತಿಳಿದುಬರುತ್ತದೆ. ಆದರೆ ಇವನ ರಾಜ್ಯದ ವಿಸ್ತೀರ್ಣದ ಬಗ್ಗೆ ಖಚಿತವಾದ ತೀರ್ಮಾನಕ್ಕೆ ಬರಲು ಸಾಧ್ಯವಿಲ್ಲ.

**ಕರ್ಕ III (ಕ್ರಿ.ಶ. ೯೭೨ – ೯೭೪)**

ಇಲ್ಲಿ ಬರುವ ಕರ್ಕನು ಮೂರನೆಯ ಕರ್ಕನಾಗುತ್ತಾನೆ. ಏಕೆಂದರೆ ಧಾರಾವರ್ಷ ಧ್ರುವನ ಮಗನು ಎರಡನೇ ಕರ್ಕನಾಗುತ್ತಾನೆ. ಈತನ ಕಾಲ ಕ್ರಿ.ಶ. ೭೭೯.

ನಾಲ್ಕನೆಯ ಕನ್ನರದೇವನ ನಂತರ ಮೂರನೆಯ ಕರ್ಕನು ಒಂದು ವರ್ಷ ಆಳ್ವಿಕೆ ನಡೆಸಿದನು. ನಿರುಪಮನ ಮಗನೂ, ಖೊಟ್ಟಿಗನ ಸೋದರಳಿಯನೂ ಆಗಿದ್ದ ಮೂರನೆಯ ಕರ್ಕನು ಸಿಂಹಾಸನವನ್ನು ಕ್ರಿ. ಶ. ೯೭೪ ರಲ್ಲಿ ಏರಿದನು. ಇದರಿಂದ ನಾಲ್ಕನೆಯ ಕೃಷ್ಣನಿಗೆ (ಕನ್ನರದೇವ) ನಿರುಪಮನೆಂಬ ಹೆಸರಿತ್ತೆಂದು ತಿಳಿದುಬರುತ್ತದೆ. ಈ ಹೊತ್ತಿಗಾಗಲೇ ಸಾಮ್ರಾಜ್ಯವು ನಾಶವಾಗಿದ್ದರಿಂದ ಮತ್ತು ಕರ್ಕನು ಅಧಿಕಾರಕ್ಕೆ ಬಂದಾಗ ಇದ್ದ ಇಬ್ಬರು ದುಷ್ಟ ಮಂತ್ರಿಗಳಿಂದಾಗಿ ಪರಿಸ್ಥಿತಿಯು ಮತ್ತಷ್ಟು ಕೆಟ್ಟಿತು. ಇದರಿಂದಾಗಿ ಸಾಮಂತರಲ್ಲಿ ಸಾಮ್ರಾಟರಾಗುವ ಆಸೆಗೆ ಅನುಕೂಲಕರವಾದ ಪರಿಸ್ಥಿತಿಯು ಉಂಟಾಯಿತು. ಈ ಪರಿಸ್ಥಿತಿಯ ಉಪಯೋಗವನ್ನು ಪಡೆದ ಕಲ್ಯಾಣಿ ಚಾಲುಕ್ಯ ಇಮ್ಮಡಿ ತೈಲಪನು ಕ್ರಿ. ಶ. ೯೭೩ ರ ಕೊನೆಯ ವೇಳೆಗೆ ಕರ್ಕನ ಮೇಲೆ ಯುದ್ಧಕ್ಕೆ ಹೋದನು. ಉತ್ತರ ಕರ್ಣಾಟಕದ ಒಂದು ಭಾಗದಲ್ಲಿ ಯುದ್ಧ ನಡೆದು ಕರ್ಕನು ಸೋತುಹೋದನು. ಅವನ ದುಷ್ಟ ಮಂತ್ರಿಗಳನ್ನು ಕೊಲ್ಲಲಾಯಿತು. ತಪ್ಪಿಸಿಕೊಂಡ ಕರ್ಕನು ಸೊರಬ ತಾಲ್ಲೂಕಿನಲ್ಲಿ ಪುಟ್ಟ ಸಂಸ್ಥಾನವನ್ನು ಕಟ್ಟಿಕೊಂಡು ಆಳುತ್ತಿದ್ದನು. ಮೂರನೆಯ ಕೃಷ್ಣನ ಮೊಮ್ಮಗನೂ, ತನಗೆ ಸೋದರಳಿಯನೂ ಆಗಿದ್ದ ಕರ್ಕನನ್ನು ಅಧಿಕಾರದಲ್ಲಿ ಉಳಿಸಲು ಗಂಗ ಮಾರಸಿಂಹನು ಬಹಳವಾಗಿ ಪ್ರಯತ್ನಿಸಿದನು. ಇದು ಫಲಕಾರಿಯಾಗಲಿಲ್ಲ.

ಕ್ರಿ. ಶ. ೯೭೪ರ ಗುಂಡೂರು ಶಾಸನವು (IA Vol XII PP 270 - 272) ಕಕ್ಕಲದೇವನು ರಾಜ್ಯಭಾರ ಮಾಡುತ್ತಿರುವಾಗ, ನೊಳಂಬ ಕುಲತಿಲಕನಾದ ಪೆರ್ಮಾನಡಿ ಮಾರಸಿಂಘದೇವನು ಎರಡರುನೂರುವನ್ನು ಆಳುತ್ತಿರುವಾಗ, ಕೊಮರಂಕ ಭೀಮಪಂಜಲದೇವನು ತೊಂಭತ್ತಾರನ್ನು ಆಳುತ್ತಿರಲು ಮಂಗೂಱಟಜನು ಕಡೇಕೇರಿಯನ್ನಾಳುತ್ತಿದ್ದಾಗ, ಬೊಱಗದಿ ತಲೆಯನ್ನು ರಾಜಯ್ಯ ನಾಟ್ಗಾವುಂಡನಾಗಿ,

ಮನಯ್ಯನು ಊರಗಾವುಂಡನಾಗಿ ಆಳುತ್ತಿದ್ದಾಗ, ಬೋಟಿಯ್ಯನೂ, ರಾಜಯ್ಯನೂ ಓಜಯ್ಯನೂ ಇವರೆಲ್ಲಾ ಕಡೇಕೇರಿಯ ಮಹಾದೈವರಿಗೆ ಕರಿಯ ಮಣ್ಣಿನ ಭೂಮಿ, ಏಳುಮತ್ತರು ಗದ್ದೆಯನ್ನು ನೀಡಿದನ್ನು ದಾಖಲಿಸುತ್ತದೆ.

## ಇಂದ್ರ IV (ಕ್ರಿ.ಶ. ೯೭೩-೯೭೪)

ಕರ್ಕನನ್ನು ಕಲ್ಯಾಣಿ ಚಾಲುಕ್ಯ ತೈಲಪನು ಸೋಲಿಸಿದರೂ, ಸಣ್ಣ ಸಂಸ್ಥಾನದಲ್ಲಿ ಆಳುತ್ತಿದ್ದನು. ಕರ್ಕನ ನಂತರ ಬಂದ ನಾಲ್ಕನೆಯ ಇಂದ್ರನ ಪರವಾಗಿದ್ದು, ವಂಶವನ್ನು ಮೊದಲಿನಂತೆ ಮೇಲೇರಿಸಲು ಪ್ರಯತ್ನಿಸಿದವನು ಗಂಗ ಮಾರಸಿಂಹ. ಈ ಪ್ರಯತ್ನವು ಯಶಸ್ವಿಯಾಗಲಿಲ್ಲ. ಕ್ರಿ. ಶ. ೯೭೪ ರಲ್ಲಿ ತೈಲಪನು ರಾಷ್ಟ್ರಕೂಟರನ್ನು ಸಂಪೂರ್ಣವಾಗಿ ನಾಶ ಮಾಡಿದನು. ಇಂದ್ರ ಮತ್ತು ಮಾರಸಿಂಹ ಇಬ್ಬರೂ ಜೈನ ಮುನಿಗಳಾಗಿ ಸಲ್ಲೇಖನವನ್ನು ಸ್ವೀಕರಿಸಿ ದೇಹತ್ಯಾಗ ಮಾಡಿದರು.

## ಅವನತಿ

ಕ್ರಿ. ಶ. ೯೭೪ ರಲ್ಲಿ ಚಾಳುಕ್ಯ ವಂಶದ ಎರಡನೆಯ ತೈಲಪನು ದಂಗೆಯೆದ್ದು ರಾಷ್ಟ್ರಕೂಟರನ್ನು ಸೋಲಿಸುವುದರ ಮೂಲಕ ಚಾಳುಕ್ಯ ರಾಜ್ಯವನ್ನು ಮತ್ತೆ ಸ್ಥಾಪಿಸಿದನು. ಹಿಂದೆಯೇ ತಿಳಿಸಿದ್ದಂತೆ ಕಲಚುರಿಗಳು ಇವರ ಪತನವಾಗುವುದನ್ನು ತಡೆಯಲಿಲ್ಲ. ಏಕೆಂದರೆ ಮೂರನೆಯ ಕೃಷ್ಣನನ್ನು ಕಲಚುರಿಗಳು ಅಷ್ಟರ ಮಟ್ಟಿಗೆ ದ್ವೇಷಿಸುತ್ತಿದ್ದರು. ಪರಮಾರ ಸೀಯಕ ಹರ್ಷನು ದ್ವೇಷದಿಂದ ಕ್ರಿ. ಶ. ೯೭೨ ರಲ್ಲಿ ಮಳಖೇಡಕ್ಕೆ ಮುತ್ತಿಗೆ ಹಾಕಿದಾಗ ರಾಷ್ಟ್ರಕೂಟರ ಸಾಮಂತನಾಗಿದ್ದ ಗಂಗಮಾರಸಿಂಹನು ಎದುರಿಸಿದರೂ ಅವರ ಮುಂದೆ ನಿಲ್ಲಲಾಗಲಿಲ್ಲ. ಮಳಖೇಡವನ್ನು ಸುಟ್ಟು ನಾಶಮಾಡಿದರು. ತೈಲಪನ ಬಲದ ಮುಂದೆಯೂ ನಿಲ್ಲಲಾಗದ್ದರಿಂದ ಗಂಗಮಾರಸಿಂಹನು ಕೃಷ್ಣನ ಮೊಮ್ಮಗನಾದ ನಾಲ್ಕನೆಯ ಇಂದ್ರನನ್ನು ಬಂಕಾಪುರಕ್ಕೆ ಕರೆದುಕೊಂಡು ಹೋಗುತ್ತಾನೆ. ಅಲ್ಲಿ ಅವನಿಗೆ ಪಟ್ಟಾಭಿಷೇಕ ಮಾಡುತ್ತಾನೆ. ರಾಷ್ಟ್ರಕೂಟರ ವಂಶ ಕ್ಷೀಣವಾದರೂ ಅಸ್ತಿತ್ವದಲ್ಲಿತ್ತು. ಆದರೆ ಮನೆತನವನ್ನು ಮೇಲೆತ್ತಲಾಗಲಿಲ್ಲ. ಕ್ರಿ. ಶ. ೯೭೪ ರ ಸುಮಾರಿಗೆ ರಾಷ್ಟ್ರಕೂಟ ರಾಜ್ಯವು ಸಂಪೂರ್ಣವಾಗಿ ಕುಸಿಯಿತು.

ಕ್ರಿ. ಶ. ೭೫೩ ರಿಂದ ೯೭೩ ರ ವರೆಗೆ ರಾಷ್ಟ್ರಕೂಟರು ಭಾರತದ ಇತಿಹಾಸದಲ್ಲಿ ಮೆರೆದು ಕಣ್ಮರೆಯಾದರು. ಭಾರತದ ಇತಿಹಾಸದಲ್ಲಿ ದಕ್ಷಿಣಾಪಥದ ಯಾವ ರಾಜವಂಶವೂ ರಾಷ್ಟ್ರಕೂಟರಂತೆ ಮಹತ್ವವಾದ ಪಾತ್ರವನ್ನು ನಿರ್ವಹಿಸಲಿಲ್ಲ. ಧ್ರುವ, ಮೂರನೆಯ ಗೋವಿಂದ, ಮೂರನೆಯ ಇಂದ್ರ, ಮೂರನೆಯ ಕೃಷ್ಣ ಇವರು ಉತ್ತರ ಭಾರತದಲ್ಲಿ ದಿಗ್ವಿಜಯ ನಡೆಸಿ, ಉತ್ತರದ ವೀರ ಅರಸರನ್ನು ಸದೆಬಡೆದು ಆ ಪ್ರದೇಶಗಳ ಇತಿಹಾಸದ ದಿಕ್ಕು ತಪ್ಪಿಸಿದರು. ಅವರ ದಕ್ಷಿಣದ ದಿಗ್ವಿಜಯಗಳು ಇದೇ ರೀತಿ ಯಶಸ್ವಿಯಾಯಿತು. ರಾಮೇಶ್ವರದಿಂದ ಹಿಮಾಲಯದ ತಪ್ಪಲಿನವರೆಗೆ, ಗುಜರಾತಿನಿಂದ ಪಾಂಡಿಚೆರಿಯವರೆಗೆ ಇವರ ಅಖಂಡ ಸಾಮ್ರಾಜ್ಯ ಕೆಲವು ಕಾಲದವರೆಗಾದರೂ ಹಬ್ಬಿತ್ತು. ಭಾರತದ ಪ್ರಮುಖ ರಾಜ ಮನೆತನಗಳಾದ ಪ್ರತೀಹಾರ, ಪಾಲ, ಪೂರ್ವಚಾಲುಕ್ಯರು, ಚೋಳ, ಗಂಗ ಮುಂತಾದವರು ಒಂದಲ್ಲ ಒಂದು ಕಾಲದಲ್ಲಿ ರಾಷ್ಟ್ರಕೂಟರಿಂದ ಸೋಲಿಸಲ್ಪಟ್ಟಿದ್ದರು. ಕೆಲವು ಸಾರಿ ಸೋಲನ್ನನುಭವಿಸಿದರೂ ಅವರ ಸೈನ್ಯ ದೊಡ್ಡ ದೊಡ್ಡ ವಿಜಯಗಳನ್ನು ಪಡೆಯುತ್ತಲೇ ಇತ್ತು. ಭಾರತಕ್ಕೆ ಭೇಟಿ ನೀಡಿದ ವಿದೇಶಿ ಬರಹಗಾರರು ರಾಷ್ಟ್ರಕೂಟ ಅರಸರನ್ನು ಹೃತ್ಪೂರ್ವಕವಾಗಿ ಕೊಂಡಾಡಿದ್ದಾರೆ. ಉದಾರಿಗಳೂ, ಪ್ರಗತಿಪರರೂ, ಕಲಾಭಿಮಾನಿಗಳೂ, ವಾಸ್ತು ವೈಶಿಷ್ಟ್ಯತೆ ಮತ್ತು ಸಾಹಿತ್ಯ ಧರ್ಮಗಳ ಪೋಷಕರಾಗಿದ್ದ ರಾಷ್ಟ್ರಕೂಟರು ಭಾರತದ ಇತಿಹಾಸದಲ್ಲಿ ಅಜರಾಮರರಾಗಿದ್ದಾರೆ. ಇಡೀ ಭಾರತದ ಇತಿಹಾಸದಲ್ಲಿ ಅಖಂಡವಾಗಿ ಮೆರೆದಿದ್ದ ರಾಷ್ಟ್ರಕೂಟ ವಂಶವು ಮಣ್ಣುಗೂಡಿದರೂ, ಇತಿಹಾಸದ ಉದ್ದಕ್ಕೂ ಮತ್ತೆ ಮತ್ತೆ ನೆನೆಪಿಸಿಕೊಳ್ಳುವಂತೆ ಬದುಕಿದ ವಂಶವಿದು.

## ವಂಶಾವಳಿ



ದಂತಿವರ್ಮನ್
ಇಂದ್ರಪೃಚ್ಛಕರಾಜ
ಗೋವಿಂದರಾಜ I
ಕರ್ಕರಾಜ I
ನನ್ನರಾಜ
(ಗುಣಾವಲೋಕ)
ಇಂದ್ರ II
/ ಭವಗಣಾ
ಚಾಲುಕ್ಯ ರಾಜಕುಮಾರಿ
2. ಕೃಷ್ಣ I
(ಅಕಾಲವರ್ಷ)
ಧ್ರುವ
ಶಂಕರಗಣ
(ಸಮಾರಾವಲೋಕ)
(ಕ್ರಿ.ಶ. ೭೯೩)
1. ದಂತಿದುರ್ಗ
(ಕ್ರಿ.ಶ. ೭೩೫ – ೭೫೫)
ಗೋವಿಂದ
(ಲಾಟ ಶಾಖೆ I)
ಕರ್ಕಸುವರ್ಣವರ್ಷ II
3.ಗೋವಿಂದ II
(ವಿಕ್ರಮಾವಲೋಕ)
(ಕ್ರಿ.ಶ. ೭೭೦ – ೭೭೫)
4. ಧಾರಾವರ್ಷ ಧ್ರುವ
/ ಶೀಲ ಭಟ್ಟಾರಿಕಾ
(ಚಾಲುಕ್ಯ ರಾಜಕುಮಾರಿ)
(ಕ್ರಿ.ಶ. ೭೭೫ – ೭೮೬)
ಇಂದ್ರ
(ಲಾಟದ
ಅಧಿಪತಿ)
ಶೀಲಮಹಾದೇವಿ
(ವೆಂಗಿ
ವಿಷ್ಣುವರ್ಧನ V)
ಕರ್ಕ II
(ಕ್ರಿ.ಶ. ೭೭೯)
ರಣಾವಲೋಕ
ಸ್ತಂಭಯ್ಯ
(ಗಂಗವಾಡಿ ಪ್ರದೇಶ)
5.ಗೋವಿಂದ III
(ಗಾಮುಂಡಬ್ಬೆ)
(ಕ್ರಿ.ಶ.೭೯೩–೮೧೩)
ಕರ್ಕ
(ಲಾಟದ ಅಧಿಪತಿ)
ದಂತಿವರ್ಮ
(ಗಂಗವಾಡಿ
ಪ್ರದೇಶ)
ಮಗಳು
(ಪಲ್ಲವ
ದಂತಿವರ್ಮ)
ಶಂಕರಗಣ
(ಸಮರಾವಲೋಕ)
6.ಶರ್ವ ಅಮೋಘವರ್ಷ I
(ಕ್ರಿ.ಶ. ೮೧೪ – ೮೭೭)



6. ಶರ್ವ ಅಮೋಘವರ್ಷ I
(ಕ್ರಿ.ಶ. ೮೧೪ – ೮೭೭)
ಶಂಖಾ
(ಪಲ್ಲವ
ನಂದಿವರ್ಮ III)
ದುದ್ದಯ್ಯ
ಚಂದ್ರೋಬಲಬ್ಬಾ
(ಗಂಗಬೂತುಗ I)
ರೇವಕನಿರ್ಮಡಿ
(ಗಂಗಬೂತುಗ II)
7. ಕೃಷ್ಣ II
(ಚೇದಿ ರಾಜಕುಮಾರಿ)
(ಕ್ರಿ.ಶ. ೮೭೮ – ೯೧೨)
ಜಗತ್ತುಂಗ II / ಲಕ್ಷ್ಮಿ
(ಕಲಚುರಿ ಶಂಕರಗಣನ ಮಗಳು)
(ಕ್ರಿ.ಶ. ೮೯೦–೯೧೨)
ರೇವಾ
(ಪಲ್ಲವನಂದಿವರ್ಮ II)
8. ನಿತ್ಯವರ್ಷ ಇಂದ್ರ III / ವಿಜಾಂಬಾ
(ಕಲಚುರಿ ಶಂಕರಗಣನ ತಂಗಿ)
(ಕ್ರಿ.ಶ. ೮೯೯–೯೨೮)
11. ಅಮೋಘವರ್ಷ III /
ಕುಂದಕದೇವಿ
(ಕಲಚುರಿ ಶಂಕರಗಣನ ಮೊಮ್ಮಗಳು)
(ಕ್ರಿ.ಶ. ೯೩೬ ೯೩೯)
9. ಅಮೋಘವರ್ಷ II
(ಚೇದಿ ರಾಜಕುಮಾರಿ)
(ಕ್ರಿ.ಶ. ೯೨೮–೯೨೯)
10. ಗೋವಿಂದ IV
(ಕ್ರಿ.ಶ. ೯೨೮–೯೩೬)
12. ಕೃಷ್ಣ III
(ಕ್ರಿ.ಶ. ೯೩೯–೯೬೭)
ಪುತ್ರ
16. ಇಂದ್ರ IV
(ಕ್ರಿ.ಶ. ೯೭೩–೯೭೪)
13. ಖೊಟ್ಟಿಗ
(ಕ್ರಿ.ಶ. ೯೬೭–೯೭೨)
14. ಕನ್ನರದೇವ IV
(ಕ್ರಿ.ಶ. ೯೭೨)
ನಿರುಪಮ
15. ಕರ್ಕ III
(ಕ್ರಿ.ಶ. ೯೭೨–೯೭೪)

## ೪. ಗುಜರಾತಿನ ರಾಷ್ಟ್ರಕೂಟರು (ಕ್ರಿ.ಶ. ೭೫೭ ಅಂತಿಮ ಕಾಲ)

ದಂತಿದುರ್ಗನು ಚಾಲುಕ್ಯ ಇಮ್ಮಡಿ ಕೀರ್ತಿವರ್ಮನನ್ನು ಸೋಲಿಸಿದ ನಂತರ ಲಾಟದ ದಕ್ಷಿಣ ಮತ್ತು ಮಧ್ಯ ಭಾಗವನ್ನು ಆಳುತ್ತಿದ್ದ ಗುಜರಾತಿನ ರಾಷ್ಟ್ರಕೂಟರನ್ನೂ ತನ್ನ ಅಧೀನಪಡಿಸಿಕೊಂಡನು. ಇದರಿಂದ ಮಳಖೇಡದ ರಾಷ್ಟ್ರಕೂಟರಿಗಿಂತ ಮೊದಲು ಗುಜರಾತಿನ ರಾಷ್ಟ್ರಕೂಟರು ಗುಜರಾತಿನಲ್ಲಿ ಆಳ್ವಿಕೆ ನಡೆಸುತ್ತಿದ್ದರೆಂದು ತಿಳಿದುಬರುತ್ತದೆ. ಅಥವಾ ದಂತಿದುರ್ಗನ ಹಿಂದಿನ ದೊರೆಗಳು ಮತ್ತು ಗುಜರಾತಿನ ರಾಷ್ಟ್ರಕೂಟರು ಸಮಕಾಲೀನರು ಎಂದೂ ಹೇಳಬಹುದಾಗಿದೆ.

### ಶಾಖೆಗಳು

ಗುಜರಾತಿನ ರಾಷ್ಟ್ರಕೂಟರ ಎರಡು ಶಾಖೆಗಳಿದ್ದವು. ಮೊದಲಿನ ಶಾಖೆಯಲ್ಲಿ ಒಂದನೆಯ ಕರ್ಕರಾಜ, ಧ್ರುವರಾಜ, ಗೋವಿಂದರಾಜ, ಎರಡನೆಯ ಕರ್ಕರಾಜ ಎಂಬ ನಾಲ್ಕು ಅರಸರಿದ್ದರು. ಎರಡನೆಯ ಶಾಖೆಯನ್ನು ಮಳಖೇಡದ ರಾಷ್ಟ್ರಕೂಟ ಮೂರನೆಯ ಗೋವಿಂದನು ತನ್ನ ತಮ್ಮ ಇಂದ್ರರಾಜನಿಗೆ ನೀಡಿದನು ಎಂದು ಶಾಸನಗಳು ತಿಳಿಸುತ್ತವೆ.

ಗುಜರಾತಿನಲ್ಲಿ ರಾಷ್ಟ್ರಕೂಟರ ಎರಡು ಶಾಖೆಗಳಿದ್ದವು. ಅದರಲ್ಲಿ ಒಂದನೆಯ ಶಾಖೆಯನ್ನು ಮೂರನೆಯ ಇಂದ್ರನು ಗೆದ್ದುಕೊಂಡಿದ್ದನು. ಇವರನ್ನು ಕರ್ಕರಾಜನ ವಂಶದವರೆಂದು ಹೇಳಲಾಗಿದೆ. ಇವರು ಆಳುತ್ತಿದ್ದ ಪ್ರದೇಶ ಲಾಟಮಂಡಲ. ಇದನ್ನು ಮೂರನೆಯ ಗೋವಿಂದನು ಸ್ವಾಧೀನಪಡಿಸಿಕೊಂಡ ನಂತರ ತನ್ನ ತಮ್ಮನಾದ ಇಂದ್ರನಿಗೆ ನೀಡಿದನು. ಈ ಇಂದ್ರನ ಮಗನೇ ಕರ್ಕರಾಜ. ಗೋವಿಂದನ ಮರಣಾನಂತರ ಇಂದ್ರನ ಮಗ ಕರ್ಕರಾಜನೇ ಅಮೋಘವರ್ಷನಿಗೆ ಸಹಾಯಕನಾಗಿದ್ದವನು. ಅವನ ವಿಪತ್ತುಗಳನ್ನು ದೂರ ಮಾಡಿದವನು. ಇಲ್ಲಿ ಒಂದು ಪ್ರಶ್ನೆಯೇಳುತ್ತದೆ. ಗೋವಿಂದನ ತಮ್ಮನ ಮಗ ಕರ್ಕ ಮತ್ತು ಅಮೋಘವರ್ಷ ಇಬ್ಬರೂ ಸಮವಯಸ್ಕರಾಗಿರಬಾರದೇಕೆ? ತಮ್ಮನ ಮಗ, ತನ್ನ ಮಗ ಇವರಿಬ್ಬರ ವಯಸ್ಸಿನ ಅಂತರವೆಷ್ಟಿರಬಹುದು? ಕರ್ಕ ಅಮೋಘವರ್ಷನಿಗಿಂತ ೫–೬ ವರ್ಷ ದೊಡ್ಡವನಿರಬಹುದೇ? ಆತ ಅಮೋಘವರ್ಷನನ್ನು ರಕ್ಷಿಸಿದನೇ ಎನ್ನುವ ಅನುಮಾನ ಸಹಜವಾಗಿಯೇ ಬರುತ್ತದೆ.

ಅಮೋಘವರ್ಷನು ಪಟ್ಟಕ್ಕೆ ಬಂದಾಗ, ಸಾಮಂತರು, ದಾಯಾದಿಗಳಾದ ರಾಷ್ಟ್ರಕೂಟರೂ ಸೇರಿ ಗಲಭೆಯನ್ನುಂಟು ಮಾಡಿದಾಗ, ಪಾತಾಳಮಲ್ಲನೆಂಬುವನ ಸಹಾಯದಿಂದ ಈ ಗಲಭೆಯನ್ನು ಹತ್ತಿಕ್ಕಿದನು ಎಂಬ ಮಾತು ಬರುತ್ತದೆ. ತನ್ನ ಮಗನನ್ನು ಮತ್ತು ರಾಜ್ಯವನ್ನು ರಕ್ಷಿಸಲು ಗೋವಿಂದನು ಕರ್ಕರಾಜನನ್ನು ನಿಯಮಿಸಿದ್ದನು. ಕರ್ಕರಾಜ ಅದನ್ನು ಉಳಿಸಿಕೊಳ್ಳುತ್ತಾನೆ. ಹಾಗಾದರೆ ಸಂಜಾನ ಶಾಸನದಲ್ಲಿ ಉಲ್ಲೇಖಿತರಾದ ಸ್ವಬಾಂಧವರು ಯಾರು? ಇವರು ಗುಜರಾತ್ ರಾಷ್ಟ್ರಕೂಟರ ಎರಡನೆಯ ಶಾಖೆಯವರಿರಬಹುದೇ? ಹಾಗೇನಾದರೂ ಆಗಿದ್ದರೆ ಗುಜರಾತಿನಲ್ಲಿ ಎರಡು ಶಾಖೆಗಳು ಒಟ್ಟಿಗೆ ಆಳುತ್ತಿದ್ದವು ಎಂದು ಹೇಳಬೇಕಾಗುತ್ತದೆ. ಇವರಿಬ್ಬರೂ ಆಳುತ್ತಿದ್ದ ಪ್ರಾಂತಗಳು ಯಾವುದಾಗಿರಬಹುದು? ಕರ್ಕರಾಜನ ತಮ್ಮ ಗುಜರಾತಿನ ರಾಷ್ಟ್ರಕೂಟ ಗೋವಿಂದರಾಜನ ಕೈವಾಡ ಈ ದಂಗೆಯಲ್ಲಿದೆಯೆಂದು ಡಾ|| ಫ್ಲೀಟರು ಊಹಿಸುತ್ತಾರೆ. ಇಲ್ಲಿ ಬರುವ ಕರ್ಕರಾಜ ಯಾರು? ಅಮೋಘವರ್ಷನನ್ನು ರಕ್ಷಿಸುತ್ತಿದ್ದವನೇ ಅಥವಾ ಗೋವಿಂದನು ಸೋಲಿಸಿದ ಕರ್ಕರಾಜನ ವಂಶದ ಇನ್ನೊಬ್ಬ ಕರ್ಕರಾಜನೇ? ಎಂಬ ಪ್ರಶ್ನೆಗೆ ಕರ್ಕರಾಜ ಮತ್ತು ಗೋವಿಂದರಾಜರಿಬ್ಬರು ಅಣ್ಣತಮ್ಮಂದಿರೆಂದು ಉತ್ತರಿಸಬಹುದಾಗಿದೆ.

ಇಂದ್ರರಾಜನ ಮಗ ಕರ್ಕರಾಜನು ಕ್ರಿ. ಶ. ೮೧೨ ರಲ್ಲಿಯೂ ಇವನ ತಮ್ಮ ಗೋವಿಂದರಾಜನು ಕ್ರಿ. ಶ. ೮೩೨ ರಲ್ಲಿ ಲಾಟಮಂಡಲವನ್ನು ಆಳುತ್ತಿದ್ದರು. ನಂತರ ಕರ್ಕನ ಮಕ್ಕಳು ಕ್ರಿ. ಶ. ೮೬೨ ರವರಗೆ ಲಾಟಮಂಡಲವನ್ನು ಆಳುತ್ತಿದ್ದರು. ಈ ಆಧಾರದಿಂದ ಹೇಳುವುದಾದರೆ ಮೂರನೆಯ ಗೋವಿಂದನು ಕರ್ಕರಾಜನಿಗೆ ಅಮೋಘವರ್ಷನನ್ನು ಪೋಷಕನಾಗಿ ನಿಯಮಿಸಿದನು. ಕರ್ಕರಾಜನು ಅಧಿಕಾರದಲ್ಲಿರಲಿಲ್ಲ ಎಂದು ತಿಳಿದು ಬರುತ್ತದೆ. ಈತನ ತಂದೆ ಇಂದ್ರರಾಜನು ರಾಜ್ಯಭಾರ ಮಾಡುತ್ತಿದ್ದನೆ? ಈ ಸಂದರ್ಭದಲ್ಲಿ ಅವನ ಪಾತ್ರವೇನು? ಎಂಬ ಅನುಮಾನಕ್ಕೆ ಸರಿಯಾದ ಸಮಾಧಾನ ಸಿಗುವುದಿಲ್ಲ.

ಮೂರನೆಯ ಗೋವಿಂದನು ಸೋಲಿಸಿದ್ದು ಅಣ್ಣ ಕರ್ಕರಾಜನನ್ನಾಗಿದ್ದು, ಈತ ಗುಜರಾತ್ ರಾಷ್ಟ್ರಕೂಟರ ಒಂದನೆಯ ಶಾಖೆಯವನು. ದಂಗೆಯೆದ್ದವನು ಇದೇ ಕರ್ಕನ ತಮ್ಮ ಗುಜರಾತ್ ರಾಷ್ಟ್ರಕೂಟರ ಎರಡನೆಯ ಶಾಖೆಯ ಗೋವಿಂದರಾಜ ಎನ್ನಬಹುದು. ಗುಜರಾತ್ ಶಾಖೆಯ ಇಂದ್ರನ ಮಗ ಕರ್ಕರಾಜನೂ ಇಲ್ಲಿ

ಉಲ್ಲೇಖಿತನಾದ ಕರ್ಕನೂ ಬೇರೆ ಬೇರೆ. ದಂಗೆಯೆದ್ದವರು ಗುಜರಾತಿನ ಒಂದು ಮತ್ತು ಎರಡನೆಯ ಶಾಖೆಗೆ ಸೇರಿದವರು. ಹೀಗೆ ಹೇಳಿದೊಡನೆಯೇ ಇಂದ್ರನಿಂದ ಪ್ರಾರಂಭವಾಗುವ ಶಾಖೆ ಮೂರನೆಯದು ಎನ್ನುವ ಅಂಶ ತಿಳಿಯುತ್ತದೆ. ಕರ್ಕರಾಜ, ಗೋವಿಂದ, ಕರ್ಕರಾಜ ಎನ್ನುವ ಹೆಸರುಗಳೇ ಮತ್ತೆ ಮತ್ತೆ ಬರುವುದರಿಂದ ಸ್ವಲ್ಪ ಗೊಂದಲಕ್ಕೆ ಕಾರಣವಾಗುತ್ತದೆ.

ಮೇಲಿನ ಗೊಂದಲಕ್ಕೆ ಸಹಾಯಕವಾಗಿ ಇನ್ನೊಂದು ವಿಚಾರವಿದೆ. ಅಮೋಘವರ್ಷನ ಮಾಂಡಳಿಕನಾದ ಸುವರ್ಣವರ್ಷ ಕರ್ಕರಾಜನು ಗುಜರಾತ್ ರಾಷ್ಟ್ರಕೂಟರ ಒಂದನೆಯ ಶಾಖೆಯನ್ನು ಸೋಲಿಸಿದ್ದನು. ಒಂದನೆಯ ಶಾಖೆಯ ಅರಸರು ತಮ್ಮ ರಾಜ್ಯಕ್ಕಾಗಿ ಯುದ್ಧ ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಏಕೆಂದರೆ ಕರ್ಕರಾಜನ ನಂತರ ಒಂದನೆಯ ಧ್ರುವರಾಜ, ಶುಭತುಂಗ, ಶುಭತುಂಗನ ಮಕ್ಕಳಾದ ಎರಡನೆಯ ಧ್ರುವರಾಜ ಮತ್ತು ದಂತಿವರ್ಮರೂ ವಲ್ಲಭರನ್ನು ಸೋಲಿಸುತ್ತಾರೆ. ಇಲ್ಲಿ ಉಲ್ಲೇಖಿತರಾಗಿರುವ ಯಾವ ಅರಸರೂ ಮಳಖೇಡದ ರಾಷ್ಟ್ರಕೂಟರಲ್ಲ. ಇವರೆಲ್ಲ ಗುಜರಾತಿನ ರಾಷ್ಟ್ರಕೂಟರಿಗೆ ಸೇರಿದವರು ಎನ್ನಬಹುದು.

**ವಂಶಾವಳಿ**



೫. ಶಾಖೆ II (ಕ್ರಿ.ಶ. ೭೮೦ – ೮೮೮)

ಮೂರನೆಯ ಗೋವಿಂದನ ತಮ್ಮ ಇಂದ್ರರಾಜನು ಗುಜರಾತಿನ ರಾಷ್ಟ್ರಕೂಟ ವಂಶದ ಸ್ಥಾಪಕನಾಗಿದ್ದಾನೆ. ಮೂರನೆಯ ಗೋವಿಂದನ ರಾಧನಪುರ ಶಾಸನದಲ್ಲಿ (EI Vol VI P 248 ಕ್ರಿ. ಶ. ೮೦೮) ಆತ ಗುಜರಾತನ್ನು ವಶಪಡಿಸಿಕೊಂಡು ತಮ್ಮನಾದ ಇಂದ್ರರಾಜನನ್ನು ಗುಜರಾತ್ ಮಂಡಲಕ್ಕೆ ಅಧಿಪತಿಯನ್ನಾಗಿಸಿದ ಉಲ್ಲೇಖವಿದೆ. ಇವನಿಗೆ ಕರ್ಕರಾಜ ಮತ್ತು ಗೋವಿಂದರಾಜನೆಂಬ ಇಬ್ಬರು ಮಕ್ಕಳಿದ್ದರು.

ಕರ್ಕರಾಜ

ಇಂದ್ರರಾಜನ ನಂತರ ಕರ್ಕರಾಜನು ಅಧಿಕಾರಕ್ಕೆ ಬಂದನು. ಇವನ ಕಾಲದ ಎರಡು ತಾಮ್ರಪಟಗಳು ಸಿಕ್ಕಿವೆ. ಬರೋಡ ಶಾಸನದಿಂದ (IA, Vol XII, P156- 812 AD) ಕರ್ಕರಾಜನಿಗೆ ಲಾಟೇಶ್ವರ ಮತ್ತು ಸುವರ್ಣವರ್ಷನೆಂಬ ಬಿರುದಿತ್ತೆಂದು ತಿಳಿದು ಬರುತ್ತದೆ. ಶಾಸನದಲ್ಲಿ ಈತನನ್ನು ಮಹಾಸಾಮಂತಾಧಿಪತಿ ಎಂದು ಗುರುತಿಸಲಾಗಿದೆ. ಗ್ರಾಮದಾನ ಮಾಡಿದ್ದನ್ನು ಉಲ್ಲೇಖಿಸಲಾಗಿದೆ. ನೌಸಾರಿಯ ಶಾಸನದಲ್ಲಿ (JBBRAS, Vol XX, P135 817 AD) ಮಾಹಿ ಮತ್ತು ನರ್ಮದಾ ನದಿಗಳ ನಡುವಿನ ಸಾಮಿಪದ್ರಕ ಮತ್ತು ಅದರ ಸಂಬಂಧಿತ ಇನ್ನೊಂದು ಗ್ರಾಮವನ್ನು ದಾನಮಾಡಿದ ಉಲ್ಲೇಖವಿದೆ. ಈ ದಾನವನ್ನು ನೀಡಿದವನು ರಾಜಕುಮಾರ ದಂತಿವರ್ಮನ್ ಎಂಬ ಉಲ್ಲೇಖವಿದೆ. ಗೌಡ ಮತ್ತು ಬಂಗ ಪ್ರಾಂತಗಳನ್ನು ವಶಪಡಿಸಿಕೊಂಡ ಗುಜರಾತಿನ ದೊರೆಗಳು ದಾಳಿಮಾಡಿದಾಗ ಮಾಳವದ ಅರಸನನ್ನು ದಂತಿವರ್ಮನ್ ಕಾಪಾಡಿದನೆಂದು ತಿಳಿಸುತ್ತದೆ. ಇಲ್ಲಿ ಬರುವ ಗುಜರಾತಿನ ಅರಸನ ಬಗ್ಗೆ ಹೆಚ್ಚು ವಿಷಯ ತಿಳಿಯುವುದಿಲ್ಲ.

ಒಂದನೆಯ ಧ್ರುವರಾಜ ಮಾಂಡಳೀಕನ ಶಾಸನದಲ್ಲಿ (IA, Vol XIV, P199 835 AD) ದಂಗೆಯೆದ್ದ ಅರಸರನ್ನು ಸದೆಬಡಿದು ಒಂದನೆಯ ಅಮೋಘವರ್ಷನನ್ನು ತಂದೆಯ ಸಿಂಹಾಸನದ ಮೇಲೆ ಕೂಡಿಸಿದನೆಂಬ ಉಲ್ಲೇಖವಿದೆ. ಮಳಖೇಡದ ಒಂದನೆಯ ಅಮೋಘವರ್ಷನನ್ನು ರಕ್ಷಿಸಿ ಪೋಷಿಸಿದವನು ಈ ಕರ್ಕರಾಜನೇ

ಆಗಿದ್ದಾನೆ. ಈ ಶಾಸನದ ಕಾಲಕ್ಕೂ ಘಟನೆ ನಡೆದ ಕಾಲಕ್ಕೂ ೨೦ ವರ್ಷಗಳ ಅಂತರವಿದೆ. ಕರ್ಕರಾಜನಿಗೆ ಧ್ರುವರಾಜನೆಂಬ ಮಗನಿದ್ದನು.

ಕರ್ಕರಾಜನ ತಮ್ಮ ಗೋವಿಂದರಾಜನ ಎರಡು ತಾಮ್ರಪಟಗಳು ಸಿಗುತ್ತವೆ. ತೋರ್ಖೇಡೆ ಶಾಸನವು (EI, Vol III, P54 813 AD) ಅರಸನ ಮಹಾಮಾಂಡಳೀಕ ಸಳುಕರ ವಂಶದ ಬುದ್ಧವರ್ಷನನ್ನು ಉಲ್ಲೇಖಿಸಿದೆ. ಈತನಿಗೆ ಮಹಾಸಾಮಂತಾಧಿಪತಿ, ಪ್ರಭೂತವರ್ಷ ಎಂಬ ಬಿರುದುಗಳಿದ್ದವು. ಗೋವಿಂದರಾಜನ ಮತ್ತು ಇವನ ಅಣ್ಣ ಕರ್ಕರಾಜನ ಶಾಸನಗಳ ಕಾಲವನ್ನು ಗಮನಿಸಿದಾಗ ಇವರಿಬ್ಬರೂ ಒಂದೇ ಅವಧಿಯಲ್ಲಿ ಬೇರೆ ಬೇರೆ ಕಡೆ ಆಳ್ವಿಕೆ ನಡೆಸಿದ್ದರೆನಿಸುತ್ತದೆ. ಕಾವಿತಾಮ್ರಪಟಗಳಲ್ಲಿ (IA, Vol V, P145, 827 AD) ಗೋವಿಂದರಾಜನು ಬ್ರೋಚ್‌ನಲ್ಲಿದ್ದಾಗ, ಜಯಾದಿತ್ಯ ಎಂಬ ಸೂರ್ಯದೇವಾಲಯಕ್ಕೆ ಗ್ರಾಮದಾನ ಮಾಡಿದ್ದನ್ನು ದಾಖಲಿಸುತ್ತದೆ.

ಕರ್ಕನ ನಂತರ ಅಧಿಕಾರಕ್ಕೆ ಬಂದವನು ಒಂದನೆಯ ಧ್ರುವರಾಜ (IA, Vol XIV, P199, 835 AD). ತಾಮ್ರಪಟಗಳಲ್ಲಿ ಕರ್ಕರಾಜನ ಬಗ್ಗೆ ಮಾಹಿತಿಗಳಿವೆ. ಧ್ರುವರಾಜನಿಗೆ ಧಾರಾವರ್ಷ ಮತ್ತು ನಿರುಪಮ ಎಂಬ ಬಿರುದುಗಳಿದ್ದುದ್ದನ್ನು ಉಲ್ಲೇಖಿಸುತ್ತದೆ. ಇವನು ಒಂದನೆಯ ಅಮೊಘವರ್ಷನ ವಿರೋಧಿಯಾಗಿದ್ದನು. ಅವನನ್ನು ಎದುರಿಸುವಾಗ ಬಹುಶಃ ಮರಣ ಹೊಂದಿದನೆಂದು ಬೇಗುಮ್ರ ತಾಮ್ರ ಶಾಸನದಲ್ಲಿದೆ. ಧ್ರುವರಾಜನ ಉತ್ತರಾಧಿಕಾರಿಯಾಗಿ ಅಕಾಲವರ್ಷನು ಅಧಿಕಾರಕ್ಕೆ ಬಂದನು. ಇವನಿಗೆ ಶುಭತುಂಗ ಮತ್ತು ಸುಭಟತುಂಗ ಎಂಬ ಬಿರುದುಗಳಿದ್ದವು. ಇವನ ಕಾಲದಲ್ಲಿ ಕೂಡ ಗುಜರಾತಿನ ಮತ್ತು ಮಳಖೇಡದ ರಾಷ್ಟ್ರಕೂಟರ ಬಾಂಧವ್ಯವು ಮಧುರವಾಗಿರಲಿಲ್ಲ. (ಅದೆ) ಅಕಾಲವರ್ಷನಿಗೆ ಧ್ರುವರಾಜ, ದಂತಿವರ್ಮನ್ ಮತ್ತು ಗೋವಿಂದರಾಜರೆಂಬ ಮೂರು ಜನ ಮಕ್ಕಳಿದ್ದರು. ಅಕಾಲವರ್ಷನ ನಂತರ ಹಿರಿಯ ಮಗ ಎರಡನೆಯ ಧ್ರುವರಾಜನು ಪಟ್ಟಕ್ಕೆ ಬಂದನು. ಬೇಗುಮ್ರ ಶಾಸನದಲ್ಲಿ (ಅದೆ) ಧ್ರುವರಾಜ ಮತ್ತು ಅವನ ಕಿರಿಯ ಸೋದರ ಗೋವಿಂದರಾಜರು ಸೇರಿ ಗುರ್ಜರರಾಜ (ಬಹುಶಃ ಕ್ಷೇಮರಾಜನು ದೊರೆಯಾಗಿದ್ದ) ವಲ್ಲಭ ಮತ್ತು ಮಿಹಿರರನ್ನು ಸೋಲಿಸಿದರು. ಇದು ಕನೌಜಿನ ಪ್ರತೀಹಾರ ದೊರೆ

ಮಿಹರ ಭೋಜದೇವನನ್ನು ಉಲ್ಲೇಖಿಸುತ್ತಿರಬಹುದು. ವಲ್ಲಭನೊಂದಿಗೆ ನಡೆದ ಯುದ್ಧದ ಬಗ್ಗೆ ಶಕ ೭೮೯ರ (೮೬೭ ಕ್ರಿ.ಶ) ತಾಮ್ರಪಟದಲ್ಲಿ ಉಲ್ಲೇಖವಿದೆ.

ಎರಡನೆಯ ಧ್ರುವರಾಜನ ನಂತರ ಸಿಂಹಾಸನಕ್ಕೇರಿದವನು ಅವನ ತಮ್ಮ ದಂತಿವರ್ಮನ್. ತಾಮ್ರಪಟದಲ್ಲಿ (EI, Vol VI, P287 867 AD) ದಂತಿವರ್ಮನ್‌ನಿಗೆ ಮಹಾಸಾಮಂತಾಧಿಪತಿ, ಅಪರಿಮಿತವರ್ಷ ಮುಂತಾದ ಬಿರುದುಗಳಿದ್ದವೆಂದು ಉಲ್ಲೇಖಿಸಿದೆ. ಪಂಚಮಹಾಶಬ್ದ ಗೌರವವಿತ್ತು. ಬೌದ್ಧಸಂಘ ಅಥವಾ ಆರ್ಯಸಂಘವು ಕಾಂಥಿಲ್ಯದಲ್ಲಿತ್ತು. ರಾಷ್ಟ್ರಪತಿ, ವಿಷಯಪತಿ, ಗ್ರಾಮಕೂಟ, ನಿಯುಕ್ತ, ಅಧಿಕಾರಿಕ, ವಾಸಾಪಕ, ಮಹತ್ತರ ಮುಂತಾದ ಅಧಿಕಾರಿಗಳೆಲ್ಲರೂ ಪೌಷ (ಉತ್ತರಾಯಣ), ಕೃಷ್ಣಪಕ್ಷ ನವಮಿಯಂದು ಪೂರ್ವಿ ನದಿಯಲ್ಲಿ ಸ್ನಾನಮಾಡಬೇಕೆಂದು ಅರಸನು ಹೇಳಿದುದನ್ನು ಉಲ್ಲೇಖಿಸುತ್ತದೆ. ಕಾಂಪಿಲತೀರ್ಥದಲ್ಲಿ ವಿಹಾರವನ್ನು ಚೊಕ್ಕಾಕುಟಿಯನ್ನು ಸರ್ಥಾತೈಲಾಟ ಮತ್ತು ೪೨ ಹಳ್ಳಿಗಳ ಸಮೇತ ಆರ್ಯಸಂಘದ ಜನಗಳ ಉಪಯೋಗಕ್ಕೆ ನೀಡಿದನು.

ಧ್ರುವರಾಜನ ತಾಮ್ರಶಾಸನದಲ್ಲಿ ಸೋದರರಲ್ಲಿ ಹೊಂದಾಣಿಕೆಯಿರಲಿಲ್ಲವೆಂಬ ಉಲ್ಲೇಖವಿದೆ. ಆದರೆ ಒಂದನೆಯ ದಂತಿವರ್ಮನ್‌ನ ಪಟಗಳಲ್ಲಿ ತಾನು ಅಣ್ಣನ ಭಕ್ತನೆಂದು ಹೇಳಿಕೊಂಡಿದ್ದಾನೆ. ಆದ್ದರಿಂದ ಧ್ರುವರಾಜನ ತಾಮ್ರಪಟವು ಹೇಳುವ ಸೋದರನು ಬೇರೆಯಿರಬಹುದು. ಕೃಷ್ಣರಾಜನು ತಂದೆ ದಂತಿವರ್ಮನ್‌ನ ನಂತರ ಪಟ್ಟಕ್ಕೆ ಬಂದನು. ಇವನಿಗೆ ಅಕಾಲವರ್ಷನೆಂಬ ಬಿರುದಿತ್ತು. ಈತ ಮಹಾಸಾಮಂತಾಧಿಪತಿಯಾಗಿದ್ದ. ಬೇಗುಮ್ರ ಶಾಸನದಲ್ಲಿ (IA , Vol XIII, P66 888 AD) ಕೃಷ್ಣರಾಜನು ವಲ್ಲಭರಾಜನ ಸಮ್ಮುಖದಲ್ಲಿ ಉಜ್ಜೈನಿಯ ಶತ್ರುಗಳನ್ನು ಸೋಲಿಸಿದನೆಂದು ಉಲ್ಲೇಖಿಸಿದೆ. ಕೃಷ್ಣರಾಜನ ನಂತರ ಗುಜರಾತ್ ರಾಷ್ಟ್ರಕೂಟರ ಶಾಖೆ ಕೊನೆಯಾಯಿತೆಂದು ಹೇಳಬಹುದು. ಮಳಖೇಡದ ರಾಷ್ಟ್ರಕೂಟ ಅರಸ ಎರಡನೆಯ ಕೃಷ್ಣನು ಗುಜರಾತಿನ ಶಾಖೆಯನ್ನು ಬಹುಶಃ ತನ್ನ ರಾಜ್ಯದಲ್ಲಿ ವಿಲೀನಗೊಳಿಸಿರಬಹುದು. ಒಟ್ಟಿನಲ್ಲಿ ಗುಜರಾತಿನ ರಾಷ್ಟ್ರಕೂಟರು ಸುಮಾರು ೧೩೦ ವರ್ಷಗಳ ಕಾಲ ಆಳಿದರೆನ್ನಬಹುದು. ಇವರ ಆಳ್ವಿಕೆಯು ಮಳಖೇಡದ ರಾಷ್ಟ್ರಕೂಟರ ಆಳ್ವಿಕೆಯ ಹೊತ್ತಿಗಾಗಲೇ ಇತ್ತು.

**ವಂಶಾವಳಿ**



ಧ್ರುವ (ಮಳಖೇಡ)
(ಕ್ರಿ.ಶ. ೭೮೦–೭೯೩)
1. ಇಂದ್ರರಾಜ
2. ಕರ್ಕರಾಜ
(ಕ್ರಿ.ಶ. ೮೧೨–೮೧೬)
3.ಗೋವಿಂದರಾಜ I
(ಕ್ರಿ.ಶ. ೮೧೩–೮೨೭)
4. ಧ್ರುವರಾಜ I
(ಕ್ರಿ.ಶ. ೮೩೫)
5. ಅಕಾಲವರ್ಷ
6. ಧ್ರುವರಾಜ II
(ಕ್ರಿ.ಶ.೮೬೭)
7. ದಂತಿವರ್ಮನ್
(ಕ್ರಿ.ಶ. ೮೬೭)
ಗೋವಿಂದರಾಜ II
8. ಕೃಷ್ಣರಾಜ
(ಕ್ರಿ.ಶ. ೮೮೮)

## ೬. ಪಠಾರಿ ರಾಷ್ಟ್ರಕೂಟರು (ಕ್ರಿ.ಶ. ೭೭೦-೮೭೦)

ಮಧ್ಯಪ್ರದೇಶದ ರೇವಾ ಸಂಸ್ಥಾನದ ಭೂಪಾಲ್ ಬಳಿ ಪಠಾರಿ ಎಂಬಲ್ಲಿ ರಾಷ್ಟ್ರಕೂಟರ ವಂಶವೊಂದಿದ್ದ ಬಗ್ಗೆ ಶಾಸನಗಳಿಂದ ತಿಳಿದುಬರುತ್ತದೆ. ಪರಬಲನೆಂಬ ರಾಜನ ಸ್ತಂಭ ಶಾಸನವು ಪಠಾರಿಯಲ್ಲಿ ದೊರಕಿದೆ. ಈ ಶಾಸನದ ಕಾಲ ವಿಕ್ರಮ ಸಂವತ್ಸರ ೯೧೭ ಚೈತ್ರ ಶುದ್ಧ ೬ ಶುಕ್ರವಾರ (ಕ್ರಿ.ಶ.೮೬೬, ಮಾರ್ಚ್ ೨೧).

ಈ ಶಾಸನದಲ್ಲಿ ವಂಶದ ಮೂಲಪುರುಷನ ಹೆಸರಿಲ್ಲ. ಈತನಿಗೆ ಇಬ್ಬರು ಮಕ್ಕಳಿದ್ದರು. ಅದರಲ್ಲಿ ಮೊದಲನೆಯವನು ಕರ್ನಾಟಕದ ಸೈನ್ಯವನ್ನು ಸೋಲಿಸಿ ಲಾಟ ಪ್ರದೇಶವನ್ನು ವಶಪಡಿಸಿಕೊಂಡನೆಂದು ತಿಳಿದು ಬಂದಿದೆ. ಇನ್ನೊಬ್ಬನ ಹೆಸರು ಜೆಜ್ಜ ಎಂದಿದೆ. ಇವನ ಕಾಲದಲ್ಲಿ ರಾಷ್ಟ್ರಕೂಟ ವಂಶವು ಬಹಳಷ್ಟು ಅಭಿವೃದ್ಧಿಯನ್ನು ಹೊಂದಿತು ಎಂಬ ಸಂಗತಿಯನ್ನು ತಿಳಿಯಬಹುದಾಗಿದೆ. ಆತನ ಮಗ ಕರ್ಕರಾಜ. ಈತನೇ ಪ್ರಸ್ತುತ ಶಾಸನದ ದೊರೆ ಪರಬಲನ ತಂದೆ. ಇವನು ನಾಗಾವಲೋಕವನ್ನು ಸೋಲಿಸಿದನೆಂದು ತಿಳಿಯುತ್ತದೆ. ಪರಬಲನ ಮಗಳು ರಣ್ಣಾದೇವಿಯನ್ನು ಬಂಗಾಳದ ಪಾಲ ವಂಶದ ದೊರೆ ಧರ್ಮಪಾಲನಿಗೆ ವಿವಾಹ ಮಾಡಿಕೊಡಲಾಗಿದೆ. ಪರಬಲನ ತಂದೆ ಕರ್ಕರಾಜನನ್ನು ಸೋಲಿಸಿದ ನಾಗಭಟ (ನಾಗಾವಲೋಕ) ಪ್ರತಿಹಾರದೊರೆ ವತ್ಸ್ಯರಾಜನ ಮಗನಾಗಿರಬೇಕೆಂದು ಪಂಡಿತ್ ರೇವು ಅವರು ತಮ್ಮ ಗ್ರಂಥ (History of Rashtrakutas, p49) ದಲ್ಲಿ ಊಹಿಸಿದ್ದಾರೆ.

ಈ ಶಾಸನದಲ್ಲಿ ಎರಡು ಭಾಗವಿದೆ. ಒಂದರಿಂದ ಮೂವತ್ತನೆಯ ಸಾಲಿನವರೆಗೆ ಒಂದು ಶಾಸನವಿದ್ದರೆ, ಮುವತ್ತೊಂದನೆಯ ಸಾಲಿನಿಂದ ಎರಡನೆಯ ಶಾಸನವು ಪ್ರಾರಂಭವಾಗುತ್ತದೆ. ಏಳು ಸಾಲಿನಲ್ಲಿರುವ ಈ ಶಾಸನವು ಅಸ್ಪಷ್ಟವಾಗಿದ್ದು, ಹಾಳಾಗಿದೆ. ಇದರಲ್ಲಿ ಏನು ಬರೆದಿದೆ ಎಂಬುದು ತಿಳಿದಿಲ್ಲ. ನಲವತ್ತೇಳು ಅಡಿಯ ಕಂಬದ ಮೇಲಿರುವ ಈ ಶಾಸನದ ಮೇಲುಭಾಗವು ಚಪ್ಪಟೆಯಾದ ಆಕಾರದಲ್ಲಿದೆ. ಅದನ್ನು ಸುತ್ತುವರೆದು ಮಣಿಚೌಕಟ್ಟು ಇದೆ. ಇಬ್ಬರು ಮನುಷ್ಯರು ಒಬ್ಬರಿಗೊಬ್ಬರು ಬೆನ್ನು ಮಾಡಿ ನಿಂತಿದ್ದಾರೆ. ಸ್ಥಳೀಯರು ಈ ಕಂಭವನ್ನು ಭೀಮಸೇನನ ಲಾಠಿ ಎಂದು ಕರೆಯುತ್ತಾರೆ.

ಶಾಸನದಲ್ಲಿ ವಂಶಾವಳಿಯನ್ನು ಕೊಡುವಾಗ ಕೃಷ್ಣನ ಮಗ ಜೆಜ್ಜನೆಂದು ಹೇಳಿ, ನಂತರ ಈತನ ಹಿರಿಯಸೋದರರನ ಬಗ್ಗೆ ಉಲ್ಲೇಖಿಸುತ್ತದೆ.

"ಜಿತ್ವಾ(ವಿಕಟ)ಕರಿಘಟಾಪ್ರ(ಭು)ತರ ಕರ್ಣಾಟಭಟ ಸಹಸ್ರಾಣಿ। (ಪೃಥು:) ಲಾಟಾಖ್ಯಂ ರಾಷ್ಟ್ರಂ ಲದ್ಧಂ(ಬ್ದಂ) ಯಸ್ಯಾಗ್ರಜೇನಾಜೌ।"

ಶತ್ರುಸೈನ್ಯದ ಆನೆಗಳನ್ನು ಕೊಂದು ಪರಾಕ್ರಮ ತೋರಿಸಿದ್ದರಿಂದ "ಕುವಲಯಾಪೀಡ" ಎಂಬ ಮದಿಸಿದ ಆನೆಯನ್ನು ಕೊಂದ ಶ್ರೀಕೃಷ್ಣನಿಗೆ ಹೋಲಿಸಿದ್ದಾರೆ. ಈ ಹಿರಿಯ ಸೋದರನ ಹೆಸರು ತಿಳಿದುಬಂದಿಲ್ಲ. ಸಹಸ್ರಾರು ಕರ್ನಾಟಕದ ಸೈನಿಕರನ್ನು ಸೋಲಿಸಲು ಕಾರಣವೇನು? ಯಾವುದಾದರೂ ಯುದ್ಧ ನಡೆದಿರಬಹುದೇ? ಕ್ರಿ.ಶ. ೮೬೧ರಲ್ಲಿ ಕರ್ನಾಟಕದಲ್ಲಿ ಅರಸನಾಗಿದ್ದವನು ಮಳಖೇಡದ ರಾಷ್ಟ್ರಕೂಟ ದೊರೆ ಒಂದನೆಯ ಅಮೋಘವರ್ಷ. ಅಮೋಘವರ್ಷನು ಶಾಂತಿಪ್ರಿಯ ರಾಜನಾಗಿದ್ದವನು. ಕ್ರಿ.ಶ.೮೬೪ ರ ಹೊತ್ತಿಗೆ ಅಮೋಘವರ್ಷನು ನಲವತ್ತೇಳು ವರ್ಷಗಳಷ್ಟು ದೀರ್ಘಕಾಲ ರಾಜ್ಯಭಾರ ನಡೆಸಿರುವುದರಿಂದ ಮತ್ತು ಯುದ್ಧಗಳಲ್ಲಿ ನಿರಾಸಕ್ತನಾಗಿದ್ದುದರಿಂದ ಯುದ್ಧ ನಡೆದಿತ್ತೆಂದು ಹೇಳಲಾಗದು. ನಂತರ ಈತ ಲಾಟಪ್ರದೇಶವನ್ನು ವಶಪಡಿಸಿಕೊಂಡನೆಂದು ಹೇಳಿದೆ. ಜೆಜ್ಜನು ಅವನತಿಯ ಹಾದಿಯಲ್ಲಿದ್ದ ಚಲುಕ್ಯರಿಗೆ ದೊಡ್ಡ ಆಘಾತವನ್ನು ಉಂಟುಮಾಡಿದನೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಈತ ಚಲುಕ್ಯದೊರೆ ಅವನಿಜನಾಶ್ರಯ ಪುಲಕೇಶಿ ಅಥವಾ ಅವನ ಉತ್ತರಾಧಿಕಾರಿಯಾಗಿದ್ದಿರಬಹುದು. (Studies in the Rashtrakuta Inscriptions, P 569, Brahmananda Deshpande) ಮಳಖೇಡದ ಒಂದನೆಯ ಅಮೋಘವರ್ಷನನ್ನು ಚಿಕ್ಕವಯಸ್ಸಿನಲ್ಲಿ ರಕ್ಷಿಸಿ ಪೋಷಿಸಿದ್ದವನು ಲಾಟದ ರಾಷ್ಟ್ರಕೂಟ ದೊರೆಯೆಂಬುದನ್ನು ಮರೆಯುವಂತಿಲ್ಲ. ಆದ್ದರಿಂದ ಜೆಜ್ಜನು ಸೋಲಿಸಿದ ಚಲುಕ್ಯದೊರೆಯು ಅಮೋಘವರ್ಷನಿಗೆ ಮಾಂಡಲಿಕನಾಗಿ ಸಣ್ಣಪ್ರಾಂತವನ್ನು ಆಳುತ್ತಿದ್ದಿರಬಹುದು. ಇಮ್ಮಡಿ ಕೀರ್ತಿವರ್ಮನು ತನ್ನ ಆಳ್ವಿಕೆಯ ಕೊನೆಯಲ್ಲಿ ಹುಚ್ಚನಾಗಿ ಅಧಿಕಾರವನ್ನು ಕಳೆದುಕೊಂಡನು. (Chalukyas of Vatapi, Ramesh K.V., P 175). ಆದ್ದರಿಂದ ಲಾಟದ ಚಲುಕ್ಯರಿಗೆ, ಮುಖ್ಯ ಶಾಖೆಯ ಆಧಾರ ತಪ್ಪಿಹೋಗಿತ್ತು ಎಂದಿದ್ದಾರೆ. ಈ ಮಾತಿನ ಅಗತ್ಯವೇ ಇಲ್ಲವೆನ್ನಬಹುದು. ಏಕೆಂದರೆ ಕ್ರಿ.ಶ. ೮೬೧ ರ ಹೊತ್ತಿಗೆ ಮಳಖೇಡದ ರಾಷ್ಟ್ರಕೂಟರು ಸಾಮ್ರಾಜ್ಯವನ್ನು ಗಳಿಸಿ ನೂರು ವರ್ಷಗಳು ದಾಟಿತ್ತು.

ನೂರು ವರ್ಷಗಳ ಹಿಂದೆ ಸಾಮ್ರಾಟರಾಗಿದ್ದು, ಸೋತು ಎಲ್ಲೋ ಹೋದವರು ಲಾಟದ ಚಾಲುಕ್ಯರನ್ನು ರಕ್ಷಿಸಲು ಸಾಧ್ಯವೇ?

ಕರ್ಕನು ನಾಗಭಟ (ನಾಗಾವಾಲೋಕ) ಎಂಬ ಅರಸನನ್ನು ಸೋಲಿಸಿದನೆಂಬ ವಿವರವು ಶಾಸನದಲ್ಲಿದೆ. ಶಾಸನವು ಪಾರ್ವತಿ ದೇವಿಯ ದೇವಸ್ಥಾನದ ಕಂಬದ ಮೇಲಿದೆ. ಬಹುಶಃ ಈತ ಪ್ರತಿಹಾರ ದೊರೆ ವತ್ಸರಾಜನ ಮಗನಿರಬಹುದೆಂದು ವಿದ್ವಾಂಸರು ಊಹಿಸುತ್ತಾರೆ (History of the Rashtrakutas (Rathor), Bisheshwaranaath Reu, p49). ನಾಗಭಟನ ಶಾಸನವೊಂದು (ಕ್ರಿ.ಶ.೮೧೫) ಮಾರವಾರದ ಬಿಲಾರ ಜಿಲ್ಲೆ ಬುಚ್‌ಕಲಾದಲ್ಲಿ ಸಿಕ್ಕಿದೆ. ಆದರೆ ಪ್ರೊ. ಕೀಲ್ ಹಾರ್ನ್ ಇವನನ್ನು ಕ್ರಿ.ಶ. ೭೫೬ರ ಭೃಗುಕಚ್ಛ ಶಾಸನದ ನಾಗಾವಲೋಕನಿಗೆ (ಈತ ಬಹುಶಃ ಪ್ರತಿಹಾರ ಅರಸ ಒಂದನೆಯ ನಾಗಭಟ) ಹೋಲಿಸಿದ್ದಾರೆ. ಹನ್ಸೋತ್ ಪಟಗಳಲ್ಲಿ (EI. Vol. XII, p197ff) ಚಾಹಮಾನ ದೊರೆಗಳ ವಂಶಾವಳಿಯಿದೆ. ಅದರಲ್ಲಿ ಎರಡನೆಯ ಭರ್ತೃವೃದ್ಧನ ಶಾಸನವನ್ನು ನಾಗಾವಲೋಕನ ಆಳ್ವಿಕೆಯಲ್ಲಿ ಹೊರಡಿಸಲಾಗಿದೆ. ಆದ್ದರಿಂದ ಚಾಹಮಾನರು ಪ್ರತಿಹಾರರ ಮಾಂಡಳಿಕರಾಗಿದ್ದರೆಂದು ತಿಳಿದುಬರುತ್ತದೆ. ಹನ್ಸೋತ್ ಶಾಸನದಲ್ಲಿ ಮಹಾಸಾಮಂತಾಧಿಪತಿ ಎಂಬ ಉಲ್ಲೇಖವಿದೆ. ಕಾಲದ ಆಧಾರದಿಂದ ಈತನನ್ನು ಒಂದನೆಯ ನಾಗಭಟನೆಂದು ಗುರುತಿಸಿದ್ದಾರೆ. ಅದೇ ರೀತಿ ಚಾಹಮಾನ ವಿಗ್ರಹರಾಜನ (EI. Vol.II, p116ff) ಹರ್ಷನಾಥ್ ಶಾಸನದಲ್ಲಿ ಕೂಡ ವಂಶಾವಳಿಯಿದೆ. ಕ್ರಿ.ಶ.೯೭೬ರಲ್ಲಿ ನಾಗಾವಲೋಕನು ಒಂದನೆಯ ಗೂವಕನಿಗೆ ಅಧಿಪತಿಯಾಗಿದ್ದನೆಂದು ಉಲ್ಲೇಖಿಸಲಾಗಿದೆ. ಈತ ಕ್ರಿ.ಶ. ಸುಮಾರು ೮೦೦–೮೨೦ರಲ್ಲಿ ಆಳುತ್ತಿದ್ದನು.

ಶ್ವೇತಾಂಬರ ಜೈನ ಕವಿ ಪ್ರಭಾಚಂದ್ರಸೂರಿಯು "ಪ್ರಭಾವಕ ಚರಿತ" (ಸಂ. ಜಿನವಿಜಯಮುನಿ, ಸಿಂಘಿ ಜೈನ ಗ್ರಂಥಮಾಲ, ಕ್ರಿ.ಶ. ೧೯೨೦) ವನ್ನು ಬರೆದಿದ್ದಾನೆ. ಇದರಲ್ಲಿ ಜೈನಾಚಾರ್ಯರ ಆತ್ಮಕಥೆಗಳು, ಅರಸರು, ಜೈನ ಸನ್ಯಾಸಿಗಳ ಬಗ್ಗೆ ವಿವರವಿದೆ. ಇವರಲ್ಲಿ ಬಪ್ಪಭಟ್ಟಿ ಎಂಬ ಸನ್ಯಾಸಿಯ ವಿವರವಿದೆ. ಬಪ್ಪಭಟ್ಟಿಯೆಂಬ ಸನ್ಯಾಸಿಯು, ಆಮ ಅಥವಾ ನಾಗಭಟನ ಸ್ನೇಹಿತನಾಗಿದ್ದನು. ಈ ನಾಗಭಟನು ಮುಂದೆ–ಪ್ರತಿಹಾರ ಸಿಂಹಾಸನವನ್ನು ಏರಿದನೆಂಬ ವಿವರಣೆಯಿದೆ. ಬಪ್ಪಭಟ್ಟಿಯು ಎರಡನೆಯ ನಾಗಭಟನನ್ನು ಜೈನಧರ್ಮಕ್ಕೆ ಮತಾಂತರಿಸಿ, ಜೈನತೀರ್ಥಂಕರರ

ವಿಗ್ರಹಗಳನ್ನು ಮಾಡಿಸಿಕೊಡಲು ಪ್ರಚೋದಿಸಿದನು. ಈ ನಾಗಭಟನಿಗೆ ನಾಗವಾಲೋಕನೆಂಬ ಹೆಸರು ಇದ್ದು, ಕ್ರಿ.ಶ.೮೩೩ ರಲ್ಲಿ ಈತ ಗಂಗಾನದಿಯಲ್ಲಿ ಮುಳುಗಿ ದೇಹತ್ಯಾಗ ಮಾಡಿದನೆಂದು ತಿಳಿದುಬರುತ್ತದೆ. ಇನ್ನೊಬ್ಬ ಜೈನಕವಿ ಉದ್ಯೋತನಸೂರಿ ತನ್ನ 'ಕುವಲಯಾಮಾಲ"ವನ್ನು ಕ್ರಿ.ಶ.೭೭೮ ರಲ್ಲಿ ವತ್ಸರಾಜನು ಆಳ್ವಿಕೆ ನಡೆಸುತ್ತಿದ್ದಾಗ ಮುಗಿಸಿದನೆಂದು ತಿಳಿದುಬರುತ್ತದೆ. ಇವನ ಉತ್ತರಾಧಿಕಾರಿ ಎರಡನೆಯ ನಾಗಾವಲೋಕ (ಕ್ರಿ.ಶ.೭೯೨–೮೩೩). ಈ ಕಾಲಗಳು ಗೂರ್ಜರ ಪ್ರತಿಹಾರರ ಕಾಲಗಳಿಗೆ ಸರಿಯಾಗುತ್ತದೆ.

ನಾಗಾವಲೋಕನು ಪರಬಲನ ಮಗಳು ರಣ್ಣಾದೇವಿಯನ್ನು ವಿವಾಹವಾಗಿದ್ದನೆಂಬ ಸಂಗತಿಯು ತಿಳಿದಿದೆ. ಇವರ ಮಗನೇ ದೇವಪಾಲದೇವ. ವಂಶಾವಳಿಯ ಕಾಲವನ್ನು ಗಮನಿಸಿದಾಗ, ಈತ ಇನ್ನೂ ಚಿಕ್ಕವನಾಗಿದ್ದಾಗಲೇ ಸಿಂಹಾಸನಕ್ಕೆ ಬಂದನೆಂದು ಹೇಳಲು ಆಧಾರಗಳಿಲ್ಲ. ದೇವಪಾಲದೇವನು ಕ್ರಿ.ಶ.ಸುಮಾರು ೭೫೫ರಲ್ಲಿ ಹುಟ್ಟಿದ್ದರೆ, ಪರಬಲನು ಹುಟ್ಟಿದ ಕಾಲವನ್ನು ಕ್ರಿ.ಶ.ಸು.೭೬೫ರಿಂದ ೭೭೦ ಕ್ಕೆ ಹಾಕಬೇಕಾಗುತ್ತದೆ. ಈ ರೀತಿ ಲೆಕ್ಕ ಹಾಕಿದರೆ ಪಠಾರಿ ಶಾಸನದ ಕಾಲಕ್ಕೇ ಪರಬಲನು ಶತಾಯುಷಿಯಾಗಿದ್ದನೆಂದು ಹೇಳಬೇಕಾಗುತ್ತದೆ. ಆದುದರಿಂದ ಇಬ್ಬರು ಪರಬಲರಿದ್ದರೆಂದು ಒಪ್ಪಿಕೊಂಡರೆ ಇವರ ವಂಶಾವಳಿಯಲ್ಲಿ ಸ್ವಲ್ಪ ಬದಲಾವಣೆಯನ್ನು ಮಾಡಬೇಕಾಗುತ್ತದೆ. ಬದಲಾವಣೆಗೊಂಡ ವಂಶಾವಳಿಯ ಆಧಾರದ ಮೇಲೆ ಒಂದನೆಯ ಪರಬಲನನ್ನು ಹೆಸರು ತಿಳಿಯದ ಅಣ್ಣನ ಸ್ಥಾನಕ್ಕೆ ಸೇರಿಸಬಹುದು. ಅವನು ಕರ್ನಾಟಕ ಸೈನ್ಯವನ್ನು ಎದುರಿಸಿ ಲಾಟವನ್ನು ವಶಪಡಿಸಿಕೊಂಡನೆಂದು ಹೇಳಬಹುದು.

ರಣ್ಣಾದೇವಿಯನ್ನು ಮೂರನೆಯ ಗೋವಿಂದನ ಮಗಳೆಂದು ವಿದ್ವಾಂಸರು ಹೇಳಿದ್ದಾರೆ(ದಾಕ್ಷಿಣಾತ್ಯ ಮಧ್ಯಯುಗೀನ ಇತಿಹಾಸದಲ್ಲಿ ಸಾಧನೆ, Khase G.H. IP82). ಯಾವ ಆಧಾರದ ಮೇಲೆ ಈ ನಿರ್ಧಾರಕ್ಕೆ ಬಂದಿದ್ದಾರೆಂಬುದು ತಿಳಿಯದು. ಮೂರನೆಯ ಗೋವಿಂದನ ಕಾಲ ಕ್ರಿ.ಶ.೭೯೩ರಿಂದ ೮೧೪. ಪಠಾರಿ ಶಾಸನದ ಕಾಲ ಕ್ರಿ.ಶ.೮೬೧. ಇದರ ಆಧಾರದ ಮೇಲೆ ನೋಡಿದರೆ, ಶಾಸನದ ಕಾಲಕ್ಕೂ ಗೋವಿಂದನ ಕೊನೆಗಾಲಕ್ಕೂ ನಲವತ್ತೇಳು ವರ್ಷಗಳ ಅಂತರವಿದೆ. ಆದ್ದರಿಂದ ರಣ್ಣಾದೇವಿಯು ಮೂರನೆಯ ಗೋವಿಂದನ ಮಗಳಾಗಲು ಸಾಧ್ಯವಿಲ್ಲ.

ಜನರಲ್ ಕನ್ನಿಂಗ್‌ಹ್ಯಾಮರು ಪುರಾತತ್ವದ ದೃಷ್ಟಿಯಂತೆ ಈ ಸ್ಮಾರಕದ ಕಾಲ ಕ್ರಿ.ಶ.೬೦೦ ಎಂದಿದ್ದಾರೆ. ಹಾಗೂ ಶಾಸನದ ಕಾಲವನ್ನು ಕ್ರಿ.ಶ.೮೬೧ ಎಂದು ನಿರ್ಧರಿಸಲಾಗಿದೆ. ಗೋಕಾಕ್ ಪಟಗಳಲ್ಲಿ ಬರುವ ದೆಜ್ಜಮಹಾರಾಜನಿಗೂ ಇವರಿಗೂ ಸಂಬಂಧವಿಲ್ಲ. ದೆಜ್ಜನು ಬೆಳಗಾಂ ಪ್ರದೇಶದಲ್ಲಿ ಆಳುತ್ತಿದ್ದವನು. ಪಠಾರಿ ರಾಷ್ಟ್ರಕೂಟರು ಬುಂದೇಲಖಂಡದ ಪ್ರದೇಶದಲ್ಲಿ ಆಳುತ್ತಿದ್ದರು. ಪಠಾರಿ ರಾಷ್ಟ್ರಕೂಟರ ಇತಿಹಾಸವನ್ನು ಅರಿತುಕೊಳ್ಳಲು ಇರುವ ಮಾಹಿತಿಗಳು ಬಹಳ ಕಡಿಮೆ. ಸ್ಥೂಲವಾದ ಪರಿಚಯವನ್ನು ಮಾಡಿಕೊಳ್ಳಬಹುದಷ್ಟೇ.

**ವಂಶಾವಳಿ**

<u>ಮೊದಲನೆಯ ವಂಶಾವಳಿ</u>




<u>ಹೊಸದಾದ ವಂಶಾವಳಿ</u>



## ೭. ಹಸ್ತಿಕುಂಡಿ (ಹಾತುಂಡಿ) ರಾಷ್ಟ್ರಕೂಟರು (ಕ್ರಿ.ಶ. ೯೦೦ – ೧೦೦೬)

ಹಸ್ತಿಕುಂಡಿ ರಾಷ್ಟ್ರಕೂಟರ ವಂಶವು ನೇರವಾಗಿ ಮಳಖೇಡದ ವಂಶಕ್ಕೆ ಸೇರುತ್ತದೆ ಎಂದು ಹೇಳುವುದು ಕಷ್ಟ. ಕ್ರಿ.ಶ. ಸುಮಾರು ೯೦೦ರಿಂದ ೧೦೦೫ರವರೆಗೆ ಇದ್ದಿರಬಹುದಾದ ಇವರ ವಂಶದಲ್ಲಿ ಐದು ತಲೆಮಾರುಗಳಿವೆ. ಇವರು ರಜಪುಟಾಣದಲ್ಲಿ ಹಸ್ತಿಕುಂಡಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದರು. ತಮ್ಮ ಮೂಲದ ಬಗ್ಗೆ ಹೇಳಿಕೊಳ್ಳದೇ ಇರುವುದರಿಂದ, ಸಿಗುವ ಮಾಹಿತಿಗಳಿಂದಲೇ ತೃಪ್ತಿಪಟ್ಟುಕೊಳ್ಳಬೇಕಾಗಿದೆ. ಹರಿವರ್ಮ – ವಿದಗ್ಧರಾಜ – ಮಮ್ಮಟ – ಧವಲ – ಬಾಲಪ್ರಸಾದ ಎಂಬ ಐದು ದೊರೆಗಳ ಹೆಸರುಗಳು ದೊರೆಯುತ್ತವೆ.(EI. Vol. X, p17)

ಮಾರವಾರ ರಾಜ್ಯ, ಗೋದ್ವಾರ ಜಿಲ್ಲೆಯ ಬಿಜಾಪುರದಲ್ಲಿ ವಿಕ್ರಮ ಸಂವತ್ಸರ ೧೦೫೩ (ಕ್ರಿ.ಶ.೯೯೫)ರ ಶಾಸನ ಸಿಕ್ಕಿದೆ. ಇದರಲ್ಲಿ ರಾಥೋರರ ವಂಶಾವಳಿಯನ್ನು ಕೊಟ್ಟಿದ್ದಾರೆ. ಪರಮಾರ ದೊರೆ ಮುಂಜನು, ಮೇವಾರದ ಮೇಲೆ ದಂಡೆತ್ತಿ ಬಂದು ಆಹಾಡವನ್ನು ನಾಶ ಮಾಡಿದನು. ಅವನಿಗೆ ರಾಷ್ಟ್ರಕೂಟ ಧವಳನು ಸಹಾಯ ಮಾಡಿದನು. ಧವಳನು ತನ್ನ ಕೊನೆಗಾಲದಲ್ಲಿ ರಾಜ್ಯಭಾರವನ್ನು ಮಗನಿಗೆ ವಹಿಸಿಕೊಟ್ಟನು. ಈತ ಹಸ್ತಿಕುಂಡಿಯನ್ನು ರಾಜಧಾನಿಯನ್ನಾಗಿ ಇರಿಸಿಕೊಂಡು ಆಳ್ವಿಕೆ ನಡೆಸಿದ್ದನು.

ಶಾಸನದಲ್ಲಿ ಎರಡು ಭಾಗವಿದ್ದು ಮೊದಲನೆಯ ಭಾಗವು ವಿ. ಸಂ. ೧೦೫೩ ರಲ್ಲೂ ಇನ್ನೊಂದು ವಿ.ಸಂ. ೯೯೬ ರಲ್ಲೂ ಹಾಕಿಸಿದೆ. ಶಾಸನದಲ್ಲಿ ಪರಮಾರ ಮುಂಜನಿಗೆ ಉತ್ಪಲ, ಎರಡನೆಯ ವಾಕ್ಪತಿರಾಜ ಎಂಬ ಹೆಸರುಗಳೂ ಇದ್ದವು. ಈತ ಸಿಇಯಕನ ಸ್ವಂತ ಮಗನಲ್ಲ. ಈತನಿಗೆ ಶ್ರೀವಲ್ಲಭ, ಪೃಥ್ವೀವಲ್ಲಭ ಅಮೋಘವರ್ಷ ಎಂಬ ಬಿರುದುಗಳಿದ್ದವು. ಈತ ರಾಜ್ಯವಿಸ್ತಾರ ಮಾಡಲು ಹೋದಾಗ ಮೇದಪಾಟಲದ ಗುಹಿಲರನ್ನು ಸೋಲಿಸಿದ. ಅವನ ರಾಜಧಾನಿ ಆಘಾಟವನ್ನು (ಇಂದಿನ ಆಹರ್) ಲೂಟಿ ಮಾಡಿದ. ರೋತ ದೊರೆಯು ನರವಾಹನನೋ ಅಥವಾ ಅವನ ಮಗ ಶಕ್ತಿಕುಮಾರನೋ ತಿಳಿಯುವುದಿಲ್ಲ ಎನ್ನುತ್ತಾರೆ ವಿದ್ವಾಂಸರು. ಗುಹಿಲರ ದೊರೆಯು

ಹಸ್ತಿಕುಂಡಿ ರಾಷ್ಟ್ರಕೂಟ ದೊರೆ ಧವಳನ ಬಳಿ ಆಶ್ರಯ ಪಡೆದನೆಂದು ತಿಳಿದು ಬರುತ್ತದೆ.

ಪ್ರತಿಹಾರ ಒಂದನೆಯ ಮಹೀಪಾಲನ ಸಾಮಂತನಾಗಿ ಆಳುತ್ತಿದ್ದ ಧರಣೀವರಾಹನು ಚಾಲುಕ್ಯ ಎರಡನೆಯ ಅವನಿವರ್ಮ ಯೋಗರಾಜನಿಗೆ ಸೋಲಬೇಕಾಯಿತು. ಚಾಲುಕ್ಯ ದೊರೆ ಮೂಲರಾಜನು ಧರಣೀವರಾಹನನ್ನು ಸೌರಾಷ್ಟ್ರದಿಂದ ಓಡಿಸಿ ಸಿಂಹಾಸನವನ್ನು ತಾನು ಆಕ್ರಮಿಸಿದನು. ಹೊರದೂಡಿಸಿಕೊಂಡ ಅರಸನು ಹಸ್ತಿಕುಂಡಿ ರಾಷ್ಟ್ರಕೂಟ ದೊರೆ ಧವಳನ ಬಳಿ ಆಶ್ರಯ ಪಡೆದಂತೆ ತಿಳಿಯುತ್ತದೆ.

ಕ್ರಿ.ಶ. ೯೯೯ ರಲ್ಲಿ ದುರ್ಲಭ ರಾಜನು ನಡ್ಡುಲದ ಚಾಹಮಾನ ವಂಶದ ಅರಸ ಮಹೇಂದ್ರನ ಮೇಲೆ ದಾಳಿ ಮಾಡಿದನು. ಅವನನ್ನು ಎದುರಿಸಲು ಸಾಧ್ಯವಾಗದೆ ಮಹೇಂದ್ರನು ಓಡಿ ಹಸ್ತಿಕುಂಡಿ ರಾಷ್ಟ್ರಕೂಟ ದೊರೆ ಧವಳನಲ್ಲಿ ಆಶ್ರಯ ಪಡೆದನು.

ಇದೊಂದು ಪ್ರಶಸ್ತಿಶಾಸನವಾಗಿದೆ. ಜಿನಸ್ತುತಿಯೊಂದಿಗೆ ಶಾಸನವು ಆರಂಭವಾಗಿದೆ. ನಂತರ ರಾಜವಂಶದ ಹೆಸರಿದ್ದು, ಅದು ಅಳಿಸಿಹೋಗಿದೆ. ನಂತರ ಹರಿವರ್ಮನ್ ಮತ್ತು ಆತನ ಪತ್ನಿ ರುಚಿಯನ್ನು ಹೆಸರಿಸುತ್ತದೆ. ನಂತರ ವಿದಗ್ಧನನ್ನು ಹೆಸರಿಸಿದೆ. ಶಾಸನದ ಎರಡನೆಯ ಭಾಗವು ವಿದಗ್ಧನದ್ದಾಗಿದೆ. [Vasudeva was the preceptor of vidagdharaja who imparted to the prince spiritual knowledge and iduce him to erect a temple dedicated to the god Jina in the town of Hastikundi. The prince had himself weighed against gold, of which two-thirds were alone allotted to the god and the reminder to the jaina preceptor (Vasudeva)]

ಹಸ್ತಿಕುಂಡಿ ರಾಷ್ಟ್ರಕೂಟರ ಈ ಶಾಖೆಯಲ್ಲಿ ಕ್ರಿ.ಶ. ೯೧೬ರಲ್ಲಿ ವಿದಗ್ಧನು ಆಳುತ್ತಿದ್ದನು. ಕ್ರಿ.ಶ. ೯೩೯ರಲ್ಲಿ ವಿದಗ್ಧನ ಮಗ ಮಮ್ಮಟನು, ನಂತರ ಮಮ್ಮಟನ ಮಗ ಧವಳನು ರಾಜ್ಯಭಾರ ಮಾಡುತ್ತಿದ್ದುದಾಗಿ ತಿಳಿಯುತ್ತದೆ. ಆದರೆ ಆತನ ಅಧಿಕಾರಾವಧಿ ಎಷ್ಟು ವರ್ಷವೆಂದು ತಿಳಿದುಬಂದಿಲ್ಲ. ಚಾಪವಂಶದ ಧರಣೀವರಾಹ, ಧವಳ ಮತ್ತು ಕ್ರಿ.ಶ. ೯೪೨ರಲ್ಲಿ ಪಟ್ಟಾಭಿಷಿಕ್ತನಾದ, ಚಾಲುಕ್ಯದೊರೆ ಮೂಲರಾಜ, ಇವರೆಲ್ಲ ಸಮಕಾಲೀನರಾಗಿದ್ದರು. ಧವಳನು ತನ್ನ ವೃದ್ಧಾಪ್ಯದಲ್ಲಿ ಮಗ

ಬಾಲಪ್ರಸಾದನಿಗಾಗಿ ಸಿಂಹಾಸನವನ್ನು ಬಿಟ್ಟುಕೊಟ್ಟನು. ಬಾಲಪ್ರಸಾದನು ಕ್ರಿ.ಶ. ೯೯೭ರಲ್ಲಿ ಕೂಡ ಆಳ್ವಿಕೆ ನಡೆಸಿದನೆಂದು ಊಹಿಸಬಹುದಾಗಿದೆ.

ಹಸ್ತಿಕುಂಡಿ ರಾಷ್ಟ್ರಕೂಟರ ಬಗ್ಗೆ ಹೆಚ್ಚಿನ ಮಾಹಿತಿಗಳು ಸಿಗುವುದಿಲ್ಲವಾದರೂ ಇವರು ಬಲಿಷ್ಠರಾಗಿದ್ದರೆಂದು ಹೇಳಬಹುದು. ಏಕೆಂದರೆ, ಎಷ್ಟೇ ಬಲಿಷ್ಠನಾಗಿದ್ದರೂ, ಬೇರೆ ಇಬ್ಬರು ಅರಸರ ಹೋರಾಟದಲ್ಲಿ ಸೋತ ದೊರೆಗೆ ಆಶ್ರಯ ನೀಡಿದರೆ, ಇನ್ನೊಬ್ಬ ಅರಸನ ಜೊತೆ ವೈರ ಕಟ್ಟಿಕೊಂಡಂತೆಯೇ ಸರಿ. ಎದುರುಬಿದ್ದ ಆ ದೊರೆಯು ಇವರ ರಾಜ್ಯದ ಮೇಲೂ ದಾಳಿ ಮಾಡುವ ಸಾಧ್ಯತೆಯಿರುತ್ತದೆ. ಆಗ ಅಕ್ರಮಣವನ್ನು ಎದುರಿಸಲು ಸಿದ್ಧರಿರಬೇಕು. ಹಸ್ತಿಕುಂಡಿ ರಾಷ್ಟ್ರಕೂಟರ ವಿಷಯದಲ್ಲಿ ಆದುದು ಹಾಗೆಯೇ. ಮೇದಪಾಟಲದ ಗುಹಿಲ ದೊರೆ ನರವಾಹನ ಅಥವಾ ಶಕ್ತಿಕುಮಾರ, ಚಾಪವಂಶದ ಧರಣೀವರಾಹ ಕ್ರಿ.ಶ. ೯೯ ರಲ್ಲಿ ನಡ್ಡುಲದ ಚಾಹಮಾನ ಮಹೇಂದ್ರ ಈ ಮೂರೂ ಅರಸರು ವಿವಿಧ ಕಾಲಗಳಲ್ಲಿ ಧವಳನ ಬಳಿ ಆಶ್ರಯ ಪಡೆದರು ಇವರಿಗೆ ಆಶ್ರಯ ನೀಡಿದ್ದರಿಂದ ಪರಮಾರ ಮುಂಜ, ಪ್ರತಿಹಾರ ಒಂದನೆಯ ಮಹೀಪಾಲ ಮುಂತಾದವರನ್ನು ಎದುರು ಹಾಕಿಕೊಳ್ಳಬೇಕಾಯಿತು. ಧವಳನ ತಂಗಿ ಅಥವಾ ಸೋದರತ್ತೆ ಮಹಾಲಕ್ಷ್ಮಿಯನ್ನು ಮೇವಾರದ ಅರಸ ಇಮ್ಮಡಿ ಭರ್ತೃಭಟ್ಟನಿಗೆ ಮದುವೆ ಮಾಡಿಕೊಟ್ಟಿದ್ದನು.

ಐದು ತಲೆಮಾರುಗಳ ರಾಷ್ಟ್ರಕೂಟರ ಈ ವಂಶ ಸುಮಾರು ನೂರು ವರ್ಷಗಳ ಕಾಲ ರಜಪುಟಾಣದಲ್ಲಿ ಹಸ್ತಿಕುಂಡಿಯನ್ನು ರಾಜಧಾನಿಯಾಗಿರಿಸಿಕೊಂಡು ಆಳ್ವಿಕೆ ನಡೆಸಿತು. ವಿದಗ್ಧ ದೊರೆಯ ಕಾಲವು ಕ್ರಿ.ಶ. ೯೧೬ ಎಂದು ತಿಳಿದಿದೆ. ಕೊನೆಯ ದೊರೆ ಬಾಲಪ್ರಸಾದನ ಕಾಲ ಕ್ರಿ.ಶ. ೯೯೭. ವಿದಗ್ಧನಿಗಿಂತ ಹಿಂದಿನ ದೊರೆ ಹರಿವರ್ಮನ ಕಾಲವನ್ನು ಕ್ರಿ.ಶ. ೯೦೦ ಎಂದಿಟ್ಟುಕೊಂಡರೆ, ನೂರರಿಂದ ನೂರೈದು ವರ್ಷಗಳ ಕಾಲ ಇವರ ಆಳ್ವಿಕೆ ನಡೆದಿತ್ತು ಎನ್ನಬಹುದು. ಇವರಿಗೆ ಮತ್ತು ಮಾನಪುರ, ಅಚಲಾಪುರ, ಮಳಖೇಡದ ರಾಷ್ಟ್ರಕೂಟರಿಗೆ ಯಾವ ರೀತಿಯ ಸಂಬಂಧ ಇತ್ತೆಂದು ತಿಳಿಯುವುದಿಲ್ಲ. ಇವರು ತಮ್ಮ ಮೂಲದ ಬಗ್ಗೆ ಎಲ್ಲಿಯೂ ಹೇಳಿಕೊಂಡಿಲ್ಲ.

ವಂಶಾವಳಿ

ಹರಿವರ್ಮನ್ (ಕ್ರಿ.ಶ. ಸು. ೯೦೦)

ವಿದಗ್ಧ (ವಿ. ಸಂ. ೯೭೩; ಕ್ರಿ.ಶ. ೯೧೫)

ಮಮ್ಮಟ (ಕ್ರಿ.ಶ. ೯೩೮)

ಧವಳ (ಕ್ರಿ.ಶ. ೯೯೫)

ಬಾಲಪ್ರಸಾದ (ಕ್ರಿ.ಶ. ೯೯೭)

## ೮. ಬೋಧಗಯಾ ರಾಷ್ಟ್ರಕೂಟರು (ಕ್ರಿ.ಶ. ೯೦೦ – ೯೮೦)

ಬಿಹಾರಿನ ಬೋಧಗಯೆಯಲ್ಲಿ ರಾಷ್ಟ್ರಕೂಟ ವಂಶವೊಂದು ಕ್ರಿ.ಶ. ಸುಮಾರು ೯೦೦ರಿಂದ ೯೮೦ರವರೆಗೆ ಅಸ್ತಿತ್ವದಲ್ಲಿತ್ತೆಂದು ತಿಳಿದು ಬರುತ್ತದೆ. ಬೋಧಗಯಾದಲ್ಲಿ ಸಿಕ್ಕಿರುವ ಶಾಸನವು ತುಂಗ ಧರ್ಮಾವಲೋಕನ ಆಳ್ವಿಕೆಯ ಹದಿನೈದನೆಯ ವರ್ಷದ್ದಾಗಿದೆ (ಆರ್.ಎಲ್. ಮಿತ್ರ. ಬುದ್ಧಗಯಾ, p195, Bhandarkar's List No. 1668) ಈ ಶಾಸನದ ತುಂಡುಗಳು ಕಲ್ಕತ್ತದ Indian Museum ನಲ್ಲಿವೆ.

ಇದು ಪ್ರಶಸ್ತಿ ಶಾಸನವಾಗಿದೆ. ಶಾಸನದಲ್ಲಿ ವಂಶಾವಳಿಯಿದ್ದು, ಅರಸರ ದೀರ್ಘ ಪ್ರಶಸ್ತಿಗಳಿವೆ. ಸಿಂಹಳ ದ್ವೀಪದಿಂದ ಬಂದ ಬೌದ್ಧ ಭಿಕ್ಷುವೊಬ್ಬನನ್ನು ಉಲ್ಲೇಖಿಸಿ, ಅರಸನು ಬುದ್ಧನಿಗಾಗಿ ಒಂದು ಗಂಧಕುಟಿ(ಸ್ತೂಪ)ಯನ್ನು ಕಟ್ಟಿಸಿದ್ದನ್ನು ಉಲ್ಲೇಖಿಸುತ್ತದೆ. ಮೂರು ದೊರೆಗಳ ಹೆಸರನ್ನು ಸೂಚಿಸುವ ವಂಶಾವಳಿಯು ಸಿಗುತ್ತದೆ. ಈ ಶಾಸನದಲ್ಲಿ ಉಲ್ಲೇಖವಾಗಿರುವ ಕೊನೆಯ ದೊರೆ ತುಂಗ ಅಥವಾ ಧರ್ಮಾವಲೋಕನು ತನ್ನ ಮಗಳು ಭಾಗ್ಯಾದೇವಿಯನ್ನು ಪಾಲ ದೊರೆ ರಾಜ್ಯಪಾಲನಿಗೆ ಮದುವೆ ಮಾಡಿಕೊಟ್ಟಿದ್ದನೆಂದು (ಭಾರತ್ ಕೆ ಪ್ರಾಚೀನ್ ರಾಜವಂಶ್ ಸಂ. ೧; ಪು.೧೮೯) ತಿಳಿದು ಬರುತ್ತದೆ. ಈ ಶಾಸನದ ಕಾಲವನ್ನು ಕ್ರಿ.ಶ. ೯೭೮ಕ್ಕೆ ಸೇರಿಸಬಹುದಾಗಿದೆ.

ಬೋಧಗಯಾದ ರಾಷ್ಟ್ರಕೂಟರ ಹೆಸರಿನ ಹಿಂದೆ ಗುಣಾವಲೋಕ, ಧರ್ಮಾವಲೋಕ ಎಂಬ ವಿಶೇಷಣಗಳಿವೆ. ಮಳಖೇಡದ ರಾಷ್ಟ್ರಕೂಟ ದೊರೆ ಕಂಬನಿಗೆ

"ರಣಾವಲೋಕ" ಎಂಬ ವಿಶೇಷಣವೂ, ದಂತಿದುರ್ಗನಿಗೆ "ಖಡ್ಗಾವಲೋಕ" ಎಂಬ ವಿಶೇಷಣವೂ ಇರುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

**ವಂಶಾವಳಿ**




## ೯. ಧಾನೋಪದ ರಾಷ್ಟ್ರಕೂಟರು (ಕ್ರಿ.ಶ. ೧೦೧೬)

ಕ್ರಿ.ಶ. ೧೦೦೫ರ ಸುಮಾರಿಗೆ ರಾಷ್ಟ್ರಕೂಟರ ಶಾಖೆಯೊಂದು ರಾಜಾಸ್ಥಾನದ ಧಾನೋಪ (ಶಾಹಪೂರ)ದ ಸುತ್ತ ಮುತ್ತ ಆಳುತ್ತಿದ್ದರೆಂದು ತಿಳಿದು ಬರುತ್ತದೆ. ಇವರನ್ನು ಧಾನೋಪದ ರಾಷ್ಟ್ರಕೂಟರು ಎಂದೇ ಕರೆಯಲಾಗಿದೆ. ಇವರ ಎರಡು ತಾಮ್ರಶಾಸನಗಳು ದೊರೆತಿವೆ. ಅದರಲ್ಲಿ ಒಂದು ಶಾಸನವು ವಿಕ್ರಮ ಸಂವತ್ಸರ ೧೦೬೩ (ಕ್ರಿ.ಶ. ೧೧೦೫) ಪೌಷ ೫ನೆಯ ದಿನಾಂಕವನ್ನು ತಿಳಿಸುತ್ತದೆ. ಈ ಶಾಸನವು ರಾಥೋರ ದೊರೆ ಭಲ್ಲೀಲನನ್ನು ಹೆಸರಿಸುತ್ತದೆ. ಇದರಲ್ಲಿ ವಂಶಾವಳಿಯೂ, ವಿವರಗಳೂ ಇವೆ (The History of Rashtrakutas (Rathore) Reu, p112). ದುರ್ದೈವದಿಂದ ಈ ಶಾಸನ ಮತ್ತು ಇನ್ನೊಂದು ಶಾಸನವು ಎಲ್ಲಿದೆಯೆಂದು ತಿಳಿದು ಬಂದಿಲ್ಲ (ಎಂ.ವಿ. ಕೃಷ್ಣರಾವ್) ದಂತಿವರ್ಮನೆಂಬ ಅರಸನಿಗೆ ಬುದ್ಧರಾಜ ಮತ್ತು ಗೋವಿಂದರಾಜನೆಂಬ ಇಬ್ಬರು ಮಕ್ಕಳಿದ್ದುದನ್ನು ಉಲ್ಲೇಖಿಸುತ್ತದೆ. ಈ ಶಾಖೆಯ ಬಗ್ಗೆ ವಿದ್ವಾಂಸರು ಕೆಲವು ಊಹೆಗಳನ್ನು ಮಾಡುತ್ತಾರೆ. ಮಾನ್ಯಖೇಟದ ರಾಷ್ಟ್ರಕೂಟ ದೊರೆ ಒಂದನೆಯ ಅಮೋಘವರ್ಷನ ನೀಲಗುಂದ ಶಾಸನವು ತಿಳಿಸುವಂತೆ, ಅಮೋಘವರ್ಷನ ತಂದೆ ಮೂರನೆಯ ಗೋವಿಂದನು ಕೇರಳ, ಮಾಳವ, ಗೌಡ, ಗೂರ್ಜರ, ಚಿತ್ರಕೂಟ (ಚಿತ್ತೂರು), ಕಾಂಚಿಯ ಮೇಲೆ ದಾಳಿ ಮಾಡಿದನು. ಈ ಸಂದರ್ಭದಲ್ಲಿ ಉತ್ತರ ಭಾರತದ ಕಡೆ ದಾಳಿ ಮಾಡಿದಾಗ ವೈವಾಹಿಕ ಸಂಬಂಧಗಳು ಬೆಳೆದಿದ್ದು, ಆ ಮೂಲಕ ಜನಿಸಿದ ಶಾಖೆಯಾಗಿರಬಹುದು. ಈ ಶಾಖೆಯು ಎಲ್ಲಿಯವರೆಗೆ ಇತ್ತು ಎಂದು

ತಿಳಿಯುವುದಿಲ್ಲ. ಇವರ ವಂಶದ ಮೂಲಪುರುಷ, ಲಾಂಛನ, ರಾಜಧಾನಿ ಯಾವುದಾಗಿತ್ತು ಮುಂತಾದ ವಿವರಗಳು ಲಭ್ಯವಾಗಿಲ್ಲ. ಕಳೆದು ಹೋಗಿರುವ ಶಾಸನಗಳು ಸಿಕ್ಕಿದರೆ ಹೆಚ್ಚಿನ ವಿವರಗಳು ಸಿಗುವ ಸಾಧ್ಯತೆಯಿದೆಯೆಂದು ಭರವಸೆಯಿಟ್ಟುಕೊಳ್ಳಬಹುದು ಎಂದು ರೇವು ಎಂಬ ವಿದ್ವಾಂಸರು ತಮ್ಮ ಅನಿಸಿಕೆಯಲ್ಲಿ ವ್ಯಕ್ತಪಡಿಸುವ ಅಂಶವನ್ನೇ ಸಧ್ಯಕ್ಕೆ ಗಮನದಲ್ಲಿರಿಸಿಕೊಳ್ಳುವುದು ಉಚಿತವೆನ್ನಿಸುತ್ತದೆ.

**ವಂಶಾವಳಿ**




## ೧೦. ರಾಷ್ಟ್ರೌಡ ಶಾಖೆ ೧ (ಕ್ರಿ.ಶ. ಸುಮಾರು ೧೦೭೬ – ೧೧೨೬)

ಕ್ರಿ.ಶ. ೧೦೮೬ರ ದಾಡಿಭಢಕನ ತಾಮ್ರ ಶಾಸನವೊಂದು ಸೀತಾಬಾಲ್ಡಿಯಲ್ಲಿ ಸಿಕ್ಕಿದೆ. ಈತ ಚಾಲುಕ್ಯ ವಿಕ್ರಮಾದಿತ್ಯ (ತ್ರಿಭುವನ ಮಲ್ಲ)ನ ಮಾಂಡಳೀಕನಾಗಿದ್ದನೆಂದು ತಿಳಿದುಬರುತ್ತದೆ. ಶಾಸನದಲ್ಲಿ ಈತನನ್ನು ರಾಷ್ಟ್ರಕೂಟ ಎಂದು ಕರೆಯಲಾಗಿದೆ. ಈತ ಲಟ್ಟಲೂರಿನಿಂದ ಬಂದವನೆಂಬ ಮಾಹಿತಿಯಿದೆ. ದಾಡಿಭಢಕನ ಆಳ್ವಿಕೆಯ ಕಾಲವನ್ನು ಕ್ರಿ.ಶ. ೧೦೭೨–೧೧೨೬ರವರೆಗೆ ಎಂದು ವಿದ್ಯಾಂಸರು ಗುರುತಿಸಿದ್ದಾರೆ. ಇದರ ಪ್ರಕಾರ ಸುಮಾರು ಐವತ್ತು ವರ್ಷಗಳಷ್ಟು ದೀರ್ಘಕಾಲ ಈತನ ಆಳ್ವಿಕೆಯು ನಡೆದಿದೆ. ಚಾಳುಕ್ಯರ ಶಾಸನಗಳಲ್ಲಿ ಸಹ ಈ ಬಗ್ಗೆ ಹೆಚ್ಚಿನ ಮಾಹಿತಿಗಳು ಸಿಗುವುದಿಲ್ಲ. ಈತನ ಆಳ್ವಿಕೆ ನಡೆಸಿರುವ ಪ್ರದೇಶ ಸೀತಾಬಾಲ್ಡಿಯೇ? ಎಂಬುದು ಸ್ಪಷ್ಟವಾಗುವುದಿಲ್ಲ.

ಇವರನ್ನು ಎರಡು ಶಾಖೆಗಳಲ್ಲಿ ಗುರುತಿಸಿದ್ದಾರೆ. ಕಾರಣ ಕಾಲದ ವ್ಯತ್ಯಾಸ. ಒಂದನೆಯ ಶಾಖೆಯ ದಾಡಿಭಢಕನ ಅಂತ್ಯಕಾಲವನ್ನು ಕ್ರಿ.ಶ. ೧೧೨೬ ಎಂದಿಟ್ಟುಕೊಂಡರೂ ಎರಡನೆಯ ಶಾಖೆಯ ಶಾಸನ ಸಿಗುವ ಕಾಲ ೧೩೮೪ ಆಗಿರುವುದರಿಂದ, ಸುಮಾರು ೨೫೮ ವರ್ಷಗಳ ಕಾಲ ಅಂತರವಿರುವುದು ಕಂಡುಬರುತ್ತದೆ. ಆದ್ದರಿಂದ ಎರಡು ಶಾಖೆಗಳಿದ್ದವು ಎನ್ನುವುದೇ ಔಚಿತ್ಯವೆನಿಸುತ್ತದೆ.

ಇವರ ವಂಶಾವಳಿಯು ಸಹ ಸಿಕ್ಕಿಲ್ಲ. ಕೆಲವು ವಿದ್ವಾಂಸರು ರಾಜಸ್ಥಾನದಲ್ಲಿದ್ದ ಧಾನೋಪ ಮತ್ತು ಇನ್ನೊಂದು ಶಾಖೆಯನ್ನು ರಾಷ್ಟ್ರೌಡ ಶಾಖೆಯೆಂದೇ ಗುರುತಿಸಿದ್ದಾರೆ (ಎಂ.ವಿ. ಕೃಷ್ಣರಾವ್). ಆದರೆ ಇದಕ್ಕೆ ಯಾವ ಆಧಾರವನ್ನೂ, ವಿವರವನ್ನೂ ಕೊಟ್ಟಿಲ್ಲ. ಪಂಡಿತ್ ರೇವು ಅವರು ರಾಷ್ಟ್ರೌಡರ ಬಗ್ಗೆ ಯಾವುದೇ ಮಾತನ್ನು ಹೇಳಿಲ್ಲ.

## ೧೧. ಮಗಧದ ರಾಷ್ಟ್ರಕೂಟರು (ಕ್ರಿ.ಶ. ೧೧ ನೆಯ ಶತಮಾನ)

ಕ್ರಿ.ಶ. ಹನ್ನೊಂದನೆಯ ಶತಮಾನದಲ್ಲಿ ಮಗಧದಲ್ಲಿ ಒಂದು ರಾಷ್ಟ್ರಕೂಟರ ವಂಶವಿತ್ತು. ಬೇರೆ ಶಾಸನಗಳಲ್ಲಿ ಇದರ ಬಗ್ಗೆ ನಮಗೆ ಯಾವ ಮಾಹಿತಿಯೂ ದೊರೆಯುವುದಿಲ್ಲ. ಇವರು ಮೂಲ ಶಾಖೆಗೆ ಸೇರಿದವರೇ ಅಥವಾ ಬೇರೆಯವರೇ ಎಂದು ತಿಳಿಯುವುದಿಲ್ಲ. ಆದರೆ ಹನ್ನೆರಡನೆಯ ಶತಮಾನದಲ್ಲಿ ರಾಷ್ಟ್ರಕೂಟ ದೊರೆಯ ಹೆಸರಿರುವ ಶಾಸನವು ಸಿಕ್ಕಿದೆ. ಇದು ಜಬಲ್‌ಪುರದ ಸಮೀಪ ಬಹರಿಬಂದ್‌ನಲ್ಲಿ ಸಿಕ್ಕಿದೆ. ಇದರಲ್ಲಿ ಗೋಲ್ಹಣದೇವ ಎಂಬ ರಾಷ್ಟ್ರಕೂಟ ದೊರೆಯ ಹೆಸರಿದೆ. ಕಲಚುರಿ(ಹೈಹಯ) ವಂಶದ ದೊರೆ ಗಾಯ(ಗಯಾ)ಕರ್ಣನಿಗೆ ಈತ ಮಹಾಮಾಂಡಳೀಕನಾಗಿದ್ದನೆಂಬ ಅಂಶವು ಈ ಶಾಸನದಿಂದ ತಿಳಿದು ಬರುತ್ತದೆ. ಗೊಲ್ಹಣದೇವನು ಮೂಲಪುರುಷನೇ ಮತ್ತು ಈ ಶಾಖೆಯಲ್ಲಿ ಇವನ ಸ್ಥಾನವೇನು ಎಂಬುದು ಸ್ಪಷ್ಟವಾಗುವುದಿಲ್ಲ.

**ವಂಶಾವಳಿ**



## ೧೨. ಸೌಂದತ್ತಿಯ ರಾಷ್ಟ್ರಕೂಟರು ( ಕ್ರಿ. ಶ. ೮೭೫ – ೧೨೩೦)

ಡಾ॥ ಫ್ಲೀಟರು ತಮ್ಮ ಲೇಖನದಲ್ಲಿ (JBBRAS, IX, 1867-70, P 229) ಸೌಂದತ್ತಿ ರಟ್ಟರ ಮತ್ತು ಬೆಳಗಾವಿ ರಟ್ಟರ ಎಂಟು ಸಂಸ್ಕೃತ ಮತ್ತು ಕನ್ನಡ ಶಾಸನಗಳನ್ನು ಪ್ರಕಟಿಸಿದ್ದಾರೆ. ಇದಲ್ಲದೆ ಇನ್ನೂ ಅನೇಕ ಶಾಸನಗಳಿವೆ.

ಕಲ್ಯಾಣಿ ಚಾಲುಕ್ಯರಿಂದ ಸೋತ ರಾಷ್ಟ್ರಕೂಟರು ನಂತರ ಸಣ್ಣ ಪುಟ್ಟ ಪ್ರಾಂತಗಳಲ್ಲಿ ಆಳಿಕೊಂಡು ಮುಂದೆ ಚಾಲುಕ್ಯರ ಸಾಮಂತರಾದರು. ಎರಡು ಸಣ್ಣ ಶಾಖೆಗಳೆಂದರೆ ಇಂದಿನ ಧಾರವಾಡದ ಸುತ್ತ ಮುತ್ತ ಆಳಿಕೊಂಡಿದ್ದ ಒಂದು ಶಾಖೆ ಮತ್ತು ಸೌಂದತ್ತಿಯಲ್ಲಿ ಇನ್ನೊಂದು. ಸೌಂದತ್ತಿಯಲ್ಲಿ ಆಳಿಕೊಂಡಿದ್ದವರನ್ನು ಶಾಸನಗಳಲ್ಲಿ ರಟ್ಟರೆಂದು ಗುರುತಿಸಲಾಗಿದೆ. ರಟ್ಟರಲ್ಲಿ ಕೂಡ ಎರಡು ಶಾಖೆಗಳಿದ್ದವು. ಮೊದಲನೆಯ ಶಾಖೆಯಲ್ಲಿ ಮೇರಡ, ಪೃಥ್ವೀರಾಮ, ಪಿತ್ತುಗ ಮತ್ತು ಶಾಂತಿವರ್ಮನ್ ಎಂಬ ಐದು ಜನ ಅರಸರಿದ್ದರು. ಮೇರಡನ ಬಗ್ಗೆ ಹೆಚ್ಚಿನ ವಿಚಾರಗಳು ತಿಳಿದುಬರುವುದಿಲ್ಲ. ಮೇರಡನ ಮಗ ಪೃಥ್ವೀರಾಮನು ಕ್ರಿ.ಶ ೮೭೫ರಲ್ಲಿ ಇದ್ದನೆಂದು ಶಾಸನದಿಂದ (JBBRS Vol X, P 194) ಇವನು ರಾಷ್ಟ್ರಕೂಟ ಅರಸ ಎರಡನೆಯ ಕೃಷ್ಣರಾಜನ ಮಾಂಡಳೀಕನಾಗಿ ಸೌಂದತ್ತಿಯಲ್ಲಿ ಆಳುತ್ತಿದ್ದನು. ಪೃಥ್ವೀರಾಮನ ಬಗ್ಗೆ ತಿಳಿಸುವ ಇನ್ನೊಂದು ಶಾಸನವು ಕ್ರಿ.ಶ. ೯೮೦ ರಲ್ಲಿ ಸಿಕ್ಕಿದೆ. ಈ ಶಾಸನದ ಪ್ರಕಾರ ಪೃಥ್ವೀವರ್ಮನು, ಮೂರನೆಯ ಕೃಷ್ಣರಾಜನ ಮಾಂಡಳೀಕನಾಗಿದ್ದನು. ಈ ಪೃಥ್ವೀವರ್ಮನು ಜೈನಧರ್ಮದ ಅನುಯಾಯಿಯಾಗಿದ್ದನು. ಕ್ರಿ.ಶ. ೯೮೦ರ ಹೊತ್ತಿಗೆ ಈತ ಮಹಾಸಾಮಂತಾಧಿಪತಿ ಆಗಿದ್ದ. ಕಾಲವ್ಯತ್ಯಾಸವನ್ನು ಗಮನಿಸಿದರೆ ನೂರ ಐದು ವರ್ಷಗಳ ಅಂತರವಿದೆ.

ಈ ಎರಡೂ ಶಾಸನಗಳಲ್ಲಿ ಬರುವ ಪೃಥ್ವೀರಾಮರನ್ನು ಇಬ್ಬರೆಂದು ಗುರುತಿಸಲಾಗಿದೆ. ಕ್ರಿ.ಶ. ೮೭೫ರಲ್ಲಿ ಇದ್ದವನು ಒಂದನೆಯ ಪೃಥ್ವೀರಾಮನೆಂದೂ ಕ್ರಿ.ಶ. ೯೮೦ ರಲ್ಲಿ ಇದ್ದವನು ಎರಡನೆಯ ಪೃಥ್ವೀರಾಮನೆಂದೂ ಗುರುತಿಸಬಹುದಾಗಿದೆ. ಪೃಥ್ವೀರಾಮನ ಮಗ ಪಿತ್ತುಗ. ಇವನು ಯುದ್ಧದಲ್ಲಿ ಅಜವರ್ಮನೆಂಬ ಅರಸನನ್ನು ಸೋಲಿಸಿದ ಉಲ್ಲೇಖವಿದೆ. ಈತನ ಕಾಲದ ಬಗ್ಗೆ ಸರಿಯಾಗಿ ತಿಳಿದಿಲ್ಲ. ಈತನ ಹೆಂಡತಿಯ ಹೆಸರು ನೀಜಿಕಬ್ಬೆಯೆಂದು ತಿಳಿದುಬರುತ್ತದೆ. ಕ್ರಿ. ಶ. ೯೮೦ ರ ಶಾಸನದಲ್ಲಿ

(JBBRAS Vol X, P 204) ಶಾಂತಿವರ್ಮನನ್ನು ಚಾಲುಕ್ಯ ಎರಡನೆಯ ತೈಲಪನ ಮಾಂಡಳೀಕನೆಂದು ಗುರುತಿಸಲಾಗಿದೆ. ಈತನ ಪತ್ನಿಯ ಹೆಸರು ಚಂಡಿಕಬ್ಬೆ.

ಸೌಂದತ್ತಿಯ ರಟ್ಟರ ಎರಡನೆಯ ಶಾಖೆಯು ನನ್ನ ಎಂಬ ಅರಸನಿಂದ ಪ್ರಾರಂಭವಾಗುತ್ತದೆ. ಈತನ ಬಗ್ಗೆ ಹೆಚ್ಚಿನ ವಿವರಗಳು ತಿಳಿದುಬಂದಿಲ್ಲ. ಈತನ ಮಗ ಒಂದನೆಯ ಕಾರ್ತವೀರ್ಯನು ಕಲ್ಯಾಣಿ ಚಾಲುಕ್ಯ ದೊರೆ ಎರಡನೆಯ ತೈಲಪನ ಮಾಂಡಳೀಕನಾಗಿದ್ದನು. (Keilhorn's list of South Indian Inscriptions P 26, No. 141) ಒಂದನೆಯ ಕಾರ್ತವೀರ್ಯನು ಇಂದಿನ ಧಾರವಾಡ ಜಿಲ್ಲೆಯಲ್ಲಿರುವ ಕುಂಡಿ ಪ್ರದೇಶವನ್ನು ಆಳಿಕೊಂಡಿದ್ದನು. ಈತನಿಗೆ ದಾಯಿಮ ಮತ್ತು ಕನ್ನ ಎಂಬ ಇಬ್ಬರು ಮಕ್ಕಳಿದ್ದರು. ದಾಯಿಮ ಅಥವಾ ದಾವರಿಯು ಒಂದನೆಯ ಕಾರ್ತವೀರ್ಯನ ನಂತರ ಪಟ್ಟಕ್ಕೆ ಬಂದನೆಂದು ತಿಳಿದು ಬಂದರೂ ಶಾಸನಗಳಾಗಲೀ ಇನ್ನು ಯಾವುದೇ ವಿವರಗಳಾಗಲೀ ತಿಳಿದಿಲ್ಲ. ಇವನ ನಂತರ ಕಿರಿಯ ಸೋದರನಾದ ಕನ್ನ ಅಥವ ಒಂದನೆಯ ಕನ್ನ ಕೈರನು ಅಧಿಕಾರವಹಿಸಿದನು. ಇವನಿಗೆ ಎರೆಗ ಮತ್ತು ಅಂಕರೆಂಬ ಇಬ್ಬರು ಮಕ್ಕಳಿದ್ದರು.

ಒಂದನೆಯ ಕನ್ನನ ನಂತರ ಪಟ್ಟಕ್ಕೆ ಬಂದವನು ಎರೆಗ. ಶಾಸನದಲ್ಲಿ ಈತ ಕಲ್ಯಾಣಿ ಚಾಲುಕ್ಯ ಅರಸ ಜಗದೇಕ ಮಲ್ಲನ ಮಹಾಸಾಮಂತನಾಗಿದ್ದನೆಂದು ಉಲ್ಲೇಖಿಸಿದೆ. (IA. Vol. XIX P 164, 1040 AD) ಕನ್ನನು ಲಟ್ಟಲೂರನ್ನು ಆಳುತ್ತಿದ್ದನು. ಇವನಿಗೆ ಐದು ಬಿರುದುಗಳಿದ್ದವು. ಸಂಗೀತ ವಿದ್ಯೆಯಲ್ಲಿ ಕೋವಿದನಾಗಿದ್ದನು. ಇವನನ್ನು ರಟ್ಟನಾರಾಯಣ ಎಂದು ಕರೆದಿದ್ದಾರೆ. ಇವನ ಧ್ವಜದಲ್ಲಿ ಚಿನ್ನದಿಂದ ಮಾಡಿದ ಗರುಡ ಚಿತ್ರವಿತ್ತು. ಇವನನ್ನು ಸಿಂಘಣ ಗರುಡನೆಂದು ಗುರುತಿಸಿದ್ದಾರೆ. ಈತನ ಲಾಂಛನವನ್ನು ತಿವಳಿ ವಾದ್ಯಗಳೊಂದಿಗೆ ಆನೆಯ ಮೇಲೆ ಒಯ್ಯಲಾಗುತ್ತಿತ್ತು. ತಿವಳಿ ವಾದ್ಯವು ರಾಷ್ಟ್ರಕೂಟರ ರಾಜವಾದ್ಯವಾಗಿತ್ತೆಂದು ತಿಳಿದಿದೆ. ಎರೆಗನ ಮಗ, ಸೇನ ಅಥವಾ ಕಾಲಸೇನನೆಂದು ತಿಳಿದುಬರುತ್ತದೆ. ಎರೆಗನ ನಂತರ, ಕನ್ನನ ಕಿರಿಯ ಮಗ ಎರೆಗನ ಸೋದರ, ಅಂಕನು ಪಟ್ಟಕ್ಕೆ ಬರುತ್ತಾನೆ. ಇವನು ಕಲ್ಯಾಣಿ ಚಾಲುಕ್ಯ ಒಂದನೆಯ ಸೋಮೇಶ್ವರ ಅಥವಾ ತ್ರೈಲೋಕ್ಯಮಲ್ಲನ ಮಹಾಮಾಂಡಳೀಕನಾಗಿದ್ದನೆಂದು ತಿಳಿದುಬರುತ್ತದೆ. (JBBRAS Vol. X P 172

1048 AD) ಅಂಕನ ನಂತರ ಎರೆಗನ ಮಗ ಒಂದನೆಯ ಕಾಲಸೇನನು ಪಟ್ಟಕ್ಕೆ ಬಂದನು. ಇವನ ಬಗ್ಗೆ ಹೆಚ್ಚಿನ ವಿವರಗಳು ತಿಳಿದುಬರುವುದಿಲ್ಲ. ಈತನಿಗೆ ಮೈಳಲದೇವಿಯೆಂಬ ಪತ್ನಿಯಿದ್ದಳೆಂದೂ, ಇವಳಿಂದ ಕನ್ನ ಮತ್ತು ಕಾರ್ತವೀರ್ಯರೆಂಬ ಮಕ್ಕಳಿದ್ದರೆಂದೂ ತಿಳಿದುಬಂದಿದೆ.

ಕಾಲಸೇನನ ನಂತರ ಎರಡನೆಯ ಕನ್ನಕೈರನು ಸಿಂಹಾಸನವೇರಿದನು. ಇವನ ಕಾಲದ ಒಂದು ತಾಮ್ರ ಶಾಸನ ಮತ್ತು ಒಂದು ಶಿಲಾಶಾಸನವು ದೊರಕಿದೆ. ಎರಡನೆಯ ಕನ್ನನು ಕಲ್ಯಾಣಿ ಚಾಲುಕ್ಯರ ಆರನೆಯ ವಿಕ್ರಮಾದಿತ್ಯನ ಮಹಾಮಾಂಡಳೀಕನಾಗಿದ್ದನೆಂದೂ ಈತನ ತಾಮ್ರಪಟದಿಂದ ತಿಳಿದಿದೆ. (EI Vol III P 308, 1082 AD) ಇದರಲ್ಲಿ ಮಹಾಮಾಂಡಳೇಶ್ವರ ಮುಂಜನಿಂದ ಅನೇಕ ಹಳ್ಳಿಗಳನ್ನು ಖರೀದಿಸಿದನೆಂದು ತಿಳಿದುಬಂದಿದೆ. ಸಿಂಧವಂಶದ ಸಿಂಧರಾಜನ ಮಗನಾದ ಮುಂಜನು ಭೋಗವತಿಯ ಅರಸನಾಗಿದ್ದನು. ಶಿಲಾಶಾಸನದಲ್ಲಿ ಮಹಾಮಾಂಡಳೇಶ್ವರನೆಂದು ಉಲ್ಲೇಖಿಸಿದ್ದಾರೆ. (JBBRAS Vol. X P 287, 1087 AD) ಕನ್ನನ ನಂತರ ಅವನ ಸೋದರ ಎರಡನೆಯ ಕಾರ್ತವೀರ್ಯನು ಅಧಿಕಾರ ವಹಿಸಿದನು. ಇವನ ಕಾಲದಲ್ಲಿ ಹೊರಡಿಸಿದ ಮೂರು ಶಾಸನಗಳಿವೆ. ಸೌಂದತ್ತಿಯ ಶಾಸನದಿಂದ (JBBRAS Vol. X P 213) ಇವನು ಚಾಲುಕ್ಯ ಎರಡನೆಯ ಸೋಮೇಶ್ವರನ ಮಾಂಡಳೀಕನಾಗಿದ್ದನೆಂದು ತಿಳಿದುಬರುತ್ತದೆ. ಲಟ್ಟಲೂರಿನಲ್ಲಿ ಆಳುತ್ತಿದ್ದನೆಂದು ಉಲ್ಲೇಖಿಸುತ್ತದೆ. ಕ್ರಿ. ಶ ೧೦೮೭ ರ ಶಾಸನದಲ್ಲಿ (Ibid P 173) ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಮಾಂಡಳೀಕನಾಗಿದ್ದನೆಂದು ಉಲ್ಲೇಖಿಸುತ್ತದೆ. ೧೧೨೩ ರ ಶಾಸನದಲ್ಲಿ (IA. Vol. XIV, P 15) ಅವನ ಮಗ ಎರಡನೆಯ ಸೇನನೂ ಅಧಿಕಾರದಲ್ಲಿದ್ದನೆಂದು ತಿಳಿದುಬರುತ್ತದೆ. ಎರಡನೆಯ ಕಾರ್ತವೀರ್ಯನಿಗೆ ಕಟ್ಟ ಎನ್ನುವ ಇನ್ನೊಂದು ಹೆಸರಿತ್ತು. ಭಾಗಲದೇವಿ ಅಥವಾ ಭಾಗಲಾಂಬಿಕೆಯು ಈತನ ಹೆಂಡತಿಯಾಗಿದ್ದಳು.

ಎರಡನೆಯ ಕಾರ್ತವೀರ್ಯನ ನಂತರ ಸೇನನು ಅರಸನಾದನು. ಕ್ರಿ. ಶ. ೧೦೯೬ (JBBRAS Vol. X P 194) ರ ಶಾಸನದಲ್ಲಿ ಸೇನನು ಆರನೆಯ ವಿಕ್ರಮಾದಿತ್ಯನ ಮತ್ತು ಅವನ ಮಗನ ಸಮಕಾಲೀನನಾಗಿದ್ದನೆಂದು ತಿಳಿದುಬರುತ್ತದೆ. ಸೇನನ

ಕಾಲವನ್ನು ಕ್ರಿ. ಶ. ೧೧೦೨ ರಿಂದ ಕ್ರಿ. ಶ. ೧೧೨೧ ರವರಗೆ ಎಂದು ಗುರುತಿಸಬಹುದು. ಲಕ್ಷ್ಮೀದೇವಿಯು ಈತನ ಹೆಂಡತಿಯಾಗಿದ್ದಳು. ಮೂರನೆಯ ಕಟ್ಟಮ ಅಥವಾ ಕಾರ್ತವೀರ್ಯನು ಸೇನನ ಉತ್ತರಾಧಿಕಾರಿಯಾಗಿ ಬಂದನು. ಕೊಣ್ಣೂರಿನ ಶಾಸನದಲ್ಲಿ (Archaeological survey of India, Vol III P 103) ಮಹಾಮಾಂಡಳೇಶ್ವರ ಮತ್ತು ಚಕ್ರವರ್ತಿ ಎಂಬ ಎರಡೂ ಪದಗಳನ್ನು ಬಳಸಲಾಗಿದೆ. ಇದು ಕಾರ್ತವೀರ್ಯನು ಸ್ವತಂತ್ರನಾಗಿದ್ದನೆಂದು ತೋರಿಸುತ್ತದೆ. ಭಾಯಿದೇವನೆಂಬುವನು ಕುಂಡಿ ಪ್ರಾಂತವನ್ನು ಆಳುತ್ತಿದ್ದನೆಂದು ತಿಳಿದುಬರುತ್ತದೆ. ಈತ ಚಾಲುಕ್ಯ ನಾಲ್ಕನೆಯ ಸೋಮೇಶ್ವರನ ಆಡಳಿತವರ್ಗಕ್ಕೆ ಸೇರಿದವನಾಗಿದ್ದನು. ಕೊಲ್ಹಾಪುರದ ಖಾನ್‌ಪುರ ಶಾಸನದಲ್ಲಿ (Carndesa Inscriptions Vol II P 547 to 548, 1143 AD) ಮತ್ತು ಬೆಳಗಾಂ ಶಾಸನದಲ್ಲಿ (IA Vol IV P 116, 1164 AD) ಕಾರ್ತವೀರ್ಯನ ಉಲ್ಲೇಖವಿದೆ. ಈತನ ಹೆಂಡತಿ ಪದ್ಮಲದೇವಿ.

ನಂತರ, ಮೂರನೆಯ ಕಾರ್ತವೀರ್ಯನ ಮಗ ಒಂದನೆಯ ಲಕ್ಷ್ಮೀದೇವನು ಅಧಿಕಾರವಹಿಸಿದನು. ಹಣ್ಣಿಕೇರಿಯ ಶಾಸನದ ಕಾಲ (Bombay Gazetteer Vol I Pt. II P 556, 1209 AD) ಮತ್ತು ಈತನ ಮಕ್ಕಳ ಶಾಸನದ ಕಾಲವನ್ನು ಗಮನಿಸಿದಾಗ ಒಂದೇ ಕಾಲದಲ್ಲಿ ಇಬ್ಬರು ಮೂವರು ಆಳಿರುವುದು ಕಂಡುಬರುತ್ತದೆ. ಸಾಮ್ರಾಜ್ಯ ವಿಸ್ತಾರವಾಗಿದ್ದರೆ ಇದು ಸಾಧ್ಯವಾಗಬಹುದಿತ್ತು ಎನ್ನಬಹುದು. ಆದರೆ ಇಲ್ಲಿ ಅಂತಹ ಸಾಧ್ಯತೆಗಳಿಲ್ಲ. ಇವನಿಗೆ ಕಾರ್ತವೀರ್ಯ ಮತ್ತು ಮಲ್ಲಿಕಾರ್ಜುನರೆಂಬ ಮಕ್ಕಳಿದ್ದರು. ಈತನ ಹೆಂಡತಿ ಚಂದಲದೇವಿ ಅಥವಾ ಚಂದ್ರಿಕಾದೇವಿ. ನಾಲ್ಕನೆಯ ಕಾರ್ತವೀರ್ಯನು ಒಂದನೆಯ ಲಕ್ಷ್ಮೀದೇವನ ಮಗನಾಗಿದ್ದಾನೆ. ಈತನ ಕಾಲದ ಏಳು ಶಾಸನಗಳು ಸಿಗುತ್ತವೆ. (ಒಂದು ತಾಮ್ರಪಟ ಮತ್ತು ಆರು ಶಿಲಾಶಾಸನಗಳು ಸಿಗುತ್ತವೆ). ನಾಲ್ಕನೆಯ ಕಾರ್ತವೀರ್ಯನು ಲಟ್ಟಲೂರು ಮತ್ತು ತನ್ನ ರಾಜಧಾನಿ ವೇಣುಗ್ರಾಮದಲ್ಲಿ ಆಳುತಿದ್ದನೆಂದು ತಿಳಿದುಬರುತ್ತದೆ. ಈತನ ತಮ್ಮ ಮಲ್ಲಿಕಾರ್ಜುನನು ಯುವರಾಜನಾಗಿದ್ದಾನೆಂದು ಉಲ್ಲೇಖಿಸುತ್ತರೆ. ಈತ ಮಹಾಮಂಡಳೇಶ್ವರನಾಗಿದ್ದ. ಈತನಿಗೆ ಏಚಲದೇವಿ, ಮಾದೇವಿ ಎಂಬ ಇಬ್ಬರು ಹೆಂಡತಿಯರಿದ್ದರು. ಈತನ ಶಾಸನವೊಂದು ಬೆಳಗಾಮಿನ ಸಂಕೇಶ್ವರದಲ್ಲಿ ಸಿಕ್ಕಿದೆ.

ನಾಲ್ಕನೆಯ ಕಾರ್ತವಿರ್ಯನ ಮಗ ಎರಡನೆಯ ಲಕ್ಷ್ಮೀದೇವ. ಈತನು ಮಾದೇವಿಯ ಮಗನಾಗಿದ್ದ. ಈತ ಮಹಾಮಾಂಡಳೇಶ್ವರನಾಗಿದ್ದನೆಂದು ತಿಳಿದುಬರುತ್ತದೆ. ಕ್ರಿ. ಶ. ೧೨೩೦ ರ ನಂತರ ಇವರ ಶಾಸನಗಳು ಸಿಕ್ಕಿಲ್ಲ. ಕ್ರಿ. ಶ. ೧೨೩೮ ರ ಹರಳಹಳ್ಳಿ ಪಟವು (JBBRAS Vol X P 260) ದೇವಗಿರಿಯ ಯಾದವ ಸಿಂಘಣನ ಮಾಂಡಳೀಕ ವೀಚಣನು ರಟ್ಟರನ್ನು ಸೋಲಿಸಿದನೆಂದು ತಿಳಿಸುತ್ತದೆ.

**ವಂಶಾವಳಿ**

**ಶಾಖೆ I**




**ಶಾಖೆ II**



## ೧೩. ಓಡ್ರದ ರಾಷ್ಟ್ರಕೂಟರು (ಕ್ರಿ.ಶ. ೧೧೩೦)

ಓಡ್ರ ಅಥವಾ ಒರಿಸ್ಸಾದ ರಾಷ್ಟ್ರಕೂಟರ ಶಾಖೆಯೊಂದು ಕ್ರಿ.ಶ. ೧೨ನೆಯ ಶತಮಾನದಲ್ಲಿತ್ತು. ಈ ಶಾಖೆಯ ಒಂದೇ ಒಂದು ತಾಮ್ರ ಶಾಸನವು ಸಿಗುತ್ತದೆ. ಕ್ರಿ.ಶ. ೧೧೩೦ರಲ್ಲಿ ಹೊರಡಿಸಿದ ಈ ಶಾಸನವು 'ದೊರೆ ರಾಣಕಪರಚಕ್ರ ಶಲ್ಯ'ನದಾಗಿದೆ(EI, XXX, p135). ಈ ಶಾಸನವು ಸಂಬಳಪುರ ಜಿಲ್ಲೆಯಲ್ಲಿ ದೊರಕಿದೆ. ಓಡ್ರ, ಒರಿಸ್ಸ, ಸಂಬಳಪುರ ಈ ಮೂರೂ ಹೆಸರಿನ ಜೊತೆ ಬರುವ ರಾಷ್ಟ್ರಕೂಟರೆಲ್ಲ ಒಬ್ಬರೇ ಆಗಿದ್ದಾರೆ. ಶಾಸನ ಸಿಕ್ಕಿದ ಸ್ಥಳದ ಹೆಸರಿನಿಂದ ಗುರುತಿಸುವುದರಿಂದ, ಇವರೆಲ್ಲ ಬೇರೆಬೇರೆ ಅನ್ನುವ ಭ್ರಮೆಯುಂಟಾಗುತ್ತದೆ.

ಮೂರು ಪಟಗಳಿರುವ ಈ ತಾಮ್ರ ಶಾಸನವನ್ನು ಗರುಡನ ಪುಟ್ಟ ವಿಗ್ರಹದಿಂದ ಸೇರಿಸಲಾಗಿದೆ. ಗರುಡ ಕೈಮುಗಿದು ನಿಂತಿರುವ ಭಂಗಿಯಲ್ಲಿದೆ. ಸೊಂಟದಿಂದ ಮೇಲುಭಾಗ ಮಾತ್ರ ಇದ್ದು, ಬೆನ್ನಿನ ಎರಡೂ ಬದಿಯಿಂದ ರೆಕ್ಕೆಗಳು ಹೊರಟಿವೆ. ತಾಮ್ರಪಟಗಳಲ್ಲಿ ಮೊದಲನೆಯ ಪಟದ ಮೇಲು ಭಾಗವು ಖಾಲಿಯಿದ್ದು, ಅದರ ಹಿಂಭಾಗದಲ್ಲಿ ಶಾಸನವು ಪ್ರಾರಂಭವಾಗಿದೆ. ಲಿಪಿಯ ದೃಷ್ಟಿಯಿಂದ ಹನ್ನೆರಡನೆಯ ಶತಮಾನಕ್ಕೆ ಸೇರಿಸಬಹುದಾಗಿದೆ. ಸಂಸ್ಕೃತ ಭಾಷೆಯಲ್ಲಿದ್ದು ಸ್ಥಳೀಯ ಭಾಷೆಯ ಪ್ರಯೋಗವೂ ಇದೆ. ಕಾಲದ ಉಲ್ಲೇಖವನ್ನು ಕೊಡುವಾಗ 'ಸಂವತ್ ೫೬' ಎಂದು ನೀಡಿದೆ. ಡಿ.ಸಿ. ಸರ್ಕಾರ್ ಅವರು ಇದನ್ನು ಚಾಲುಕ್ಯ ವಿಕ್ರಮ ಸಂವತ್ಸರ ಎಂದು ಭಾವಿಸಿ, ಗುರುವಾರ ನವಂಬರ್ ೨೦, ೧೧೩೦ ಎಂದು ಇದರ ಕಾಲವನ್ನು ನಿಗದಿಗೊಳಿಸಿದ್ದಾರೆ.

ಶಾಸನದಲ್ಲಿ ಬರುವ ವಿವರಗಳನ್ನು ಗಮನಿಸಿದರೆ, ರಾಷ್ಟ್ರಕೂಟರು ಸಾಮಾನ್ಯವಾಗಿ ಹೇಳುವ ಎಲ್ಲಾ ವಿವರಗಳೂ ಇವೆ. ಗರುಡ ದರ್ಪಣಧ್ವಜ, ಶ್ವೇತಚ್ಛತ್ರ, ಪೀತಚಾಮರ ಎಂದು ಹೇಳಿಕೊಂಡಿದ್ದಾರೆ. ದೊರೆಯು ತನ್ನ ಮೂಲವನ್ನು ತಿಳಿಸುವಾಗ "ರಾಷ್ಟ್ರಕೂಟ್ಟಾಮಲತಿಲಕಲ್ಲಾತಲೂರವಿನಿರ್ಗತ" ಎಂದು ಗುರುತಿಸಿಕೊಳ್ಳುತ್ತಾನೆ. ಇವರು ಗರುಡಲಾಂಛನರು. 'ಮಹಾಮಂಡಲೇಶ್ವರ ಮಹಾಮಾಂಡಳೀಕ ರಾಣಕ ಚಮರವಿಗ್ರಹನ ಮಗ ರಾಣಕಪರಚಕ್ರ ಸಲ್ಯ' ಎಂದು ವಂಶಾವಳಿಯನ್ನು ನೀಡಲಾಗಿದೆ. ಇಲ್ಲಿ ವಿಶೇಷವಾಗಿ ಗಮನಿಸಬೇಕಾದ ವಿಷಯವೇನೆಂದರೆ, 'ಅಷ್ಟಾದಶಘಟ್ಟಗೊಂಡ್ರಾಮಗಳ

ಅಧಿಪತಿ' ಎಂಬ ಉಲ್ಲೇಖ. ಡಿಸಿ ಸರ್ಕಾರರು "ಘಟ್ಟ ಎಂದರೆ ಕನ್ನಡದಲ್ಲಿ ಬೆಟ್ಟಪ್ರದೇಶ ಎಂಬ ಅರ್ಥವನ್ನು ಕೊಡುತ್ತದೆ. ಗೊಂಡ್ರಾಮ ಏನು ಎಂದು ತಿಳಿದಿಲ್ಲ" ಎಂದಿದ್ದಾರೆ (EI, Vol. XXX, p135-140). ಹಾಗೆಯೇ ಮುಂದುವರೆದು ತೆಲಗು ಶಬ್ದವಾದ 'ಕೊಂಡ' ಎಂದರೆ ಪರ್ವತ ಪ್ರದೇಶವಿರಬಹುದೇ ಎಂದು ಊಹಿಸಿದ್ದಾರೆ. ಒರಿಸ್ಸಾದಲ್ಲಿ 'ಅಠಾರಗಡಜಾತ'ಎಂಬ ಹದಿನೆಂಟು ಪ್ರದೇಶಗಳಿದ್ದು, ಅವು ಈಗ ಒರಿಸ್ಸಾ ರಾಜ್ಯದಲ್ಲಿ ಸೇರಿಹೋಗಿದೆ ಎಂದು ತಿಳಿದುಬರುತ್ತದೆ. ಘಟ್ಟ ಶಬ್ದದ ಜೊತೆ ಸೇರುವುದರಿಂದ ಬೆಟ್ಟದ ಮೇಲಿರುವ ಕೋಟೆ ಎಂದು ಗುರುತಿಸಬಹುದೆಂದಿದ್ದಾರೆ. ಇದು ಅವರ ಆಳ್ವಿಕೆಯ ಕೇಂದ್ರವಾಗಿತ್ತೆಂದು ಭಾವಿಸಬಹುದು.

ಶಾಸನದಲ್ಲಿ ಪಂಚಮಹಾವಾದ್ಯಗಳನ್ನು ಹೇಳುವಾಗ ಕನಕ, ಡಮರು, ತ್ರಿವಲಿ ತೂರ್ಯಗಳನ್ನು ಹೆಸರಿಸುತ್ತದೆ. ಡಿ.ಸಿ. ಸರ್ಕಾರರು ಇದನ್ನು ಕನಕ–ಡಮರು–ತ್ರಿವಳಿ–ರವೋತ್ರಾಸೀತ್–ಅರಾತಿಚಕ್ರ ಎಂದು ಬಿಡಿಸಿದ್ದಾರೆ.

ವಾಘರಕೊಟ್ಟದ ಪರಮಮಾಹೇಶ್ವರ ಎಂಬ ಉಲ್ಲೇಖವಿರುವುದರಿಂದ ವಾಘರಕೊಟ್ಟವು ಗಿರಿದುರ್ಗವಾಗಿರಬಹುದೆಂಬ ಅಭಿಪ್ರಾಯವನ್ನು ನೀಡಿದ್ದಾರೆ. ವತ್ಸಗೋತ್ರದ ಪಂಚಾರ್ಷೇಯ ಪ್ರವರ ಮತ್ತು ಕೌಂಡಿಲ್ಯಗೋತ್ರ, ಚೈಕುರುಸುತ, ಅಗಸ್ತ್ಯಪುತ್ರ ಬೃಹಸ್ಪತಿಗೆ ಸಲೇಡ ಗ್ರಾಮವನ್ನು ದಾನವಾಗಿ ನೀಡಿದ್ದನ್ನು ಉಲ್ಲೇಖಿಸುತ್ತದೆ. ಶಾಸನದಲ್ಲಿ ದೂತಕನು 'ಮಹಾಪಾತ್ರಗೋವಿಂದ ಸಾಯ್' ಎಂದು ತಿಳಿಸುತ್ತದೆ.

'ಇ[ಗ]ಶ್ರೀ ಧೋ[ಲ್ಲ]ಜಾ ನಾಮ ಗಾಭುರುಜ ನಾನಾ(ಮಾ?)ಲೀಖನ ತೀಕಲ' ಎಂದು ಶಾಸನವಿದ್ದು, ಇದರ ಪೂರ್ಣ ಅರ್ಥವನ್ನು ಗ್ರಹಿಸಲು ಸಾಧ್ಯವಾಗಿಲ್ಲ. ಧೋಲ್ಲಜಾ ಮತ್ತು ಗಾಭುರುಜ ಇಬ್ಬರೂ ಶಾಸನದ ಲಿಪಿಕಾರರಿರಬಹುದೆನ್ನುವ ಅಭಿಪ್ರಾಯವನ್ನು ಸರ್ಕಾರರು ನೀಡಿದ್ದಾರೆ.

ರಾಷ್ಟ್ರಕೂಟರ ಚಿಕ್ಕಪುಟ್ಟ ವಂಶಗಳ ಬಗ್ಗೆ ಅಧ್ಯಯನ ಮಾಡಿರುವ ಬೀಶೇಷ್ವರನಾಥ ರೇವು ಅವರು ಈ ವಂಶದ ಬಗ್ಗೆ ಏನೂ ಹೇಳಿಲ್ಲ. ಇನ್ನು ಶಾಸನದ ಕಾಲದ ಬಗ್ಗೆ ಸ್ಪಷ್ಟ ನಿಲುವಿಗೆ ಬರಲು ಸಾಧ್ಯವಾಗಿಲ್ಲ. ಸಂವತ್ ೫೬ ವಾರ ೪ ಎಂಬ

ಕಾಲವನ್ನು ಕೊಟ್ಟಿರುವುದರಿಂದ , ಮತ್ತು ಯಾವ ರೀತಿಯ ಕಾಲಗಣನೆಯಿಂದ ಸರ್ಕಾರರು ಕ್ರಿ.ಶ. ೧೧೩೦ಕ್ಕೆ ತಂದಿದ್ದಾರೆಂದು ಸ್ಪಷ್ಟವಾಗುವುದಿಲ್ಲ.

ಮಳಖೇಡದ ರಾಷ್ಟ್ರಕೂಟರು ನಿರ್ಗಮಿಸಿದರೂ ಕೂಡ, ಲತ್ತಲೂರಿನವರು ಎಂದು ಮೂಲವನ್ನು ಗುರುತಿಸಿಕೊಳ್ಳುವ ಶಾಖೆಯು ಕ್ರಿ.ಶ. ೧೨ನೆಯ ಶತಮಾನದಲ್ಲಿತ್ತು. ಕಾಲ ವ್ಯತ್ಯಾಸದ ಬಗ್ಗೆ ಹೇಳುವುದಾದರೆ ೧೩೦–೧೪೦ ವರ್ಷಗಳ ನಂತರವೂ ರಾಷ್ಟ್ರಕೂಟರ ವಂಶವು ಆಳ್ವಿಕೆ ನಡೆಸುತ್ತಿತ್ತು. ಮಳಖೇಡದ ರಾಷ್ಟ್ರಕೂಟರಿಗೂ ಓಘ್ರದ ರಾಷ್ಟ್ರಕೂಟರಿಗೂ ಮಧ್ಯೆ ಇದ್ದಿರಬಹುದಾದ ಸಂಬಂಧಗಳನ್ನು ಗುರುತಿಸುವುದು ಕಷ್ಟಸಾಧ್ಯವಾದ ಕಾರ್ಯವಾಗಿದೆ.

**ವಂಶಾವಳಿ**




## ೧೪. ಕನೌಜದ ರಾಷ್ಟ್ರಕೂಟರು (ಕ್ರಿ.ಶ. ೧೧೮೮)

ಕನೌಜದ ರಾಷ್ಟ್ರಕೂಟರ ಶಾಸನವೊಂದು ಉತ್ತರಪ್ರದೇಶದ ಇತಾಹ್ ಜಿಲ್ಲೆ ಸೋರೋನ್‌ನಲ್ಲಿ ಸಿಗುತ್ತದೆ. ಅಲ್ಲಿನ ಸೀತಾರಾಮ ಮಂದಿರದ ಮಂಟಪದ ಕಂಬವೊಂದರ ಮೇಲಿದ್ದು (ARIE., 1957-58, No. C.273) ವಿಕ್ರಮ ಸಂವತ್ಸರ ೧೨೪೫ (ಕ್ರಿ.ಶ. ೧೧೮೮) ಶುದ್ಧ ಹನ್ನೆರಡರಂದು ಹೊರಡಿಸಿದ ಶಾಸನವಾಗಿದೆ. ಶಾಸನವು ಸಂಸ್ಕೃತದಲ್ಲಿದ್ದು, ನಾಗರಾಕ್ಷರದಲ್ಲಿದೆ. ಕಾಲ್ಹುಕ ಎಂಬ ಗೌಡ ಬ್ರಾಹ್ಮಣನು ದೇವಾಲಯವೊಂದನ್ನು ಜೀರ್ಣೋದ್ಧಾರಗೊಳಿಸಿದ್ದನ್ನು ದಾಖಲಿಸುತ್ತದೆ. ಈ ಶಾಸನದ ಪಾಠವು "ಸೂಕರಕ್ಷೇತ್ರ" ಎಂಬ ಪುಸ್ತಕದಲ್ಲಿ ಪ್ರಕಟವಾಗಿದೆ. ಶಾಸನವನ್ನು ಹಾಕಿಸಿದ ದೊರೆಯ ಹೆಸರು ಮದನಪಾಲ ಎಂದು ತಿಳಿದುಬರುತ್ತದೆ.

ಕ್ರಿ.ಶ.೧೦೬೮ ರಿಂದ ೧೨೨೩ ರವರೆಗೆ ಆಳಿದ ವಂಶ ಕನೌಜದ ರಾಷ್ಟ್ರಕೂಟರದು. ಪಂಡಿತ್ ರೇವು ಅವರು ಗಹಡವಾಲರನ್ನು ರಾಷ್ಟ್ರಕೂಟರ

ಮೂಲದವರು ಎಂದಿದ್ದಾರೆ. ಇವರನ್ನು ಗಾಧಿಪುರದ (ಕನೌಜ್) ರಾಷ್ಟ್ರಕೂಟರು ಎಂದೂ ಕರೆಯುವ ವಾಡಿಕೆಯಿದೆ. ಕ್ರಿ.ಶ. ೧೦೫೦ ರ ಸೋಲಂಕಿ ತ್ರಿಲೋಚನಪಾಲನ ತಾಮ್ರಪಟದಿಂದ ಚಾಲುಕ್ಯ ಮೂಲದವನಾದ ಸೋಲಂಕಿಯು ಕನೌಜದ ರಾಷ್ಟ್ರಕೂಟ ದೊರೆಯ ಮಗಳನ್ನು ಮದುವೆಯಾಗಿದ್ದನೆಂದು ತಿಳಿದುಬರುತ್ತದೆ. "ರಾಷ್ಟೌಢ ವಂಶ ಮಹಾಕಾವ್ಯ" ದ ಪ್ರಕಾರ ರಾಷ್ಟ್ರಕೂಟರು ಕನೌಜದಲ್ಲಿ ಈ ಮೊದಲೇ ಆಳಿದ್ದರೆಂದು ತಿಳಿದುಬರುತ್ತದೆ. ಬದಾವುನ್‌ನ ರಾಷ್ಟ್ರಕೂಟ ದೊರೆ ಲಖನಪಾಲನ ಶಾಸನದಲ್ಲಿ (EI., Vol I, P 64, 1201 AD),

ಪ್ರಖ್ಯಾತಾಖಿಲರಾಷ್ಟ್ರಕೂಟಕುಲಜಕ್ಷ್ಮಾಪಾಲದೋ: ಪಾಲಿತಾ

ಪಾಂಚಾಲಾಭಿಧದೇಶಭೂಷಣಕರೀ ವೋದಾಮಯೂತಾಪುರೀ॥

ತತ್ರಾದಿತೋऽಭವದನನ್ತಗುಣೋ ನರೇನ್ದ್ರಶ್ಚಂದ್ರ:

ಸ್ವಖಡ್ಗಭಯಭೀಷಿತವೈರಿವೃನ್ದ:॥

ಈ ಪದ್ಯದಲ್ಲಿ ವೋದಾಮಯೂತಪುರಿಯು ಕನೌಜದ ಆಭರಣದಂತೆ ಹೊಳೆಯುತ್ತಿತ್ತು. ಶತ್ರುಗಳನ್ನು ನಿಗ್ರಹಿಸಿದ ಬಲಶಾಲಿ ಚಂದ್ರನು ಈ ವಂಶದ ಮೊದಲ ಅರಸನಾಗಿದ್ದನೆಂಬುದಾಗಿ ಹೇಳಿದೆ.

ಚಂದ್ರಾವತಿ (ಬನಾರಸ್ ಜಿಲ್ಲೆ) ಯಲ್ಲಿ ಸಿಕ್ಕಿರುವ ಗಹಡವಾಲ ಚಂದ್ರದೇವನ ತಾಮ್ರಪಟದಲ್ಲಿ (EI., Vol IX, P 302 -05),

"ವಿಧ್ವಸ್ತೋದ್ಧತಧೀರಯೋದತಿಮಿರ: ಶ್ರೀಚನ್ದ್ರದೇವೋ ನೃಪ:

ಯೇನೋದಾರತರಪ್ರತಾಪಶಮಿತಾಶೇಷ ಪ್ರಜೋಪದ್ರವಂ

ಶ್ರೀಮದ್ಗಾಧಿಪುರಾದಿರಾಜ್ಯಮಸಮಂ ದೋರ್ವಿಕ್ರಮೇಣಾರ್ಜಿತಂ॥"

ಎಂಬ ಮಾತಿದೆ. ಇದರಿಂದ ತಿಳಿದುಬರುವುದೇನೆಂದರೆ ಯಶೋವಿಗ್ರಹನ ಮಗನಾದ ಚಂದ್ರದೇವನು ಈ ವಂಶದ ಪರಾಕ್ರಮಿ ದೊರೆಯೆಂಬ ಹೆಗ್ಗಳಿಕೆಗೆ ಪಾತ್ರನಾಗಿದ್ದಾನೆ. ಆದರೆ ಚಂದ್ರದೇವನ ವಂಶ ಯಾವುದೆಂಬ ಉಲ್ಲೇಖ ಈ ಶಾಸನದಲ್ಲಿಲ್ಲದಿದ್ದರೂ ಚಂದ್ರದೇವನು ಮೊದಲು ಬದಾವುನ್ ಅನ್ನು ಆಕ್ರಮಿಸಿ ನಂತರ ಕನೌಜನ್ನು ವಶಪಡಿಸಿಕೊಂಡನು. ಚಂದ್ರದೇವನ ಆಳ್ವಿಕೆಯ ಕಾಲದ ಆಧಾರದಿಂದ ಮತ್ತು ಇವನ

ಮಕ್ಕಳು ಮುಂದೆ ಆಳ್ವಿಕೆ ನಡೆಸಿದ ಆಧಾರದಿಂದ ಇಂತಹ ನಿರ್ಧಾರಕ್ಕೆ ಬರಬಹುದಾಗಿದೆ. ಹೇಗೆಂದರೆ ಚಂದ್ರದೇವನಿಗೆ ಇಬ್ಬರು ಮಕ್ಕಳಿದ್ದು ಹಿರಿಯ ಮದನಪಾಲನಿಗೆ ಕನೌಜದ ಅಧಿಕಾರ ಸಿಕ್ಕಿದರೆ, ಕಿರಿಯ ಸೋದರ ವಿಗ್ರಹಪಾಲನಿಗೆ ಬದಾವುನ್ "ಜಾಗೀರ್" (ಬಹುಮಾನ) ನಂತೆ ದೊರಕಿತು. ಇದರ ಬಗ್ಗೆ ಚಾಂದ್ ಬರದಾಯಿಯ "ಪೃಥ್ವಿರಾಜ ರಾಸೋ" ದಲ್ಲಿ ಕೂಡ ಉಲ್ಲೇಖವಿದ್ದು ಅದರಲ್ಲಿ ಲಖನಪಾಲ ಮತ್ತು ವಿಗ್ರಹಪಾಲನ ಬಗ್ಗೆ ಬಂದಿದ್ದು, ಬದಾವುನ್‌ನ ವಿಗ್ರಪಾಲನು ಜಯಚಂದ್ರನ ಸೋದರಳಿಯನೆಂಬ ವಿಚಾರ ತಿಳಿದುಬರುತ್ತದೆ. ಬದಾವುನ್‌ನಲ್ಲಿದ್ದವರು ರಾಷ್ಟ್ರಕೂಟರಾಗಿಯೇ ಮುಂದುವರಿದರೆ, ಕನೌಜದಲ್ಲಿದ್ದವರು ಗಹಡವಾಲರಾಗಿ ಮುಂದುವರಿಯುತ್ತಾರೆ. ಹೆಸರು ಬೇರೆಯಂತೆ ಕಂಡರೂ ಅರ್ಥ ಒಂದೇ ಆಗಿದೆ. ಡಿಂಗಳ ಭಾಷೆಯಲ್ಲಿ ಗಾಹಡವೆಂದರೆ ಶಕ್ತಿ ಮತ್ತು ಸ್ಥಿರವಾಗಿರುವುದು ಎಂದರ್ಥ. ಈ ರೀತಿ ವಂಶದ ಬದಲಾವಣೆಯಾಗಿರುವ ಹೆಸರುಗಳು ಕೇವಲ ನಾಲ್ಕು ಶಾಸನಗಳಲ್ಲಿ ಮಾತ್ರ ಕಂಡುಬರುತ್ತದೆ.

ಮೇಲಿನ ವಿಚಾರಗಳನ್ನು ಗಣನೆಗೆ ತೆಗೆದುಕೊಂಡು ಒಂದು ನಿರ್ಧಾರಕ್ಕೆ ಬರಬಹುದಾಗಿದೆ. ಮೊಟ್ಟಮೊದಲು ರಾಷ್ಟ್ರಕೂಟರು ಕನೌಜನ್ನು ವಶಪಡಿಸಿಕೊಂಡಿದ್ದರು. ನಂತರ ಅದು ಬೇರೆ ಬೇರೆ ರಾಜವಂಶಗಳಾದ ಗುಪ್ತ, ಮೌಖರಿ, ಪ್ರತೀಹಾರ ಮುಂತಾದವರ ಕೈಕೆಳಗೆ ಹೋಗಿತ್ತು. ಪ್ರತೀಹಾರರ ವಿಚಾರಕ್ಕೆ ಬಂದರೆ, ಕನೌಜದ ದೊರೆ ಭೋಜದೇವನನ್ನು ಕ್ರಿ.ಶ.೮೬೭ ರಲ್ಲಿ ಗುಜರಾತಿನ ರಾಷ್ಟ್ರಕೂಟ ದೊರೆ ಎರಡನೆಯ ಧ್ರುವರಾಜನು ಸೋಲಿಸಿದನು. ಹಿಂದೆ ಎರಡನೆಯ ನಾಗಭಟನು (ಭೋಜದೇವನ ತಾತ) ಬಹುಶ: ಇಂದ್ರಾಯುಧನ ಉತ್ತರಾಧಿಕಾರಿ ಚಕ್ರಾಯುಧನನ್ನು ಸೋಲಿಸುವುದರ ಮೂಲಕ ಕನೌಜದ ಮೇಲೆ ಅಧಿಕಾರವನ್ನು ಸ್ಥಾಪಿಸಿದನೆಂದು ತಿಳಿದುಬರುತ್ತದೆ. (History of Rajputana, Vol I, P 161, Footnote 1) ಮೂರನೆಯ ಇಂದ್ರನ ತಾಮ್ರಪಟದಲ್ಲಿ (JBBRAS, Vol XVIII, P 261, 914 AD) ಇಂದ್ರನು ಉತ್ತರದ ದಂಡಯಾತ್ರೆಗೆ ಹೋಗಿದ್ದಾಗ, ಕನೌಜದವರೆಗೂ ರಾಜ್ಯ ವಿಸ್ತರಿಸುತ್ತಾನೆ. ಬಹುಶ: ಪ್ರತೀಹಾರ ಮಹೀಪಾಲನು ಆ ಸಮಯದಲ್ಲಿ ಅಲ್ಲಿ ರಾಜ್ಯಭಾರ ಮಾಡುತ್ತಿದ್ದನೆಂದು ತಿಳಿದುಬರುತ್ತದೆ. ಇದೇ ವಿಚಾರವು ನಾಲ್ಕನೆಯ ಗೋವಿಂದನ ತಾಮ್ರಪಟದಲ್ಲಿಯೂ ಉಲ್ಲೇಖವಾಗಿದೆ. ಮೂರನೆಯ ಇಂದ್ರನ

ಕುದುರೆಗಳು ಜಮುನಾ ನದಿಯನ್ನು ದಾಟಿ ಕನೌಜ ನಗರದಲ್ಲಿ ಸುಧಾರಿಸಿಕೊಂಡವೆಂದು ಉಲ್ಲೇಖಿಸಿದೆ.

"ತೀರ್ಣಾ ಯತ್ತುರಗೈರಗಾಧಯಮುನಾಸಿನ್ಧುಪತಿಸರ್ದ್ಧಿನೀ

ಯೆನೇದಂ ಹಿ ಮಹೋದಯಾರಿನಗರಂ ನಿರ್ಮೂಲಮುನ್ಮೂಲಿತಂ॥

ಎಂದು ವರ್ಣಿಸಲಾಗಿದೆ. ಮೂರನೆಯ ಇಂದ್ರನ ಈ ದಾಳಿಯ ನಂತರ ಪ್ರತೀಹಾರರ ಮಾಂಡಳೀಕರೆಲ್ಲ ಸ್ವತಂತ್ರರೆಂದು ಘೋಷಿಸಿಕೊಳ್ಳಲು ಪ್ರಾರಂಭಿಸಿದರು. ಇದಕ್ಕೂ ಮೊದಲು ಕ್ರಿ.ಶ.೭೮೫ ಮತ್ತು ೭೯೩ ರ ನಡುವೆ ಧ್ರುವರಾಜ ತನ್ನ ರಾಜ್ಯವನ್ನು ಅಯೋಧ್ಯೆಯವರಗೆ ವಿಸ್ತರಿಸಿದ್ದನು. ನಂತರ ಕ್ರಿ.ಶ. ೮೭೫ ರಿಂದ ೯೧೪ ರಲ್ಲಿ ಎರಡನೆಯ ಕೃಷ್ಣರಾಜನ ಕಾಲಕ್ಕೆ ಕ್ರಿ.ಶ. ೯೪೦ – ೯೬೬ ರಲ್ಲಿ ಗಂಗಾನದಿಯ ದಡದವರೆಗೆ ರಾಜ್ಯವು ಹಬ್ಬಿತ್ತು. ಮೂರನೆಯ ಕೃಷ್ಣನ ಕಾಲಕ್ಕೆ ಇದು ಇನ್ನೂ ಮುಂದಕ್ಕೆ ಗಂಗಾನದಿಯನ್ನು ದಾಟಿ ಉತ್ತರಕ್ಕೆ ಸಾಗಿತ್ತು. ಈ ಸಂದರ್ಭದಲ್ಲಿ ಕ್ರಿ.ಶ. ೧೦೫೪ ರ ಹೊತ್ತಿಗೆ ಬದೌನಿನ ರಾಷ್ಟ್ರಕೂಟ ದೊರೆ ಚಂದ್ರನು ಕನೌಜನ್ನು ಆಕ್ರಮಿಸಿಕೊಂಡನು. ಚಂದ್ರನ ಮರಣಾನಂತರ ಬಹುಶ: ಅವನ ಮಗನು ಅಧಿಕಾರಕ್ಕೆ ಬಂದನು. ಜಯಚಂದ್ರನ ಮಗ ಹರಿಶ್ಚಂದ್ರನು ಕನೌಜನ್ನು ಕಳೆದುಕೊಂಡಾಗ ಅವನ ಸಂತತಿಯವರು ಫರುಕಾಬಾದ್‌ನ ಮಾಹೂಯಿ ಜಿಲ್ಲೆಯಲ್ಲಿ ತಮ್ಮ ನೆಲೆಯನ್ನು ಸ್ಥಾಪಿಸಿದರು. ನಂತರ ಮುಸಲ್ಮಾನರ ದಾಳಿಯ ಕಾಲದಲ್ಲಿ ಮಾರವಾರಕ್ಕೆ ಬಂದವರು ಇಂದಿಗೂ ಅಲ್ಲಿಯೇ ನೆಲೆಸಿದ್ದಾರೆ. ಹಾಗೂ ತಾವು ರಾಷ್ಟ್ರಕೂಟ ಜಯಚಂದ್ರನ ಸಂತತಿಯವರೆಂದೇ ಹೇಳಿಕೊಳ್ಳುತ್ತಾರೆ. ಮಹೂಯಿಯಲ್ಲಿ ಈಗಲೂ ಕೋಟೆಯ ಅವಶೇಷಗಳನ್ನು ನೋಡಬಹುದಾಗಿದೆ. ಅಲ್ಲಿನ ಜನರು “ಸೀಹಾ ರಾವ್ ಕಾ ಖೇಡಾ” ಎಂದು ಅದನ್ನು ಗುರುತಿಸುತ್ತಾರೆ. ಹೀಗೆ ಅನೇಕ ರೀತಿಯಿಂದ ಗಹಡವಾಲರು ಮತ್ತು ರಾಷ್ಟ್ರಕೂಟರು ಒಂದೇ ಆಗಿದ್ದಾರೆ. ಕನೌಜದ ರಾಷ್ಟ್ರಕೂಟರೇ ಗಹಡವಾಲರಾಗಿದ್ದಾರೆ ಎನ್ನುವ ಅಂಶವನ್ನು ಬಿಶೇಷ್ವರನಾಥ ರೇವು ಅವರು ಬಹಳ ಸಮರ್ಥವಾಗಿ ಮತ್ತು ಸರಳವಾಗಿ ತೋರಿಸಿಕೊಟ್ಟಿದ್ದಾರೆ.

ಡಾ॥ ಹಾರ್ನೆಲ್ ಅವರು ಗಹಡವಾಲರನ್ನು ಪಾಲರ ಶಾಖೆಯುವರೆಂದು ಹೇಳಿದ್ದಾರೆ. ಇವರು ಪಾಲ ಮತ್ತು ಗಹಡವಾಲರ ವಂಶಾವಳಿಯನ್ನು ಕೊಡುವುದರ

ಮೂಲಕ ತಮ್ಮ ವಾದವನ್ನು ಮಂಡಿಸಿದ್ದಾರೆ. ಪಾಲವಂಶದ ಧರ್ಮಪಾಲ ಮತ್ತು ರಾಯಪಾಲರು ರಾಷ್ಟ್ರಕೂಟ ದೊರೆಗಳಾದ ಪರಬಲ (ಪಠಾರಿ ರಾಷ್ಟ್ರಕೂಟ) ಮತ್ತು ತುಂಗನ (ಬೋಧಗಯಾ ರಾಷ್ಟ್ರಕೂಟ) ಮಕ್ಕಳನ್ನು ಮದುವೆಯಾಗಿದ್ದಾರೆ. ಇದರಿಂದ ಡಾ|| ಹಾರ್ನೆಲ್‌ರ ವಾದವು ಸಕಾರಣವಾಗಿಲ್ಲ ಎಂದಿದ್ದಾರೆ. (History of Rashtrakutas (Rathore), 1933, P20)

ಸೇತ್ ಮಾಹೇತದಲ್ಲಿ ದೊರಕಿರುವ ಕ್ರಿ.ಶ.೧೧೧೮ ರ ಶಾಸನದಲ್ಲಿ "ಗಾಧೀಪುರಾಧಿಪ" ಪದವು ದೊರೆ ಗೋಪಾಲನಿಗೆ ಹೊಂದಿಕೆಯಾಗುವಂತೆ ಹೇಳಲಾಗಿದೆ. ಅವನ ಉತ್ತರಾಧಿಕಾರಿಗಳಾದ ಮದನಪಾಲರು ಬದೌನಿನ ರಾಷ್ಟ್ರಕೂಟ ದೊರೆ ಲಖನಪಾಲರಿಗೆ ಹೋಲುತ್ತದೆ ಎಂದಿದ್ದಾರೆ. ಕ್ರಿ.ಶ.೧೧ ನೆಯ ಶತಮಾನದ ಕೊನೆಯ ಹೊತ್ತಿಗೆ ಗೋಪಾಲನು ಕನೌಜದ ಮೇಲೆ ದಾಳಿ ಮಾಡಿ ಪ್ರತೀಹಾರರಿಂದ ಅದನ್ನು ಗಳಿಸಿಕೊಂಡನು. ಕನೌಜದಲ್ಲಿ ಚಂದ್ರದೇವನಿಂದ ಗಹಡವಾಲರ ವಂಶವು ಆಳ್ವಿಕೆ ನಡೆಸತೊಡಗಿತು. ಕ್ರಿ.ಶ. ೧೧ ನೆಯ ಶತಮಾನದ ಕೊಟ್ಟಕೊನೆಯ ಹೊತ್ತಿಗೆ ಚಂದ್ರನು ಕನೌಜನ್ನು ವಶಪಡಿಸಿಕೊಂಡನು. ಈತ ಗೋಪಾಲನಿಂದ ಸೋಲಬೇಕಾಯಿತು. ಇದೇ ಕಾರಣದಿಂದ ಗೋಪಾಲನಿಗೆ "ಗಾಧಿಪುರಾಧಿಪ" ನೆಂಬ ಬಿರುದು ಬಂದಿತ್ತು.

ಕ್ರಿ.ಶ.೧೦೫೦ ರ ಸೋಲಂಕಿ ತ್ರಿಲೋಚನಪಾಲನ ಸೂರತ್ ಶಾಸನದಲ್ಲಿ (IA, Vol XII, P 201)

''ಕನ್ಯಾಕುಬ್ಜೇ ಮಹಾರಾಜ ರಾಷ್ಟ್ರಕೂಟಸ್ಯ ಕನ್ಯಕಾಮ್।

ಲಬ್ಧ್ವಾ ಸುಖಾಯ ತಸ್ಯಾಂ ತ್ವಂ ಚಾಲುಕ್ಯಾಪ್ನುಹಿಸನ್ತತಿಮ್॥"

ಎಂದು ಬರುವುದರಿಂದ ರಾಷ್ಟ್ರಕೂಟರು ಈ ಮೊದಲೇ ಕನೌಜನ್ನು ಆಳಿದ್ದರೆಂದು ಸ್ಪಷ್ಟವಾಗುತ್ತದೆ. ಸೇತ್ ಮಹೇತದ ಶಾಸನಕ್ಕೂ (ಕ್ರಿ.ಶ.೧೧೧೮) ಲಖನಪಾಲನ ಶಾಸನಕ್ಕೂ (ಕ್ರಿ.ಶ.೧೨೫೮) ಹೆಚ್ಚಿನ ಕಾಲವ್ಯತ್ಯಾಸ ಬರುತ್ತದೆ. ಬದೌನಿನ ಮದನಪಾಲನು ಹೆಚ್ಚು ವರ್ಷ ರಾಜ್ಯಭಾರ ಮಾಡಿದ್ದಾನೆ. ಬದಾವುನ್‌ನ ವಂಶದಲ್ಲಿ ಇಬ್ಬರು ಚಂದ್ರರಿದ್ದರೆಂದು ಭಾವಿಸಿದರೆ ಸಮಸ್ಯೆಗಳೆಲ್ಲ ಕರಗಿಹೋಗುತ್ತದೆ. ಸೋಲಂಕಿ ತ್ರಿಲೋಚನಪಾಲನು ಹೆಸರಿಸುವ ರಾಷ್ಟ್ರಕೂಟರು ಸೋಲಂಕಿಗಳ ಮೂಲ ದೊರೆಗಳ

ಸಮಕಾಲೀನರಾಗಿದ್ದರು. ಅವರು ರಾಷ್ಟ್ರಕೂಟ ರಾಜಕುಮಾರಿಯನ್ನು ಮದುವೆ ಮಾಡಿಕೊಂಡಿದ್ದರೆಂದು ಹೇಳಬಹುದಾಗಿದೆ.

ಮೇಲಿನ ಎಲ್ಲ ಆಧಾರಗಳಿಂದ ಕನೌಜದ ಗಹಡವಾಲರೇ ರಾಷ್ಟ್ರಕೂಟರ ಮುಂದುವರೆದ ಶಾಖೆ ಎನ್ನಲು ಯಾವ ಅಡ್ಡಿಯೂ ಇಲ್ಲ. ಆದರೂ ಕೆಲವು ಮುಖ್ಯ ಅಂಶಗಳನ್ನು ಗಮನಿಸಲೇಬೇಕಾಗಿದೆ. ರಾಷ್ಟ್ರಕೂಟರು ಚಂದ್ರವಂಶದವರಾದರೆ, ಗಹಡವಾಲರು ಸೂರ್ಯವಂಶಿಗಳು. ರಾಷ್ಟ್ರಕೂಟರು ಗೌತಮ ಗೋತ್ರದವರಾದರೆ, ಗಹಡವಾಲರು ಕಾಶ್ಯಪ ಗೋತ್ರದವರು. ಗಹಡವಾಲರು ಶಾಸನಗಳಲ್ಲಿ ತಮ್ಮನ್ನು ರಾಷ್ಟ್ರಕೂಟರೆಂದು ಕರೆದುಕೊಳ್ಳದೇ ಗಹಡವಾಲರೆಂದೇ ಕರೆದುಕೊಂಡಿದ್ದಾರೆ. ಆದರೆ ಬಿಶೇಶ್ವರನಾಥ ರೇವು ಅವರು ಈ ಎಲ್ಲವನ್ನೂ ಆಧಾರಗಳಿಂದ ಸಮರ್ಥಿಸುತ್ತಾ ಗಹಡವಾಲರನ್ನು ರಾಷ್ಟ್ರಕೂಟರೆಂದು ಸಾಧಿಸುವುದರಲ್ಲಿ ಯಶಸ್ವಿಯಾಗಿದ್ದಾರೆ.

**ವಂಶಾವಳಿ**




## ೧೫. ಬಿಥುವಿನ ರಾಷ್ಟ್ರಕೂಟರು (ಕ್ರಿ.ಶ. ೧೨೦೦ – ೧೩೧೫)

ರಾಜಾಸ್ಥಾನದ ಜೋಧಪುರ ಬಾಗದಲ್ಲಿ ಕ್ರಿ.ಶ. ೧೨೦೦ರಿಂದ ೧೩೧೫ರವರೆಗೆ ರಾಷ್ಟ್ರಕೂಟರ ವಂಶವೊಂದಿತ್ತು ಎಂದು ತಿಳಿದುಬರುತ್ತದೆ. ೧೧೫ ವರ್ಷಗಳಷ್ಟು ದೀರ್ಘಕಾಲ ಇವರ ಆಳ್ವಿಕೆಯು ನಡೆದಿದೆ. ಎಂ.ವಿ.ಕೃಷ್ಣರಾವ್ ಅವರು ಬಿಥುವಿನ ರಾಷ್ಟ್ರಕೂಟರ ಬಗ್ಗೆ ಉಲ್ಲೇಖಿಸಿದ್ದಾರೆ (ಕರ್ನಾಟಕದ ಇತಿಹಾಸ). ಆದರೆ ರಾಷ್ಟ್ರಕೂಟರ ಮುಂದುವರೆದ ಶಾಖೆಯೇ ರಾಥೋರರು ಅಂದರೆ ಗಹಡವಾಲರು ಎಂದು ಪ್ರತಿಪಾದಿಸಿರುವ ಬಿಶೇಷ್ವರನಾಥ ರೇವು ಅವರು ಈ ಶಾಖೆಯ ಬಗ್ಗೆ ಯಾವ

ವಿವರವನ್ನೂ ಕೊಡುವುದಿಲ್ಲ ಈ ಶಾಖೆಯ ಬಗ್ಗೆ ಇದಕ್ಕಿಂತ ಹೆಚ್ಚಿನ ಮಾಹಿತಿಗಳು ದೊರಕುವುದಿಲ್ಲ.

## ೧೬. ಬಧೌನಿನ ರಾಷ್ಟ್ರಕೂಟರು (ಕ್ರಿ.ಶ. ೧೨೦೧)

ಉತ್ತರಪ್ರದೇಶದ ಲಖನೌ ಬಳಿಯ ಬಧೌನಿನಲ್ಲಿ ರಾಷ್ಟ್ರಕೂಟರ ಶಾಖೆಯೊಂದು ಆಳ್ವಿಕೆ ನಡೆಸಿದ್ದಾಗಿ ತಿಳಿದುಬರುತ್ತದೆ. ಶಾಸನ ಸಿಕ್ಕಿರುವ ಸ್ಥಳ ಬಧೌನವಾದ್ದರಿಂದ ಅದೇ ಹೆಸರಿನಿಂದ ಈ ಶಾಖೆಯನ್ನು ಗುರುತಿಸಲಾಗಿದೆ. ಈ ಶಾಸನದಲ್ಲಿ 'ವೋದಾಮಯೂತಾಪುರಿಯವರು'ಎಂದು ಹೇಳಿಕೊಳ್ಳುತ್ತಾರೆ. ಈ ಶಾಸನದ ಕಾಲವನ್ನು ವಿಕ್ರಮ ಸಂವತ್ಸರ ೧೨೫೮ (ಕ್ರಿ.ಶ. ೧೨೦೧) ಎಂದು ಗುರುತಿಸಲಾಗಿದೆ.

ಶಾಸನದ ಆರಂಭದ ಸಾಲಿನಲ್ಲಿ

[ಸ್ವ ಸಿ]ನ್ಧೂದಕ ಪೂರ ದೂರಗಮಿತಾಶೇಷಾಘ ಸಂಘೋದಯೇ। ಪ್ರಖ್ಯಾತಾಖಿಲ ರಾಷ್ಟ್ರಕೂಟ ಕುಲಜಕಾಪಾಲದೋಃಪಾಲಿತಾ ಪಂಚಾಲಾಭಿಧ ದೇಶಭೂಷಣಕರೀ ವೋದಾಮಯೂತಪುರೀ॥ ಮಂದಾರಾತಿವ (ಬ)ಹು ಪ್ರಕೃಷ್ಟ ಸುಮನಃ ಸಮ್ಪತ್ತಿ ಸಂ[ಶೋ]ಭಿತಾ ಗಂಧರ್ವೋತ್ತಮ ಭೂಷಿತಾ ಪರಿವೃತಾ ಸಂತಾನಕಲ್ಪದ್ರುಮೈಃ। ಅತ್ಯುಚ್ಚಾಮಲದೇವ[ಮಂ] . . . ನಾ ರಮ್ಯಾ ಸುಧರ್ಮ್ಮಾಶ್ರಯೋ ಯಾ ರಾಜೇಗುಣ ಸಂಚಯೈರಿವಪುರೀ ಪೌರನ್ದಾರೀ ಸುನ್ದರೀ॥ ತತ್ರಾದಿತೋ ಭವದನನ್ತಗುಣೋ ನರೇನ್ದ್ರಶ್ಚನ್ದ್ರಃ............(EI, Vol. I, p61)

ಎಂಬುದಾಗಿ ಮುಂದುವರೆಯುತ್ತ ಚಂದ್ರ ಎಂಬ ದೊರೆಯಿಂದ ಈ ವಂಶಾವಳಿಯನ್ನು ಪ್ರಾರಂಭಿಸುತ್ತದೆ. ವರ್ಮಶಿವ ಎಂಬ ಹೆಸರಿನ ವ್ಯಕ್ತಿಯನ್ನು ಉಲ್ಲೇಖಿಸುತ್ತದೆ. ಈಶಾನಶಿವ ಎಂಬುವವನು ಶಿವದೇವಾಲಯವನ್ನು ಕಟ್ಟಿಸಿದನೆಂದು ತಿಳಿದು ಬರುತ್ತದೆ. ಈ ಶಾಸನವನ್ನು ಬರೆದವನು ಗೋವಿಂದಚಂದ್ರ. ಈತ ಗಂಗಾಧರನ ಮಗ, ಸೋಮೇಶ್ವರನ ಮೊಮ್ಮಗ ಎಂದು ಶಾಸನದಲ್ಲಿ ಹೇಳಿದೆ.

ಇದೊಂದು ಪ್ರಶಸ್ತಿ ಶಾಸನವಾಗಿದ್ದು, ವೋದಾಮಯೂತಾಪುರಿ (ಆಧುನಿಕ ಬದಾವುನ್ ಅಥವಾ ಬದೌನ್)ಯು ಪಾಂಚಾಲ ದೇಶಕ್ಕೆ ಆಭರಣದಂತಿತ್ತು. ಇದನ್ನು

ಆಳುತ್ತಿದ್ದವನು ಪ್ರಖ್ಯಾತವಾದ ರಾಷ್ಟ್ರಕೂಟ ಕುಲದ ಅರಸು. ಸಂಪತ್ತಿನಿಂದ ಶೋಭಿಸುತ್ತಿದ್ದ ಈ ನಗರದಲ್ಲಿ ಗಂಧರ್ವರಂತೆ ಉತ್ತಮರು ಭೂಷಣಪ್ರಾಯವಾಗಿ ಪರಿವೃತರಾಗಿದ್ದರು. ಧರ್ಮಕ್ಕೆ ಆಶ್ರಯ ನೀಡುವ ರಾಜಗುಣವು ಪುರಪೌರರು, ನಾರಿಯರು, ಸುಂದರಿಯರಿಗಿತ್ತು. ಪುರಪೌರರು ನಾರಿಯರು ಸುಂದರವಾಗಿದ್ದರು. ಅನಂತಗುಣಗಳನ್ನು ಹೊಂದಿದ್ದ ದೊರೆ ಚಂದ್ರನು, ಭೂಷಣಪ್ರಾಯವಾದ ತನ್ನ ಖಡ್ಗದಿಂದ ವೈರಿವೃಂದವನ್ನು ಎದುರಿಸಿ ತನ್ನ ಸೈನಿಕರನ್ನು ರಕ್ಷಿಸುತ್ತಿದ್ದನು. ಚಂದ್ರನ ಮಗ ವಿಗ್ರಹಪಾಲ. ಇವನ ಮಗ ಭುವನಪಾಲ. ಭುವನಪಾಲನ ಮಗ ಗೋಪಾಲ. ಇವನು ಪ್ರಜೆಗಳ ದುರಿತಗಳನ್ನು ದೂರಗೊಳಿಸುವ ತನ್ನ ಕಾರ್ಯದಲ್ಲಿ ನಿರತನಾಗಿದ್ದು, ಸುಖಿಯಾಗಿದ್ದನು. ಇವನ ಮಕ್ಕಳಲ್ಲಿ ಹಿರಿಯ ತ್ರಿಭುವನಪಾಲನು ವೈರಿಗಳನ್ನೆಲ್ಲ ಕೊಂದು ಭುವನಗಳನ್ನು ರಕ್ಷಿಸುತ್ತಿದ್ದನು. ಈತನ ಸೋದರ ಮದನಪಾಲ ಪೌರುಷವಂತ, ಸುರಸಿಂಧು ತೀರದಲ್ಲಿ ವಿಹರಿಸುತ್ತಿದ್ದನು. ಅವನ ತಮ್ಮ ದೇವಪಾಲ ದಯಾಳುವಾಗಿದ್ದನು. ದೀನ ದಲಿತರಿಗೆ ಲಕ್ಷ್ಯ ಕೊಡುತ್ತಿದ್ದನು. ಅವನ ಚರಿತವರ್ಣನೆಯಿಂದಲೇ ಜಯವಾಗುತ್ತದೆ.

ಬಧೌನಿನ ರಾಷ್ಟ್ರಕೂಟರ ವಂಶಾವಳಿಯನ್ನು ಮತ್ತು ಕನೌಜಿನ ರಾಷ್ಟ್ರಕೂಟರ ವಂಶಾವಳಿಯನ್ನು ಗಮನಿಸಿದರೆ ಗೊಂದಲವಾಗುತ್ತದೆ. ಏಕೆಂದರೆ ಕೆಲವು ಹೆಸರುಗಳು ಒಂದೇ ಆಗಿವೆ. ಬಹುಶಃ ಇದೇ ರೀತಿಯ ಗೊಂದಲದಿಂದ ಶ್ರೀ ಎಂ.ವಿ. ಕೃಷ್ಣರಾವ್ ಅವರು ಕನೌಜ್ ಮತ್ತು ಬಧೌನಿನ ರಾಷ್ಟ್ರಕೂಟರು ಒಂದೇ ಎನ್ನುತ್ತಾರೆ. ಶ್ರೀ ಬಿಶೇಷ್ವರನಾಥ ರೇವು ಅವರು ಕನೋಜದ ರಾಷ್ಟ್ರಕೂಟರೇ ಬೇರೆ, ಬಧೌನಿನ ರಾಷ್ಟ್ರಕೂಟರೇ ಬೇರೆ ಎಂದು ವಂಶಾವಳಿಗಳ ಆಧಾರ ಮತ್ತು ವೈವಾಹಿಕ ಸಂಬಂಧಗಳ ಆಧಾರದಿಂದ ಗುರುತಿಸಿದ್ದಾರೆ (ವಂಶಾವಳಿಯನ್ನು ನೋಡಿ).

ದೇವಪಾಲನ ಮಗ ಯಾರಿಂದಲೂ ಗೆಲ್ಲಲಾಗದಂತಹ (ವಿಜಿತದುರ್ಜಯ, ವೈರಿವೀರ), ವೈರಿಗಳೆದುರು ವೀರ ಚಿನ್ನದಂತೆ ನಿರ್ಮಲವಾಗಿರುವ ಶರೀರ(ಮನಸ್ಸು), ಗರ್ಭೇಶ್ವರ, ಒಳ್ಳೆಯದನ್ನು ಮಾಡುವವನು (ಶುಭಕರ), ದೈವಭಕ್ತನಾದಂತಹ ಭೀಮಪಾಲ. ಇವನಿಗೆ ಹುಟ್ಟಿದ ಮಗನು ಶೂರಪಾಲನೆಂದು ಪ್ರಸಿದ್ಧನಾಗಿದ್ದಾನೆ. ಇವನು ಸುರಗಣದಲ್ಲಿ ಚಂದ್ರನಂತೆ, ಗಜಗಳಲ್ಲಿ ಐರಾವತದಂತೆ, ಮೃಗಗಳಲ್ಲಿ ಸಿಂಹದಂತೆ ಇದ್ದವನು. ಅವನಿಗೆ ಅಮೃತಪಾಲನೆಂಬ ಮಗನಿದ್ದನು. ಪ್ರತಾಪಿಯೂ,

ಗುರುಹಿರಿಯರಲ್ಲಿ ಭಕ್ತಿಯುಳ್ಳವನೂ, ದೈವಭಕ್ತನೂ ಆಗಿದ್ದನು. ಉಗ್ರ ದಂಡಗಳನ್ನು ಆಯುಧಗಳಾಗಿ ಹೊಂದಿದ್ದವನು. ಇಂತಹವನ ತಮ್ಮ ಲಖಣಪಾಲ. ದಾನವನ್ನು ಅತಿರೇಕವಾಗಿ (ಅತಿಯಾಗಿ ದಾನವನ್ನು) ಮಾಡುತ್ತಿದ್ದನು ಎಂದು ತಿಳಿಯುತ್ತದೆ.

ಎಂ.ವಿ. ಕೃಷ್ಣಸ್ವಾಮಿಯವರು ಕನೌಜಿನ ರಾಷ್ಟ್ರಕೂಟರು ಮತ್ತು ಬಧೌನಿನ ರಾಷ್ಟ್ರಕೂಟರು ಒಂದೇ ಎಂದು ತಿಳಿಸುತ್ತಾರೆ. ಆದು ಸರಿಯಿಲ್ಲ. ಆದರೆ ರೇವು ಅವರು ಹೇಳುವ ರೀತಿಯಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಚಂದ್ರದೇವನ ಮಕ್ಕಳು ಇಬ್ಬರು. ಅವರಲ್ಲಿ ಎರಡನೆಯವನಾದ ವಿಗ್ರಹಪಾಲನು ಬಧೌನ ಶಾಖೆಯ ಮುಖ್ಯಸ್ಥ ಎನ್ನುತ್ತಾರೆ. ಇನ್ನೊಬ್ಬನ ಹೆಸರು ತಿಳಿದಿಲ್ಲ. ಕನೌಜದ ರಾಷ್ಟ್ರಕೂಟರೇ ಬೇರೆ ಬಧೌನಿನ ರಾಷ್ಟ್ರಕೂಟರೇ ಬೇರೆ ಎಂಬುದು ಸ್ಪಷ್ಟವಾಗುತ್ತದೆ.

**ವಂಶಾವಳಿ**




## ೧೭. ರಾಷ್ಟ್ರೌಡ ಶಾಖೆ ೨ (ಕ್ರಿ.ಶ. ೧೩೮೪)

ರಾಷ್ಟ್ರೌಡರ ಎರಡನೆಯ ಶಾಖೆಯು ಕ್ರಿ.ಶ. ೧೩೮೪ರ ಸುಮಾರಿಗೆ ಸಿಗುತ್ತದೆ. ಜೋನಾಗರದ ವೇರವಲ ಎಂಬಲ್ಲಿ ದೊರೆತಿರುವ ಶಾಸನದಲ್ಲಿ ರಾಷ್ಟ್ರೌಡ ಅಥವಾ ರಾಷ್ಟ್ರಕೂಟ ಕುಲದವನಾದ ಭರ್ಮ ಎಂಬುವವನ ಉಲ್ಲೇಖವಿದೆ. ರಾಜಾಸ್ಥಾನದ

ರಾಥೋಡರು ರಾಷ್ಟ್ರಕೂಟರ ಮುಂದುವರೆದ ಶಾಖೆ ಎಂದು ವಿದ್ವಾಂಸರು ಪ್ರತಿಪಾದಿಸಿದ್ದಾರೆ. (History of the Raashtrakutas). ರಾಟ್ಟಾಡ ಅಥವಾ ರಾಠೋಡ ಎಂಬ ಪದವು ರಾಷ್ಟ್ರಕೂಟ ಪದದ ಪ್ರಾಕೃತ ರೂಪವೆನ್ನಬಹುದು. . ರಾಥೋಡರು ರಜಪೂತ ಕುಲಗಳಲ್ಲಿ ಪ್ರಸಿದ್ಧರು. ಅವರು ರಾಷ್ಟ್ರಕೂಟ ವಂಶಕ್ಕೆ ಸೇರಿದವರೆಂಬ ವಿವರವೇ ತಿಳಿದಿರಲಿಲ್ಲ ಎಂಬ ಅಂಶ ಕುತೂಹಲಕಾರಿಯಾಗಿದೆ. ಆದರೂ ಮೂಲ ನೆಲೆಯ ಹೆಸರಿನಿಂದ ತಮ್ಮನ್ನು ಗುರುತಿಸಿಕೊಳ್ಳುವುದರಿಂದ ಅಲ್ಲೊಂದು ಇಲ್ಲೊಂದು ಕೊಂಡಿಗಳು ಸಿಗುತ್ತವೆ ಎನ್ನಬಹುದು.

## ಸಣ್ಣ ಪುಟ್ಟ ರಾಷ್ಟ್ರಕೂಟ ಶಾಖೆಗಳು

ತಮಿಳುನಾಡಿನಲ್ಲಿ ರಾಷ್ಟ್ರಕೂಟರ ಶಾಖೆಯೊಂದಿತ್ತೆಂದು ಡಾ|| ಆರೋಕ್ಯ ಸ್ವಾಮಿಯವರು ತಮ್ಮ ಗ್ರಂಥದಲ್ಲಿ ಹೇಳಿದ್ದಾರೆ. ರೋಮನ್ ವಾಣಿಜ್ಯವು ಇನ್ನೂ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ, ರಾಷ್ಟ್ರಕೂಟರ ರಟ್ಟ ಎಂಬ ಶಾಖೆಯು ಕೊಂಗು ಸಾಮ್ರಾಜ್ಯವನ್ನು ಇಡಿಯಾಗಿ ಆಕ್ರಮಿಸಿತು. ಬಹುಶ: ಇವರು ಕರ್ನಾಟಕದಿಂದ ಬಂದವರು. ಗಂಗ, ಬಾಣ ಮತ್ತು ಕದಂಬರ ಒತ್ತಡದಿಂದಾಗಿ ಇತ್ತ ಸರಿದವರು. ಇವರ ಕಾಲದ ಬಗ್ಗೆ ಸರಿಯಾಗಿ ಉಲ್ಲೇಖವಿರಲಿಲ್ಲ. ವಿದ್ವಾಂಸರ ಸಂಶೋಧನೆಯಿಂದ ಇವರ ಬಗ್ಗೆ ನಿಖರವಾಗಿ ಹೇಳಲು ಸಾಧ್ಯವಿದೆ. (The Kongu Country by M.Arokiyaswami, 1959, P 72-79)

೧. ವೀರರಾಯ ಚಕ್ರವರ್ತಿ – ಕ್ರಿ.ಶ. ೨೫೦ – ೨೭೦

೨. ಗೋವಿಂದರಾಯ I – ಕ್ರಿ.ಶ. ೨೭೦ – ೨೯೦

೩. ಕೃಷ್ಣರಾಯ – ಕ್ರಿ.ಶ. ೨೯೦ – ೩೧೦

೪. ಗೋವಿಂದರಾಯ II – ಕ್ರಿ.ಶ. ೩೩೦ – ೩೫೫

೫. ಕನ್ನರದೇವ – ಕ್ರಿ.ಶ. ೩೫೫ – ೩೮೦

೬. ತಿರುವಿಕ್ರಮದೇವ – ಕ್ರಿ.ಶ. ೩೮೦ – ೪೦೫

ಇವರಲ್ಲಿ ಪ್ರತಿಯೊಬ್ಬರ ಬಗ್ಗೆಯೂ ಪ್ರತ್ಯೇಕವಾಗಿ ಹೆಚ್ಚಿನ ವಿಷಯಗಳು ತಿಳಿದಿಲ್ಲ. ಕೊನೆಯ ಮೂರು ಅರಸರು ಮಾತ್ರ ಒಳ್ಳೆಯ ಯುದ್ಧಪಟುಗಳಾಗಿದ್ದರು.

ಎಲ್ಲರಿಗಿಂತ ಕೊನೆಯವನು ಎಲ್ಲರಿಗಿಂತಲೂ ಶೂರನಾಗಿದ್ದವನು, ಈತ ಚೋಳ, ಪಾಂಡ್ಯ, ಕೇರಳಗಳನ್ನು ಗೆದ್ದದ್ದೇ ಅಲ್ಲದೇ ಕರ್ನಾಟಕದ ಒಡೆತನವನ್ನೂ ತನ್ನದಾಗಿಸಿಕೊಂಡನು. ಕೊನೆಯ ದೊರೆಯನ್ನು ಬಿಟ್ಟರೆ ಉಳಿದವರೆಲ್ಲ ಜೈನಧರ್ಮಾವಲಂಬಿಗಳಾಗಿದ್ದರು. ಕೊನೆಯವನು ಮಾತ್ರ ಜೈನಧರ್ಮವನ್ನು ತ್ಯಜಿಸಿ ನರಸಿಂಹಭಟ್ಟನೆಂಬುವನ ಪ್ರಭಾವದಿಂದ ಶೈವಧರ್ಮವನ್ನು ತನ್ನದಾಗಿಸಿಕೊಂಡನು. (The Kongu Country, 1956, P 91-99)

ರಾಷ್ಟ್ರಕೂಟರ ಆಡಳಿತದ ಬಗ್ಗೆ ಅಲ್ಪ ಸ್ವಲ್ಪ ವಿಚಾರಗಳು ತಿಳಿದಿದ್ದು ಇವರ ರಾಜಧಾನಿಯು ಸ್ಕಂದಪುರವಾಗಿತ್ತು. (ಧಾರಾಪುರ). ಇವರ ಆಡಳಿತ ವಿಭಾಗಗಳು ಜಿಲ್ಲೆಗಳಾಗಿ ಹಬ್ಬಿದ್ದು, ಪ್ರತಿಯೊಂದು ಜಿಲ್ಲೆಯಲ್ಲಿಯೂ ಗ್ರಾಮಸ್ಥರ ಗುಂಪುಗಳಿರುತ್ತಿದ್ದವು. ನೀತಿಶಾಸ್ತ್ರದ ಆಧಾರದಿಂದ ರಾಜ್ಯಭಾರ ಮಾಡುತ್ತಿದ್ದರು. ರೋಮನ್ನರಂತೆ ಇವರದೇ ಹೆಸರುಗಳುಳ್ಳ ಚಿನ್ನದ ನಾಣ್ಯಗಳಿದ್ದವು. ತಾವು ನಿರ್ಮಾಣ ಮಾಡಿದ ದೇವಾಲಯಗಳನ್ನು ಬಿಟ್ಟರೆ ಉಳಿದ ಕಡೆಯ ವಾಸ್ತುಶಿಲ್ಪಕ್ಕೆ ಗಮನವನ್ನೇ ಕೊಡಲಿಲ್ಲ. ಇವರು ಕಲೆಯಲ್ಲಿ ಪ್ರಾವಿಣ್ಯತೆಯನ್ನು ಹೊಂದಿದ್ದರು. ವ್ಯವಸಾಯಕ್ಕೆ ಪ್ರೋತ್ಸಾಹ ನೀಡಿದ್ದರಲ್ಲದೇ ಭೂಮಿಯನ್ನು ಸರ್ವೆ(Survey) ಮಾಡಲು ಪ್ರಾರಂಭಿಸಿದರು. ಇವರ ಕಾಲದಲ್ಲಿ ಧಾನ್ಯಗಳನ್ನು ಅಳೆಯುವ ಮತ್ತು ಭೂಮಿಯನ್ನು ಅಳೆಯುವ ಕ್ರಮವು ಜಾರಿಗೆ ಬಂತು. ಇವರು ರೋಮನ್ನರೊಂದಿಗೆ ವ್ಯಾಪಾರ ಸಂಬಂಧವನ್ನು ಇಟ್ಟುಕೊಂಡಿದ್ದರು. ಚಿನ್ನ ಮತ್ತು ನಯವಾದ ಬಟ್ಟೆಗಳ ವ್ಯಾಪಾರವನ್ನು ಹೆಚ್ಚಿಗೆ ನಡೆಸಿದ್ದರು. ಜೈನ ಮತ್ತು ಶೈವಧರ್ಮವನ್ನು ಪ್ರೋತ್ಸಾಹಿಸಿದರು. ಧಾರ್ಮಿಕ ಕಾರ್ಯಗಳಿಗಾಗಿ ಅನೇಕ ದಾನದತ್ತಿಗಳನ್ನು ನೀಡಿದರು. ಇವರು ಶಿಲಾ ಶಾಸನಗಳನ್ನು ಮತ್ತು ತಾಮ್ರಶಾಸನಗಳನ್ನು ಹಾಕಿಸಿದರು. ಇವರು ತಮಿಳು ತಿಂಗಳುಗಳ ಹೆಸರುಗಳನ್ನು ಉಪಯೋಗಿಸಿದರು, ಮತ್ತು ತಿಂಗಳನ್ನು ಎರಡು ಭಾಗಗಳನ್ನಾಗಿ ಮಾಡಿಕೊಂಡಿದ್ದರು. ಇವರಿಗೆ ಯುದ್ಧ ಕಲೆಯು ತಿಳಿದಿತ್ತು. ಯುದ್ಧದಿಂದ ಹಿಂದಿರುಗುವಾಗ ತಾವು ಗಳಿಸಿದ್ದನ್ನು ವಿಜೃಂಭಣೆಯಿಂದ ತರುತ್ತಿದ್ದರು. (Manual of the Salem district by H.L.Fanu, Vol I, 1883, P19-20, The Kongu Country by M Arokiyaswami, 1956, P 99-101)

ಮೇಲಿನ ಅಭಿಪ್ರಾಯಗಳನ್ನು ಗಮನಿಸಿದಾಗ ಒಂದೆರಡು ಹೆಸರುಗಳಲ್ಲಿನ ಸಾಮ್ಯವನ್ನು ಬಿಟ್ಟರೆ ಉಳಿದಂತೆ ಯಾವ ಅಭಿಪ್ರಾಯವೂ ನಿಜಾಂಶವನ್ನು ತಿಳಿಸುವುದಿಲ್ಲವೆಂಬುದು ಸರ್ವವಿದಿತ. ಕಾಲಗಣನೆಯ ವಿಚಾರವನ್ನಂತೂ ಸಂಪೂರ್ಣ ಕೈಬಿಡಲೇಬೇಕು.

ಸೀತಾಬಾಲ್ಡಿ ತಾಮ್ರ ಶಾಸನವು (EI Vol III P 305, 1087AD) ರಾಣಕ ಧಾಡೀಭಣ್ಡಕ (ಧಾಡಿದೇವ)ನದಾಗಿದ್ದು ಈತ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಮಾಂಡಳೀಕನಾಗಿದ್ದನು ಎಂದು ತಿಳಿದುಬರುತ್ತದೆ. ಶಾಸನದಲ್ಲಿ ಈತ ಮಹಾರಾಷ್ಟ್ರಕೂಟ ವಂಶಕ್ಕೆ ಸೇರಿದವನು, ಲಟ್ಟಲೂರಿನಿಂದ ಬಂದವನೆಂದು ಉಲ್ಲೇಖಿಸುತ್ತದೆ.

ಕೊಲ್ಹಾಪುರದ ಖಾನ್‌ಪುರ ಶಾಸನದಲ್ಲಿ (EI Vol III P 305, 1129AD) ರಟ್ಟ ರಂಕದೇವನು ಚಾಲುಕ್ಯ ಮೂರನೆಯ ಸೋಮೇಶ್ವರನಿಗೆ ಮಾಂಡಳೀಕನಾಗಿದ್ದನೆಂದು ಉಲ್ಲೇಖಿಸಿದೆ. ಮಾಂಡಳೀಕನಾಗಿದ್ದವನು ಸೌಂದತ್ತಿಯ ರಟ್ಟ ಅಂಕದೇವನಾಗಿದ್ದಾನೆ. ಜಬ್ಬಲ್‌ಪುರದ ಬಹುರಿಬಂದ್‌ನ ಶಾಸನದಲ್ಲಿ (Archaeological Survey of India Vol IX P 40, 12th Century ) ರಾಷ್ಟ್ರಕೂಟ ಗೊಲ್ಹಣದೇವನ ಉಲ್ಲೇಖವಿದೆ. ಈತ ಕಲಚುರಿ ಗಾಯಕರ್ಣನ ಮಾಂಡಳೀಕನಾಗಿದ್ದನೆಂದು ತಿಳಿದುಬರುತ್ತದೆ.

ಇಂದ್ರಗಢದ ಶಾಸನ

ಇಂದ್ರಗಢ ಎಂಬುದು ರತ್ಲಾಂ ಮತ್ತು ಕೋಟಾ ರೈಲ್ವೇ ನಿಲ್ದಾಣಗಳ ಮಧ್ಯೆ ಬರುತ್ತದೆ. ಮಂದ್‌ಸೌರ್‌ನಿಂದ ಸುಮಾರು ಮುವತ್ತು ಮುವತ್ತೈದು ಕಿ.ಮೀ.ಗಳ ದೂರವಿದೆ. ಇಲ್ಲೊಂದು ರಾಷ್ಟ್ರಕೂಟರ ಶಿಲಾಶಾಸನವು ಸಿಕ್ಕಿದ್ದು ಹದಿನೆಂಟು ಸಾಲುಗಳಲ್ಲಿ ಶಾಸನಪಾಠವಿದೆ. ಭಾನ್‌ಪುರದಿಂದ ಎರಡು ಮೈಲಿ ದೂರದಲ್ಲಿ ವಿಂಧ್ಯ ಪರ್ವತಗಳ ಬುಡದಲ್ಲಿರುವ ಸಮತಟ್ಟು ಪ್ರದೇಶಗಳಲ್ಲಿ ಸಿಕ್ಕಿದೆ. ಸ್ಥಳೀಯರು ಪಥಾರ್ ಎಂದು ಕರೆಯುವ ಈ ಸ್ಥಳದಲ್ಲಿ ಕೋಟೆ ಗೋಡೆಗಳ ಸ್ಮಾರಕ, ಶಿಲ್ಪಗಳ ಅವಶೇಷ, ಜನನಿವಾಸವಿದ್ದ ಕುರುಹುಗಳನ್ನು ಕಂಡಾಗ ಹಿಂದೆ ಇದೊಂದು ಜನನಿಬಿಡ ಪ್ರದೇಶವಾಗಿತ್ತೆಂದು ಸ್ಪಷ್ಟವಾಗುತ್ತದೆ. ಪ್ರಾದೇಶಿಕವಾಗಿ ಸುಂದರವಾಗಿರುವ ಈ ಪ್ರದೇಶದಲ್ಲಿ ಹಿಂಗಲಾಜ್‌ಗಢ್, ಭಾನ್‌ಪುರ್, ದಾವಲಿ, ತಕ್ಷೇಶ್ವರ, ಧರ್ಮರಾಜೇಶ್ವರ ಮುಂತಾದ ಪ್ರದೇಶಗಳನ್ನು ಕಾಣಬಹುದು.

ರಾಷ್ಟ್ರಕೂಟ ರಾಜ ನನ್ನನ ಆಡಳಿತ ಕಾಲದಲ್ಲಿ ಮಾಳವ ಸಂವತ್ಸರ ೭೬೭ (ಕ್ರಿ.ಶ. ೭೧೧-೭೧೨)ರಲ್ಲಿ ಸಾಧುವೊಬ್ಬನು ಶಂಭುದೇವರ ದೇವಾಲಯವನ್ನು ಕಟ್ಟಿಸಿದ್ದನ್ನು ಉಲ್ಲೇಖಿಸಿದೆ. ಶಾಸನದ ರಚನೆಕಾರ ಗೌಡ ದೇಶದವನು. ಈತನ ಹೆಸರು ಅಸ್ಪಷ್ಟವಾಗಿದೆ. ಈತನ ತಂದೆಯ ಹೆಸರು ಶಂಕರನೆಂದು ತಿಳಿದುಬರುತ್ತದೆ. ಕ್ರಿ.ಶ. ೧೯೫೧-೫೨ ರ ಸುಮಾರಿನಲ್ಲಿ ಇಲ್ಲೊಂದು ಉತ್ಖನನವಾಗಿದೆಯೆಂದು ಪುರಾತತ್ವ ವಿಭಾಗದ ವರದಿಯು ತಿಳಿಸುತ್ತದೆ. ದೇವಾಲಯವನ್ನು ಪೂರ್ತಿ ಮುಚ್ಚಲಾಗಿದ್ದು ಮೇಲ್ಭಾಗವಾದ ಕೋಡುಗಳನ್ನು ಗುರುತಿಸಬಹುದಾಗಿದೆ. ಇದೇ ಶಾಸನೋಲ್ಲೇಖಿತ ದೇವಾಲಯವಿರಬಹುದು.

ಶಾಸನಪಾಠದಲ್ಲಿ ಬರುವ ನನ್ನಪ್ಪನು ಇಂದ್ರಗಢದಲ್ಲಿ ರಾಜ್ಯಭಾರ ಮಾಡುತ್ತಿದ್ದನೆಂದು ಉಲ್ಲೇಖಿಸಿದೆ. ಈ ಪ್ರದೇಶವು ಕ್ರಿ.ಶ. ೭೧೦-೭೫೦ ರವರೆಗೆ ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟಿತ್ತು. ಇಂದ್ರನ ನೆನಪಿಗಾಗಿ ಇಂದ್ರಗಢ, ಭಾಮಾನನ ನೆನಪಿನಲ್ಲಿ ಭಾನಾಪುರವನ್ನು ನಿರ್ಮಾಣ ಮಾಡಿದರೆಂದು ಶಾಸನವು ಉಲ್ಲೇಖಿಸಿದೆ. ಮುಂದೆ ರಾಷ್ಟ್ರಕೂಟ ಪ್ರತಿಹಾರ ಸಂಘರ್ಷದಲ್ಲಿ ಕನೋಜದ ಪ್ರತಿಹಾರರು ವಿಜಯಿಯಾದರೆಂದು ಈ ಶಾಸನವು ದಾಖಲಿಸುತ್ತದೆ. ನಂತರ ವತ್ಸರಾಜನು ಈ ಪ್ರದೇಶಬನ್ನು ಆಕ್ರಮಿಸಿಕೊಂಡನೆಂದು ತಿಳಿದುಬರುತ್ತದೆ. ಇಲ್ಲಿ ಬರುವ ಇಂದ್ರ ಮಳಖೇಡದ ಇಂದ್ರನಂತೆ ಕಂಡುಬರುತ್ತದೆ. ಅವನಿಗೆ ನನ್ನಪ್ಪನೆಂಬ ಹೆಸರಿತ್ತೆ? ಕ್ರಿ.ಶ. ೭೧೧ರಲ್ಲಿ ಇದ್ದವರು ಯಾರು? ಅಚಲಾಪುರದ ರಾಷ್ಟ್ರಕೂಟ ದೊರೆ ನನ್ನರಾಜನ ಕಾಲಕ್ಕೆ ಇದು ಸರಿಹೊಂದುವುದಿಲ್ಲ.

## ರಾಜಧಾನಿಗಳು

### ಮಾನಪುರ

ಸಾಮಾನ್ಯವಾಗಿ ಮಾನಪುರದ ರಾಷ್ಟ್ರಕೂಟರ ಶಾಖೆ ಉಳಿದ ಶಾಖೆಗಳಿಗಿಂತ ಪ್ರಾಚೀನ ರಾಷ್ಟ್ರಕೂಟವಂಶ ಎಂದು ಎಲ್ಲ ವಿದ್ವಾಂಸರೂ ಅಭಿಪ್ರಾಯ ಪಡುತ್ತಾರೆ. ಮಾನಪುರದ ರಾಷ್ಟ್ರಕೂಟರ ಆಳ್ವಿಕೆಯ ಕಾಲದ ಮೂರು ತಾಮ್ರ ಪಟಗಳು ಸಿಗುತ್ತವೆ. ಊಂಡಿಕಾವಾಟಿಕಾ ತಾಮ್ರಪಟದಲ್ಲಿ ಮಾತ್ರ ಮಾನಪುರದ ಉಲ್ಲೇಖವಿದೆ.

ಊಂಡಿಕಾವಾಟಿಕಾ ತಾಮ್ರ ಪಟದಲ್ಲಿ ಮಹಾರಾಜನಾದ ಅಭಿಮನ್ಯುವನ್ನು ಮಾನಪುರದ ಶೋಭೆ ಎಂದಿದ್ದಾರೆ. ನಮಗೆ ಸಿಗುವ ಮೂರು ತಾಮ್ರ ಪಟಗಳಲ್ಲಿ ಒಂದರಲ್ಲಿ ಮಾತ್ರ ಮಾನಪುರದ ಹೆಸರು ತಿಳಿಯುತ್ತದೆ. ವಿ.ವಿ.ಮಿರಾಷಿಯವರು ಮಾನಪುರವನ್ನು ಕಟ್ಟಿಸಿದವನು ಮಾನಾಂಕ ಎನ್ನುತ್ತರೆ. ಯಾವ ಶಾಸನದಲ್ಲಿ ಉಲ್ಲೇಖವಾಗಿದೆ ಎಂದು ಹೇಳುವುದಿಲ್ಲ.

ಮಾನಪುರ ಎಲ್ಲಿದೆ ಎಂಬುದು ಸರಿಯಾಗಿ ಗೊತ್ತಿಲ್ಲ. ವಿವಿಧ ವಿದ್ವಾಂಸರು 'ಮಾನ್' ಪ್ರದೇಶವನ್ನು ಗುರುತಿಸಲು ಪ್ರಯತ್ನಿಸಿದ್ದಾರೆ. ಮಿರಾಷಿಯವರು ಸತಾರಾ ಜಿಲ್ಲೆ ಮಾನ್ ತಾಲ್ಲೂಕಿನ ಮಾನ್ ಎಂಬ ಪ್ರದೇಶವೇ ಮಾನಪುರ ಎಂದಿದ್ದಾರೆ. ಈ ಹೆಸರಿನ ಪ್ರದೇಶವು Geographical Survey of India ದ ಯಾವುದೇ ಭೂಪಟದಲ್ಲಿ ದೊರೆಯುವುದಿಲ್ಲ. ಬಹಳ ವಿರಳವಾಗಿ ದೊರಕುವ ಕಾನ್ಸ್‌ಟೇಬಲ್ ಅಟ್ಲಾಸ್ ಒಂದನ್ನು ಉದಾಹರಿಸಿ ಅದರಲ್ಲಿ ಬರುವ ವಿವರವನ್ನು ಈ ರೀತಿ ನೀಡುತ್ತಾರೆ.

ಸಿಂಗಾನಪುರ ಮತ್ತು ದಹಿವಾಡಿಯ ನಡುವೆ ಮಾನ್ ಎಂಬ ಊರಿದೆ. ಶ್ರೀ ಕಾನ್ಸ್‌ಟೇಬಲ್‌ರವರು ಈ ನಕ್ಷೆಯನ್ನು ೧೮೮೩ ರಲ್ಲಿ ಪ್ರಕಟಿಸಿದರು ಎನ್ನುವುದು ಎಲ್ಲರಿಗೂ ತಿಳಿದ ವಿಷಯ. ಆದರೆ ಮಾನ್ ಪ್ರದೇಶ ಅಲ್ಲಿಯವರಗೆ ಇತ್ತು. ನಂತರ ಎಲ್ಲಿ ಹೋಯಿತೋ ಎಂದು ಹೇಳಲು ಸಾಧ್ಯವಿಲ್ಲ. ಅಟ್ಲಾಸಿನ ಬಗ್ಗೆ ಹೇಳುತ್ತಾ ತಮ್ಮ ಪ್ರಬಂಧದಲ್ಲಿ (Studies in the Rashtrakuta Insciptions, Brahmananda Deshpande) ಅದು ದೊರೆಯಲಿಲ್ಲ, ಆದರೆ ಸತಾರ ಜಿಲ್ಲೆಯಲ್ಲಿ ಮಾನ್ ಪ್ರದೇಶ ಇಲ್ಲವೆಂಬುದು ಖಚಿತ ಎನ್ನುತ್ತಾರೆ. ತಮ್ಮ ವಾದವನ್ನು ಪುಷ್ಟೀಕರಿಸಲು, ಪ್ರಖ್ಯಾತ ಪಂಡಿತರಾದ ಶ್ರೀ ಬಾಳಾಸಾಹೇಬ್ ಮಾನೆಯವರು ಸತಾರಾ ಜಿಲ್ಲೆಯಲ್ಲಿ ಮಾನ್ ಪ್ರದೇಶ ಇದ್ದುದ್ದನ್ನು ಖಡಾಖಂಡಿತವಾಗಿ ನಿರಾಕರಿಸಿದ್ದಾರೆ ಎನ್ನುತ್ತಾರೆ. ದಹೀವಾಡಿಯೇ ಆ ಪ್ರದೇಶ ಎನ್ನುವುದು ನನ್ನ ನಿರ್ಧಾರ ಎಂದಿದ್ದಾರೆ. ಯಾವ ಆಧಾರದಿಂದ ಹಾಗೆ ಗುರುತಿಸಿದ್ದಾರೆ ಎಂದು ಸ್ಪಷ್ಟಪಡಿಸಿಲ್ಲ.

ಇತಿಹಾಸಕಾರರಾದ ಡಾ॥ ಜಿ.ಎಸ್. ಖರೆಯವರು ಪುಣೆಯವರಾಗಿದ್ದರು. ಪುಣೆ ಮತ್ತು ಕೊಲ್ಹಾಪುರ ಜಿಲ್ಲೆ ಶುಹುವಾಡಿ ತಾಲ್ಲೂಕಿನಲ್ಲಿ ಎರಡು ಕಡೆ ಮಾನ್ ಎಂಬ ಪ್ರದೇಶವಿದೆ ಎನ್ನುತ್ತಾರೆ. ವಿ.ವಿ. ಮಿರಾಷಿಯವರು ಇದನ್ನು ಸರಾಸಗಟಾಗಿ

ನಿರಾಕರಿಸಿದ್ದಾರೆ. ದಂತಿದುರ್ಗ ಮನೋರ್ ತಾಮ್ರಪಟಗಳಲ್ಲಿ (IHQ. Vol. XXXV 1959 No.3, 759 A.D.) ರಲ್ಲಿ ಸಿಗುವ ಕೆಲವು ಮಾಹಿತಿಗಳನ್ನು ಆಧಾರವಾಗಿಟ್ಟುಕೊಂಡಲ್ಲಿ ಸ್ವಲ್ಪ ಸಹಾಯವಾಗುತ್ತದೆ. ದಂತಿದುರ್ಗನಿಗೆ ಖಡ್ಗಾವಲೋಕ ಎಂಬ ಬಿರುದಿತ್ತೆಂದು ಈ ಶಾಸನದಿಂದ ತಿಳಿದುಬರುತ್ತದೆ. ಶ್ರೀಪುರ ವಿಷಯದ ಅಧಿಕಾರಿಯಾಗಿದ್ದ ಅನಿರುದ್ಧ ಎಂಬ ವ್ಯಕ್ತಿಯನ್ನು ಉಲ್ಲೇಖಿಸುತ್ತದೆ. ಧರ್ಮಭಟ್ಟನ ಶಿಷ್ಯ ಬಾಡದಿ ಭೋಗಿಕನು ಬಾಡೇಶ್ವರ ದೇವಾಲಯವನ್ನು ಕಟ್ಟಿಸಿದನೆಂದು ಹೇಳುತ್ತದೆ. ಕೆಲವು ಜನರ ಗುಂಪು (ಹೆಸರುಗಳಿವೆ) ಈ ದೇವಾಲಯದ ಜೀರ್ಣೋದ್ಧಾರಕಾಗಿ ತಂಬಸಾಹಿಕ ಎಂಬ ಗ್ರಾಮವನ್ನು ದಾನ ಕೊಟ್ಟಿದ್ದನ್ನು ತಿಳಿಸುತ್ತದೆ. ಇದಕ್ಕೆ ಸಾಕ್ಷಿಗಳನ್ನು ಕೂಡ ಹೆಸರಿಸುತ್ತದೆ. ತಂಬಸಾಹಿಕವು ಶ್ರೀಪುರ ವಿಷಯದ ಭಾಗವೇ ಆಗಿದೆ. ವಿ.ವಿ.ಮಿರಾಷಿಯವರು ಮಾನೋರ್‌ನಿಂದ ಹದಿನಾಲ್ಕು ಮೈಲಿ ದೂರವಿರುವ ಶಿರಗಾಂವ್ ಅನ್ನು ಶ್ರೀಪುರವೆಂದೂ, ಮನೋರ್‌ನಿಂದ ಎರಡು ಮೈಲಿ ದೂರವಿರುವ ತಮ್‌ಸಾಯ್ ಪ್ರದೇಶವನ್ನು ತಂಬಸಾಹಿಕ ಎಂದೂ ಗುರುತಿಸಿದ್ದಾರೆ .

ಬಾದಾಮಿ ಚಲುಕ್ಯರ ಗುಜರಾತ್ ಶಾಖೆಯ ದೊರೆ ಜಯಾಶ್ರಯ ಮಂಗಳರಸನ ಶಾಸನವೊಂದು ಇದೇ ಪ್ರದೇಶದಲ್ಲಿ ಸಿಕ್ಕಿದೆ. ಇದನ್ನು ಶಕ ೬೧೩ (691 A.D.) ವೈಶಾಖ ಶುದ್ಧ ಪೌರ್ಣಮಿಯಂದು ಮಾನಪುರದಿಂದ ಹೊರಡಿಸಿದೆ. ಮಾನಪುರದಲ್ಲಿದ್ದ ಸೂರ್ಯ ದೇವಾಲಯವನ್ನು ಉಲ್ಲೇಖಿಸುತ್ತದೆ. ಇದನ್ನು ಜಯಾಶ್ರಯ ಮಂಗಳರಸ ಎಂಬುವವನು ಕಟ್ಟಿಸಿಲ್ಲ. ಆದರೆ ದೇವಾಲಯದ ಜೀರ್ಣೋದ್ಧಾರ ಮಾಡಿಸಿ ದಾನ ನೀಡಿರುತ್ತಾನೆ. ಹೀಗಾಗಿ ಸೂರ್ಯ ದೇವಾಲಯವು ಹಿಂದೆಯೇ ಇತ್ತು ಎಂಬ ವಿಚಾರವು ಇದರಿಂದ ತಿಳಿದು ಬರುತ್ತದೆ. ಶಾಸನವು

"ಕುರಟ ವಿಷಯಾಂತರ್ಗತ ಭಗವತೋ ದೀಧಿತಿಮಾಲಿನೋ ಮಾನಪುರ ಗ್ರಾಮ ಮಾನಪುರ ದೇವ ಭಟ್ಟಾರಕಾನಾಂ॥"

ಎಂಬ ವಿಚಾರವು ಬರುತ್ತದೆ. ಇದರಿಂದ ತಿಳಿಯುವ ಇನ್ನೊಂದು ವಿಚಾರವು ಏನೆಂದರೆ ಮಾನಾಂಕ ಕೂಡ ಮಾನಪುರವನ್ನು ಕಟ್ಟಿಸಿಲ್ಲ.

ಊಂಡಿಕಾವಾಟಿಕಾ ಎಂಬ ಶಾಸನದಲ್ಲಿ ಮಾನಪುರಕ್ಕೆ ಶೋಭೆಯಂತಿದ್ದನು ಎಂಬ ವಿಚಾರ ಮಾತ್ರ ಬರುತ್ತದೆ ಎನ್ನುವುದನ್ನು ಗಮನದಲ್ಲಿಟ್ಟುಕೊಳ್ಳಬೇಕು. "ಮಾನೋರ್ ಥಾಣೆಯ ಸಮೀಪದಲ್ಲಿ ಬರುವ ಮುಖ್ಯ ವ್ಯಾಪಾರ ಕೇಂದ್ರವಾಗಿತ್ತು. ಬಾದಾಮಿ ಚಲುಕ್ಯರ ಮಾನೋರ್ ಶಾಸನವು ಈ ಬಗ್ಗೆ ಹೇಳಿರುವುದನ್ನು ಗಮನಿಸಬಹುದು. ಮಾನೋರ್, ಮಾನಪುರವೇ ಆಗಿರಬಹುದು" ಎಂಬುದು ವಿದ್ವಾಂಸರ ಅಭಿಪ್ರಾಯ. (Studies in the Rashtrakuta Inscriptions, Brahmananda Deshpande, P445) ಮಾನಪುರದ ರಾಷ್ಟ್ರಕೂಟರ ಶಾಸನಗಳಲ್ಲಿ ಬರುವ ಊರುಗಳ ಆಧಾರವನ್ನು ಸ್ಪಷ್ಟಪಡಿಸುತ್ತ ಮಾನಪುರದ ರಾಷ್ಟ್ರಕೂಟರು ಪೂನಾ – ಥಾಣ ಸುತ್ತ ಮುತ್ತ ಇದ್ದರು. ಮಾನಪುರ ಇಂದಿನ ಮಾನೋರ್ ಎಂದು ಗುರುತಿಸಿದ್ದಾರೆ. (Ibid P 448)

**ಎಲಿಚಪುರ (ಅಚಲಪುರ)**

ಬೇರಾರಿನಲ್ಲಿ, ಅಮರಾವತಿಯ ಉತ್ತರ ಭಾಗದಲ್ಲಿ ಇರುವ ಎಲಿಚಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಷ್ಟ್ರಕೂಟರು ಆಳ್ವಿಕೆ ನಡೆಸಿದ್ದರು. ನಂತರ ಅದನ್ನು ತಮ್ಮ ಆಡಳಿತ ಪರಿಧಿಯ ಮಧ್ಯಭಾಗಕ್ಕೆ ಬದಲಾಯಿಸಿತೆಂದು ವಿದ್ವಾಂಸರು ಊಹಿಸುತ್ತಾರೆ. ದಂತಿದುರ್ಗನು ಈ ಭಾಗಗಳನ್ನೆಲ್ಲ ಆಕ್ರಮಿಸುವ ಹೊತ್ತಿಗೆ ಈ ಬದಲಾವಣೆ ಆಗಿತ್ತು ಎನ್ನುತ್ತಾರೆ. ಎಲಿಚಪುರದ ರಾಷ್ಟ್ರಕೂಟ ಅರಸರೇ ಮುಂದೆ ಮಳಖೇಡದ ರಾಷ್ಟ್ರಕೂಟರಾಗುತ್ತರೆ ಎಂದು ಕೆಲವು ವಿದ್ವಾಂಸರು ತಿಳಿಸುತ್ತಾರೆ. ಇವರಲ್ಲಿ ದಾಯಾದಿ ಕಲಹವೇನಾದರೂ ಇತ್ತೇ ಎನ್ನುವ ಪ್ರಶ್ನೆಗೆ ಉತ್ತರಿಸಲು ಆಧಾರಗಳು ಸಾಲವು.

ಅಚಲಾಪುರದ ಅಸ್ತಿತ್ವ ಕ್ರಿ. ಶ. ೧೨ ನೆಯ ಶತಮಾನದ ವರೆಗೂ ಇತ್ತು ಎಂದು ತಿಳಿದುಬರುತ್ತದೆ. ಇಲ್ಲೊಬ್ಬ ಜೈನ ವಿದ್ವಾಂಸ ತನ್ನ ಕೃತಿಯಾದ "ಧರ್ಮ ಪರಿಕ್ಖ" (ಧರ್ಮಪರೀಕ್ಷೆ) ವನ್ನು ಬರೆದನೆಂದು ತಿಳಿದು ಬರುತ್ತದೆ. ಕ್ರಿ. ಶ. ೯ ನೆಯ ಶತಮಾನದಲ್ಲಿ ಆಚಾರ್ಯ ಜಯಸಿಂಹ ಸೂರಿಯು ತನ್ನ ಗ್ರಂಥವಾದ "ಧರ್ಮೋಪದೇಶಮಾಲ" ದಲ್ಲಿ ಎಲಿಚಪುರವನ್ನು ಉಲ್ಲೇಖಿಸುತ್ತಾನೆ.

ಮಳಖೇಡದ ರಾಷ್ಟ್ರಕೂಟರನ್ನು ಗುರುತಿಸುವಂತೆ ಅಚಲಾಪುರದ ರಾಷ್ಟ್ರಕೂಟರನ್ನು ಕೂಡ ರಾಜಧಾನಿಯ ಹೆಸರಿನಿಂದಲೇ ಗುರುತಿಸುತ್ತಾರೆ. ಅಚಲಾಪುರದ ರಾಷ್ಟ್ರಕೂಟರು ಅಚಲಾಪುರವನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರೆ? ಏಕೆಂದರೆ ಇವರನ್ನು ವಿದರ್ಭದ ರಾಷ್ಟ್ರಕೂಟರು, ಎಲಿಚಪುರ ರಾಷ್ಟ್ರಕೂಟರು ಎಂದು ಬೇರೆ ಬೇರೆ ಹೆಸರಿನಿಂದ ಗುರುತಿಸುತ್ತಾರೆ.

ಎಲ್ಲೋರ

ದಂತಿದುರ್ಗನು ಎಲ್ಲೋರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದ ಎಂದು ಕೆಲವು ವಿದ್ವಾಂಸರು ಊಹಿಸುತ್ತಾರೆ. ಈ ಊಹೆಗೆ ಸರಿಯಾದ ಆಧಾರಗಳು ಇಲ್ಲ. ಕ್ರಿ. ಶ. ೭೬೦ ರಲ್ಲಿ ಎಲ್ಲೋರದಲ್ಲಿ ಕೈಲಾಸನಾಥ ಗುಹೆಯನ್ನು ಕೊರೆಸಲು ಪ್ರಾರಂಭಿಸಲಾಯಿತು. ಕ್ರಿ. ಶ. ೭೪೫ ರಲ್ಲಿ ಇಮ್ಮಡಿ ಕೀರ್ತಿವರ್ಮನು ಚಾಲುಕ್ಯ ಯುವರಾಜನಾಗಿದ್ದ ಎಂಬ ವಿಷಯ ತಿಳಿದು ಬರುತ್ತದೆ. ಎಲ್ಲೋರದ ದಶಾವತಾರ ಗುಹೆಯಲ್ಲಿರುವ ಶಾಸನ ಕ್ರಿ. ಶ. ೭೪೧ ರಲ್ಲಿ ಹಾಕಿಸಿದೆ. ಮಾನೋರ್ ತಾಮ್ರ ಶಾಸನವನ್ನು ಕ್ರಿ.ಶ. ೭೪೯ ರಲ್ಲಿ ಹಾಕಿಸಿದ್ದಾರೆ. ದಂತಿದುರ್ಗನ ಸಾಮನಗಡ ಶಾಸನವು ಕ್ರಿ. ಶ. ೭೫೩ ರಲ್ಲಿ ಹಾಕಿಸಲಾಗಿದೆ. ನವಾಬ್ ಪೇಟ ಶಾಸನವು ತೆಲುಗಿನಲ್ಲಿದೆ. ಇದರಲ್ಲಿ ಕಾಲವನ್ನು ನೀಡಿಲ್ಲ.

ಮೇಲೆ ಕೊಟ್ಟಿರುವ ಶಾಸನಗಳ ಕಾಲವನ್ನು ಗಮನಿಸಿದಾಗ ಕ್ರಿ. ಶ. ೭೪೧ ಕ್ಕೆ ಮೊದಲೇ ರಾಷ್ಟ್ರಕೂಟರು ಎಲ್ಲೋರದಲ್ಲಿ ಆಳುತ್ತಿದ್ದರು ಎನ್ನಬಹುದು. ಕೆಲವು ವಿದ್ವಾಂಸರು ಸೂಲುಭಂಜನ್ ರಾಷ್ಟ್ರಕೂಟರ ರಾಜಧಾನಿಯಾಗಿತ್ತು ಎನ್ನುತ್ತಾರೆ. ಇದು ಎಲ್ಲೋರದಿಂದ ಎರಡು ಮೂರು ಕಿಲೋಮೀಟರ್ ದೂರದಲ್ಲಿದೆ. ಸೂಲುಭಂಜನ್ ಇಂದು ಜನ ಬಾಹುಳ್ಯವಿಲ್ಲದ ಪ್ರದೇಶವಾಗಿದೆ. ನೀರಿನ ಅನುಕೂಲತೆ ಚೆನ್ನಾಗಿದೆ. ಸಾತ್ ಪರ್ಯೋಂಕಾ ತಾಲಾಬ್ ಎನ್ನುವ ಕೊಳವಿದೆ. ಪಕ್ಕದಲ್ಲಿಯೇ ಒಂದು ಮಂದಿರವಿದೆ. ಅದೀಗ ಪಾರ್ಸಿಗಳ ದೇವಾಲಯವಾಗಿದೆ. ದೇವಾಲಯದ ಪ್ರಾಂಗಣವು ವಿಶಾಲವಾಗಿದೆ. ಆವರಣದಲ್ಲಿ ಶಿವಲಿಂಗದ ಪಾಣಿ ಪೀಠವೊಂದು ಬಿದ್ದಿದೆ. ಆವರಣದಲ್ಲಿ ಕೆಲವು ಕಲ್ಲಿನ ಮಂಟಪಗಳ ಅವಶೇಷಗಳನ್ನು ಕಾಣಬಹುದು. ಈ

ಪ್ರದೇಶದಲ್ಲಿ ರಾಜಧಾನಿಯಿದ್ದಿರಬಹುದೆನ್ನುವ ವಿದ್ವಾಂಸರು ಹೆಚ್ಚು ವಿವರಣೆಯನ್ನು ನೀಡದಿರುವುದು ವಿಪರ್ಯಾಸವೆನಿಸುತ್ತದೆ.

ಎಲ್ಲೋರದಿಂದ ಒಂದು ಕಿಲೋಮೀಟರ್ ದೂರದಲ್ಲಿ ಘೃಷ್ಣೇಶ್ವರ ಎಂಬ ಸ್ಥಳವಿದೆ. ಇದು ದ್ವಾದಶಲಿಂಗಗಳಲ್ಲಿ ಒಂದು ಎಂದು ಪ್ರಸಿದ್ಧವಾಗಿದೆ. ಬಹುಶಃ ಇದು ಕೃಷ್ಣೇಶ್ವರವಾಗಿದ್ದು, ಈಗ ಘೃಷ್ಣೇಶ್ವರ ಎಂದು ಬದಲಾಗಿರಬಹುದು. ಈ ಘೃಷ್ಣೇಶ್ವರದ ಉಲ್ಲೇಖ ಯಾವ ಶಾಸನದಲ್ಲೂ ಬಂದಿಲ್ಲದಿರುವುದೂ ಒಂದು ವಿಷೇಶವಾಗಿದೆ. ಈ ದೇವಾಲಯದಲ್ಲಿ ರಾಷ್ಟ್ರಕೂಟರಿಗೆ ಸಂಬಂಧಪಟ್ಟ ಯಾವುದೇ ಶಾಸನಗಳೂ ಇಲ್ಲ. ಸುಮಾರು ೧೫-೧೬ ನೆಯ ಶತಮಾನದ ಶಾಸನಗಳಿವೆ. ಈ ದೇವಸ್ಥಾನವನ್ನು ಯಾರು ಕಟ್ಟಿಸಿದರೋ ತಿಳಿದಿಲ್ಲ. ಹೋಳ್ಕರರು ಈ ದೇವಾಲಯದ ಜೀರ್ಣೋದ್ಧಾರ ಮಾಡಿಸಿದ್ದಾರೆ ಎಂಬುದು ತಿಳಿದು ಬರುತ್ತದೆ. ಈ ಪ್ರದೇಶದ ಸುತ್ತ ಮುತ್ತ ಹೆಚ್ಚು ಕ್ಷೇತ್ರ ಕಾರ್ಯಗಳು ಸಮರ್ಪಕವಾಗಿ ನಡೆದಿಲ್ಲ.

ಇನ್ನು ಎಲ್ಲೋರದಲ್ಲಿಯೇ ಅಂದರೆ ಬೆಟ್ಟದ ಮಗ್ಗುಲಿನಲ್ಲಿಯೇ ರಾಷ್ಟ್ರಕೂಟರ ರಾಜಧಾನಿಯಿದ್ದಿರಬಹುದೇ ಎನ್ನುವ ಊಹೆಗೆ ಸಾಕಷ್ಟು ಆಧಾರಗಳಿಲ್ಲ. ಎಲ್ಲೋರದ ಬಳಿಯಲ್ಲಿಯೇ ನದಿಯೊಂದು ಹರಿಯುತ್ತದೆ. ಎಲ್ಲೋರದಲ್ಲಿ ಅನೇಕ ಗುಹೆಗಳು ಬೌದ್ಧ ಗುಹೆಗಳಾಗಿವೆ. ಬೌದ್ಧ ಸಂಪ್ರದಾಯದ ಪ್ರಕಾರ, ಬೌದ್ಧ ಭಿಕ್ಷುವು, ತನ್ನ ಆವಾಸ ಸ್ಥಾನಕ್ಕಾಗಿ ಆರಿಸಿಕೊಳ್ಳಬೇಕಾದ ಸ್ಥಳದ ಬಗ್ಗೆ ಕೆಲವು ನಿಯಮಗಳಿವೆ. ಅದರಲ್ಲಿ ಮುಖ್ಯವಾದುದು "ನಾತಿ ದೂರೇ ನಾತಿ ಸಮೀಪೇ" ಎಂಬುದಾಗಿದೆ. ಊರಿಂದ ಬಹಳ ದೂರವೂ ಇರಬಾರದು, ಬಹಳ ಹತ್ತಿರವೂ ಇರಬಾರದು. ಆದರೆ ಇಂಥಹ ಸ್ಥಳದಲ್ಲಿ ನೀರಿನ ಅನುಕೂಲವಿರಬೇಕು. ಈ ಹಿನ್ನಲೆಯಲ್ಲಿ ಸೂಲುಭಂಜನ್ ಮತ್ತು ಘೃಷ್ಣೇಶ್ವರಗಳನ್ನು ಗಮನಿಸಿದರೆ ಎಲ್ಲೋರ ರಾಜಧಾನಿಯಾಗಿತ್ತು ಎನ್ನುವ ಬದಲು ಎಲ್ಲೋರದ ಬಳಿ ರಾಜಧಾನಿಯಿತ್ತು ಎನ್ನಬಹುದು. ಕ್ರಿ. ಶ. ೭೫೧ ಕ್ಕೆ ಮುಂಚಿನಿಂದಲೇ ಎಲ್ಲೋರದ ಬಳಿಯಿಂದ ರಾಜ್ಯವಾಳುತ್ತಿದ್ದರು ಎನ್ನುವುದಾದರೆ, ಬೌದ್ಧಗುಹೆಗಳನ್ನು ಕೂಡ ರಾಷ್ಟ್ರಕೂಟರ ಕಾಲದಿಂದಲೇ ಕೊರೆಯಲಾರಂಭಿಸಿದರು ಎನ್ನಬಹುದು. ಈ ಸಂದರ್ಭದಲ್ಲಿ ಇನ್ನೊಂದು ಪ್ರಶ್ನೆ ಎದುರಾಗುತ್ತದೆ. ಔರಂಗಾಬಾದ್ (ಮೂಲಕ, ವಿದರ್ಭ) ಪ್ರದೇಶದಲ್ಲಿ ಆಳುತ್ತಿದ್ದ ರಾಷ್ಟ್ರಕೂಟರು ಈ ಕಾಲದಲ್ಲಿ ಇದ್ದರೆ? ಇಲ್ಲಿ ಅವರ ಪಾತ್ರವೇನು?

ವಂಶಾವಳಿಯನ್ನಿಟ್ಟುಕೊಂಡು ಚರ್ಚಿಸುವುದಾದರೆ ದಂತಿದುರ್ಗನಿಂದ ನಾಲ್ಕೈದು ತಲೆಮಾರುಗಳ ಹಿಂದೆಯೇ ಒಬ್ಬ ದಂತಿವರ್ಮ ಬರುತ್ತಾನೆ. ಇತಿಹಾಸಕಾರರು ಈತನನ್ನು ವಿಶೇಷವಾಗಿ ಭಾವಿಸುವುದಿಲ್ಲ. ಏಕೆಂದರೆ ದಂತಿದುರ್ಗನಿಂದ ಮಳಖೇಡದ ರಾಷ್ಟ್ರಕೂಟ ವಂಶ ಸ್ಥಾಪನೆಯಾಯಿತು. ಇದರ ಜೊತೆಗೇ ಮೊದಲನೆಯ ಕೃಷ್ಣನು ಎಲ್ಲೋರದಲ್ಲಿ ಕೈಲಾಸನಾಥ ಗುಹೆಯನ್ನು ಕೊರೆಸಲು ಪ್ರಾರಂಭಿಸಿದ ಎನ್ನುತ್ತಾರೆ. ದಂತಿದುರ್ಗನಿಗಿಂತ ಹಿಂದೆ ಕೂಡ ಅರಸರಿದ್ದರು. ಇವರು ಯಾವ ಪ್ರದೇಶದಲ್ಲಿ ಆಳುತ್ತಿದ್ದರು ಎಂಬುದು ತಿಳಿದಿಲ್ಲ. ದಂತಿದುರ್ಗನಿಗಿಂತ ಹಿಂದೆ ಕರ್ಕ–I ಗೋವಿಂದರಾಜ– I, ಇಂದ್ರ, ದಂತಿವರ್ಮನ್ ಎನ್ನುವ ನಾಲ್ಕು ದೊರೆಗಳಿದ್ದಾರೆ. ಇಂದ್ರ ಖೇಟಕಮಂಡಲದಿಂದ ರಾಜಕುಮಾರಿ ಭವಗಣಾಳನ್ನು ಅಪಹರಿಸಿಕೊಂಡು ಬಂದ ಎನ್ನುವುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಈ ಸಮಯದಲ್ಲಿ ರಾಷ್ಟ್ರಕೂಟರು ಎಲ್ಲಿದ್ದರು? ಅಪಹರಿಸಿಕೊಂಡು ಬರಬೇಕಾದ ಅಗತ್ಯವೇನಿತ್ತು? ಕೈರಾ ಪ್ರದೇಶವಿರುವುದು ಗುಜರಾತ್ ಪ್ರಾಂತದಲ್ಲಿ. ಎಲ್ಲೋರ ಮತ್ತು ಗುಜರಾತ್ ತೀರ ಹತ್ತಿರದ ಪ್ರದೇಶಗಳೇನೂ ಅಲ್ಲ. ಗುಜರಾತಿನ ರಾಷ್ಟ್ರಕೂಟರ ಅಸ್ತಿತ್ವ ಆ ಕಾಲಕ್ಕೆ ಇರಲೇ ಇಲ್ಲ. ಇನ್ನು ಬಾದಾಮಿ ಚಾಲುಕ್ಯರ ರಾಜಧಾನಿ ಯಾವುದಿತ್ತು? ಬಾದಾಮಿಯ ಅರಸನಿಗೂ ಈ ಸ್ವಯಂವರಕ್ಕೂ ಹೇಗೆ ಸಂಬಂಧವೆಂದು ತಿಳಿಯುವುದೂ ಮುಖ್ಯವಾಗುತ್ತದೆ. ರಾಷ್ಟ್ರಕೂಟರು ಮಾಂಡಲಿಕರಾಗಿದ್ದರೂ ಕೂಡ ಸಾಕಷ್ಟು ಬಲಿಷ್ಠರಾಗಿದ್ದರು. ಸ್ವಯಂವರಕ್ಕೆ ರಾಷ್ಟ್ರಕೂಟ ದೊರೆಗೆ ಆಮಂತ್ರಣವಿಲ್ಲದೇ ಹೋದುದರಿಂದ ಇಂದ್ರನು ರಾಜಕುಮಾರಿಯನ್ನು ಅಪಹರಿಸಿಕೊಂಡು ಬಂದನೆಂದು ಊಹಿಸಬಹುದಾಗಿದೆ.

ಎಲ್ಲೋರದ ಆರಂಭಿಕ ಗುಹೆಗಳ ಕಾಲವನ್ನು ವಿದ್ವಾಂಸರು ಸುಮಾರು ೫–೬ನೆಯ ಶತಮಾನವೆಂದು ಗುರುತಿಸುತ್ತಾರೆ. ಅಚಲಾಪುರದ ರಾಷ್ಟ್ರಕೂಟರೇ ಮುಂದುವರಿದು ಮಳಖೇಡದ ರಾಷ್ಟ್ರಕೂಟರಾಗಿರಬಹುದೇ? ಈ ವಾದವನ್ನು ಸಿದ್ಧಪಡಿಸಲು ಸಾಕಷ್ಟು ಆಧಾರಗಳಿಲ್ಲ. ಅಲ್ಟೇಕರರು ಹಾಗೆ ಹೇಳಿದರೂ ಅಚಲಾಪುರ ವಂಶದ ನಾಲ್ಕು ಅರಸರಲ್ಲಿ ಎರಡನೆಯವನು ಗೋವಿಂದರಾಜನೇ ಆಗಿದ್ದಾನೆ. ಉಳಿದ ಮೂವರು ಅರಸರ ಹೆಸರು ಬೇರೆ ಬೇರೆಯೇ ಇದೆ. ದಂತಿದುರ್ಗನಿಗಿಂತ ಹಿಂದಿನ ದೊರೆಯಾದ ಒಂದನೆಯ ಕರ್ಕನ ಭಿಂದೋನ್ ಶಾಸನವು (JESI Vol X P 30, ff)

ಚಿಂಚಪಲ್ಲಿ (ಈಗಿನ ಚಿಂಚೋಳಿ) ಗ್ರಾಮವನ್ನು ಭಾನುಭಟ್ಟ ಎಂಬ ಬ್ರಾಹ್ಮಣನಿಗೆ ದಾನ ಮಾಡಿದ್ದನ್ನು ತಿಳಿಸುತ್ತದೆ. ಕರ್ಕರಾಜನು ಪಿಂಗಲಿಕಾ ತಟಾಕದ ಬಳಿಯಿದ್ದಾಗ ಈ ಶಾಸನವನ್ನು ಹೊರಡಿಸಲಾಗಿದೆ. ಈ ಪ್ರದೇಶವು ಪರ್ಬಾನಿ-ನಾಂದೇಡ್ ರೈಲ್ವೆ ನಿಲ್ದಾಣಗಳನ್ನು ಸಂಪರ್ಕಿಸುತ್ತದೆ. ಈಗ ಇದೊಂದು ತಾಲ್ಲೂಕು ಪ್ರದೇಶವಾಗಿದೆ. ಆ ಸಮಯದಲ್ಲಿ ಕರ್ಕರಾಜನು ಔರಂಗಾಬಾದ್ ಪರ್ಬಾನಿಗಳ (ಪರಭಣಿ) ಪ್ರದೇಶವನ್ನು ಆಳುತ್ತಿದ್ದ ಎನ್ನಲಾಗಿದೆ. ಈ ಭಾಗ ಅಂದಿನ ಮರಾಠವಾಡ ಪ್ರಾಂತ್ಯಕ್ಕೆ ಸೇರುತ್ತಿತ್ತು. ಈ ಶಾಸನದ ಕಾಲವನ್ನು ಕ್ರಿ. ಶ. ೭ ನೆಯ ಶತಮಾನದ ಕೊನೆ ಅಥವಾ ಕ್ರಿ. ಶ. ೮ ನೆಯ ಶತಮಾನದ ಆರಂಭ ಎಂದು ಸೂಚಿಸಲಾಗಿದೆ. ೩೫ ರಿಂದ ೪೦ ವರ್ಷಗಳು ವ್ಯತ್ಯಾಸ ಕಂಡು ಬರುತ್ತದೆ. ಅಂದರೆ ಕರ್ಕರಾಜನ ಕಾಲದಿಂದಲೇ ಎಲ್ಲೋರದ ಹತ್ತಿರದ ಪ್ರದೇಶದಲ್ಲಿ ಆಳುತ್ತಿದ್ದರು ಎಂದು ಹೇಳಬಹುದಾಗಿದೆ.

ಎಲ್ಲೋರವೇ ರಾಜಧಾನಿಯಾಗಿತ್ತು ಎನ್ನುವುದನ್ನು ಗುರುತಿಸಲು ಬೇರೆ ಆಧಾರಗಳ ಕಡೆ ಗಮನಹರಿಸಬಹುದು. ಎಲ್ಲೋರದ ಗುಹೆಗಳ ಹಿಂಬದಿಯಲ್ಲಿ, ಅಂದರೆ ಬೆಟ್ಟದ ಇನ್ನೊಂದು ಭಾಗದಲ್ಲಿ ಜನವಸತಿಯಿದ್ದ ಗುರುತುಗಳಿವೆ ಎಂದು ಕೆಲವು ವಿದ್ವಾಂಸರು ಹೇಳುತ್ತಾರೆ.

**ಮಯೂರ ಖಂಡಿ**

ಒಂದನೆಯ ಅಮೋಘವರ್ಷನ ಕಾಲದಲ್ಲಿ ರಾಜಧಾನಿಯನ್ನು ಮಳಖೇಡಕ್ಕೆ ಬದಲಾಯಿಸಲಾಯಿತು ಎಂದು ವಿದ್ವಾಂಸರು ಹೇಳುತ್ತಾರೆ. ಇನ್ನೊಂದು ಜಿಜ್ಞಾಸೆಯೇನೆಂದರೆ ರಾಷ್ಟ್ರಕೂಟರು ಮಳಖೇಡಕ್ಕೆ ಬರುವ ಮೊದಲು ಐವತ್ತು ವರ್ಷ ಎಲ್ಲಿದ್ದರು ಎನ್ನುವ ವಿಚಾರದ ಬಗ್ಗೆ ವಿದ್ವಾಂಸರುಗಳು ದೀರ್ಘ ಚರ್ಚೆಯನ್ನು ಮಾಡಿದ್ದಾರೆ.

ಮೂರನೆಯ ಗೋವಿಂದನ ಸಿಸವಾಯಿ ತಾಮ್ರ ಶಾಸನವು (EI Vol XXXIII P 204) ಮಯೂರಖಂಡಿಯಿಂದ ಹೊರಟಿದೆ. ಧಾರಾಶಿವ ಗ್ರಾಮದಲ್ಲಿ ವಾಸವಾಗಿದ್ದ ಅನ್ನಸಾವಿ ಭಟ್ಟನ ಮಗ ರಿಶಿಯಪ್ಪ ಭಟ್ಟ ಎಂಬ ಬ್ರಾಹ್ಮಣನಿಗೆ ದಾನ ನೀಡಿದ್ದನ್ನು ಈ ಶಾಸನವು ಉಲ್ಲೇಖಿಸುತ್ತದೆ. ಮಾಣಕ ವಿಷಯದಲ್ಲಿದ್ದ ಸಿಸವಾಯಿ ಗ್ರಾಮವನ್ನು ಕ್ರಿ. ಶ. ೮೦೭ ರಲ್ಲಿ ದಾನ ಮಾಡಿದನು. ಕ್ರಿ. ಶ. ೭೦೮ ರ ವಾಣಿ ದಿಂಡೋರಿ ಶಾಸನವು

(IA Vol XI P 156) ಕೂಡ ಮಯೂರ ಖಂಡಿಯಿಂದ ಹೊರಟಿದೆ. ನಾಶಿಕ ದೇಶದ ವಟನಗರ ವಿಷಯದಲ್ಲಿದ್ದ ರಿಂಬಿಕ (ಅಂಬಕ) ಗ್ರಾಮವನ್ನು ಭಟ್ಟನಿಗೆ ದಾನಮಾಡಿದನು ಎಂದು ತಿಳಿಸುತ್ತದೆ.

ಮೇಲಿನ ಶಾಸನಗಳಿಂದ ಮಯೂರಖಂಡಿಯೇ ರಾಷ್ಟ್ರಕೂಟರ ಆರಂಭದ ರಾಜಧಾನಿಯಾಗಿತ್ತೆಂದು ಎಂದು ಊಹೆ ಮಾಡಲು ಸಾಧ್ಯವಿದೆ. ಆದರೆ ಕ್ರಿ. ಶ. ೮೦೮ ರ ರಾಧನಪುರ ಶಾಸನವು (EI Vol VI pp 239) ಹೇಳುವ ರೀತಿಯೇ ಬೇರೆ. ಗೋವಿಂದನು ಮಯೂರಖಂಡಿಯಲ್ಲಿ ಬೀಡುಬಿಟ್ಟಿದ್ದಾಗ ಮಳಖೇಡದ ಸುತ್ತಲೂ ಗೋಡೆ ಕಟ್ಟಲು ಪ್ರಾರಂಭಿಸಿದ್ದು, ಕೋಟೆಯ ಗೋಡೆಯನ್ನು ಮುಗಿಸಬೇಕೆಂದು ವೆಂಗಿಯ ದೊರೆಗೆ ಅಪ್ಪಣೆ ಮಾಡಿದನು ಎಂದು ರಾಧನಪುರ ಶಾಸನವು ತಿಳಿಸುತ್ತದೆ. ಈ ವಿಚಾರದಲ್ಲಿ ರಾ. ಹ. ದೇಶಪಾಂಡೆ ಯವರು ಊಹಿಸುವುದೇನೆಂದರೆ ಸಾಮಂತರಾಗಿದ್ದ ವೆಂಗಿಯ ಚಾಲಿಕ್ಯರು ತಮ್ಮ ಕಪ್ಪ ಕಾಣಿಕೆಯನ್ನು ಸಕಾಲಕ್ಕೆ ಸಲ್ಲಿಸದೇ ಹೋಗಿದ್ದರಿಂದ ಹೀಗೆ ಮಾಡಿದನು ಎನ್ನುತ್ತಾರೆ. ಹಾಗೆ ಊಹಿಸುವುದಕ್ಕಿಂತ ಅವನಿಗೆ ಶಿಕ್ಷೆಯ ರೀತಿಯಲ್ಲಿ ಈ ಕೆಲಸವನ್ನು ವಹಿಸಿರಬಹುದು ಎನಿಸುತ್ತದೆ. ಆದರೆ ತನ್ನ ವಿರುದ್ಧ ಕತ್ತಿ ಮಸೆಯುತ್ತಿರಬಹುದಾದ ವ್ಯಕ್ತಿಗೆ ಇಂತಹ ಕೆಲಸವನ್ನು ವಹಿಸಲು ಸಾಧ್ಯವೇ? ಬಲಿಷ್ಠವಾಗಿರಬೇಕಾದ ಕೋಟೆಯ ನಿರ್ಮಾಣಕ್ಕೆ ಶತ್ರುವಿನ ಮೇಲುಸ್ತುವಾರಿಯಿದ್ದರೆ ಹೇಗೆ? ಏಕೆಂದರೆ ಮುಂದೆ ಗೋವಿಂದನು ವೆಂಗಿಯ ಚಾಲುಕ್ಯರ ಮೇಲೆ ಯುದ್ಧ ಮಾಡುತ್ತಾನೆ. ಈ ವಿಚಾರಗಳಿಂದ ತಿಳಿದು ಬರುವುದೇನೆಂದರೆ, ಅಮೋಘವರ್ಷನಿಗಿಂತ ಮೊದಲೇ ಮಾನ್ಯಖೇಟವು ರಾಜಧಾನಿಯಾಗಿತ್ತು ಅಥವಾ ರಾಜಧಾನಿಯ ನಿರ್ಮಾಣ ಕಾರ್ಯ ಭರದಿಂದ ನಡೆಯುತ್ತಿತ್ತು ಎನ್ನಬಹುದು. ಮೂರನೆಯ ಗೋವಿಂದನ ಕಾಲದಿಂದಲೇ ಇದು ರಾಜಧಾನಿಯಾಗಿತ್ತು ಎಂದು ಹೇಳಿದರೆ ಸೂಕ್ತವೆನಿಸುತ್ತದೆ.

ಅಂಜನಾವತಿ(EI. Vol. XXIII, p8, 800AD), ಬಹುಲಾವರ(SMHD, p89, No. 11, 809AD) ಶಾಸನಗಳು ಸಿರ್ಸೋ (ಲೋಹಾರ) (EI, Vol. XXIII, p212, 812AD), ಕಡಬ(EI, Vol. IV, p332, 813AD) ಶಾಸನಗಳು ಕೂಡ ಮಯೂರಖಂಡಿಯಿಂದ ಹೊರಟಿವೆ. ಇವುಗಳ ಕಾಲ ಕ್ರಿ. ಶ. ೮೦೦ ರಿಂದ ೮೧೩ ರವರೆಗೆ

ಇದೆ. ಪೈಠಣ ಶಾಸನವು(EI, Vol. III, p103, 794AD) ಗೋವಿಂದನು ಪ್ರತಿಷ್ಠಾನಪುರದಲ್ಲಿ (ಸಮೀಪದಲ್ಲಿ) ಬೀಡು ಬಿಟ್ಟಿದ್ದನು ಎಂದು ತಿಳಿಸುತ್ತದೆ. ಆಲೂರು ಶಾಸನವು (MAR, 1924, p74, No. 80. 799AD) "ತಸ್ಮೈ ಶ್ರೀಭೂತ (ಪ್ರಭೂತ) ಲ್ವಿಧಿವಿಹಿತಾಧರಾಯ (ವಿಹಿತದ್ವರಾಯ) ತೈತ್ತ್ಯಯ (ತೈತ್ತಿರೀಯ) ಚರಣಾಯ ಪ್ರವಚನ ಕಲ್ಪಾಯ ಮಾನ್ಯಾಪುರಮಧಿವಸತೆ (ಅಧಿವಸತ) ವಿಜಯಸ್ಕಂಧಾವರೇ ಶ್ರೀಮತುದ್ (ಯು) ಯುವರಾಜ ......" ಎಂದು ಮಾನ್ಯಪುರದಲ್ಲಿ ವಾಸವಾಗಿದ್ದನೆಂದು ತಿಳಿದುಬರುತ್ತದೆ. ಝೂರಿಕಾ ಶಾಸನವು (EI Vol XXXIII P 157) ಗೋವಿಂದನು ಆಲಂಪುರದ ಹತ್ತಿರ ತುಂಗಭದ್ರಾ ತೀರದಲ್ಲಿ ವಿಜಯ ಸ್ಕಾಂಧಾವಾರದಲ್ಲಿದ್ದನೆಂದು ತಿಳಿಸುತ್ತದೆ. ರಾಮೇಶ್ವರ ಶಾಸನವು (IA Vol XI PP 126) ತುಂಗಭದ್ರಾ ತೀರದಲ್ಲಿ ಬೀಡುಬಿಟ್ಟಿದ್ದನ್ನು ದಾಖಲಿಸುತ್ತದೆ. ಇಲ್ಲಿ ಉಲ್ಲೇಖಗೊಂಡಿರುವ ಮಾನ್ಯಪುರವು ಗಂಗರ ನೆಲೆಬೀಡಾಗಿದ್ದ ಮಣ್ಣೆಯೇ ಆಗಿರುತ್ತದೆ ಎಂದಿದ್ದಾರೆ ವಿದ್ವಾಂಸರು.

ಕ್ರಿ. ಶ. ೮೦೦ ರಿಂದ ೮೧೩ ರ ವರಗೆ ಸುಮಾರು ಹದಿಮೂರು ವರ್ಷಗಳಷ್ಟು ದೀರ್ಘಕಾಲ ಮಯೂರಖಂಡಿಯಿಂದ ಶಾಸನಗಳು ಹೊರಟಿವೆ. ಇಷ್ಟು ದೀರ್ಘಾವಧಿ ರಾಜಧಾನಿಯಿಂದ ಹೊರಗಿರಲು ಸಾಧ್ಯವೆ? ರಾಜಧಾನಿಯನ್ನು ಬಿಟ್ಟು ನೆಲಬೀಡಿನಲ್ಲಿ ಹದಿಮೂರು ವರ್ಷಗಳ ಕಾಲ ಬೀಡುಬಿಟ್ಟ ಕಾರಣವೇನು?

ಮಯೂರಖಂಡಿಯಿಂದ ಹೊರಟಿರುವ ಶಾಸನಗಳೆಲ್ಲ ದಾನಶಾಸನಗಳಾಗಿವೆ. ಇದೇ ಅವಧಿಯ ಮಧ್ಯೆ ತುಂಗಭದ್ರ ತಟದಲ್ಲಿ ಮತ್ತು ಪ್ರತಿಷ್ಠಾನಪುರದಲ್ಲಿ ಬೀಡುಬಿಟ್ಟಿದ್ದ ಉಲ್ಲೇಖಗಳು ಸಿಗುತ್ತವೆ. ಮೂರನೆಯ ಗೋವಿಂದನು ತನ್ನ ಇಪ್ಪತ್ತೊಂದು ವರ್ಷಗಳ ಆಳ್ವಿಕೆಯಲ್ಲಿ ಹದಿಮೂರು ವರ್ಷ ಮಯೂರಖಂಡಿಯಲ್ಲೇ ಇದ್ದನು. ಒಂದು ವರ್ಷ ಶ್ರೀಭವನದಲ್ಲಿ ಬೀಡುಬಿಟ್ಟಿದ್ದನು. ಇನ್ನು ಉಳಿದ ಕೇವಲ ಏಳು ವರ್ಷಗಳನ್ನು ಮಾತ್ರ ಎಲ್ಲಿಯೋ ಇದ್ದ ರಾಜಧಾನಿಯಲ್ಲಿದ್ದನು ಎಂದು ಹೇಳಲು ಸಾಧ್ಯವೇ? ಪ್ರತಿಷ್ಠಾನ ಮತ್ತು ತುಂಗಭದ್ರಾ ತಟದಲ್ಲಿ ಎಷ್ಟು ಕಾಲವಿದ್ದನೋ ತಿಳಿಯದು.

ಮೇಲಿನ ಆಧಾರಗಳನ್ನು ಗಮನದಲ್ಲಿರಿಸಿಕೊಂಡು ನೋಡಿದರೆ ಮಯೂರಖಂಡಿಯೇ ಈತನ ರಾಜಧಾನಿಯಾಗಿತ್ತು ಎಂದರೆ ಸೂಕ್ತವೆನಿಸುತ್ತದೆ. ತನ್ನ ಕಾಲದಲ್ಲಿ ನಗರ (ಮಳಖೇಡ) ನಿರ್ಮಾಣ ಕಾರ್ಯ ಪ್ರಾರಂಭಿಸಿರುವುದು ತಿಳಿಯುವುದರಿಂದ ಈ ಮಾತಿಗೆ ಇನ್ನಷ್ಟು ಪುಷ್ಠಿ ದೊರೆಯುತ್ತದೆ. ರಾಜಧಾನಿಯಾಗಲು ಸಿದ್ಧವಾಗುತ್ತಿದ್ದ ಮಳಖೇಡವು ಅಮೋಘವರ್ಷ ನೃಪತುಂಗನ ಕಾಲಕ್ಕೆ ಪೂರ್ಣವಾಗಿತ್ತು. ನಂತರ ಅಮೋಘವರ್ಷನು ಮಳಖೇಡದಿಂದ ರಾಜ್ಯಭಾರ ಮಾಡಿದನು ಎಂದು ಹೇಳಬಹುದು.

**ಮಳಖೇಡ**

ಗುಲ್ಬರ್ಗಾ- ಸೇಡಂ ಹೆದ್ದಾರಿಯಲ್ಲಿ ಕಾಗಿನಾ ನದಿಯ ದಂಡೆಯ ಮೇಲೆ ಮಳಖೇಡವಿದೆ. ಮಾನ್ಯಖೇಟ ಎಂಬುದು ಇದರ ಇನ್ನೊಂದು ಹೆಸರಾಗಿದೆ. ರಾಷ್ಟ್ರಕೂಟರ ರಾಜಾಧಾನಿಯಾಗಿ ಮೆರೆದ ಈ ನಗರ ಒಂದನೆಯ ಅಮೋಘವರ್ಷನ ಕಾಲದಿಂದ ರಾಷ್ಟ್ರಕೂಟರ ಅವನತಿಯವರೆಗೆ ರಾಜಧಾನಿಯಾಗಿತ್ತು. ಈಗ ಟೀಕಾಚಾರ್ಯರ ವೃಂದಾವನದಿಂದಾಗಿ ಪ್ರಸಿದ್ಧವಾಗಿದೆ. ಮಾನ್ಯಖೇಟದಲ್ಲಿ ರಾಷ್ಟ್ರಕೂಟರ ಕಾಲದಲ್ಲಿ ಬಹಳಷ್ಟು ಸಾಹಿತ್ಯ ಕೃತಿಗಳು ಹೊರಬಂದವು. ಕರ್ಡಾ ತಾಮ್ರಪಟಗಳಲ್ಲಿ (IA, Vol, XII, p263, 922AD) 'ತಸ್ಯಶ್ರೀಮದ್ ಅಮೋಘವರ್ಷ ನೃಪತಿ ಅಸಿದ್ ಇಂದ್ರಪುರ ಅಧಿಕಮ್ ಪುರಮ್ ಇದಂ ಶ್ರೀ ಮಾನ್ಯಖೇಟಮಭಿಧಾನಮ.. .. ' ಎಂದಿದೆ. ಈಗಲೂ ಕೂಡ ಅಲ್ಲಿ ಮನೆಗಳನ್ನು ಕಟ್ಟಲು ನೆಲ ಅಗೆದಾಗ ಅವಶೇಷಗಳು ಸಿಗುತ್ತವೆ. ಮಳಖೇಡವು ವ್ಯಪಾರಕೇಂದ್ರ ಮಾತ್ರವಲ್ಲದೆ ಪ್ರಸಿದ್ಧ ಘಟಿಕಾಸ್ಥಾನವೂ ಆಗಿತ್ತು. ಇಲ್ಲಿನ ಬಸದಿಗಳಲ್ಲಿ ಐವತ್ತಕ್ಕೂ ಹೆಚ್ಚಿನ ಜೈನರ ಪುರಾತನ ಗ್ರಂಥಗಳು ದೊರೆತಿವೆ. ಜೈನಕೇಂದ್ರವಾಗಿ ಸರ್ವಧರ್ಮ ಸಮನ್ವಯಕ್ಕೆ ಹೆಸರಾಗಿದ್ದ ಪ್ರದೇಶವಾಗಿತ್ತು. ಖೊಟ್ಟಿಗನ ಕಾಲಕ್ಕೆ ಪರಮಾರ ಸೀಯಕನು ಮಳಖೇಡದ ಮೇಲೆ ದಾಳಿ ಮಾಡಿ ನಗರವನ್ನು ಕೊಳ್ಳೆ ಹೊಡೆದು ಸುಟ್ಟು ಹಾಕುವುದರ ಮೂಲಕ ತನ್ನ ದ್ವೇಷವನ್ನು ತೀರಿಸಿಕೊಂಡನು. ಬೃಹತ್ ಸಾಮ್ರಾಜ್ಯದ ರಾಜಧಾನಿಯ ವೈಭವವೂ ಅದರೊಂದಿಗೆ ಸುಟ್ಟುಹೋದದ್ದು ದುರ್ದೈವದ ಸಂಗತಿಯಾಗಿದೆ.

ಕಾಂಧಾರ

ಮಹಾರಾಷ್ಟ್ರದ ನಾಂದೇಡ್ ಜಿಲ್ಲೆಯಲ್ಲಿರುವ ಕಾಂಧಾರವು ಮೂರನೆಯ ಕೃಷ್ಣನ ಕಾಲದಲ್ಲಿ ರಾಜಧಾನಿಯಾಗಿದ್ದಿರಬಹುದು. ಏಕೆಂದರೆ ಕಾಂಧಾರವು ದೊಡ್ಡ ನಗರವಾಗಿದ್ದು ವಾಣಿಜ್ಯ ಕೇಂದ್ರ ಮತ್ತು ಧಾರ್ಮಿಕ ಕೆಂದ್ರವಾಗಿತ್ತು. ಯಾತ್ರಿಕರು ಬಂದಾಗ ತಂಗುವುದಕ್ಕೆ ಬೇಕಾದ ಅನುಕೂಲಗಳಿದ್ದವು. ರಾಷ್ಟ್ರಕೂಟರ ಮಾಂಡಳೀಕನಾಗಿದ್ದ ಚಲ್ಲಕೇತನ ವಂಶದ ಬಂಕೇಶನು ಕಟ್ಟಿಸಿದ ದೇವಾಲಯಗಳಲ್ಲದೇ ಇನ್ನೂ ಹಲವಾರು ದೇವಾಲಯಗಳಿವೆ. ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ಪ್ರಾಮುಖ್ಯತೆಯನ್ನು ಪಡೆದಿದ್ದ ಊರಾಗಿದೆ. ರಾಷ್ಟ್ರಕೂಟರ ಆಳ್ವಿಕೆಯ ಅವಧಿಯಲ್ಲಿ ಈ ಪ್ರದೇಶವು ರಾಜಧಾನಿಯಾಗಿದ್ದಿರಬಹುದಾದ ಎಲ್ಲಾ ಲಕ್ಷಣಗಳೂ ಇವೆ. ಕಾಂಧಾರದ ಶಾಸನದಲ್ಲಿ (EI XXXV PP 105 – 14) ಮೂರನೆಯ ಕೃಷ್ಣನನ್ನು ಕಂಧಾರಪುರವರಾಧೀಶ್ವರ ಎಂದು ಕರೆದಿದ್ದಾರೆ. ಕಂಧಾರದ ವೈಭವವನ್ನು ನೋಡಿ ತನ್ನ ರಾಜಾಧಾನಿಯನ್ನು ಅಲ್ಲಿಗೆ ವರ್ಗಾಯಿಸಿರಬಹುದು ಅಥವಾ ಮೂರನೆಯ ಕೃಷ್ಣನು ಅದನ್ನು ತನ್ನ ಎರಡನೆಯ ರಾಜಾಧಾನಿಯನ್ನಾಗಿ ಮಾಡಿಕೊಂಡಿದ್ದನು ಎನ್ನಬಹುದಾಗಿದೆ.

ನಾಲ್ಕನೆಯ ಇಂದ್ರನ ಕಾಲಕ್ಕೆ ಬಂಕಾಪುರವು ರಾಷ್ಟ್ರಕೂಟರ ರಾಜಧಾನಿಯಾಗಿತ್ತೆಂದು ತಿಳಿದುಬರುತ್ತದೆ. ದಾರವಾಡದ ಸುತ್ತಮುತ್ತಲಿನ ಪ್ರದೇಶದ ಸಾಂಸ್ಕೃತಿಕ ಅವಶೇಷಗಳನ್ನು ನೋಡಿದಾಗ ರಾಜಾಧಾನಿ ಎನ್ನುವುದಕ್ಕಿಂತ ಇಡಿಯಾಗಿ ಹಳೆಯ ದಾರವಾಡ ಜಿಲ್ಲೆ ಮತ್ತು ಸುತ್ತಲಿನ ಪ್ರದೇಶವೆಲ್ಲಾ ಸೇರಿ ಅದೊಂದು ಸಾಂಸ್ಕೃತಿಕ ಕೇಂದ್ರವಾಗಿತ್ತು ಎನ್ನಬಹುದು. ಬಂಕಾಪುರ ಪ್ರದೇಶದಲ್ಲಿ ರಾಷ್ಟ್ರಕೂಟರ ರಾಜಧಾನಿಯ ಕೋಟೆ ಅವಶೇಷಗಳು ಮುಂತಾದವುಗಳನ್ನು ಕ್ಷೇತ್ರ ಕಾರ್ಯಗಳ ಮೂಲಕ, ಹಲವು ಪ್ರದೇಶಗಳಲ್ಲಿ ಭೂಶೋಧನ, ಉತ್ಖನನಗಳನ್ನು ನಡೆಸುವುದರ ಮೂಲಕ ಒಂದು ದೊಡ್ಡ ಸಾಂಸ್ಕೃತಿಕ ನೆಲೆಯನ್ನು ಗುರುತಿಸಬಹುದಾಗಿದೆ.

ಒಟ್ಟಿನಲ್ಲಿ ರಾಷ್ಟ್ರಕೂಟರ ಆಳ್ವಿಕೆಯ ಉದ್ದಕ್ಕೂ ಅನೇಕ ರಾಜಾಧಾನಿಗಳು ಒಂದಾದ ನಂತರೆ ಇನ್ನೊಂದರಂತೆ ಬದಲಾಗುತ್ತಾ ಹೋದವು. ಸಾಮಾನ್ಯವಾಗಿ ರಾಜವಂಶಗಳನ್ನು ರಾಜಧಾನಿಯ ಮೂಲಕವೇ ಗುರುತಿಸುವುದರಿಂದ ಇವರನ್ನು ಮಳಖೇಡದ ಅಥವಾ ಮಾನ್ಯಖೇಟದ ರಾಷ್ಟ್ರಕೂಟರೆಂದೇ ಗುರುತಿಸುತ್ತಿದ್ದಾರೆ. ಇದು ರಾಷ್ಟ್ರಕೂಟರ ಎಲ್ಲ ಶಾಖೆಗಳಿಗೂ ಅನ್ವಯವಾಗುತ್ತದೆ.

ನೆಲೆವೀಡುಗಳು

ನೆಲೆವೀಡು ಎಂದರೆ ಅರಸರು ತಾತ್ಕಾಲಿಕವಾಗಿ ತಂಗುವ ಸ್ಥಳ. ಯುದ್ಧವಿಜಯಿಯಾಗಿ ತಂಗಿರಬಹುದು ಅಥವಾ ಮಾರ್ಗ ಮಧ್ಯದಲ್ಲಿ ತನ್ನ ಸೈನ್ಯ ಸಮೇತ ಕೆಲವು ದಿನಗಳ ಕಾಲ ತಂಗಿರುವ ಸ್ಥಳವೇ ನೆಲೆವೀಡು. ರಾಷ್ಟ್ರಕೂಟರ ಕಾಲದಲ್ಲಿ ಮೊಟ್ಟಮೊದಲು ಮಳಖೇಡದ ರಾಷ್ಟ್ರಕೂಟ ದೊರೆ ಒಂದನೆಯ ಕರ್ಕ ರಾಜನ ಕಾಲದಲ್ಲಿ ಕೃಷ್ಣರಾಜನ ಒಂದೇ ಒಂದು ಶಾಸನವು ಸಿಕ್ಕಿದ್ದು ಪಿಂಗಲಿಕಾದಲ್ಲಿ ಬೀಡುಬಿಟ್ಟಿದ್ದನೆಂದು ಉಲ್ಲೇಖಿಸಿದೆ.

ಒಂದನೆಯ ಕೃಷ್ಣನ ಭಂಡಕ್ ಶಾಸನದಲ್ಲಿ (EI, Vol. XIV, p121, 768AD) ನಾಂದೀಪುರಿಯಲ್ಲಿ ನೀರಾನದಿ ಸಂಗಮದಲ್ಲಿ ಬೀಡುಬಿಟ್ಟಿದ್ದನ್ನು ತಿಳಿಸಿದೆ. ಧ್ರುವನು ಮಣ್ಣೆಯಲ್ಲಿ (EI, Vol. XXII, p176, 780AD) ಮತ್ತು ಗಂಗಾನದಿಯ ತಪ್ಪಲಿನಲ್ಲಿ ಬೀಡುಬಿಟ್ಟಿದ್ದನೆಂದು ಉಲ್ಲೇಖಿಸಿದೆ.

ಮೂರನೆಯ ಗೋವಿಂದನು ರಾಮೇಶ್ವರ ತೀರ್ಥದಲ್ಲಿ ಬೀಡುಬಿಟ್ಟಿದ್ದನ್ನು ರಾಮೇಶ್ವರ ಶಾಸನವು (IA, Vol. XI, p126, 804AD), ಪ್ರತಿಷ್ಠಾನದಲ್ಲಿ ಬೀಡುಬಿಟ್ಟಿದ್ದನ್ನು ಪೈಠಾಣ ಶಾಸನವು (EI, Vol. III, p103, 794AD) ತಿಳಿಸುತ್ತದೆ. ಮೂರನೆಯ ಗೋವಿಂದನ ರಾಮೇಶ್ವರ ಶಾಸನದಲ್ಲಿ ದಂತಿಗನ ಮೇಲೆ ಯುದ್ಧ ಮಾಡಿ ಹಿಂದಿರುಗಿ ಬರುವಾಗ ತುಂಗಭದ್ರೆಯ ದಡದಲ್ಲಿ ಬೀಡುಬಿಟ್ಟಿದ್ದನ್ನು ಉಲ್ಲೇಖಿಸಲಾಗಿದೆ. ಮಯೂರಖಿಂಡಿಯಂತೂ ಮೂರನೆಯ ಗೋವಿಂದನ ಕಾಲದಲ್ಲಿ ಪ್ರಮುಖ ನೆಲೆವೀಡಾಗಿತ್ತು.

ಮೂರನೆಯ ಕೃಷ್ಣನ ಕರ್ಹಾಡ್ ತಾಮ್ರ ಶಾಸನದಲ್ಲಿ (EI IV P 278) ಮೇಲ್ಪಾಟಿಯ ನೆಲೆವೀಡಿನಲ್ಲಿ ತಂಗಿದ್ದನ್ನು ಉಲ್ಲೇಖಿಸುತ್ತದೆ. ಪುಷ್ಪದಂತನು ತನ್ನ ಕೃತಿ ಮಹಾಪುರಾಣದಲ್ಲಿ ಕೃಷ್ಣನು ಮೇಲ್ಪಾಡಿಯಲ್ಲಿ ತಂಗಿದ್ದನ್ನು ಉಲ್ಲೇಖಿಸುತ್ತಾನೆ. (1.3) ಮೇಲ್ಪಾಡಿ ನಗರದ ವರ್ಣನೆಯನ್ನು ಮಾಡುತ್ತಾ ಹಣ ಮತ್ತು ಚಿನ್ನವನ್ನು ಬಡಬಗ್ಗರಿಗೆ ಹಂಚುತ್ತಿದ್ದರು ಎಂದಿದೆ. ಮೂರನೆಯ ಕೃಷ್ಣನು ದಕ್ಷಿಣ ದಿಗ್ವಿಜಯವನ್ನು ಮೇಲ್ಪಾಡಿಯಲ್ಲಿ ಆಚರಿಸಿದನೆಂದು ಊಹಿಸಬಹುದಾಗಿದೆ. "ಯಶಸ್ತಿಲಕ ಚಂಪು" ವಿನಲ್ಲೂ ಇದರ ಬಗ್ಗೆ ಉಲ್ಲೇಖಿಸಿದೆ.

ಇವಿಷ್ಟೇ ಅಲ್ಲದೆ ರಾಷ್ಟ್ರಕೂಟರ ಕಾಲದಲ್ಲಿದ್ದ ಇನ್ನೂ ಅನೇಕ ನೆಲೆವೀಡುಗಳನ್ನು ಗುರುತಿಸಬಹುದಾಗಿದೆ. ನೆಲೆವೀಡುಗಳಿಂದ ಅನೇಕ ದಾನಗಳನ್ನು ನೀಡುತ್ತಿದ್ದುದರಿಂದ ಮತ್ತು ಶಾಸನಗಳನ್ನು ಹೊರಡಿಸುತ್ತಿದ್ದರಿಂದ ಆ ಸ್ಥಳವು ಪ್ರಸಿದ್ಧವಾಗುತ್ತಿದ್ದುದೇ ಅಲ್ಲದೆ ಮಹತ್ವವನ್ನು ಪಡೆಯುತ್ತಿತ್ತು.

ಅಧ್ಯಾಯ ೫

# ಸಾಂಸ್ಕೃತಿಕ ಅಧ್ಯಯನ

ಒಂದು ನಾಡಿನ ಸಂಸ್ಕೃತಿಯನ್ನು ಅಧ್ಯಯನ ಮಾಡುವುದೆಂದರೆ ಇಡೀ ನಾಡಿನ ಒಳಹೊರಗನ್ನು ಅರಿತಂತೆಯೆ. ರಾಷ್ಟ್ರಕೂಟರು ಭಾರತದ ಇತಿಹಾಸದಲ್ಲಿ ಪ್ರಸಿದ್ಧರಾದವರಾಗಿದ್ದಾರೆ. ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ವಾಸ್ತು, ಸಾಹಿತ್ಯ ಕ್ಷೇತ್ರಗಳಿಗೆ ಬೃಹತ್ತಾದ ಮಹತ್ತಾದ ಕೊಡಿಗೆಗಳನ್ನು ನೀಡಿದ್ದಾರೆ. ಸಾಂಸ್ಕೃತಿಕ ಬೆಳವಣಿಗೆಗಳನ್ನು ವಿಶೇಷತೆಗಳನ್ನು ಗುರುತಿಸುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

ಆಡಳಿತ, ಸಾಮಾಜಿಕ, ಆರ್ಥಿಕ, ಧರ್ಮ, ಭಾಷೆ ಮತ್ತು ಸಾಹಿತ್ಯ ಎಂದು ಭಾಗಗಳಾಗಿ ಮಾಡಿಕೊಂಡು ವಿಷಯವನ್ನು ಚರ್ಚಿಸಲಾಗಿದೆ.

### ಆಡಳಿತ

ಸಾಮ್ಯಮಾತ್ಯೌಪುರಂ ರಾಷ್ಟ್ರಂ ಕೋಶದಂಡೌ ಸುಹೃತ್ತಥಾ।

ಸಪ್ತಪ್ರಕೃತಯೋಹ್ಯೇತಾ: ಸಪ್ತಾಂಗಂ ರಾಜ್ಯಮುಚ್ಯತೇ॥

ರಾಜ್ಯಕ್ಕೆ ಆಧಾರವಾಗಿರುವ ರಾಜ್ಯಾಂಗಗಳ ಕಡೆಗೆ ಅರಸನ ಲಕ್ಷ್ಯವಿರಬೇಕಾದುದು ಅತ್ಯಂತ ಆವಶ್ಯಕವಾಗಿದೆ. ರಾಷ್ಟ್ರಕೂಟರು ತಮ್ಮ ರಾಜ್ಯದ ವಿಸ್ತಾರಕ್ಕನುಗುಣವಾಗಿ ಆಡಳಿತ ಕ್ರಮವನ್ನು ರೂಪಿಸಿಕೊಂಡರು. ಜೊತೆಗೆ ಬಾದಾಮಿ ಚಲುಕ್ಯರ ಕಾಲದಲ್ಲಿದ್ದಂತಹ ಕೆಲವು ಕ್ರಮಗಳನ್ನು ತಮ್ಮ ಆಡಳಿತ ಕ್ರಮದಲ್ಲಿ ಅಳವಡಿಸಿಕೊಂಡರು. ಸಾಮ್ರಾಜ್ಯದಲ್ಲಿ ಕೇಂದ್ರಪ್ರಭುತ್ವ, ಮಾಂಡಲೀಕ(ಪ್ರಾಂತ), ಮತ್ತು ಸ್ಥಳೀಯ ಆಡಳಿತಗಳಿದ್ದವು. ಸಾಮ್ರಾಜ್ಯದ ಸಮಸ್ತ ಆಡಳಿತದ ಹೊಣೆ, ನಿರ್ವಹಣೆ ಅರಸನದಾಗಿತ್ತು. ದೊರೆತನವು ಸಾಮಾನ್ಯವಾಗಿ ವಂಶಪಾರಂಪರ್ಯವಾಗಿ ಬರುತ್ತಿತ್ತು. ಅದರಲ್ಲೂ ಹಿರಿಯ ಮಗನಿಗೆ ಅಧಿಕಾರ ಸಿಗುತ್ತಿತ್ತು. ಅದಕ್ಕೂ ಕೆಲವು ನಿಯಮಗಳಿದ್ದವು. ಹಿರಿಯ ಮಗನು ದುರ್ಬಲನಾಗಿದ್ದರೆ, ರೋಗಿಷ್ಟನಾಗಿದ್ದರೆ ಅಂತಹವನಿಗೆ ರಾಜ್ಯ ಸಿಗುತ್ತಿರಲಿಲ್ಲ. ಕೆಲವು ಬಾರಿ ಅರಸನು ತನ್ನ ಮಕ್ಕಳಲ್ಲಿ ಆದಿಕಾರಕ್ಕೆ ಯೊಗ್ಯನಾದವನನ್ನು ತಾನೇ ಆರಿಸುತ್ತಿದ್ದನು.

(ಧಾರಾವರ್ಷ ಧ್ರುವನು ಮೂರನೆಯ ಗೋವಿಂದನಿಗೆ ಯುವರಾಜಪದವಿಯನ್ನು ನೀಡಿದ್ದನು. ಹಿರಿಯನಾದ ಕಂಬಯ್ಯನಿದ್ದರೂ ಧ್ರುವನು ಮೂರನೆಯ ಗೋವಿಂದನನ್ನೇ ತನ್ನ ಉತ್ತರಾಧಿಕಾರಿಯಗಿ ನೇಮಿಸಿದ್ದನು. ಇದರಿಂದ ಅಂತಃಕಲಹಗಳು ಹೆಚ್ಚಿದರೂ ಸಮರ್ಥನಾದವನು ಇವುಗಳನ್ನು ನಿಭಾಯಿಸಿಕೊಂಡು ರಾಜನಾಗಿ ಯಶಸ್ವಿಯಾಗುತ್ತಿದ್ದನು.

ಮೂರನೆಯ ಇಂದ್ರನ ನಂತರ ಸಿಂಹಾಸನವನ್ನು ಏರಿದವರಾರು? ಎಂದು ಸರಿಯಾಗಿ ತಿಳಿದಿಲ್ಲ. ಖಾರೆಪಟಾಣ ಶಾಸನದ ಆಧಾರದಿಂದ ಅವನ ಹಿರಿಯ ಮಗನಾದ ಎರಡನೆಯ ಅಮೋಘವರ್ಷನೇ ಸಿಂಹಾಸನವೇರಿದನು ಎಂದು ಭಂಡಾರ್ಕರರು ಊಹಿಸಿದ್ದಾರೆ. ಸಾಂಗಲಿಯ ಶಾಸನದಿಂದ ನಾಲ್ಕನೆಯ ಗೋವಿಂದನು ಪಟ್ಟವೇರಿದನೆಂದು ತಿಳಿದು ಬರುತ್ತದೆ. ಈ ಎರಡೂ ಶಾಸನಗಳಿಗಿಂತ, ವಾರ್ಧಾ ಜಿಲ್ಲೆಯ ಶಾಸನದಲ್ಲಿ ಅಣ್ಣನಾದ ಅಮೋಘವರ್ಷನು ಸ್ವಲ್ಪ ದಿವಸದಲ್ಲೇ ಮರಣ ಹೊಂದಿದ್ದರಿಂದ ನಾಲ್ಕನೆಯ ಗೋವಿಂದನು ಪಟ್ಟವೇರಿದನೆಂದು ತಿಳಿದು ಬರುತ್ತದೆ.)

ತನ್ನ ಅಸಮರ್ಥ ಆಡಳಿತದಿಂದ ಪ್ರಜೆಗಳ ಪ್ರೀತಿವಿಶ್ವಾಸಗಳನ್ನು ಕಳೆದುಕೊಂಡರೆ ಪಟ್ಟವು ಸಮರ್ಥನಾದ ಕಿರಿಯನಿಗೆ ಹೋಗುತ್ತಿತ್ತು. ಹಾಗೆ ಆಗದಿದ್ದರೂ ಅಂತಃಕಲಹಗಳು, ಅಥವಾ ಆಂತರಿಕ ದಂಗೆಗಳಿಂದ ಸಿಂಹಾಸನವನ್ನು ಕಸಿದುಕೊಳ್ಳುತ್ತಿದ್ದರು. ಅರಸನಿಗೆ ಮಕ್ಕಳಿಲ್ಲದಿದ್ದರೆ ಕಿರಿಯ ತಮ್ಮಂದಿರಿಗೋ, ದಾಯಾದಿಗಳಿಗೋ ಅರಸುತನ ದೊರಕುತ್ತಿತ್ತು. ದಂತಿದುರ್ಗನಿಗೆ ಮಕ್ಕಳಿಲ್ಲದೇ ಇದ್ದುದರಿಂದ ಸಿಂಹಾಸನವು ತಮ್ಮನಾದ ಒಂದನೆಯ ಕೃಷ್ಣನಿಗೆ ಹೋಯಿತೆಂಬುದು ತಿಳಿದ ವಿಚಾರ. ದೊರೆಗಳು ತಮ್ಮ ಸಾಮರ್ಥ್ಯಕ್ಕನುಗುಣವಾಗಿ ಅನೇಕ ಬಿರುದುಗಳನ್ನು ಹೊಂದಿರುತ್ತಿದ್ದರು. ಇನ್ನು ಕೆಲವು ವಂಶಪಾರಂಪರ್ಯವಾಗಿ ದೊರಕುತ್ತಿದ್ದವು.

ರಾಜ್ಯಭಾರವನ್ನು ನಡೆಸುವುದಕ್ಕೆ ಅನೇಕ ಜನಗಳ ಸಹಾಯ ಬೇಕಾಗುತ್ತಿತ್ತು. ಇದಕ್ಕಾಗಿ ಮಂತ್ರಿಗಳು, ಅನೇಕ ಅಧಿಕಾರಿಗಳು, ಯುವರಾಜ ಮುಂತಾದವರ ಸಹಾಕಾರವಿರುತ್ತಿತ್ತು. ಕೆಲವೊಮ್ಮೆ ರಾಣಿಯರು ಕೂಡ ಸಹಕರಿಸುತ್ತಿದ್ದರೆಂದು ತಿಳಿದುಬರುತ್ತದೆ. ಧ್ರುವರಾಜನ ಮಡದಿ ಶೀಲಮಹಾದೇವಿಯು ರಾಜ್ಯದ ಆಡಳಿತದಲ್ಲಿ ಭಾಗಿಯಾಗಿದ್ದಳೆಂದು ಜೇಥ್ವಾಯ್ ತಾಮ್ರಪಟದಿಂದ (E.I., Vol XXIII., No.

17,786 A.D.) ತಿಳಿದುಬರುತ್ತದೆ. ಮೂರನೆಯ ಗೋವಿಂದನ ಪತ್ನಿ ಗಾಮುಂಡಬ್ಬೆಯು ಆಡಳಿತದಲ್ಲಿ ಸಹಾಯ ಮಾಡುತ್ತಿದ್ದಳೆಂದು ತಿಳಿದುಬರುತ್ತದೆ. ಇತರ ಅಧಿಕಾರಿಗಳ ಪತ್ನಿಯರೂ ಇವರಿಗೆ ಆಡಳಿತದಲ್ಲಿ ಸಹಕರಿಸುತ್ತಿದ್ದ ಉದಾಹರಣೆಗಳಿವೆ. ಗಂಗ ಶ್ರೀಪುರುಷನ ಪತ್ನಿ ವಿನೇತಿನಿಮ್ಮಡಿಯು ಮಲ್ಲವೆಲ್ಲೂರನ್ನು ಆಳುತ್ತಿದ್ದಳೆಂದು ನೇರೂರಿನ (MAR, 1917, No. 78) ಶಾಸನದಿಂದ ತಿಳಿದುಬರುತ್ತದೆ. ಇದರಲ್ಲಿ ಕಾಲದ ಉಲ್ಲೇಖವಿಲ್ಲ. ಶ್ರೀಪುರುಷನ ಮಗ ದುಗ್ಗಮಾರನು ಕುವಳಾಲನಾಡು ೩೦೦ ಅನ್ನು ಆಳುತ್ತಿದ್ದಾಗ ಅವನ ಹೆಂಡತಿ ಕಞ್ಚಿಯಬ್ಬೆಯು ಅಗಳಿ ಪ್ರದೇಶವನ್ನು ಆಳುತ್ತಿದ್ದಳೆಂದು ಉಲ್ಲೇಖಿಸಿದೆ (EC., Vol X, ಮುಳಬಾಗಿಲು, ನಂ.೮೦, ಮೇಲಾಗಣಿ, ಕ್ರಿ.ಶ.೭೬೭). ಒಂದನೆಯ ಅಮೋಘವರ್ಷನ ಮಗಳು ರೇವಕನಿರ್ಮಡಿಯು ಎಡದೊರೆ ಪ್ರದೇಶವನ್ನು ಆಳುತ್ತಿದ್ದಳೆಂದು ಕೆಸರಬಾವಿ ಶಾಸನವು (SII, Vol XI, Part I, 837 AD) ಉಲ್ಲೇಖಿಸಿದೆ. ರಾಜನು ಯುದ್ಧಕಾರ್ಯಗಳಿಗಾಗಿ ರಾಜಧಾನಿಯಿಂದ ಹೊರಗೆ ಹೋದರೆ ಯುವರಾಜನು ರಾಜ್ಯದ ಆಡಳಿತವನ್ನು ನಡೆಸುತ್ತಿದ್ದನು. ರಾಜಪರಿವಾರದಲ್ಲಿ ಭವಿಷ್ಯದ ದೊರೆಯಾದ ಯುವರಾಜನಿಗೆ ಗೌರವಸ್ಥಾನವಿರುತ್ತಿತ್ತು. ಹಿರಿಯ ಮಗನು ಅರಸನಾದರೆ ಉಳಿದ ಮಕ್ಕಳು ನಾಡಿನ ಬೇರೆಬೇರೆ ವಿಭಾಗಗಳಿಗೆ ಅಧಿಕಾರಿಗಳಾಗಿ ನೇಮಕವಾಗುತ್ತಿದ್ದರು.

ಮಂತ್ರಿ ಪರಿಷತ್ತು ನೀಡುವ ಸಲಹೆಗಳ ಮೇಲೆ ಆಡಳಿತವು ನಡೆಯುತ್ತಿತ್ತು. ಅಂತಿಮ ನಿರ್ಧಾರ ಅರಸನದೇ ಆದರೂ ರಾಜನೀತಿಯನ್ನು ಬಲ್ಲ ಮಂತ್ರಿಗಳ ಸಲಹೆ ಬಹಳ ಮುಖ್ಯವಾಗಿತ್ತು. ಆದ್ದರಿಂದ ಮಂತ್ರಿಪದವಿ ಗಳಿಸಬೇಕಾದರೆ ರಾಜನೀತಿ ಶಾಸ್ತ್ರಜ್ಞನೂ ಅಪಾರ ಪಾಂಡಿತ್ಯವುಳ್ಳವನೂ ಅನುಭವಿಯೂ ಆಗಿರಬೇಕಿತ್ತು. ಕೆಲವು ಬಾರಿ ಪ್ರಧಾನಮಂತ್ರಿ ಪದವಿಯು ವಂಶಪಾರಂಪರ್ಯವಾಗಿ ಬರುತ್ತಿದ್ದುದೂ ಉಂಟು. ಮಂತ್ರಿ ಪರಿಷತ್ತಿನ ಹಿರಿಯನೇ ಸಾಮಾನ್ಯವಾಗಿ ಪ್ರಧಾನಮಂತ್ರಿ ಆಗಿರುತ್ತಿದ್ದನು. ಇವನ ಸಹಾಯಕರಾಗಿ ಸೇನಾಧಿಪತಿ, ಕೋಶಾಧಿಪತಿ, ಮಹಾಸಂಧಿವಿಗ್ರಹಿ, ಸಂಧಿವಿಗ್ರಹಿ, ಅಕ್ಷಪಟಲಾಧಿಕಾರಿ, ಇತ್ಯಾದಿ ವಿವಿಧ ಅಧಿಕಾರಿಗಳಿರುತಿದ್ದರು.

ಷಡಂಗವಿದ್ ಮಹಾಕುಶಲಃ ಪ್ರತಿನಿಧಿಸ್ತು ಸಃ।

ಕಾರ್ಯಾಕಾರ್ಯ ಪ್ರವಿಜ್ಞಾತಾ ಪ್ರತಿನಿಧಿಸ್ತು ಸಃ।

ಸರ್ವದರ್ಶಿ ಪ್ರಧಾನಸ್ತು ಸೇನಾವಿದ್ಸಚಿವಸ್ತಥಾ।

ಮಂತ್ರೀತು ನೀತಿಕುಶಲ:। ಪಂಡಿತೋ ಧರ್ಮತತ್ವವಿದ್।

ಲೋಕಶಾಸ್ತ್ರ ನಯಜ್ಞಸ್ತು ಪ್ರಾಡ್ವಿವಾಕ: ಸ್ಮೃತಸ್ಸದಾ।

ದೇಶಕಾಲಪ್ರವಿಜ್ಞಾತಾ ಸುಮಂತ್ರಸ್ಯ ಚ ಕೀರ್ತಿತ: ।

ಆಯವ್ಯಯಪ್ರವಿಜ್ಞಾತಾ ಹ್ಯಮಾತ್ಯಾ ಇತಿಕಥ್ಯತೇ।

ಇಂಗಿತಾಕಾರ ಚೇಷ್ಟಜ್ಞ: ಸ್ಮೃತಿಮಾನ್ ದೇಶಕಾಲವಿದ್

ಷಾಡ್ಗುಣ್ಯವಂತ: ವಿದ್ವಾಗ್ಮೀ: ವೀತಭೀರ್ದ್ಯೂತ ಇಷ್ಯತೇ। (ಶುಕ್ರ)

ರಾಜ್ಯಾಡಳಿತಕ್ಕೆ ಮಂತ್ರಿಗಳೆಷ್ಟು? ಅವರೆಂತಹವರು?

ಮೌಲಾಞ್ಛಾಸ್ತ್ರವಿಧ ಶೂರಾನ್ ಲಬ್ಧಲಕ್ಷಾನ್ ಕುಲೋದ್ಗತಾನ್।

ಸಚಿವಾನ್ ಸಪ್ತಚಾಷ್ಟೌ ವಾ ಪ್ರಕುರ್ವೀತ ಪರಿಕ್ಷಿತಾನ್ ॥ (ಮನುಸ್ಮೃತಿ)

ರಾಜಾಡಳಿತಕ್ಕೆ ಸಂಬಂಧಿಸಿದಂತೆ ಅನೇಕ ಕಾರ್ಯಾಲಯಗಳು ಇರುತ್ತಿತ್ತು. ಆಡಳಿತವು ಕೇಂದ್ರದಿಂದ ನಡೆದರೆ ಇಡೀ ಸಾಮ್ರಾಜ್ಯದಲ್ಲಿ ಅದನ್ನು ಅನುಸರಿಸುತ್ತಿದ್ದಾರೆ ಎಂದು ತಿಳಿಯುವ ಬಗೆ ಹೇಗೆ? ಆದ್ದರಿಂದ ಆಡಳಿತಕ್ಕೆ ಸಹಕಾರಿಯಾಗಿ ಅನೇಕ ಆಡಳಿತ ವಿಭಾಗಗಳಿದ್ದವು. ಆಡಳಿತ ವಿಭಾಗಗಳಲ್ಲಿ ಮಂಡಲ, ನಾಡು, ವಿಷಯ, ಭುಕ್ತಿ, ಪ್ರಾಂತ, ಊರು, ಗ್ರಾಮ ಮುಂತಾದವುಗಳು ಬರುತ್ತವೆ. ಇವುಗಳಿಗೆಲ್ಲಾ ಒಬ್ಬೊಬ್ಬ ಅಧಿಕಾರಿಯು ಇರುತ್ತಿದ್ದನು. ದೊರೆಯ ಆಜ್ಞೆಗಳನ್ನು ಇವರೆಲ್ಲಾ ಸ್ಥಳೀಯವಾಗಿ ನಿರ್ವಹಿಸುತ್ತಿದ್ದರು. ಸ್ಥಳೀಯ ಅಧಿಕಾರಿಗಳಿಗೂ ಕೂಡ ಅವರ ಅಧಿಕಾರ ವ್ಯಾಪ್ತಿಯನ್ನವಲಂಬಿಸಿ ಕೈಕೆಳಗಿನ ಅಧಿಕಾರಿಗಳು ಇರುತ್ತಿದ್ದರು. ರಾಜ್ಯದ ಆದಾಯವು ಸಾಮಾನ್ಯವಾಗಿ ತೆರಿಗೆಗಳು, ಭೂಕಂದಾಯಗಳ ಮೂಲಕ ಬರುತ್ತಿತ್ತು. ಇವುಗಳನ್ನು ಪ್ರಜೆಗಳಿಂದ ಪಡೆಯಲು ಅನೇಕ ಅಧಿಕಾರಿಗಳಿರುತ್ತಿದ್ದರು. ದಾನ ಧರ್ಮಗಳ ಅಂಗವಾಗಿ ಕೆಲವು ತೆರಿಗೆಗಳ ವಿನಾಯಿತಿ, ತೆರಿಗೆ ಮುಕ್ತಗೊಳಿಸುವುದು, ಮುಂತಾದವುಗಳು ಆಚರಣೆಯಲ್ಲಿತ್ತು. ಇದಕ್ಕೆ ಹಲವಾರು ನಿದರ್ಶನಗಳನ್ನು ನೋಡಬಹುದಾಗಿದೆ.

ಸಾಮಂತರ ರಾಜ್ಯಗಳಲ್ಲಿ ಕೂಡ ಹೆಚ್ಚು ಕಡಿಮೆ ಒಂದೇ ರೀತಿಯ ಆಡಳಿತ ವ್ಯವಸ್ಥೆ ಇತ್ತು. ಮಹಾಸಾಮಂತ ಮತ್ತು ಸಾಮಂತರು ಇರುತ್ತಿದ್ದರು. ಮಹಾಸಾಮಂತರಿಗೆ ಸಾಮಾನ್ಯವಾಗಿ ಪಂಚಮಹಾವಾದ್ಯಗಳ ಗೌರವವಿತ್ತು. ಸಾಮಂತರಿಗಿದ್ದ ಹಕ್ಕುಬಾಧ್ಯತೆಗಳು ದೊಡ್ಡ ದೊಡ್ಡ ಪ್ರಾಂತಗಳ ಮುಖ್ಯಸ್ಥರಿಗೆ ಇರುತ್ತಿದ್ದವು. ಪ್ರಾಂತದ ಮುಖ್ಯಸ್ಥನಿಗೆ ಮೊದಲು "ರಾಷ್ಟ್ರಪತಿ" ಎಂಬ ಹೆಸರಿತ್ತು. ಇವರನ್ನೇ ಅನಂತರ ಮಹಾಮಂಡಲೇಶ್ವರರು ಎಂದು ಕರೆಯುತ್ತಿದ್ದರು. ಮಹಾಮಂಡಲೇಶ್ವರರ ಕೈಕೆಳಗೆ ಮಂಡಲೇಶ್ವರ ಅಥವಾ ಮಾಂಡಲಿಕರು ಇರುತ್ತಿದ್ದರು. ಮಾಂಡಲಿಕರ ಕೆಳಗಿನ ಅಧಿಕಾರಿಯಾಗಿ "ವಿಷಯಪತಿ" ಯು ಇರುತ್ತಿದ್ದನು. ವಿಷಯಪತಿ ಎಂದರೆ ವಿಷಯ ಎಂಬ ಆಡಳಿತ ವಿಭಾಗಗಳ ಒಡೆಯ. ಒಂದೊಂದು ಮಂಡಲವನ್ನು ವಿಭಾಗಿಸಿ, ಅನೇಕ ಭಾಗಗಳನ್ನು ಮಾಡುತ್ತಿದ್ದರು. ಆ ಭಾಗಗಳ ಹೆಸರೇ ವಿಷಯ. ಸಾಮಾನ್ಯವಾಗಿ ಒಂದೊಂದು ವಿಷಯವೂ ಎರಡು ಸಾವಿರ ಗ್ರಾಮಗಳನ್ನು ಹೊಂದಿರುತ್ತಿತ್ತು. ವಿಷಯಗಳು ಮತ್ತೆ ಅನೇಕ ಭಾಗಗಳಾಗಿ "ಭುಕ್ತಿ" ಎಂದು ಕರೆಸಿಕೊಳ್ಳುತ್ತಿತ್ತು. ಒಂದೊಂದು ಭುಕ್ತಿಯಲ್ಲಿ ಐನೂರರಿಂದ ಸಾವಿರದವರೆಗೆ ಹಳ್ಳಿಗಳಿರುತ್ತಿದ್ದವು. ವಿಷಯಪತಿಯ ಕೆಳಗಿನ ಅಧಿಕಾರಿಯು "ಭೋಗಿಕ" ಎಂಬುವವನಾಗಿದ್ದನು. ಇವನನ್ನು "ಭೋಗಪತಿ" ಎಂದು ಕರೆಯುತ್ತಿದ್ದರು. ಭುಕ್ತಿಗಳ ಮುಖ್ಯಸ್ಥ ಭೋಗಪತಿಯಾಗಿದ್ದನು. ಗ್ರಾಮದ ಅಧಿಕಾರಿಯನ್ನು ಗ್ರಾಮಕೂಟ ಎಂದು ಕರೆಯುತ್ತಿದ್ದರು. ಇವನಿಗೇ ಇನ್ನೊಂದು ಹೆಸರು ಗ್ರಾಮಮುಖಂಡ. ಗ್ರಾಮಮುಖಂಡವೇ ಮುಂದೆ ಗ್ರಾಮಮುಖಂಡ > ಗಾಮುಂಡ > ಗಾವುಂಡ > ಗೌಂಡ > ಗೌಡ ಎಂದಾಗಿದೆ.

ಗ್ರಾಮಶ್ಚ ನಗರಂ ಚೈವ ಪಟ್ಟಣಂ ಖರ್ವಟಂ ಪುರಂ।

ಖೇಟಕಂ ಕುಸುಮಂ ಚೈವ ಶಿಬಿರಂ ರಾಜವಾಸಕಂ॥

ಸೇನಾಮುಖಮಿತಿ ತ್ವೇವಂ ದಶಧಾ ಕೀರ್ತಿತಂ ಬುಧೈ: (ಶುಕ್ರನೀತಿ)

ಗ್ರಾಮ, ನಗರ (ಪುರ), ಕಲ್ಲಡ, ಕೇಡ, ಮದಂಬ, ಪತ್ತನ, ದ್ರೋಣಗಳ ಪ್ರಸ್ತಾಪ ವಡ್ಡಾರಾಧನೆ, ಜಿನಸೇನಾಚಾರ್ಯರ ಪೂರ್ವಪುರಾಣದಲ್ಲಿ ಉಲ್ಲೇಖಿಸಲಾಗಿದೆ.

ದೊಡ್ಡ ಗ್ರಾಮಗಳಿಗೆ ಪುರವೆಂದೂ, ಅವುಗಳಿಗಿಂತ ದೊಡ್ಡ ಗ್ರಾಮಕ್ಕೆ ನಗರ ಎಂದೂ ಕರೆಯುತ್ತಿದ್ದರು. ಮಾಂಡಲಿಕರು ಕೇಂದ್ರ ಸರ್ಕಾರದ ನೇರ ಅಧಿಕಾರಿಗಳಾಗಿರುತ್ತಿದ್ದರು. ಹಣಕಾಸಿನ ನಿರ್ವಹಣೆ, ಸೈನಿಕರ ಕಾರ್ಯಾಚರಣೆ, ಪ್ರಜೆಗಳ ರಕ್ಷಣೆ, ಶಾಂತಿಪಾಲನೆಯ ಹೊಣೆ, ರಾಜ್ಯ ರಕ್ಷಣೆಯ ಹೊಣೆಗಳೆಲ್ಲ ಮಾಂಡಲಿಕರದೇ ಆಗಿತ್ತು. ಇವುಗಳ ಜೊತೆಗೆ ನಿಗದಿತ ಸಮಯಗಳಲ್ಲಿ ತೆರಿಗೆಗಳ ಸಂಗ್ರಹ, ರಾಜಾಸ್ಥಾನಕ್ಕೆ ಸಂದಾಯ, ಅಗತ್ಯ ಬಿದ್ದಾಗ ರಾಜನ ಬಳಿ ಹೋಗುವುದು ಇವು ಮಾಂಡಲಿಕರ ಜವಬ್ದಾರಿಯಾಗಿದ್ದವು. ರಾಜನಿಗೆ ಸೈನಿಕರ ಅವಶ್ಯಕತೆಯಿದ್ದಾಗ ಸೈನ್ಯವನ್ನು ಒದಗಿಸುವುದು ಅಥವಾ ಸೈನ್ಯದೊಂದಿಗೆ ಯುದ್ಧದಲ್ಲಿ ಭಾಗವಹಿಸುವುದು ಮಾಂಡಲಿಕರ ಕೆಲಸವಾಗಿತ್ತು.

ಗ್ರಾಮಾಡಳಿತ ಮತ್ತು ಪುರಾಡಳಿತಗಳು ಸ್ಥಳೀಯ ಸಂಸ್ಥೆಗಳಾಗಿದ್ದವು. ಇವು ಅನೇಕ ವಿಶೇಷ ಹಕ್ಕುಗಳನ್ನು ಹೊಂದಿದ್ದವು. ಪುರ ಅಥವ ನಗರದ ಆಡಳಿತವನ್ನು ನಗರ ಮಂಡಳಿಯು ನಡೆಸುತ್ತಿತ್ತು. ಜನಸಾಮಾನ್ಯರಲ್ಲಿ ಕೂಡ ಕೆಲವು ಪ್ರತಿನಿಧಿಗಳಿರುತ್ತಿದ್ದರು. ಇವರನ್ನು "ಮಹಾಜನ" ಎಂದು ಕರೆಯುತ್ತಿದ್ದರು. ನಗರದ ಅಥವಾ ಪುರದ ಮುಖ್ಯಸ್ಥನನ್ನು ನಗರಪತಿ ಇಲ್ಲವೆ ಪುರಪತಿ ಎಂದು ಕರೆಯುತ್ತಿದ್ದರು. ಗ್ರಾಮವು ಆಡಳಿತ ವಿಭಾಗಗಳಲ್ಲಿ ಅತ್ಯಂತ ಕಿರಿಯ ಹಾಗೂ ಕೊನೆಯ ಘಟ್ಟವಾಗಿದೆ. ಗ್ರಾಮದಲ್ಲಿದ್ದ ಹಿರಿಯರ ಸಭೆಯು ಅದರ ಆಡಳಿತವನ್ನು ನಡೆಸುತ್ತಿತ್ತು. ಕ್ರಮೇಣ ಈ ಸಭೆಗಳನ್ನು ಊರ್, ಊರವರ್, ಒಕ್ಕಲು ಮುಂತಾದ ಹೆಸರುಗಳಿಂದ ಕರೆಯುತ್ತಿದ್ದುದು ಕಂಡುಬರುತ್ತದೆ.

ಗ್ರಾಮಸಭೆಯು ಗ್ರಾಮಗಳ ಹಿತಕ್ಕಾಗಿ ಅನೇಕ ಕೆಲಸಗಳನ್ನು ಮಾಡುತ್ತಿತ್ತು. ಕಂದಾಯ, ತೆರಿಗೆಗಳ ಸಂಗ್ರಹಣೆ, ವಿದ್ಯಾಭ್ಯಾಸಕ್ಕೆ ವ್ಯವಸ್ಥೆ, ವ್ಯವಸಾಯಕ್ಕೆ ಅನುಕೂಲ, ಕೆರೆ ಬಾವಿಗಳ ನಿರ್ಮಾಣವನ್ನು ಮಾಡುತ್ತಿದ್ದರು. ದೇವಾಲಯಗಳ ನಿರ್ಮಾಣ, ದುರಸ್ತಿ, ಗ್ರಾಮರಕ್ಷಣೆ, ಸಣ್ಣಪುಟ್ಟ ಜಗಳಗಳ ತೀರ್ಮಾನ, ಅದಕ್ಕೆ ಶಿಕ್ಷೆ ವಿಧಿಸುವುದು ಗ್ರಾಮ ಸಭೆಯ ಕೆಲಸವಾಗಿತ್ತು. ಗ್ರಾಮಮುಖಂಡ ಅಥವಾ ಗಾಮುಂಡನೇ ಗ್ರಾಮಗಳ ಮುಖ್ಯಸ್ಥನಾಗಿದ್ದನು. ಅಧಿಕಾರವು ವಂಶಪಾರಂಪರ್ಯವಾಗಿ ಬರುತ್ತಿತ್ತು. ಇವನಿಗೆ ಊರೊಡೆಯನೆಂಬ ಹೆಸರೂ ಇತ್ತು. ಈತನ ಕೆಲಸಕ್ಕೆ ಕಂದಾಯವಿಲ್ಲದ ಭೂಮಿ ಮತ್ತು ರಾಜ್ಯಾದಾಯಕ್ಕೆ ಸಲ್ಲಬೇಕಾದ ಹಣದಲ್ಲಿ ಸ್ವಲ್ಪಭಾಗ ವೇತನ ರೂಪದಲ್ಲಿ

ಸಿಗುತ್ತಿತ್ತು. ಇವನ ಜೊತೆಗೆ ಸಹಾಯಕರಾಗಿ ಇನ್ನೂ ಕೆಲವು ಅಧಿಕಾರಿಗಳಿರುತ್ತಿದ್ದರು. ಸೇನಬೋವ ಅಥವಾ ಶ್ಯಾನುಭೋಗನೆಂಬುವವನು ಗ್ರಾಮಾಡಳಿತದಲ್ಲಿ ಅಧಿಕಾರಿಯಾಗಿರುತ್ತಿದ್ದನು.

ಪ್ರಾಂತೀಯ ವಿಭಾಗಗಳಲ್ಲಿ ಆಡಳಿತ ನಿರ್ವಹಣೆಗೆ ಹಲವು ಹಂತಗಳ ಅಧಿಕಾರಿಗಳಿರುತ್ತಿದ್ದರು. ಅಂತಹವರಲ್ಲಿ ಆಳುಪರು, ನೊಳಂಬರು, ಬಾಣರು, ಸಾಂತರರು ಮುಂತಾದವರು ಪ್ರಾಂತಾಧಿಪತಿಗಳಾಗಿದ್ದರು. ಇವರು ಮಾಂಡಳೀಕರೂ ಆಗಿದ್ದರು. ರಾಷ್ಟ್ರಕೂಟರ ಸ್ತಂಭ ಕೂಡ ಪ್ರಾಂತಾಧಿಕಾರಿಯಾಗಿದ್ದ. ರಾಷ್ಟ್ರಕೂಟ ಮೂರನೆಯ ಗೋವಿಂದನ ಕೈಕೆಳಗೆ ರಾಜಾದಿತ್ಯನು ಬನವಾಸಿ ನಾಡನ್ನೂ, ಲೋಕಾದಿತ್ಯನು ಬಂಕಾಪುರ ಪ್ರಾಂತವನ್ನೂ ಆಳುತ್ತಿದ್ದರು. ವಿಷಯಪತಿ, ಭೋಗಪತಿ, ರಾಷ್ಟ್ರಪತಿ ಎಂದು ಕರೆಸಿಕೊಳ್ಳುವವರೂ ಕೂಡ ಪ್ರಾಂತ್ಯಾದಿಕಾರಿಗಳೇ ಆಗಿದ್ದರು (The Early History of the Deccan, P 303-04, Yazdani)

ಕೆಳವಾಡಿ–೨೦೦೦, ಸಿಹರಿ–೧೨, ಸೆಬ್ಲಿ–೩೦, ಆಲತಗೆ–೩೦, ಅರಿಕೊಟ್ಟುಗ–೩೨೦, ಕೊವಳಾಲನಾಡು–೩೦೦, ಅಗಳಿ–೧೨, ಮಾನವಿಷಯ (ಮಣ್ಣೆ–೨೦೦), (ಪಂಚಮುಖಿ, ಪು೧೬೦–೪) ಮುಂತಾದವುಗಳನ್ನು ಇಲ್ಲಿ ಹೆಸರಿಸಬಹುದು.

## ಸೈನ್ಯ

ರಾಷ್ಟ್ರಕೂಟರ ಸೈನ್ಯವು ಸುವ್ಯವಸ್ಥಿತವಾಗಿತ್ತು ಮತ್ತು ಸುಸಜ್ಜಿತವಾಗಿತ್ತು. ಕನ್ನಡ ಯೋಧರುಗಳಿಂದ ತುಂಬಿದ ಸೈನ್ಯವು ಶೌರ್ಯಭರಿತ ಪರಾಕ್ರಮಿಗಳಿಂದ ತುಂಬಿತ್ತು. ಒಬ್ಬೊಬ್ಬ ಯೋಧನೂ ಶೂರನೂ ಸಾಹಸಿಗನೂ ಆಗಿದ್ದನು. ರಾಷ್ಟ್ರಕೂಟ ಸೈನ್ಯವೆಂದರೆ ಶತ್ರುಗಳು ಹೆದರುತ್ತಿದ್ದರು. ಇಂತಹ ಸೈನ್ಯಬಲದಿಂದಲೇ ರಾಷ್ಟ್ರಕೂಟ ಸಾಮ್ರಾಜ್ಯವು ವಿಸ್ತಾರವಾಗಲು ಸಾಧ್ಯವಾಯಿತು. ದೀರ್ಘಕಾಲ ಉಳಿಯಲು ಕೂಡ ಸೈನ್ಯದ ಸಹಾಯವಿದ್ದೇ ಇತ್ತು. ಕವಿ ರಾಜಶೇಖರ, ಅರಬ್ ಪ್ರವಾಸಿಗ ಆಲ್–ಮಸೂದಿ ಮುಂತಾದವರು ರಾಷ್ಟ್ರಕೂಟ ಸೈನಿಕರ ಅಸಾಮಾನ್ಯ ಶಕ್ತಿಪ್ರತಾಪಗಳನ್ನು ಹೊಗಳಿದ್ದಾರೆ. "ಕರ್ಣಾಟಕಬಲಮಚಿನ್ತ್ಯಮಜೇಯಮ್" ಎನ್ನುವ ಮಾತುಗಳನ್ನು ರಾಷ್ಟ್ರಕೂಟರ ಶಾಸನಗಳಲ್ಲಿ ಕಾಣಬಹುದಾಗಿದೆ.

## ಕೇಂದ್ರಾಡಳಿತ

ಕೇಂದ್ರಾಡಳಿತದಲ್ಲಿ ಅರಸನೇ ಪ್ರಮುಖನಾಗಿರುತ್ತಾನೆ. ಆಡಳಿತದಲ್ಲಿ ಅನುಕೂಲವಾಗಲೆಂದು ಉಪವಿಭಾಗಗಳನ್ನು ಮಾಡಿಕೊಳ್ಳುತ್ತಿದ್ದರು. ಅದರಂತೆ ನಾಡಾಡಳಿತ, ಊರಾಡಳಿತ, ಪಟ್ಟಣಗಳ ಆಡಳಿತ, ಅಗ್ರಹಾರಗಳು ಮತ್ತು ಹಳ್ಳಿಯ ಆಡಳಿತಗಳನ್ನಾಗಿ ವಿಂಗಡಿಸಿಕೊಂಡು ಸಮರ್ಥವಾಗಿ ಆಡಳಿತ ನಡೆಸಿದರೆಂದು ತಿಳಿದುಬರುತ್ತದೆ. ಕೆಲವು ಹಿರಿಯ ಅಧಿಕಾರಿಗಳನ್ನು ಕೇಂದ್ರದಿಂದ ನಿಯಮಿಸುತ್ತಿದ್ದರು.

## ಮಂತ್ರಿಮಂಡಲ

ಮಂತ್ರಿಗಳ ಸಂಖ್ಯೆಯು ಎಷ್ಟಿತ್ತೆಂಬುದು ತಿಳಿದುಬಂದಿಲ್ಲ. 'ಯಶಸ್ತಿಲಕ ಚಂಪು' ಗ್ರಂಥದಲ್ಲಿ ಸೋಮದೇವಸೂರಿಯು ಒಬ್ಬ ಮಂತ್ರಿಯನ್ನು ನೆಚ್ಚಿಕೊಂಡಿರಬಾರದೆಂದು ತಿಳಿಸುತ್ತದೆ (Yasastilaka and Indian Culture, P 101, Handique K.K.). ಮಂತ್ರಿಗಳ ಅಧಿಕಾರ ಸ್ವರೂಪವೇನು ಎಂಬುದು ಖಚಿತವಾಗಿ ತಿಳಿದುಬಂದಿಲ್ಲ. ಮೂರನೆಯ ಕೃಷ್ಣನ ಸಾಲೊಟಗಿ ಶಾಸನವು (E.I., Vol IV, P 57, 945 AD) ಪ್ರಧಾನಮಂತ್ರಿ ಮತ್ತು ಸಂಧಿವಿಗ್ರಹಿಯಾಗಿದ್ದ ನಾರಾಯಣನನ್ನು ರಾಜನ ಪ್ರತಿಹಸ್ತ ಎಂದು ಕರೆದಿದೆ. ಚತುರನಾದ ಸಂಧಿವಿಗ್ರಹಾಧಿಕಾರಿಯ ಕಾರ್ಯ ಹೊರನಾಡಿನ ರಾಯಭಾರಿಗಳನ್ನು ಸ್ವಾಗತಿಸಿ ಅರಸನನ್ನು ಭೇಟಿ ಮಾಡಿಸುವುದು, ಅವರಿಗಾಗಿ ಕಾಗದ ಪತ್ರಗಳನ್ನು ಸಿದ್ಧಪಡಿಸುವುದು ಆಗಿತ್ತು (Yasastilaka and Indian Culture, P 106-07, Handique K.K.).

## ನಾಡಾಡಳಿತ (ಪ್ರಾಂತ್ಯಾಡಳಿತ)

ವಿಷಯಕ್ಕೆ ಸಮಾನಾರ್ಥಕವಾಗಿ ನಾಡು ಬಳಕೆಯಾಗಿದೆ. ನಾಡುಗಳ ಒಡೆಯರು ಕೇಂದ್ರಕ್ಕೆ ಸಂಬಂಧಿಸಿದವರಾಗಿದ್ದು, ಇವರು ಅರಸನ ಪಾದಪದ್ಮೋಪಜೀವಿಗಳಾಗಿದ್ದರು. ಇವರಿಗೆ ಬಿರುದುಗಳೂ, ಪಂಚಮಹಾಶಬ್ದ ಗೌರವವೂ ಧ್ವಜಗೌರವ ಮುಂತಾದವುಗಳು ಇರುತ್ತಿದ್ದವು. ಕ್ರಿ.ಶ. ೧೨ ನೆಯ ಶತಮಾನದ ಸಾಲವಾಡಗಿ ಶಾಸನದಲ್ಲಿ (SII, Vol XV, P 46) ರಾಷ್ಟ್ರಕೂಟ ಕೃಷ್ಣನ ಸಾಮಂತಾಗ್ರಣಿಗೆ ಮಾನ್ಯಖೇಡ ತಳಾರ ಹೊರೆಯಮನನ್ನು 'ಶ್ರೀಕೃಷ್ಣ ನರೇಂದ್ರಭೂರಿಭುಜ ದಂಡೋಚ್ಚಂಡಕೌಕ್ಷೇಯಕಂ ಸಾಮಂತೋತ್ತಮ

ರಟ್ಟರಾಜ್ಯದ್ವಿಷಸಾಮಂತ ಸಾಮಂತ ಸಂಕ್ರಂದನಂ' ಎಂದಿದೆ (ತರ್ದವಾಡಿನಾಡು: ಒಂದು ಅಧ್ಯಯನ, ಡಾ|| ಕೊಪ್ಪಾ ಎಸ್.ಕೆ., ಪು. ೧೧೬)

**ಊರಾಡಳಿತ (ಹಳ್ಳಿಗಳ ಆಡಳಿತ)**

ಗ್ರಾಮ, ಸಮೂಹ ಎಂಬ ಪದಗಳು ಹಳ್ಳಿಗಳಿಗೆ ಹೊಂದುತ್ತವೆ. ಹಳ್ಳಿಗಳು ಪುಟ್ಟ ಆಡಳಿತ ವಿಭಾಗಗಳಾಗಿದ್ದರೂ, ಯುದ್ಧ ಮುಂತಾದ ಸಮಯದಲ್ಲಿ ಸೈನಿಕರನ್ನು ಒದಗಿಸುವುದು, ಸೈನ್ಯವು ಸಾಗಲು ದಾರಿ ಮಾಡುವುದು, ಗಾಯಾಳು ಸೈನಿಕರಿಗೆ ಶುಶ್ರೂಶೆ ಮಾಡುವುದು ಮುಂತಾದ ಸಹಾಯಗಳನ್ನು ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಉಳಿದಂತೆ ಸ್ವತಂತ್ರವಾಗಿ ಆಡಳಿತ ನಡೆಸಿಕೊಂಡು ಹೋಗುತ್ತಿದ್ದರು. ತೆರಿಗೆಗಳನ್ನು ಮಾತ್ರ ತಪ್ಪದೆ ಸಲ್ಲಿಸುತ್ತಿದ್ದರು.

ಅಂಜನಾವತಿ ತಾಮ್ರಪಟದಲ್ಲಿ (EI., vol XXIII, pp 8 ff & plates, 800 AD) ಮೂರನೆಯ ಗೋವಿಂದನು ಅಂಜನಾವತಿ ಗ್ರಾಮವನ್ನು ವೃತ್ತಿಯನ್ನಾಗಿ ಮಾಡಿ ಹದಿಮೂರು ಜನರಿಗೆ ಹದಿನೆಂಟು ಸಮಭಾಗಗಳನ್ನಾಗಿ ದಾನ ಮಾಡಿದ ಉಲ್ಲೇಖವಿದೆ.

ಸಣ್ಣಪುಟ್ಟ ಹಳ್ಳಿಗಳು, ಊರುಗಳು, ಗ್ರಾಮಗಳು, ಅಗ್ರಹಾರಗಳು ಊರಾಡಳಿತಕ್ಕೆ ಸೇರುತ್ತವೆ. ರಾಷ್ಟ್ರಕೂಟರ ತಮಿಳು ಶಾಸನಗಳು ಇಂತಹ ಸಭೆಗಳನ್ನು ಹೆಚ್ಚಾಗಿ ಉಲ್ಲೇಖಿಸುತ್ತವೆ. ಅವುಗಳಲ್ಲಿ ಮಹಾಸಭೆ, ಊರಸಭೆ, ಊರವರು(ಸಭೆಯ ಸಮಿತಿ), ಊರ ಆಳುಙ್ಗಣತ್ತಾರ ಸಮಿತಿ (ಸಂಸ್ಥೆ), ಕಾವನೂರು ಸಭೆ, ಕಾಮಪುಲ್ಲೂರು ಸಭೆ, ಪೆರುಮಕ್ಕಳ ಸಮಿತಿ, ವೆನ್‌ಮಲ್ಯೆ ಸಭೆ, ತಿರುವಂದಾದಿ ಸಭೆ, ಚೆಱಿಂಗೂರ ಸಭೆ, ತಣಕೂಱ್ಱು ಸಭೆ, ವಸಗೂರ ಸಭೆ, ವಾಗೂರ ಸಭೆ, ಸಿಱ್ಱಿಇಜ್ಜೂರ ಸಭೆ ಮುಂತಾದವುಗಳನ್ನು ಹೆಸರಿಸಬಹುದು. ರಾಷ್ಟ್ರಕೂಟರ ಕಾಲದ ಶಾಸನಗಳಲ್ಲಿ ಊರನ್ನು ಆಳುತ್ತಿದ್ದ ಅನೇಕ ಅಧಿಕಾರಿಗಳ ಬಗ್ಗೆ ಉಲ್ಲೇಖವಿದೆ. ಊರಾಡಳಿತದಲ್ಲಿ ಗಾಮುಂಡರುಗಳ ಜೊತೆ ಪೆರ್ಗಡೆ, ತಳಾರ, ಸೇನಬೋವ ಮುಂತಾದ ಅಧಿಕಾರಿಗಳು ಸಹಾಯಕರುಗಳಾಗಿರುವ ಉಲ್ಲೇಖಗಳಿವೆ.

## ಪಟ್ಟಣಗಳ ಆಡಳಿತ

ಪಟ್ಟಣಗಳು ಸಾಮಾನ್ಯವಾಗಿ ವ್ಯಾಪಾರಕೇಂದ್ರಗಳಾಗಿರುತ್ತಿದ್ದವು. ಕೇಂದ್ರಕ್ಕೆ ಸಂಬಂಧಿಸಿದಂತೆ ಪಟ್ಟಣದ ಅಧಿಕಾರಿಗಳು ಇರುತ್ತಿದ್ದರೂ ಕೂಡ, ಪ್ರತಿಯೊಂದು ಹಳ್ಳಿ ಪಟ್ಟಣಗಳು ತಾವೇ ಪರಿಪೂರ್ಣವಾಗಿ ಆಡಳಿತ ನಡೆಸುತ್ತಿದ್ದವೆಂದು ಅನೇಕ ಶಾಸನಗಳ ಆಧಾರದಿಂದ ವಿದಿತವಾಗುತ್ತದೆ. ಪಟ್ಟಣಗಳ ಆಡಳಿತವನ್ನು ಪೂರ್ಣವಾಗಿ ನಡೆಸಿಕೊಂಡು ಹೋಗಲು ಸಭೆಯು ಬಹಳ ಸಹಕಾರಿಯಾಗಿತ್ತೆಂದು ತಿಳಿದುಬರುತ್ತದೆ. ತೆರಿಗೆ, ದಾನ ದತ್ತಿ, ಸುಂಕ ಸಂಗ್ರಹ, ಶಿಕ್ಷೆ, ದಂಡ ಮುಂತಾದವುಗಳ ಬಗ್ಗೆ ಕೂಡ ನಿರ್ಧಾರ ತೆಗೆದುಕೊಳ್ಳುತ್ತಿದ್ದರೆನ್ನಬಹುದು. ಪ್ರಮುಖ ಸಂದರ್ಭಗಳಲ್ಲಿ ಅರಸರ ಅಪ್ಪಣೆ ಮೇರೆಗೆ ಕಾರ್ಯ ನಿರ್ವಹಿಸುತ್ತಿದ್ದರೆಂದು ತಿಳಿದುಬರುತ್ತದೆ.

## ಅಗ್ರಹಾರಗಳು

ಅಗ್ರ+ ಆಹಾರ, ಶ್ರೇಷ್ಟ ಆಹಾರ (ಸ್ಥಳ). ಅಂದರೆ ಶ್ರೇಷ್ಠರಿಗೆ ಕೊಟ್ಟ ಸ್ಥಳ, ಬ್ರಾಹ್ಮಣರಿಗೆ ದಾನವಾಗಿ ನೀಡಿರುವ ಸ್ಥಳ ಅಥವಾ ಊರುಗಳೇ ಅಗ್ರಹಾರಗಳಾಗಿರುತ್ತವೆ. ರಾಷ್ಟ್ರಕೂಟರ ಕಾಲದಲ್ಲಿ ಅಗ್ರಹಾರಗಳು ಹೆಚ್ಚಾಗಿ ಕಂಡುಬರುತ್ತವೆ. ಒಂದನೆಯ ಅಮೋಘವರ್ಷನ ಹೂವಿನಹಿಪ್ಪರಗಿ ಶಾಸನವು (SII, Vol XI, Part I, No. 8, 862 AD) ಜ್ಯೋತಿಷ್ಯ, ಶಕುನ ಮುಂತಾದವುಗಳನ್ನು ಹೇಳಬಲ್ಲಂತಹ ಗೋಲೆಯಭಟ್ಟನಿಗೆ ಹಿಪ್ಪರಗೆ ಗ್ರಾಮವನ್ನು ದಾನವನ್ನಾಗಿ ಕೊಟ್ಟಿದ್ದನ್ನು ಉಲ್ಲೇಖಿಸುತ್ತದೆ. ಸಾಲೊಟಗಿ (E.I., Vol IV, P 57, 942 AD) ಶಾಸನದಲ್ಲಿ 'ಅಗ್ರಹಾರ ಸ್ಪೂರಿಕೀರ್ಣಸ್ಸಹಾರಮೇ ಮನೋಹರಃ' ಎಂದು ಉಲ್ಲೇಖಿಸಿದೆ. ಅಗ್ರಹಾರದ ಚಟುವಟಿಕೆಗಳು ಮಹಾಜನರ ಸಮ್ಮುಖದಲ್ಲಿ ನಡೆಯುತ್ತಿತ್ತು ಮತ್ತು ಅವರ ಅನುಮತಿಯಿಂದ ನಡೆಯುತ್ತಿತ್ತು ಎಂಬ ಉಲ್ಲೇಖವಿದೆ. ತೆನ್ನ ಆಹಾರದ ಉಲ್ಲೇಖ ಬೇಗುಮ್ರಾ ತಾಮ್ರಪಟದಲ್ಲಿ ಮಾತ್ರ ಇದೆ.

# ಆಡಳಿತ ವಿಭಾಗಗಳು

ಕ್ರಿ.ಶ. ಸು. ೭೩೫–೯೯೪



## ಸಾಮಾಜಿಕ

### ಸಮಾಜ

ಭಾರತೀಯ ನಾಗರೀಕತೆಗೆ ಬುನಾದಿ ಹಾಕಿಕೊಟ್ಟದ್ದು ಸಿಂಧೂಕಣಿವೆಯ ನಾಗರೀಕತೆ. ನಂತರ ಬಂದ ಇಂಡೋ – ಆರ್ಯನ್ನರು ತಮ್ಮ ಸಂಸ್ಕಾರಗಳು, ಪದ್ಧತಿ, ಕಲ್ಪನೆಗಳಿಗೆ ಸಂಬಧಿಸಿದಂತೆ ಕಠಿಣ ನಿಯಮಗಳನ್ನು ಹೊಂದಿದ್ದರು. ಇವರೇ ವರ್ಣವ್ಯವಸ್ಥೆಯನ್ನು ಹುಟ್ಟುಹಾಕಿದವರೆಂಬ ನಂಬಿಕೆಯಲ್ಲಿ ಮೊದಲಿದ್ದ ವ್ಯವಸ್ಥೆ ಇವರಿಂದ ಸಂಕೀರ್ಣವಾಯಿತೆಂಬುದು ಒಂದು ಸಿದ್ಧಾಂತವಾಗಿದೆ. ಇಂಡೋ ಆರ್ಯನ್ನರಲ್ಲಿ ಮೂರು ಪ್ರಮುಖ ಗುಂಪುಗಳಿದ್ದವು. ರಾಜನ್ಯರು (ಯೋಧರು) ಕುಲದಲ್ಲಿಯೂ ಉತ್ತಮರಾಗಿದ್ದವರು, ಬ್ರಾಹ್ಮಣರು ಪೌರೋಹಿತ್ಯದಲ್ಲಿ ತೊಡಗಿಸಿಕೊಂಡವರು ಮತ್ತು ವ್ಯವಸಾಯವನ್ನು ಕಸುಬಾಗಿ ಮಾಡಿಕೊಂಡ ವೈಶ್ಯರು, ಹೆಚ್ಚು ಧೀಃ ಶಕ್ತಿಯುಳ್ಳವರೆಂದು ಬ್ರಾಹ್ಮಣರು ಉನ್ನತರು ಎನಿಸಿಕೊಂಡರು. ವೈಶ್ಯರು ತಮ್ಮ ಚಟುವಟಿಕೆಗಳನ್ನು ವ್ಯಾಪಾರದ ಕಡೆಗೆ ತಿರುಗಿಸಿಕೊಂಡರು. ಶೂದ್ರರನ್ನು ಇಂಡೋ–ಆರ್ಯನ್ನರು ಮತ್ತು ಮೂಲಭಾರತದ ನಿವಾಸಿಗಳ ಸಂಬಂಧದಿದ ಜನಿಸಿದವರೆಂದು ಹೇಳಲಾಗಿದೆ. ಇವರನ್ನು ಕೃಷಿ ಮತ್ತು ದಾಸ್ಯತ್ವಕ್ಕೆ ಸೀಮಿತಗೊಳಿಸಿಕೊಂಡರು. ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರಿಗಿದ್ದಂತ ದ್ವಿಜರ ಸ್ಥಾನವನ್ನು ಇವರಿಗೆ ಕೊಡಲಿಲ್ಲ.

ಭಾರತದಲ್ಲಿ ಜಾತಿಗಳನ್ನು ತಮ್ಮ ಉದ್ಯೋಗಗಳಿಂದ ಗುರುತಿಸಿಕೊಂಡಿದ್ದಾರೆ. ಅದೇ ರೀತಿಯಲ್ಲಿ ಶ್ರೇಣಿ ವ್ಯವಸ್ಥೆಯಲ್ಲಿಯೂ ಗುರುತಿಸಿಕೊಂಡರು. ಅದೇ ರೀತಿ ಜಾತಿಯ ಆಧಾರದಿಂದ ವೃತಿಯನ್ನು ಗುರುತಿಸಿಕೊಂಡರು. ರಾಷ್ಟ್ರಕೂಟರ ಕಾಲದಲ್ಲಿ ಧಾರ್ಮಿಕವಾಗಿ ಮತ್ತು ಸಾಮಾಜಿಕವಾಗಿ ಅನೇಕ ಬದಲಾವಣೆಗಳಾದವು ಬೌದ್ಧ, ಶೈವ, ಜೈನ, ಹಿಂದೂಧರ್ಮಗಳು, ಇಸ್ಲಾಂ ಮತ್ತು ಇನ್ನೂ ಹಲವಾರು ಸಣ್ಣ ಪುಟ್ಟ ಪಂಥಗಳಿದ್ದರೂ, ಎಲ್ಲವೂ ಪರಸ್ಪರ ಅರಿತು ಬಾಳುತ್ತಿದ್ದವು. ಆದ್ದರಿಂದ ಸಮಾಜದಲ್ಲಿ ಧಾರ್ಮಿಕ ಸಂಘರ್ಷಗಳು ನಡೆದಿರುವುದು ಬಹಳ ಕಡಿಮೆಯೆಂದು ಹೇಳಬಹುದು.

### ಕುಟುಂಬ

ಕುಟುಂಬ ಒಂದು ಮೂಲಭೂತವಾದ ಸಂಸ್ಥೆ. ಭಾರತದಲ್ಲಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಇತ್ತು. ಕುಟುಂಬದ ಹಿರಿಯ ಮಗನೇ ಮುಂದಿನ ಯಜಮಾನ.

ಇವನನ್ನು ವಂಶಾವಳಿಯನ್ನು ಮುಂದುವರಿಸುವವನು ಎಂದು ತಿಳಿಯುತ್ತಿದ್ದರು. ಪಿತೃಪ್ರಧಾನ ವ್ಯವಸ್ಥೆಯೇ ಸ್ತ್ರೀ ಶೋಷಣೆಗೆ ಮೂಲ ಕಾರಣ ಎನ್ನಬಹುದು ಮುಂದಿನ ಯಜಮಾನನಾಗುವವನು ಎನ್ನುವ ಕಾರಣದಿಂದ ಅವನಿಗೆ ಪ್ರಾಧಾನ್ಯತೆ ನೀಡಿದ್ದಾರೆ. ಕುಟುಂಬವು ಅಸ್ತಿತ್ವಕ್ಕೆ ಬರುವುದಕ್ಕೆ ವಿವಾಹವೇ ಮೂಲ.

**ವಿವಾಹ**

ರಾಷ್ಟ್ರಕೂಟರ ಕಾಲದಲ್ಲಿದ್ದ ವಿವಾಹಪದ್ಧತಿಯ ಬಗ್ಗೆ ಹೆಚ್ಚು ತಿಳಿದಿಲ್ಲ. ಇಂದ್ರರಾಜನು ಕೈರಾದಿಂದ ರಾಜಕುಮಾರಿಯನ್ನು ಅಪಹರಿಸಿಕೊಂಡು ಬಂದ ರೀತಿಯಿಂದ ಬಾಲ್ಯವಿವಾಹ ಪದ್ಧತಿಯು ಇರಲಿಲ್ಲವೆಂದು ಊಹಿಸಬಹುದು. ಸ್ಮೃತಿಕಾರರು ಹುಡುಗಿಯರು ಋತುಮತಿಯಾಗುವುದಕ್ಕೆ ಮೊದಲು ಅವಳ ವಿವಾಹ ಮಾಡಬೇಕೆಂದು ವಿಧಿಸುತ್ತಾರೆ (The position of women in Hindu civilization P-67 Altekar A.S.). ಸೋಮದೇವಸೂರಿಯು ಹದಿನಾರು ವರ್ಷದ ಯುವಕ ಯುವತಿಯರ ಪ್ರೇಮವನ್ನು ಸ್ವರ್ಗ ಸದೃಶವಾದುದು ಎನ್ನುತ್ತಾನೆ (Yashasthilaka and Indian Culture, p122). ಕನ್ಯಾಶುಲ್ಕ ಪದ್ಧತಿಯ ಬಗ್ಗೆ ಯಾವ ವಿವರವೂ ಸಿಗುವುದಿಲ್ಲ. ಮಗಳಿಗೆ ಮದುವೆಮಾಡಿ ಕಳಿಸಿಕೊಡುವಾಗ ಮಗಳಿಗೆ ಬೇಕಾದುದೆಲ್ಲ ಕೊಟ್ಟು ಕಳಿಸುತ್ತಿದ್ದರೆಂದು ಊಹಿಸಬಹುದು.

ಮೂರನೆಯ ಗೋವಿಂದನ ರಾಮೇಶ್ವರ ಶಾಸನದಲ್ಲಿ(IA, Vol. XI, p126: ಕ್ರಿ.ಶ.೮೦೩-೮೦೪) ದಂತಿಗನ ಮೇಲೆ ಯುದ್ಧಮಾಡಿ ಗೆದ್ದು ಕಪ್ಪ ತೆಗೆದುಕೊಳ್ಳಲು ಬಂದಾಗ ತುಂಗಭದ್ರೆಯ ದಡದಲ್ಲಿ ಬೀಡು ಬಿಟ್ಟಿದ್ದನು. ಆಗ ಶೂದ್ರರ ಮದುವೆಯ ಕಾಲದಲ್ಲಿ ನೀಡಬೇಕಾದ ಋಣದ ಬಗ್ಗೆ ಉಲ್ಲೇಖವಿದೆ.

ನಾಲ್ಕನೆಯ ಗೋವಿಂದನ ದಂಡಾಪುರ ಶಾಸನದಲ್ಲಿ (SII, vol. XVIII. No.25, 918 AD) ಶೂದ್ರರ ಉಲ್ಲೇಖವಿದೆ. ಮದುವೆಯ ಸಂದರ್ಭದಲ್ಲಿ ನೀಡಬೇಕಾದ ತೆರಿಗೆಯನ್ನು ವಿವರಿಸುವಾಗ ಶೂದ್ರರ ಉಲ್ಲೇಖ ಬಂದಿದೆ. ತೆರಿಗೆಯನ್ನು ಸಂಗ್ರಹಿಸಿ ಜನಹಿತ ಕಾರ್ಯಗಳನ್ನು ಮಾಡುತ್ತಿದ್ದರೆಂಬುದು ಈ ಶಾಸನದಿಂದ ತಿಳಿದುಬರುತ್ತದೆ. ನನ್ನಿವೆಡಂಗನು ಕಟ್ಟಿಸಿದ ಕೆರೆಗೆ ಬ್ರಾಹ್ಮಣರು ಎರಡು ದ್ರಮ್ಮವನ್ನು ಮತ್ತು ಶೂದ್ರರು ಒಂದು ದ್ರಮ್ಮವನ್ನು ನೀಡಬೇಕಂದು ಶಾಸನವು ದಾಖಲಿಸಿದೆ. ದಂಡ ರೂಪದಲ್ಲಿ

ಬರುವ ಹಣವನ್ನು ಕೂಡ ಕೆರೆಗೆ ಅಗತ್ಯವಾದ ಅನುಕೂಲಗಳನ್ನು ಮಾಡಲು ಬಳಸುತ್ತಿದ್ದರೆಂದು ತಿಳಿಯುತ್ತದೆ.

ಒಂದನೆಯ ಅಮೋಘವರ್ಷನ ಖಾಜಿಪೇಟೆ ಶಾಸನದಲ್ಲಿ (ಹಂ.ಕ.ವಿ.ವಿ. ಆಂ.ಪ್ರ. ಕ್ರಿ.ಶ. ೮೭೨) ಬೋವನಿಗೆ ಮದುವೆಯಾದಾಗ ಒಂದು ದ್ರಮ್ಮವನ್ನು ನೀಡಬೇಕೆಂದು ಉಲ್ಲೇಖಿಸಿದೆ. ನಾಲ್ಕನೆಯ ಗೋವಿಂದನ ದಂಡಾಪುರ ಶಾಸನವು (KI. Vol. II, p12: ಕ್ರಿ.ಶ. ೯೧೮) ಬ್ರಾಹ್ಮಣರ ವಿವಾಹ ಕಾಲದಲ್ಲಿ ಮೂರು ದ್ರಮ್ಮವನ್ನು, ಉಪನಯನವಾದರೆ ಎರಡು ದ್ರಮ್ಮವನ್ನು, ಶೂದ್ರರು ಒಂದು ದ್ರಮ್ಮವನ್ನು ಕೊಡಬೇಕೆಂದೂ, ಈ ಹಣವು ಪೆರ್ಗೆರೆಗೆ ಆದಾಯವೆಂದೂ ತಿಳಿಸುತ್ತದೆ.

ಕ್ರಿ. ಶ. ೯೬೧ ರ ಮೂರನೆಯ ಕೃಷ್ಣನ ಬಾಹೂರು ಶಾಸನವು (RITC, No. 42) ವಾಗೂರು ನಾಡಿನ ಕುರುಬರಲ್ಲಿ ಯಾವುದೇ ಮದುವೆಯಾದರೂ ವಾಗೂರಿನ ಮೂಲಸ್ಥಾನ ದೇವರಿಗೆ ಒಂದು ಕುರಿಯನ್ನು ಕೊಡಲು ಒಪ್ಪಿಕೊಂಡಿದ್ದರು. ಬೇರೆ ಪ್ರದೇಶದ ಕುರುಬರು ವಾಗೂರನಾಡಿನಲ್ಲಿ ಬಂದು ವಿವಾಹ ಮಾಡಿದರೆ ಅವರೂ ಕುರಿಯನ್ನು ನೀಡಬೇಕಾಗಿತ್ತು. ಅದನ್ನು ತಪ್ಪಿಸಿದವರಿಂದ ದಂಡರೂಪದಲ್ಲಿ ಎರಡುಕುರಿಗಳನ್ನು ಹಿಡಿಯಲು ನಿರ್ಧರಿಸಿತು.

## ವರ್ಣ

ವರ್ಣಗಳುಂಟಾಗಲು ಆರ್ಥಿಕ ಪರಿಸ್ಥಿತಿಯೇ ಕಾರಣ. ವರ್ಗ ಮತ್ತು ವರ್ಣ ಎರಡೂ ಒಂದೇ ಅರ್ಥದಲ್ಲಿ ಬಳಕೆಯಾಗಿದೆ. ವೃತ್ತಿಗಳು ಅಥವಾ ಜನರು ಮಾಡುವ ಕೆಲಸದ ಆಧಾರದ ಮೇಲೆ ವರ್ಣಗಳು ತಲೆಯೆತ್ತಿದ್ದವೆನ್ನಬಹುದು. ನಾಲ್ಕುವರ್ಣಗಳನ್ನು ಭಾರತದಲ್ಲಿ ಪ್ರಮುಖವಾಗಿ ಉಲ್ಲೇಖಿಸಲಾಗುತ್ತದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ. ಮೊದಲಮೂವರನ್ನು ದ್ವಿಜರೆಂದು ಕರೆದಿದ್ದಾರೆ. ವರ್ಣಗಳಲ್ಲಿ ನಾಲ್ಕನೆಯದಾದ ಶೂದ್ರರಲ್ಲಿ ಅನೇಕ ಜಾತಿಗಳಿರುತ್ತವೆ. ವರ್ಣವ್ಯವಸ್ಥೆಯನ್ನು ಸಿದ್ಧಾಂತಗಳ ಆಧಾರದಿಂದ ಸರಳವಾಗಿದೆ ಎಂದು ಹೇಳಬಹುದು. ಆದರೆ ಆಚರಣೆ ಮಾಡುವಾಗ ಮಾತ್ರ ಅನೇಕ ತೊಡಕುಗಳು ಕಂಡುಬರುತ್ತವೆ. ವರ್ಣಸಿದ್ಧಾಂತದ ಆಧಾರದಿಂದ ಜಾತಿವ್ಯವಸ್ಥೆಯ ಸಂಕೀರ್ಣತೆಯನ್ನು ವಿವರಿಸುವುದು ಕಷ್ಟ. ವರ್ಣವ್ಯವಸ್ಥೆಯ ಉಗಮವನ್ನು ವಿವರಿಸುವ

ಸಿದ್ಧಾಂತಗಳಲ್ಲಿಯೇ ಸಂಧಿಗ್ಧತೆಯಿದೆ. ವರ್ಣ ಮತ್ತು ಜಾತಿ ಸಮಾನ ಅರ್ಥವನ್ನು ಕೊಡುವುದಿಲ್ಲ. ವರ್ಣಗಳು ನಾಲ್ಕೇ, ಆದರೆ ಜಾತಿಗಳು ನೂರಾರು. ವರ್ಣಧರ್ಮವನ್ನು ರಕ್ಷಿಸಬೇಕಾದುದು ರಾಜಧರ್ಮವೆಂದು ಭಾವಿಸಲಾಗಿತ್ತು. ವರ್ಣಸಂಕರಗಳಾಗಿದ್ದುದರಿಂದ ಜಾತಿಗಳು ಹುಟ್ಟಿಕೊಂಡವು. ವೃತ್ತಿಕಾರರನ್ನು ಯಾವಜಾತಿಗೆ ಸೇರಿಸುವುದೆಂದು ತಿಳಿಯದು. ಕಾಲಕ್ರಮೇಣ ವೃತ್ತಿಯ ಆಧಾರದಿಂದ ಜಾತಿಯನ್ನು ಗುರುತಿಸಲು ಪ್ರಾರಂಭಿಸಿದರು.

ಬ್ರಾಹ್ಮಣರು: ಬ್ರಾಹ್ಮಣರನ್ನು ಬಹಳ ಶ್ರೇಷ್ಠರೆಂದು ಭಾವಿಸಲಾಗಿತ್ತು. ರಾಷ್ಟ್ರಕೂಟರ ಅನೇಕ ಶಾಸನಗಳು ಬ್ರಾಹ್ಮಣರಿಗೆ ನೀಡಿದ ದಾನ ಶಾಸನಗಳಾಗಿವೆ. ಬ್ರಾಹ್ಮಣರಿಗೆ ದಾನಮಾಡಿದರೆ ಪುಣ್ಯವುಂಟಾಗುತ್ತದೆ ಎಂಬ ನಂಬಿಕೆಯಿಂದ ಇವರಿಗೆ ದಾನಮಾಡುವ ಸಂಪ್ರದಾಯ ಹಿಂದಿನಿಂದಲೂ ಬೆಳೆದುಕೊಂಡು ಬಂದಿದೆ. ಬ್ರಾಹ್ಮಣರು ಸದಾಕಾಲವೂ ಷಟ್ಕರ್ಮ ನಿರತರಾಗಿರುವುದರಿಂದ ಇಡೀ ಸೃಷ್ಟಿಯು ಸುಸ್ಥಿತಿಯಲ್ಲಿರುತ್ತದೆಂಬ ನಂಬಿಕೆಯೇ ಇದಕ್ಕೆ ಆಧಾರ. ಆದ್ದರಿಂದ ಅವರ ಜೀವನವು ಚಿಂತೆಯಿಲ್ಲದೆ ಸಾಗಲಿ ಎಂಬ ಉದ್ದೇಶದಿಂದ ಅವರಿಗೆ ಸೌಕರ್ಯಗಳನ್ನು ಮಾಡಿಕೊಟ್ಟಿದ್ದಾರೆ. ಊರುಗಳನ್ನು, ಅಗ್ರಹಾರಗಳನ್ನಾಗಿ ಮಾಡಿ ದಾನಮಾಡಿದ್ದಾರೆ. ಬ್ರಾಹ್ಮಣರಿಗೆ ನೀಡಿದ ದಾನದ ಬಗ್ಗೆ ಜನ ಬಹಳ ಗೌರವದಿಂದ ಇರುತ್ತಿದ್ದರು. ಅವರಿಗೆ ನೀಡಿದ ಭೂಮಿಯಮೇಲೆ ತೆರಿಗೆ ಹಾಕುತ್ತಿರಲಿಲ್ಲ. ಅವರಿಗೆ ರಕ್ಷಣೆ ನೀಡದೆ ಅನ್ಯಾಯಮಾಡಿದರೆ ಸರ್ವನಾಶವಾಗುತ್ತದೆಂದು ತಿಳಿದಿದ್ದರು. ಬ್ರಾಹ್ಮಣನನ್ನು ಕೊಲ್ಲುವುದರಿಂದ ಬರುವ ಪಾಪವು ಅತ್ಯಂತ ಘೋರವಾಗಿರುತ್ತದೆಂದು ಶಾಸನಗಳ ಶಾಪಾಶಯಗಳು ವರ್ಣಿಸುತ್ತವೆ. ಆರ್ಯದೇಶೀಯ ಮಹಾಪರಿಷದ್ ಎಂಬ ಬ್ರಾಹ್ಮಣರ ಗುಂಪಿನ ಬಗ್ಗೆ ಮೂರನೆಯ ಕೃಷ್ಣನ ಚಿಂಚೂಳಿ ಶಾಸನದಲ್ಲಿದೆ (EI. Vol. XXXIII, p57).

ಕ್ಷತ್ರಿಯರು: ಬ್ರಾಹ್ಮಣರ ನಂತರ ಬರುವವರೆ ಕ್ಷತ್ರಿಯರು. ಇವರಿಗೆ ಗೋತ್ರಗಳಿರಲಿಲ್ಲ. ಕ್ಷತ್ರಿಯ ಕುಲ ಎಂದೇ ಗುರುತಿಸಿಕೊಂಡಿದ್ದಾರೆ. ಅಲ್ಟೇಕರರು ಊಹಿಸುವುದೇನೆಂದರೆ "ಕ್ಷತ್ರಿಯ ಅರಸರು ವೈದಿಕ ಪರಿಸರದಿಂದ ತಮ್ಮನ್ನು ತಾವು ಬೇರ್ಪಡಿಸಿಕೊಂಡಿದ್ದರು" (Rashtrakutas and Their Times, P 332). ಆದರೆ ಪೌರಾಣಿಕ ದೇವತೆಗಳನ್ನು ವೈಭವೀಕರಿಸುವ ಪ್ರಕ್ರಿಯೆ ನಡೆದಿತ್ತೆನ್ನಬಹುದು. "ಪರಾಶರ ಸ್ಮೃತಿಯಿಂದ ಬ್ರಾಹ್ಮಣರಂತೆ ಕ್ಷತ್ರಿಯರೂ ವ್ಯವಸಾಯವನ್ನೇ ಮಾಡುತ್ತಿದ್ದರು." (ABORI, Vol

XXXVII, P 195). ರಾಷ್ಟ್ರಕೂಟರಿಗೆ ಕೂಡ ಆರಂಭದಲ್ಲಿ ಯಾವುದೇ ಗೋತ್ರವಿರಲಿಲ್ಲ. ನಂತರ ಗೋತ್ರದ ಮೂಲಕ ಗುರುತಿಸಿಕೊಂಡಿರುವುದನ್ನು ಇಲ್ಲಿ ಸ್ಮರಿಸಬಹುದು.

**ವೈಶ್ಯರು:** ಕ್ಷತ್ರಿಯರ ನಂತರ ವೈಶ್ಯರನ್ನು ಗುರುತಿಸಲಾಗಿದೆ. ಇಡೀ ಭಾರತದಲ್ಲಿ ಹರಡಿಕೊಂಡಿರುವ ಇವರು ತಮ್ಮನ್ನು ಒಂದೇ ಹೆಸರಿನಿಂದ ಗುರುತಿಸಿಕೊಂಡಿಲ್ಲ. ಅನೇಕ ಹೆಸರುಗಳು ಒಳಪಂಗಡಗಳನ್ನು ಮಾಡಿಕೊಂಡಿದ್ದಾರೆ. ಕಾಲಕ್ರಮದಲ್ಲಿ ತಮ್ಮ ಗೋತ್ರಗಳನ್ನು ಮರೆತರು. ಮತ್ತು ವೈದಿಕ ಸಂಪ್ರದಾಯಗಳ ಅಭ್ಯಾಸವು ತಪ್ಪಿಹೋಯಿತು. "ವೈಶ್ಯರ ಕರ್ತವ್ಯವೇನೆಂದರೆ ವ್ಯವಸಾಯ. ಭೂಮಿಯಿಂದ ಉತ್ಪಾದನೆ ಮಾಡುವುದು, ಪಶುಸಂಗೋಪನೆ, ಬ್ರಾಹ್ಮಣರ ಆವಶ್ಯಕತೆಗಳನ್ನು ಪೂರೈಸುವುದು ಮುಂತಾದುದಾಗಿತ್ತು" ಎಂದು ಆಲ್ಬೆರೂನಿ ವರದಿ ನೀಡಿದ್ದಾನೆ (Alberuni's India, Vol II, P 136, Sachau). "ಕಾಲಕ್ರಮದಲ್ಲಿ ವೈಶ್ಯರು ಬೌದ್ಧಧರ್ಮದ ಪ್ರಭಾವದಿಂದ ಕೃಷಿಕಾರ್ಯವನ್ನು ನಿಲ್ಲಿಸಿದರು. ಭೂಮಿ ಉಳುವಾಗ, ಬೆಳೆಯನ್ನು ಕತ್ತರಿಸುವಾಗ, ಅನೇಕ ಜೀವಿಗಳಿಗೆ ಹಿಂಸೆಯಾಗುತ್ತದೆ" ಎನ್ನುವ ಅಭಿಪ್ರಾಯವೇ ಇದಕ್ಕೆ ಕಾರಣ (History of Medieval Hindu India, Vol II, P 182, Vaidya C.V.). ವೈಶ್ಯರನ್ನು ಸಾಮಾನ್ಯವಾಗಿ ಕುಶಲತೆಯಿಂದ ಮಾಡುವ, ಗೃಹೋಪಯೋಗಿ ವಸ್ತುಗಳನ್ನು ಮಾರುವವರಾಗಿ ಗುರುತಿಸಲ್ಪಟ್ಟರು (History of India, Vol I, P 6, Elliot and Dowson). ಮಿರಾಷಿಯವರು ಹೇಳುವಂತೆ " ರಾಷ್ಟ್ರಕೂಟರ ಶಾಸನಗಳಲ್ಲಿ ಒಂದು ವರ್ಗದ ವೈಶ್ಯರನ್ನು ಮಾಹಾಜನರೆಂದು ಕರೆದಿದೆ. ಇವರು ಮೂರನೆಯ ವರ್ಗಕ್ಕೆ ಸೇರಿದವರು. ಮೂರನೆಯ ಕೃಷ್ಣ ಚಿಂಚಳಿ ತಾಮ್ರಪಟವು (E.I., Vol XXXII, P 57) ಭಿಮಲ್ ಮೂಲದ ವರ್ತಕರನ್ನು ಉಲ್ಲೇಖಿಸಿದೆ. ಇವರು ರಾಜಾಸ್ಥಾನದ ಸಂಜಾನದಲ್ಲಿದ್ದರು. ವೈಷ್ಣವ ದೇವರನ್ನು ಪ್ರತಿಷ್ಠಾಪಿಸಿ ಅದಕ್ಕೆ ಭಿಲ್ಲಮಲದೇವ ಎಂದು ಹೆಸರಿಟ್ಟರು. ಇದೇ ಅರಸನ ಕಂಧಾರ ಶಾಸನವು (E.I., Vol XXXV, P 105) ಗುಜ್ಜರ ಆಪಣದ ಬಗ್ಗೆ ಉಲ್ಲೇಖಿಸಿದೆ. ಮಹಾರಾಷ್ಟ್ರದಲ್ಲಿ ಗುಜರಾತಿನ ವರ್ತಕಸಂಘವು ಬೇರೂರಿತ್ತು ಎಂದು ತಿಳಿದುಬರುತ್ತದೆ.

**ಶೂದ್ರರು:** ವರ್ಣಗಳಲ್ಲಿ ಕೊನೆಯಸ್ಥಾನದಲ್ಲಿ ಬರುವವರು ಶೂದ್ರರು. ಸೋಮದೇವನೆಂಬ ಜೈನ ಕೃತಿಕಾರನು ಹೇಳುವಂತೆ ಆಂತರಿಕ ಮತ್ತು ಬಾಹ್ಯ

ಪರಿಶುದ್ಧತೆಯಿದ್ದರೆ, ಶೂದ್ರನೂ ಆಧ್ಯಾತ್ಮಿಕನಂತೆ ಜೀವನ ಸಾಗಿಸಬಹುದು (Nithivakyamrita, Vol VII, P 12). ಇದನ್ನು ಪುಷ್ಠೀಕರಿಸುವ ಶಾಸನಗಳು ಯಾವುದೂ ಸಿಕ್ಕಿಲ್ಲ.

ಮೂರನೆ ಗೋವಿಂದನ ಆಲಂಪುರ ಶಾಸನದಲ್ಲಿ ಅಚಲರೆಂಬ ಒಕ್ಕಲುಗಟ್ಟುವವರ ಉಲ್ಲೇಖವಿದೆ. ಇವರನ್ನು ಮುನ್ನೂರೊಕ್ಕಲು ಎಂದು ಕರೆದಿದೆ. ಮೂರನೇ ಇಂದ್ರನ ಹತ್ತಿಮತ್ತೂರು ಶಾಸನದಲ್ಲಿ (SII, Vol I, Part II, P 415, 916 AD) ಸಳುಕಿ ಲೆಣ್ಡೆಯರಸನು ಪುರಿಗೆಱ್ ಮೂನೂಱನ್ನು ಆಳುತ್ತಿದ್ದಾಗ ಭೋಗೇಶ್ವರ ದೇವರಿಗೆ ತೆಲ್ಲಿಗ ಜಯಸಿಂಗಯ್ಯ ಸೆಟ್ಟಿ , ಜುಮ್ಮಿಸೆಟ್ಟಿ, ಮಾಳಿಸೆಟ್ಟಿ, ನಾಮಿಸೆಟ್ಟಿ, ಕಾಂವಿಸೆಟ್ಟಿ ಮುಂತಾದವರು ಸೊಂಟಿಗೆ ಎಣ್ಣೆಯನ್ನು ದಾನಮಾಡಿದರು. ಮೂರನೆಯ ಕೃಷ್ಣನ ಆತಕೂರು ಶಾಸನದಲ್ಲಿ (EC., Vol VII, Mu. No. 42 (III Ma No. 41) 950 AD) ಚೋಳ ರಾಜಾದಿತ್ಯನ ಮೇಲೆ ಯುದ್ಧಮಾಡಿದಾಗ ಮಣಲರನು ಕಾಳಿಯೆಂಬ ನಾಯಿಯನ್ನು ಬೇಡಿ ಪಡೆದನು. ಮುಂದೆ ಕೆಱಲೆ ನಾಡ ಬೆಳತೂರಿನ ಪಡುವಣ ದೆಸೆಯ ಮೊರಡಿಯಲ್ಲಿ ಹಂದಿಯ ಜೊತೆ ಬಿಟ್ಟಾಗ, ಹೋರಾಟದಲ್ಲಿ ನಾಯಿಯು ಸತ್ತಿತು. ಆತಕೂರಿನಲ್ಲಿ ನಾಯಿಗೆ ಕಲ್ಲುನೆಡಸಿ ಹಿರಿಯ ಕೆರೆಯ ಕೆಳಗೆ ಈರ್ಖಂಡುಗ ಭೂಮಿಯನ್ನು ದಾನಮಾಡಿದರು. ಒಕ್ಕಲಿನವರು ಈ ಭೂಮಿಯನ್ನು ನೋಡಿಕೊಂಡರು. ಕಾಲ ಮತ್ತು ಅರಸನ ಉಲ್ಲೇಖ ಇಲ್ಲದ ಲಕ್ಷ್ಮೇಶ್ವರ ಶಾಸನದಲ್ಲಿ (ARIE, 1958-59, No. B 622) ನಾಱ್ಗಾಮುಣ್ಡ ಮತ್ತು ಮುನ್ನೂಱು ಒಕ್ಕಲಿನವರು ಭೂಮಿಯನ್ನು ದಾನಮಾಡಿದ್ದನ್ನು ಉಲ್ಲೇಖಿಸುತ್ತದೆ. ನಾಲ್ಕನೆಯ ಗೋವಿಂದನ ದಂಡಾಪುರ ಶಾಸನದಲ್ಲಿ (SII, vol XVIII, No.25, 918 AD) ಶೂದ್ರರ ಉಲ್ಲೇಖವಿದೆ. ಮದುವೆಯ ಸಂದರ್ಭದಲ್ಲಿ ನೀಡಬೇಕಾದ ತೆರಿಗೆಯನ್ನು ವಿವರಿಸುವಾಗ ಶೂದ್ರರ ಉಲ್ಲೇಖ ಬಂದಿದೆ. ತೆರಿಗೆಯನ್ನು ಸಂಗ್ರಹಿಸಿ ಜನಹಿತ ಕಾರ್ಯಗಳನ್ನು ಮಾಡುತ್ತಿದ್ದರೆಂಬುದು ಈ ಶಾಸನದಿಂದ ತಿಳಿದುಬರುತ್ತದೆ. ನನ್ನಿವೆಡಂಗನು ಕಟ್ಟಿಸಿದ ಕೆರೆಗೆ ಬ್ರಾಹ್ಮಣರು ಎರಡು ದ್ರಮ್ಮವನ್ನು ಮತ್ತು ಶೂದ್ರರು ಒಂದು ದ್ರಮ್ಮವನ್ನು ನೀಡಬೇಕೆಂದು ಶಾಸನವು ದಾಖಲಿಸಿದೆ. ದಂಡ ರೂಪದಲ್ಲಿ ಬರುವ ಹಣವನ್ನು ಕೂಡ ಕೆರೆಗೆ ಅಗತ್ಯವಾದ ಅನುಕೂಲತೆಗಳನ್ನು ಮಾಡಲು ಬಳಸುತ್ತಿದ್ದರೆಂದು ತಿಳಿಯುತ್ತದೆ.

## ಜಾತಿ

ಜಾತಿ ವ್ಯವಸ್ಥೆಯು ಭಾರತದಲ್ಲಿ ಆರಂಭಕಾಲದಿಂದಲೂ ಇದೆ. ಜಾತಿ ಆಧಾರದ ಮೇಲಿರುವ ಸಾಮಾಜಿಕ ಸ್ತರ ವಿನ್ಯಾಸವು ಭಾರತದಲ್ಲಿದೆ. ಜಾತಿಯ ಹಿನ್ನೆಲೆಯು ವ್ಯಕ್ತಿಯ ಸಾಮಾಜಿಕ ಸಂಬಂಧಗಳ ಮೇಲೆ ಪ್ರಭಾವ ಬೀರುತ್ತದೆ. ಸಾಮಾಜಿಕ, ಆರ್ಥಿಕ ಪರಿಸ್ಥಿತಿ ಅಥವಾ ಜೀವನದ ಮೇಲೂ ಪ್ರಭಾವವನ್ನು ಬೀರುತ್ತದೆ. ಜಾತಿ ಹುಟ್ಟಿನಿಂದಲೇ ಬರುವಂತಹುದು. ಅದನ್ನು ಬದಲಾಯಿಸಲು ಸಾಧ್ಯವಿಲ್ಲ. ಶುದ್ಧ, ಅಶುದ್ಧ ಎನ್ನುವ ಪರಿಕಲ್ಪನೆಗಳು ಜಾತಿಗಳ ನಡುವಿನ ಗೋಡೆಯಾಗಿ ನಿಲ್ಲುತ್ತವೆ. ಪ್ರತಿಯೊಂದು ಜಾತಿಗೂ ಅದರದೇ ಆದ ಸಾಂಸ್ಕೃತಿಕ ಲಕ್ಷಣಗಳಿವೆ. ಆಚಾರ ವಿಚಾರಗಳು ಇದರದೇ ಒಂದು ಅಂಗವಾಗಿದೆ. ಆಹಾರಸೇವನೆಗೂ ಇದು ಅನೇಕ ನಿಯಮಗಳನ್ನು ವಿಧಿಸುತ್ತದೆ. ಪ್ರತಿಯೊಂದು ಜಾತಿಯವರೂ ತಮ್ಮದೇ ಶ್ರೇಷ್ಠಜಾತಿಯೆಂದು ಭಾವಿಸುತ್ತಾರೆ. ಮಧ್ಯಕಾಲೀನ ಭಾರತದಲ್ಲಿ ನಾಲ್ಕು ವರ್ಣಗಳಿದ್ದವು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ. ಈ ನಾಲ್ಕು ಜಾತಿಗಳಿಗಿಂತ ಕೆಳಗೆ ಐದನೆಯ ಜಾತಿಯಿದ್ದು ಆ ಜನರನ್ನು ಅಸ್ಪೃಶ್ಯರು ಎಂದು ಕರೆದಿದ್ದಾರೆ. ಮೇಲಿನ ನಾಲ್ಕು ಜಾತಿಗಳವರು ಅಸ್ಪೃಶ್ಯರನ್ನು ಶೋಷಿಸಿದರು ಎಂದು ಹೇಳಬಹುದಾಗಿದೆ.

ಪಟ್ಟಗಾರರು: ಮೂರನೆಯ ಗೋವಿಂದನ ಲಕ್ಷ್ಮೇಶ್ವರ ಶಾಸನವು (E.I., Vol VI, No.16, c 793 AD) ಪುಱಗೆರೆಯ ಮೂಱುನ್ ಕೇರಿಯ ಪಟ್ಟಗಾರ ಸೇಣಿಯವರು ನಾಲ್ವತ್ತು ಸಾಂಪಿನಲ್ಲಿ ಒಂದು ಮುವ್ವತ್ತರ ಕೆರೆಗೂ ಇನ್ನೂರರ ಮೇಲೂ ಅರೆಸಾಂಪು ನೀಡಿದ್ದನ್ನು ದಾಖಲಿಸುತ್ತದೆ. ಇಲ್ಲಿ ಬರುವ ಸಾಂಪಿನ ಅರ್ಥ ಸ್ಪಷ್ಟವಾಗುವುದಿಲ್ಲ. ತುರಗವೆಡಂಗನ ರೋಣದ ಶಾಸನವು (E.I., Vol XIII, No. 15) ನೂರ ನಾಲ್ವರ ಪಟ್ಟಗಾರರಿಗೆ ಭೂದಾನ ಮಾಡಿದ್ದನ್ನು ದಾಖಲಿಸುತ್ತದೆ. ಅಮೋಘವರ್ಷನ ಸುಳ್ಳ ಶಾಸನದಲ್ಲಿ ಪಟ್ಟಗಾರರ ಉಲ್ಲೇಖವಿದೆ (ARIE, 1952-53, No. B 97). ಪುಱಗೆರೆಯಲ್ಲಿ ಪಟ್ಟಗಾರರು ಮೂರುಕೇರಿಗಳಲ್ಲಿ ವಾಸಿಸುತ್ತಿದ್ದರೆಂಬ ಉಲ್ಲೇಖವಿದೆ (EI., Vol VI, P 166, c 793 AD).

**ಮಡಿವಾಳರು (ಅಗಸರು):** ಕನ್ನರದೇವ ಉತ್ತೈರ್‌ಮೇರೊರ್ ಶಾಸನದಲ್ಲಿ (RITC, No. 54, 962 AD) ಮಡಿವಾಳರು ಒಗೆಯುವ ಕಲ್ಲಿನ ಮೇಲಿನ ತೆರಿಗೆಯನ್ನು ಕೊಡಬೇಕೆನ್ನುತ್ತದೆ. ಇದರಿಂದ ಅಗಸರ ಜಾತಿ ಇತ್ತು ಎಂದು ತಿಳಿದು ಬರುತ್ತದೆ.

**ಭವಿಷ್ಯಕಾರ:** ಕಾದರಮಂಡಲಗಿಯ ಶಾಸನವು (SII, Vol XVIII, No. 38) ಸಕ್ಕಿ ಬಸದಿಯ ಫಲ ಮೂರು ಭಾಗ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ, ಅಭ್ಯಾಗತರಿಗೆ ಮತ್ತು ಮುಂದಾಡುವವರಿಗೆ ಎಂದು ತಿಳಿಸುತ್ತದೆ.

**ತಂಬುಲಿಗರು:** ವೀಳೆಯದೆಲೆಗಳನ್ನು ಮಾರಾಟ ಮಾಡುವವರು ತಂಬುಲಿಗರು. ರಾಷ್ಟ್ರಕೂಟ ದೊರೆ ಕನ್ನರನು ಬಾಳ್ಗುಳಿ ಊರಿನ ಜನರಿಗೆ ಒಂದು ಹೇರು ಎಲೆಗೆ ಎರಡು ಪಣ ಮತ್ತು ಒಂದು ಅಡ್ಡ ಸುಂಕ ನೀಡಬೇಕೆಂದು ವಿಧಿಸಿದ್ದನು. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಈ ತೆರಿಗೆಯನ್ನು ಹೆಚ್ಚಿಸಿದಾಗ ಜನರು ವಿರೋಧ ವ್ಯಕ್ತಪಡಿಸಿದರು. ಆಗ ಹಿಂದಿನ ಸುಂಕವನ್ನೇ ಉಳಿಸಿಕೊಳ್ಳುತ್ತಾನೆಂದು ನಂತರದ ಶಾಸನದಿಂದ ತಿಳಿದುಬರುತ್ತದೆ. (SII, Vol IX, i , 76, 991 AD)

**ಕಲ್ಲುಕುಟಿಗ:** ಕನ್ನರದೇವನ ಕಾಪಲ್ಲೆ ಶಾಸನದಲ್ಲಿ (ಮಹಾರಾಜನು ದಾಳಿ ಮಾಡಿದಾಗ ಮಾಸರ(ಯ್ಯ)ನು ಇಪ್ಪತ್ತು ಮಂದಿ ಸಂಗಾತಿಗಳೊಂದಿಗೆ ಮಹಾರಾಜನ ಎದುರು ನಿಂತು ಹೋರಾಡಿ ಮಡಿದನೆಂದು ಉಲ್ಲೇಖಿಸಿದೆ. ಕಲ್ಲು ಕುಟಿಗನು ಶಿಲ್ಪವನ್ನು ಕೆತ್ತಿದನು.

**ಮೂಲಿಗರು:** ಮೂರನೆಯ ಕೃಷ್ಣ ಓಟೂರು ಶಾಸನದಲ್ಲಿ (E.C., Vol VIII, No. SB 70-71, 939 AD) ಮೂಲಿಗನು ಅಭ್ಯಂತರ ಸಿದ್ಧಿಯಿಂದ ಆಳುತ್ತಿದ್ದನೆಂದು ತಿಳಿದುಬರುತ್ತದೆ.

**ಬಡಗಿ:** ರಾಷ್ಟ್ರಕೂಟರ ಕಾಲದಲ್ಲಿ ಮರಗೆಲಸವು ಯಾವಪ್ರಮಾಣದಲ್ಲಿ ನಡೆಯುತ್ತಿತ್ತು ಎಂಬುದಕ್ಕೆ ಹೆಚ್ಚಿನ ಮಾಹಿತಿಗಳು ದೊರಕುವುದಿಲ್ಲ. ಆದರೆ ಇರಲಿಲ್ಲ ಎನ್ನುವುದು ಸಾಧ್ಯವಿಲ್ಲ. ಕ್ರಿ.ಶ. ಸುಮಾರು ೭೮೦ ರ ಆಲಂಪುರ ಶಾಸನದಲ್ಲಿ (APGAS, Vol III, No.99) ಧಾರಾವರ್ಷ ಧ್ರುವನ ಆಳ್ವಿಕೆಯಲ್ಲಿ ಬಾಲವರ್ಮರಸನು ಆಲಂಪುರ – ೩೦ ಅನ್ನು ಆಳುತ್ತಿದ್ದನು. ಆ ಸಮಯದಲ್ಲಿ ನೀಡಿದ ಅನೇಕ ದಾನಗಳಲ್ಲಿ ಬಡಗಿ ಶ್ರೀಧರೋವಜನಿಗೆ ಮೂವತ್ತು ಮತ್ತರು ಭೂಮಿಯನ್ನು ದಾನ ನೀಡಿದ್ದನ್ನು ಉಲ್ಲೇಖಿಸಿದೆ. ಸೋಮಾದಿಭಟ್ಟರು ಮಾಘಾಪತ್ಯವನ್ನು ಮಾಡುತ್ತಿದ್ದಾಗ ಮುನ್ನೂರ

ಅರವತ್ತು ಪತ್ತರ್ಪನಾಸಿನ ಮೇಲೆ ಶ್ರೀವಾಗಿಲು ನಿರ್ಮಾಣಮಾಡಿದ ದಿನ ಈ ದಾನವನ್ನು ನೀಡಲಾಗಿದೆಯೆಂದು ತಿಳಿದುಬರುತ್ತದೆ. ಬಡಗಿಯು ಮರದ ಕೆಲಸವನ್ನು ಮಾಡುವವನಾಗಿರುವುದರಿಂದ ನಿರ್ಮಾಣ ಮಾಡಿದ ಶ್ರೀಬಾಗಿಲು ಮರದ್ದೆಂದು ಊಹಿಸಬಹುದಾಗಿದೆ. ಓಜ ಎಂಬ ಶಬ್ದ ಕೆತ್ತುವ ಮತ್ತು ಕೊರೆಯುವ ಕೆಲಸಮಾಡುವವರಿಗೆಲ್ಲ ಅನ್ವಯವಾಗುತ್ತಿತ್ತೆಂದು ಭಾವಿಸಬಹುದಾಗಿದೆ. ಮರಗೆಲಸವು ಇತ್ತು ಎಂಬುದು ನಿರ್ವಿವಾದ. ಮನೆಯ ಕಿಟಕಿ, ಬಾಗಿಲುಗಳಿಗೆ ಮರವನ್ನೇ ಬಳಸುತ್ತಿದ್ದರು ಎಂದು ಭಾವಿಸಲಡ್ಡಿಯಿಲ್ಲ. ದೋಣಿ ಉದ್ಯಮ ಕೂಡ ಇರುವುದರಿಂದ ಬಡಗಿಗಳಿದ್ದರು ಮತ್ತು ಮರಗೆಲಸವು ಹೆಚ್ಚಿನ ಪ್ರಮಾಣದಲ್ಲಿಯೇ ನಡೆಯುತ್ತಿತ್ತು ಎಂದು ಹೇಳಬಹುದಾಗಿದೆ.

**ಸಮ್ಮಗಾಱ:** ಚರ್ಮದ ವಸ್ತುಗಳನ್ನು ಮಾಡಿಕೊಡುವವರು ಸುಮ್ಮಗಾಱರು ಎಂಬ ಉಲ್ಲೇಖ ಶಾಸನದಲ್ಲಿದೆ. (K1, I, 4, c750 AD)

**ದೊಂಬರು:** ದೊಂಬರ ಜಾತಿ ಕಾಡವನು ತುರುಗಾಳಗದಲ್ಲಿ ಸತ್ತನೆಂಬ ವಿವರದಿಂದ ದೊಂಬರ ಅಸ್ತಿತ್ವವು ತಿಳಿಯುತ್ತದೆ. (E.I., Vol VI, P 163, c 780 AD)

ಹಿಟ್ಟು ಎನ್ನುವ ಪದ ಕೂಡ ಜಾತಿವಾಚಕವಾಗಿರುವುದು ಕಂಡುಬರುತ್ತದೆ. ಎಂಟು ಹಿಟ್ಟು, ಹನ್ನೆರಡು ಹಿಟ್ಟುಗಳ ಉಲ್ಲೇಖ ಶಾಸನಗಳಿವೆ. ಮೂಲಿಗರು ಎಂಬ ಜಾತಿಯವರು ಕೂಡ ಹಿಟ್ಟು ಎನ್ನುವ ಗುಂಪಿನಲ್ಲಿಯೇ ಬರುತ್ತಾರೆ. ಮೇದರ (ಬುಟ್ಟಿಹೆಣೆಯುವವರು), ಬಾಣಿಗಾರ, ಬಳೆಗರ, ಸೇಗರ ಮುಂತಾದ ಜಾತಿಗಳ ಉಲ್ಲೇಖವು ಶಾಸನಗಳಲ್ಲಿ ಸಿಗುತ್ತವೆ.

## ನ್ಯಾಯ

ಪ್ರಾಚೀನ ಕಾಲದಲ್ಲಿ ನ್ಯಾಯ ತೀರ್ಮಾನ ಮಾಡಲು ಇದ್ದ ನ್ಯಾಯಾಲಯಗಳು ದೇವಾಲಯಗಳೇ ಆಗಿದ್ದವು. ಇಲ್ಲಿ ನೀಡಿದ ತೀರ್ಮಾನದ ಬಗ್ಗೆ ಜನರಿಗೆ ಬಹಳ ಗೌರವವಿತ್ತು. ದೇವಾಲಯದಲ್ಲಿ ಒಮ್ಮೆ ಆದ ತೀರ್ಮಾನವನ್ನು ಜನ ಒಪ್ಪಿ ಅದರಂತೆಯೆ ನಡೆಯಬೇಕೆಂಬ ಒಪ್ಪಂದವಿತ್ತು. ಇನ್ನು ಹೊರಗಿನ ಯಾವುದೇ ಕಾರಣಗಳು ವ್ಯಕ್ತಿಯ ಅಪರಾಧವನ್ನು ಸಾಬೀತು ಪಡಿಸದಿದ್ದರೆ ಆಗಲೂ ಸಹ ನ್ಯಾಯ ತೀರ್ಮಾನವು ದೇವಾಲಯದಲ್ಲಿ ನಡೆಯುತಿತ್ತು. ಇಲ್ಲಿಗೆ ಮೀರಿದ್ದು ಅಪರೂಪಕ್ಕೆ ಚಕ್ರವರ್ತಿಯ

ವರೆಗೂ ಹೋಗುತಿತ್ತು. ದೇವಾಲಯದಲ್ಲಿ ಅಪರಾಧಿಯನ್ನು ಕಂಡುಹಿಡಿಯಲು ಅನೇಕ ವಿಧಾನಗಳಿದ್ದವು. ಅದನ್ನು ದಿವ್ಯಗಳೆಂದು ಕರೆದಿದೆ. ಧರ್ಮಶಾಸ್ತ್ರ, ನ್ಯಾಯಗ್ರಂಥಗಳಲ್ಲಿ ಕೂಡಾ ಇವುಗಳಬಗ್ಗೆ ಉಲ್ಲೇಖವಿದ್ದು, ಇದನ್ನು ನ್ಯಾಯ ತೀರ್ಮಾನ ಮಾರ್ಗಕ್ಕೆ ಅಂಗೀಕೃತ ಗೊಳಿಸಿದ್ದಾರೆ.

## ದಿವ್ಯ

ಅಪರಾಧವನ್ನು ಕಂಡುಹಿಡಿಯುವ ವಿಧಾನಗಳಲ್ಲಿ ದಿವ್ಯವು ಒಂದಾಗಿದೆ. ಸಾಕ್ಷಿಗಳಿಲ್ಲದ ಸಂದರ್ಭದಲ್ಲಿ ದೈವಸಾಕ್ಷಿಯ ಸಹಾಯವನ್ನು ಪಡೆಯುತ್ತಿದ್ದರು. ದಿವ್ಯವನ್ನು ಅನುಷ್ಠಾನಗೊಳಿಸಲು ಹಲವಾರು ನಿಯಮಗಳಿದ್ದವು, ಮತ್ತು ಅವುಗಳನ್ನು ಬಹಳ ಎಚ್ಚರಿಕೆಯಿಂದ ನಡೆಸುತ್ತಿದ್ದರು. ಎರಡು, ಐದು ಮೊದಲಾದ ಅನೇಕ ಬಗೆಯ ದಿವ್ಯಗಳನ್ನು ಶಾಸ್ತ್ರಗಳು ಉಲ್ಲೇಖಿಸಿವೆ. ಕೋಶ, ತಂಡುಲ, ಅಗ್ನಿದಿವ್ಯ, ಜಲದಿವ್ಯ, ವಿಷದಿವ್ಯ ಮೊದಲಾದವುಗಳನ್ನು ಹೆಸರಿಸಬಹುದಾಗಿದೆ.

ರಾಷ್ಟ್ರಕೂಟರ ಕಾಲದಲ್ಲಿ ಕೂಡಾ ದಿವ್ಯ ನ್ಯಾಯಗಳು ನಡೆಯುತ್ತಿದ್ದವು. ಆದರೆ ಶಾಸನೋಲ್ಲೇಖಗಳು ಗಮನಾರ್ಹವಾಗಿ ದೊರೆತಿಲ್ಲ. ದಿವ್ಯದ ತೀರ್ಮಾನವು ಎಲ್ಲ ದೇವಾಲಯಗಳಲ್ಲೂ ನಡಯುತ್ತಿರಲ್ಲಿಲ್ಲ. ದಿವ್ಯವನ್ನು ನಡೆಸಬೇಕಾದಾಗ ಅದಕ್ಕೆ ನಿರ್ದಿಷ್ಟ ಹಣವನ್ನು ಪಡೆಯುತ್ತಿದ್ದರು. ದಿವ್ಯಗಳು ಕೂಡಾ ದೇವಾಲಯಗಳಿಗೆ ಆದಾಯ ಬರುವ ಒಂದು ಕಾರ್ಯವಾಗಿತ್ತು. ಜನರು ದಿವ್ಯನ್ಯಾಯಕ್ಕೆ ಹೆದರಿ, ಅಧರ್ಮ ಮಾರ್ಗದಲ್ಲಿ ನಡೆಯಲು ಹಿಂಜರಿಯುತ್ತಿದ್ದರು.

## ದೋಷ – ಕಾಣಿಕೆ

ಕಾಣಿಕೆಯು ಅರಸ, ಹಿರಿಯ ಅಧಿಕಾರಿಗಳು ಬಂದಾಗ ನೀಡಬೇಕಾದುದಾಗಿದ್ದು, ಇದು ವಸ್ತುವಿನ ರೂಪದಲ್ಲಿರುತಿತ್ತೋ ಅಥವಾ ವಸ್ತುವಿನ ರೂಪದಲ್ಲಿರುತ್ತಿತ್ತೋ ಹೇಳಲಾಗದು. ಸೋತ ಅರಸರು ಅಥವಾ ಶರಣಾಗತರಾದ ಅರಸರು ನೀಡುವ ಕಪ್ಪಕಾಣಿಕೆಯೂ ಇದೇ ಅರ್ಥದಲ್ಲಿ ಬರುತ್ತದೆಂದು ಊಹಿಸಬಹುದಾಗಿದೆ. ದೇವಾಲಯದಲ್ಲಿ ನೀಡುವ ಕಾಣಿಕೆಯನ್ನು ತಪ್ಪು ಕಾಣಿಕೆ ಎಂದೂ ಕರೆಯುವುದರಿಂದ ಬಹುಶ: ಇದು ಹಣದ ರೂಪದಲ್ಲಿಯೇ ಇತ್ತೆಂದು ಭಾವಿಸಬಹುದಾಗಿದೆ.

ಧಾರ್ಮಿಕ ಕಾರ್ಯಗಳಿಗೆ ಭಕ್ತಿ, ಗೌರವ, ಕೆಲವೊಮ್ಮೆ ಭಯದಿಂದ ನೀಡುವ ಹಣವನ್ನು ಕಾಣಿಕೆಯೆಂದು ಕರೆಯುತ್ತಿದ್ದರೆನ್ನಬಹುದು. ಇವೆಲ್ಲ ವಿಶೇಷಸಂದರ್ಭದಲ್ಲಿ ನೀಡುತ್ತಿದ್ದ ಕಾಣಿಕೆಗಳು. ಸಾಲೊಟಗಿಯ ಶಾಸನದಲ್ಲಿ ವಿವಾಹದ ಸಮಯದಲ್ಲಿ ಶಾಲೆಗೆ ೫ ಪುಷ್ಪಗಳು, ಉಪನಯನ ಸಂದರ್ಭದಲ್ಲಿ 2½ ಪುಷ್ಪಗಳು, ಚೂಡಾಕರ್ಮದ ಸಮಯದಲ್ಲಿ 1¼ ಪುಷ್ಪಗಳನ್ನು ಕೊಡಲು ಊರವರು ಒಪ್ಪಿದ್ದರೆಂದು ಉಲ್ಲೇಖಿಸಲಾಗಿದೆ.

## ಅಗ್ರಹಾರ

ಅಗ್ರಹಾರಗಳನ್ನು ಸಾಮಾನ್ಯವಾಗಿ ಬ್ರಾಹ್ಮಣರಿಗೆ ದಾನವಾಗಿ ನೀಡುತ್ತಿದ್ದರು. ಸಾಮಾನ್ಯವಾಗಿ ಅಗ್ರಹಾರಗಳನ್ನು ದಾನವಾಗಿ ಪಡೆದವರನ್ನು ಮಹಾಜನರೆಂದು ಕರೆಯುತ್ತಾರೆ. ಅಲ್ಟೇಕರರು ಮಹಾಜನರು ಕೆಲವು ಸಂಖ್ಯೆಯಲ್ಲಾದರೂ ಬೇರೆಯವರಿರಬಹುದು ಎಂದು ಅಭಿಪ್ರಾಯ ಪಡುತ್ತಾರೆ (The Rashtrakutas and their times, pp 200-01). ಈ ಅಭಿಪ್ರಾಯವನ್ನು ಒಪ್ಪುವುದು ಸಾಧ್ಯವಿಲ್ಲ. ಅವರು ಉದಾಹರಣೆಯಾಗಿ ಕೊಡುವವರೂ ಬ್ರಾಹ್ಮಣರೇ ಆಗಿದ್ದಾರೆ. ಒಂದೊಂದು ಅಗ್ರಹಾರದಲ್ಲೂ ಅನೇಕ ಸಂಖ್ಯೆಯಲ್ಲಿ ಮಹಾಜನರಿರುತ್ತಿದ್ದರು. ಮಹಾಜನರು ಅಗ್ರಹಾರದ ಒಡೆಯರಾದ್ದರಿಂದ ಅವರಿಗೆ ಅನೇಕ ಅಧಿಕಾರಗಳಿರುತ್ತಿದ್ದವು. ಅಗ್ರಹಾರದ ಸರ್ವ ಜವಾಬ್ದಾರಿಯೂ ಅವರದೇ ಆಗಿದ್ದು, ಅದರ ಆಡಳಿತವನ್ನು ಅವರೇ ನೋಡಿಕೊಳ್ಳಬೇಕಾಗಿತ್ತು. ಊರಿನಲ್ಲಿ ನಡೆಯುವ ಎಲ್ಲಾ ಕಾರ್ಯಗಳೂ ಮಹಾಜನರ ಸಮ್ಮುಖದಲ್ಲಿಯೇ ನಡೆಯುತ್ತಿತ್ತು. ಅಗ್ರಹಾರದ ಉತ್ಪತ್ತಿಯೆಲ್ಲವೂ ಬ್ರಾಹ್ಮಣರಿಗೇ ಸಲ್ಲುತ್ತಿತ್ತು.

ಅಗ್ರಹಾರಗಳ ಮೇಲೆ ಯಾವುದೇ ರೀತಿಯ ಸುಂಕವನ್ನೂ ಹಾಕುವಂತಿರಲಿಲ್ಲ. ಕ್ರಿ.ಶ. ೯೪೨ ರ ಶಾಸನವೊಂದು ತೆರಿಗೆ ನೀಡಬೇಕೆಂದು ಮಹಾಮಾಂಡಲಿಕ ಬೂತಾರ್ಯನು ಹೇಳಿದಾಗ, ಒಂದು ಅಕ್ಷತೆಯನ್ನೂ ಕೊಡುವುದಿಲ್ಲವೆಂದು ಪ್ರತಿಜ್ಞೆ ಮಾಡಿ, ಮಹಾಜನರ ಆಶೀರ್ವಾದ ಪಡೆದು ಹೋರಾಡಿ ಮಡಿಯುತ್ತಾನೆ. ಅಗ್ರಹಾರಗಳು ವಿದ್ಯಾಕೇಂದ್ರಗಳಾಗಿದ್ದರಿಂದ, ಅದರಲ್ಲಿ ವಾಸಿಸುತ್ತಿದ್ದವರು ದೊಡ್ಡ ವಿದ್ವಾಂಸರುಗಳಾಗಿದ್ದರು. ಅನೇಕ ವಿದ್ಯೆಗಳಲ್ಲಿ ಪಾರಂಗತರಾಗಿರುತ್ತಿದ್ದರು.

ಅಗ್ರಹಾರದಲ್ಲಿ ವಿದ್ಯಾರ್ಥಿಗಳಿಗೆ ಊಟ ಹಾಕುವ ವ್ಯವಸ್ಥೆಯೂ ಕೆಲವೊಮ್ಮೆ ಇರುತ್ತಿತ್ತು. ಊಟದ ವ್ಯವಸ್ಥೆ ಇಲ್ಲದೇ ಹೋದಾಗ ವಿದ್ಯಾರ್ಥಿಯು ಭಿಕ್ಷಾನ್ನದ ಮೊರೆ ಹೋಗಬೇಕಿತ್ತು.

ಒಟ್ಟಿನಲ್ಲಿ ಅಗ್ರಹಾರಗಳು ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿತ್ತು. ಸಮಾಜದಲ್ಲಿ ಅಗ್ರಹಾರಗಳಿಗೆ, ಅವುಗಳ ಒಡೆಯರಿಗೆ, ಮಹಾಜನರುಗಳಿಗೆ ಗೌರವ ಸ್ಥಾನವಿತ್ತು.

## ದೇವಾಲಯ

ದೇವಾಲಾಯಗಳು ಸಾಮಾಜಿಕೆ ಸಂಸ್ಥೆ ಹಾಗೂ ಸಾಂಸ್ಕೃತಿಕ ಕೇಂದ್ರಗಳಾಗಿದ್ದವು. ಇವು ಕಲಾತ್ಮಕ ಅಭಿವ್ಯಕ್ತಿಯ ತಾಣವಾಗಿದ್ದವು. ರಾಷ್ಟ್ರಕೂಟರ ಕಾಲದ ಹೊತ್ತಿಗೆ ಸಾಮಾನ್ಯ ಜನರಲ್ಲೂ ದೇವಾಲಯ ನಿರ್ಮಾಣ ಮಾಡುವ ಅಸಕ್ತಿ ಹೆಚ್ಚಾಗಿದ್ದಿತು. ಇದುವರೆವಿಗೂ ಕೇವಲ ರಾಜಾಶ್ರದಲ್ಲಿ ನಿರ್ಮಾಣವಾಗುತ್ತಿದ್ದ ದೇವಾಲಯಗಳಲ್ಲದೇ, ಅರಸಿಯರು, ಅಧಿಕಾರಿಗಳು, ಊರಗಾವುಂಡರು, ವರ್ತಕರು, ಮುಂತಾದ ವರ್ಗಗಳವರು ದೇವಾಲಯಗಳನ್ನು ನಿರ್ಮಿಸಲು ಮುಂದಾದರು. ಈ ರೀತಿ ನಿರ್ಮಾಣ ಕಾರ್ಯಗಳು ಹೆಚಿವಿದ್ದುದರಿಂದ ಶಿಲ್ಪಿಗಳಿಗೆ ಪ್ರೋತ್ಸಾಹ ಹೆಚ್ಚಿತು. ಇದರ ಫಲವಾಗಿ ಈ ಕಾಲದಲ್ಲಿ ಶಿಲ್ಪಕಲೆಯು ಸಹ ತನ್ನ ಉಚ್ಛ್ರಾವನ್ನು ಮುಟ್ಟಿತು. ಬಾವಿಗಳಲ್ಲೂ ಸಹ ಶಿಲ್ಪಗಳನ್ನು ಕೆತ್ತುವ ಪರಿಪಾಠ ಬೆಳೆದಿತ್ತು. ಇದಕ್ಕೆ ಸಿರಿವಾಳದ ಬಾವಿಗಳು ಸಾಕ್ಷಿಯಾಗಿದೆ. ಈ ಬಾವಿಗಳಲ್ಲಿ ಪಂಚತಂತ್ರ, ಭಾಗವತ, ರಾಮಾಯಣ, ಮಹಾಭಾರತ ಕಥೆಗಳನ್ನು ಪಟ್ಟಿಕೆಗಳಲ್ಲಿ ಕೆತ್ತಲಾಗಿದೆ. ಇದರಿಂದ ಜನರಿಗೆ ಪೌರಾಣಿಕ ಪ್ರಜ್ಞೆ ಹಾಗೂ ನೈತಿಕ ಮೌಲ್ಯಗಳಲ್ಲಿದ್ದ ಗೌರವ ವ್ಯಕ್ತವಾಗತ್ತದೆ.

ಇದಲ್ಲದೆ ದೇವಾಲಯಗಳು ನೇರವಾಗಿ ಹಲವಾರು ಚಟುವಟಿಕೆಗಳಿಗೆ ಆಶ್ರಯ ಸ್ಥಾನವಾಗಿತ್ತು. ಪೂರ್ವಕಾಲದಲ್ಲಿ ದೇವಾಲಯಗಳು ವಿದ್ಯಾಕೇಂದ್ರಗಳಾಗಿದ್ದವು. ದೇವಾಲಯಗಳಲ್ಲೂ ಮತ್ತು ಅದಕ್ಕೆ ಸೇರಿದ ಮಠಗಳಲ್ಲೂ ಯತಿಗಳು ಮತ್ತು ಪಂಡಿತರು ಪೋಷಿತರಾಗುತ್ತಿದ್ದುದರಿಂದ ಅಲ್ಲಿ ಹಲವು ಶಾಖೆಗಳ ವಿದ್ಯೆಗಳನ್ನು ಕಲಿಯಲು ಅವಕಾಶವಾಗುತ್ತಿತ್ತು. ಕೆಲವೊಂದು ದೇವಾಲಯಗಳು ಪ್ರತ್ಯೇಕ ಪಂಥಗಳಿಗೆ (ಕಾಳಾಮುಖ, ಪಾಶುಪತ, ಲಾಕುಳೀಶ ಮುಂತಾದ) ಸೇರಿದ್ದರಿಂದ ಅವು ಆ ಪಂಥದ

ಸಿದ್ಧಾಂತಗಳನ್ನು ಬೆಳೆಸುವ ಮತ್ತು ಬೋಧಿಸುವ ಕೇಂದ್ರಗಳಾಗಿದ್ದವು. ದೇವಾಲಯ ನಿರ್ಮಾಣದಿಂದಾಗಿ ಹಲವಾರು ಅಗ್ರಹಾರಗಳು, ಮಠಗಳು ಮೊದಲಾದವುಗಳ ಸಂಖ್ಯೆ ಹೆಚ್ಚಿತು. ಇಂತಹ ಕಡೆಗಳಲ್ಲಿ ವೇದಾಧ್ಯಯನ ಇತ್ಯಾದಿಗಳು ನಿರಂತರವಾಗಿ ನಡೆಯುತ್ತಿದ್ದುದರಿಂದ ವೈದಿಕಮತಕ್ಕೂ ಪ್ರೋತ್ಸಾಹವಿದ್ದಿತು. ಈ ರೀತಿ ಹಲವಾರು ಮತೀಯ ಸಿದ್ಧಾಂತಗಳು ಒಟ್ಟಿಗೆ ಬೆಳೆಯಲು ಸಾಧ್ಯವಾಯಿತು.

ದೇವಾಲಯವು ವಿದ್ಯಾಕೇಂದ್ರವಾಗಿತ್ತು. ಹೇಗೆಂದರೆ ದೇವಾಲಯದಲ್ಲಿ ಮುನಿಗಳು ವಾಸವಾಗಿರುತ್ತಿದ್ದುದರಿಂದ ತಮ್ಮ ಬಿಡುವಿನ ವೇಳೆಯಲ್ಲಿ ಉನ್ನತ ವಿಚಾರಗಳ ಬಗ್ಗೆ ಚಿಂತನೆ ನಡೆಸುತ್ತಾ, ಜನರ ಬೌದ್ಧಿಕ ಸಮಸ್ಯೆಗಳಿಗೆ ಪರಿಹಾರ ನೀಡುತ್ತಿದ್ದರು. ಯಾವುದೇ ವಿಚಾರವನ್ನು ಕ್ರಮ ಬದ್ಧವಾಗಿ ಅರಿತುಕೊಳ್ಳುತ್ತಿದ್ದರು. ವಿದ್ಯಾದಾನ ನಡೆಯುತ್ತಿದ್ದುದರಿಂದ ಕಾಲಕ್ರಮದಲ್ಲಿ ಬೇರೆಯವರೂ ಅಲ್ಲೇ ಕಲಿಯಲು ಹೋಗುತ್ತಿದ್ದರು. ವಿದ್ಯೆ ಕಲಿಯುವ ಸ್ಥಳವಾದುದರಿಂದ ವಿದ್ಯಾಕೇಂದ್ರ, ಪಾಠಶಾಲೆ, ಮಠ, ಸಾಲಿಮಠ ಎಂದು ಮುಂತಾಗಿ ಕರೆಯಲು ಪ್ರಾರಂಭಿಸಿದರು. ಸ್ವಾಮಿ ಕಾರ್ತೀಕೇಯ ತಪೋವನ. ಸಾಲೊಟಗಿ, ಕೋಡಿಮಠ ಮುಂತಾದವುಗಳನ್ನು ಇದಕ್ಕೆ ಉದಾಹರಣೆಯಾಗಿ ನೀಡಬಹುದಾಗಿದೆ.

ಅಲ್ಪ ಆದಾಯದ ಜನರು ನಂದಾದೀಪಕ್ಕೆ ಎಣ್ಣೆ ಕೊಡುವುದರ ಮೂಲಕ, ದೇವಾಲಯವನ್ನು ಶುಚಿಯಾಗಿ ಇಡುವುದರ ಮೂಲಕ, ಪೂಜಾದಿಗಳ ನೈವೇದ್ಯಕ್ಕೆ, ಅಲಂಕಾರಕ್ಕೆ, ಅಭಿಷೇಕಕ್ಕೆ ಮುಂತಾದವುಗಳಿಗೆ ದಾನ ನೀಡಿ ಸೇವೆಸಲ್ಲಿಸಲು ಅವಕಾಶವಿತ್ತು. ದೇವಾಲಯದಲ್ಲಿ ವಿಶೇಷ ಪೂಜೆಗಳನ್ನು, ಹಬ್ಬಹರಿದಿನಗಳನ್ನು ಆಚರಿಸುತ್ತಿದ್ದುದರಿಂದ, ಎಲ್ಲ ವರ್ಗದ ಜನರು ಒಂದೆಡೆ ಸೇರುವ ಸಂದರ್ಭ ಉಂಟಾಗುತ್ತಿತ್ತು. ಇಂತಹ ಸಂದರ್ಭಗಳಲ್ಲಿ ಜನರು ದೇವರ ಅಂಗಭೋಗ ಸೇವೆಗಳನ್ನು ಮಾತ್ರವಲ್ಲದೆ ರಂಗಭೋಗದ ಸೇವೆಗಳನ್ನು ವೀಕ್ಷಿಸಿ ಸಂತೋಷ ಪಡುತ್ತಿದ್ದರು. ಅಂಗಭೋಗವು ದೇವರ ವಿಗ್ರಹಕ್ಕೆ ಅಭಿಷೇಕ, ಪೂಜೆ, ಅಲಂಕಾರ ನೈವೇದ್ಯಗಳಿಗೆ ಸೇರಿದ್ದಾದರೆ, ರಂಗಭೋಗವು ದೇವರ ಸೇವೆಯ ಅಂಗವಾಗಿ ನೃತ್ಯ, , ಸಂಗೀತ, ವಾದನಗಳಿಂದ ಕೂಡಿರುತ್ತಿತ್ತು.

ಇನ್ನು ದೇವಾಲಯವು ನ್ಯಾಯಾಲಯವೂ ಆಗಿ ಕಾರ್ಯ ನಿರ್ವಹಿಸುತ್ತಿತ್ತು. ನ್ಯಾಯ ತೀರ್ಮಾನಮಾಡಿ, ಶಿಕ್ಷೆಯನ್ನು ನೀಡುತ್ತಿತ್ತು. ಅಪರಾಧವನ್ನು ಗುರುತಿಸಲು

ಸಾಕ್ಷಿಯಿಲ್ಲದಿದ್ದಾಗ ದೈವದ ಸಹಾಯವನ್ನು ಪಡೆಯಲಾಗುತ್ತಿತ್ತು.ದೈವ ಸಹಾಯಗಳನ್ನು ದಿವ್ಯಗಳೆಂದು ಕರೆದಿದ್ದಾರೆ. ಇದರ ವಿವರವನ್ನು ಇದೇ ಅಧ್ಯಯದ ದಿವ್ಯ ಎಂಬ ಶೀರ್ಷಿಕೆಯಡಿ ಕಾಣಬಹುದು.

ಹಲವಾರು ಸಂದರ್ಭಗಳಲ್ಲಿ ಸ್ಮರಣಾರ್ಥವಾಗಿ ದೇವಾಲಯಗಳ ನಿರ್ಮಾಣವಾಗುತ್ತಿತ್ತು. ಇದರಿಂದಾಗಿ ದಾನಧರ್ಮಗಳು ಹೆಚ್ಚುತ್ತಿದ್ದವು. ಸಪ್ತ ಸಂತಾನಗಳಲ್ಲಿ ಧಾರ್ಮಿಕ ಕಟ್ಟಡಗಳ ನಿರ್ಮಾಣವೂ ಸೇರಿರುವುದರಿಂದ, ಸಂತಾನಾರ್ಥಿಗಳು ದೇವಾಲಯ ನಿರ್ಮಿಸುತ್ತಿದ್ದರು. ಇದರೊಂದಿಗೆ ದಾನಿಗಳು ಸತ್ರನಿರ್ಮಾಣ, ಅನ್ನದಾನ, ದೇವಾಲಯಕ್ಕೆ ಸೇರಿದ ಕೆರೆ, ಬಾವಿ ನಿರ್ಮಾಣ ಮುಂತಾದ ಜನೋಪಕಾರಿ ಚಟುವಟಿಕೆಗಳಲ್ಲಿ ತೊಡಗುತ್ತಿದ್ದರು.

ದೇವಾಲಯದ ಆಡಳಿತವನ್ನು ನೋಡಿಕೊಳ್ಳಲು ಅಧಿಕಾರಿಗಳಿರುತ್ತಿದ್ದರು. ದೇವಾಲಯದಲ್ಲಿ ಕೆಲಸಮಾಡುವ ಜನರಿಗೆ ವೇತನವನ್ನು ಭೂಮಿಯ ರೂಪದಲ್ಲಿ, ಕೆಲವು ಸಾರಿ ಹಣದರೂಪದಲ್ಲಿ ನೀಡುತ್ತಿದ್ದರು. ದಾನಿಗಳು ದೇವರ ಸೇವೆಗೆ ನೀಡುವ ಪುದುವಟ್ಟುಗಳನ್ನು ಇವರು ಸಂಗ್ರಹಿಸಿ ರಕ್ಷಿಸುತ್ತಿದ್ದರು. ದೇವಾಲಯದ ಆದಾಯವನ್ನು ದೊರೆಯಾಗಲೀ, ಅಧಿಕಾರಿಗಳಾಗಲೀ ತಮ್ಮ ಸ್ವಂತಕ್ಕೆ ಬಳಸುತ್ತಿರಲ್ಲಿಲ್ಲ. ದೇವಾಲಯವೇ ಎಲ್ಲರಿಗೂ ಅವರವರ ಕೆಲಸಕ್ಕೆ ತಕ್ಕ ಪ್ರತಿಫಲ ನೀಡುತ್ತಿತ್ತು. ದೇವಾಲಯದ ಅಧಿಕಾರಿಗಳ ಬಗ್ಗೆ ಶಾಸನಗಳು ಹಲವಾರು ಮಾಹಿತಿಗಳನ್ನು ತಿಳಿಸಿಕೊಡುತ್ತವೆ. ದೇವಾಲಯಕ್ಕೆ ಸೇರಿದ ಹಣವನ್ನು ಸಾಲವಾಗಿ ಕೊಡುತ್ತಿದ್ದರು. ಊರಿನ ಕೆರೆಕಟ್ಟೆಗಳು ಒಡೆದಾಗ, ಬರಗಾಲದ ಪರಿಸ್ಥಿತಿಯಲ್ಲಿ ದೇವಾಲಯದಿಂದ ಹಣ ಸಹಾಯ ಮಾಡುತ್ತಿದ್ದರು. ದೇವಾಲಯಕ್ಕೆ ಸೇರಿದ ಭೂಮಿಯನ್ನು ಗುತ್ತಿಗೆಗೆ ನೀಡುವುದರಿಂದ ಮತ್ತು ವಾರಸುದಾರರಿಲ್ಲದ ಆಸ್ತಿಯು ದೇವಾಲಯಕ್ಕೆ ಸೇರುವುದರ ಮೂಲಕವೂ ಧನ ಸಂಗ್ರಹ ಆಗುತ್ತಿತ್ತು. ಯುದ್ಧಗಳು ನಡೆದಾಗ, ಅರಸರಲ್ಲಿ ಅಂತಃಕಲಹಗಳು ನಡೆದಾಗ, ಇಂತಹ ಯಾವುದೇ ಸಂದರ್ಭದಲ್ಲಿಯು ದೇವಾಲಯದ ಕಾರ್ಯಚಟುವಟಿಕೆಗಳು ನಿರ್ವಿಘ್ನವಾಗಿ ನಡೆಯುತ್ತಿದ್ದವು.

## ಅಂಗಭೋಗ – ರಂಗಭೋಗ

ಮನುಷ್ಯ ತಾನು ಹೇಗೆ ವೈಭೋಗದಿಂದ ಬದುಕುತ್ತಾನೋ, ಅದೇ ರೀತಿ ಭಗವಂತನನ್ನು ಸೇವಿಸುತ್ತಾನೆ. ಭಗವಂತನನ್ನು ತನ್ನಂತೆಯೇ ಭಾವಿಸುವುದು ಒಂದು ಹಂತವಾದರೆ, ಅವನೇ ಎಲ್ಲವೂ ಎಂದು ಭಾವಿಸುವುದು ಇನ್ನೊಂದು ಹಂತ. ಭಗವಂತನ ವಿಗ್ರಹಕ್ಕೆ ಸಲ್ಲುವ ಸೇವೆಗಳು ಅಂಗಭೋಗ. ಅಭಿಷೇಕ, ಗಂಧಲೇಪನ, ಅಲಂಕಾರ, ಧೂಪ, ದೀಪ, ನೈವೇದ್ಯ ಇವೆಲ್ಲವೂ ಅಂಗಭೋಗಕ್ಕೆ ಸಂಬಂಧಿಸಿದ್ದು.

ವಾಶೂರಿನ ಶಾಸನದಲ್ಲಿ (RITC., No. 5, 953 AD) ವೀರ್‌ಮಲೆಯ ದೇವತೆ ದುರ್ಗಾಭಟ್ಟಾರಿಕೆಗೆ ತ್ರಿಕಾಲ ಪೂಜೆಗೆಂದು ನೀಡಿದ ದತ್ತಿಯನ್ನು ಉಲ್ಲೇಖಿಸಿದೆ. ರಾಷ್ಟ್ರಕೂಟರ ತಮಿಳು ಶಾಸನಗಳಲ್ಲಿ ದೇವರ ಪೂಜೆಗೆ, ನೈವೇದ್ಯಕ್ಕೆ, ನಂದಾದೀಪ, ಅಭಿಷೇಕ ಮುಂತಾದವುಗಳಿಗಾಗಿ ಬಹಳಷ್ಟು ದಾನ ನೀಡಿರುವ ಉಲ್ಲೇಖಗಳು ದೊರಕುತ್ತವೆ. ಉತ್ತೈರ್‌ಮೇರೂರ್ ಶಾಸನವು (RITC., No. 20, 957 AD) ವಂಗೀಪುರದ ವೇಟ್ಟಿಡೈ ಇಳೈಚಂದ್ರನ ಬ್ರಾಹ್ಮಣ ಪತ್ನಿ ಶಿಱಿಯ ನಙ್ಗೈಚ್ಚಾನಿಯು ತನ್ನ ಮರಣಕಾಲದಲ್ಲಿ ದೇವರ ದೀಪ ಬೆಳಗಲು ದಾನಮಾಡಿದಳು. ದೇವಾಲಯದ ಸಮಿತಿಯು ದೀಪಕ್ಕೆ ಬೇಕಾಗುವ ಎಣ್ಣೆಯನ್ನು ಲೆಕ್ಕಹಾಕಿ ಅಗತ್ಯವಾದ ಹಣವನ್ನು ಪುದುವಟ್ಟಾಗಿ ಸ್ವೀಕರಿಸಿತು. ತಿರುವಡನ್‌ಡೈ ಶಾಸನವು (RITC., No.32, 959 AD) ಆಲತ್ತುಱಾನ ಪತ್ನಿಯು ನಙ್ಗೈವಡುಗಿಯಾರ್ ಅನ್ನುವವಳು ವರಾಹ ಸ್ವಾಮಿಯ ದೇವಾಲಯದಲ್ಲಿ ಮೂರ್ತಿಯನ್ನು ಪ್ರತಿಷ್ಠಾಪಿಸಿ, ಅನೇಕ ದಾನಗಳನ್ನು ನೀಡಿದಳು. ಅದರಲ್ಲಿ ದೇವರಿಗೆ ನಿತ್ಯ ಒಪ್ಪತ್ತಿನ ನೈವೇದ್ಯಕ್ಕಾಗಿ ನೀಡಿದ ದಾನವೂ ಒಂದಾಗಿದೆ.

ದೇವಾಲಯಗಳು ಸಾಂಸ್ಕೃತಿಕ ಕೇಂದ್ರಗಳಾಗಿದ್ದವು ಮತ್ತು ಅಲ್ಲಿ ದೇವರಿಗೆ ನಡೆಯುತ್ತಿದ್ದ ಅಂಗಭೋಗ, ರಂಗಭೋಗಗಳು ಸಂಸ್ಕೃತಿಯ ಭಾಗವೇ ಆಗಿದೆ. ದೇವರಿಗೆ ನಡೆಯುವ ಅಭಿಷೇಕ ಅಲಂಕಾರ ನೈವೇದ್ಯಗಳು, ಅಂಗಭೋಗಕ್ಕೆ ಸಂಬಂಧಿಸಿದರೆ, ದೇವರ ಮುಂದೆ ನಡೆಯುವ ನೃತ್ಯ, ಸಂಗೀತ, ವಾದ್ಯಗೋಷ್ಠಿಗಳು ರಂಗಭೋಗಕ್ಕೆ ಸಂಬಂಧ ಪಟ್ಟವುಗಳಾಗಿವೆ. ಬಾದಾಮಿ ಚಲುಕ್ಯರ ಕಾಲದಲ್ಲಿ ಸಂಗೀತ ನೃತ್ಯಗಳು ಬಹಳ ಪ್ರಸಿದ್ಧವಾಗಿವೆ. ರಾಷ್ಟ್ರಕೂಟರಲ್ಲಿ ಶಾಸನೋಲ್ಲೇಖಿತ ದಾಖಲೆಗಳು ಬಹಳ ಕಡಿಮೆ. ಮೂರನೆಯ ಕೃಷ್ಣನ ಹೆಜ್ಜೆ ಶಾಸನವು (E.C. vol-VIII., no.sb.476)

ಮಾಂಡಳೀಕರಾದ ಮಾಟೂರ ವಂಶದ ಮಾಚಿಗನು ಶ್ರೀಕಂಠಪರಮೇಶ್ವರನ ಮೇಲಿನ ಭಕ್ತಿಯಿಂದ ಧರ್ಮಬುದ್ಧಿಯಿಂದ, ದಾನ ನೀಡಿದ್ದನ್ನು ದಾಖಲಿಸುತ್ತದೆ. ಇದರಲ್ಲಿ, ಬ್ರಹ್ಮ ಭೊಜಜ್ಞ ಪರಮ ಸ್ವಾಮಿಗಳ ಪಾದವನ್ನು ತೊಳೆದು ವರದಾತ್ಮನ ದೇವಾಲಯಕ್ಕೆ ಅನೇಕ ದಾನಗಳನ್ನು ನೀಡಿರುವುದಲ್ಲದೆ, ಎಡೆನಾಡು–೭೦ ರ ಬಳಿಯ ಶ್ರೀಕಂಠದೇವರ ಅಂಗಭೋಗ, ರಂಗಭೋಗಕ್ಕೆ ದಾನ ನೀಡಿರುವುದನ್ನು ಉಲ್ಲೇಖಿಸುತ್ತದೆ. ಅಕಾಲವರ್ಷ ಕನ್ನರನ ಮೇವುಂಡಿ ಶಾಸನವು (SII. Vol XI. pt –I., no-30, BK no 59 of 1927-28) ದಂಡಿನ ಗೋವ ಕುಪ್ಪದೇವರಸರು ಪುಲಿಗೇಱ– ೩೦೦ ರನ್ನು ಆಳುತ್ತಿದ್ದಾಗ, ದೇವರನ್ನು ಪ್ರತಿಷ್ಠಾಪನೆ ಮಾಡಿಸಿ ಅನೇಕ ದಾನಗಳನ್ನು ನೀಡಿರುವುದನ್ನು ದಾಖಲಿಸುತ್ತದೆ. ದೇವರ ಅಂಗಭೋಗ,ರಂಗಭೋಗಕ್ಕೆ ಕೂಡ ದಾನ ನೀಡಿರುವುದನ್ನು ಉಲ್ಲೇಖಿಸಬಹುದಾಗಿದೆ.

ಸೂಳೆಯರು

ಗಣಿಕೆಯರ ಉಲ್ಲೇಖ ವೇದ, ಪುರಾಣ, ಧರ್ಮಶಾಸ್ತ್ರಗಳಲ್ಲಿ ಬರುತ್ತದೆ. ಅಪ್ಸರೆಯರನ್ನು ದೇವಗಣಿಕೆಯರೆಂದೇ ಪರಿಗಣಿಸುತ್ತಾರೆ. ಅಂದರೆ ವಿಲಾಸೀ ಜೀವನದಲ್ಲಿ ಮಗ್ನರಾಗಿರುವವರು ಎಂದರ್ಥ. ಅದೇ ರೀತಿ ಇವರನ್ನು ವಾರಾಂಗನೆಯರೆಂದೂ ಕರೆದಿದ್ದಾರೆ. ಇವರು ಸಂಗೀತ, ನೃತ್ಯಗಳಲ್ಲಿ ಪರಿಣಿತರಾಗಿರುವುದರಿಂದ ತಮ್ಮ ಕಲೆಯನ್ನು ದೇವರ ಮುಂದೆ ಅರ್ಪಿಸುವುದು ರಂಗಭೋಗದ ಉದ್ದೇಶವಾಗಿದೆ. ಇಂತಹ ಕೈಂಕರ್ಯಗಳನ್ನು ಮಾಡುವವರನ್ನು ವೇಶ್ಯೆಯರೆಂದು ಕರೆದಿದ್ದಾರೆ. ಹಾಗೆಯೆ ಪಾತ್ರದವರನ್ನು ವೇಶ್ಯೆಯರೆಂದು ಕರೆಯಬಹುದು. ಆದರೆ ಗೀತ ನೃತ್ಯಸೇವೆಯನ್ನು ಸಲ್ಲಿಸುವವರಾದ್ದರಿಂದ ಗೌರವಸ್ಥಾನವನ್ನು ನೀಡಿದ್ದರು. ಇದಲ್ಲದೆ ಸೂಳೆಯರ ಉಲ್ಲೇಖ ಕೂಡ ಬರುತ್ತದೆ. ಸೂಳೆಯರು ವೇಶ್ಯೆಯರಾಗಿರಬೇಕೆಂಬ ನಿಯಮವೇನಿಲ್ಲ. ಶಾಸನದಲ್ಲಿ ಕಂಬದ ಸೂಳೆಯ ಉಲ್ಲೇಖ ಬರುತ್ತದೆ. ಇವರು ದೇವರ ಪೂಜೆಗೆ ಸಹಾಯ ಮಾಡುವವರು. ಅರ್ಥಾತ್ ಪೂಜೆಯ ಸಮಯದಲ್ಲಿ ಪೂಜಾ ಸಾಮಗ್ರಿಗಳನ್ನು ಹೊತ್ತು ಕಂಬದ ಬಳಿ ನಿಂತಿರುತ್ತಿದ್ದರು. ಆದ್ದರಿಂದ ಅದೇ ಹೆಸರಿನಿಂದಲೇ ಗುರುತಿಸಲು ಪ್ರಾರಂಭಿಸಿರಬಹುದು.

ಸಾಮಾನ್ಯ ವೇಶ್ಯೆಯರಿಗಿಂತ ಭಿನ್ನವಾಗಿರುವವರು ಸೂಳೆಯರು. ಸೂಳೆ ಶಬ್ದಕ್ಕೆ ಪರ್ಯಾಯವಾಗಿ ಶಾಸನಗಳಲ್ಲಿ ಪೊಡ್ಡಿ, ಬೊಡ್ಡಿ, ಪೊಟಿ ಮುಂತಾದ ಶಬ್ದಗಳನ್ನು ಬಳಸಿದ್ದಾರೆ. ಧಾರಾವರ್ಷ ಧ್ರುವನು ಆಳ್ವಿಕೆ ನಡೆಸುತ್ತಿದ್ದಾಗ ಲೋಕಮಹಾದೇವಿಯ ದೇವಾಲಯದ ಸೂಳೆ ಗೋವಿಂದ ಪೊಡ್ಡಿಯ ಮಗಳು ಬಾಡಿ(ಳಿ)ಪೊಡ್ಡಿಯು ಗೊಸಾಸ, ಅಶ್ವರಥ, ಹಸ್ತಿರಥ, ಭೂದಾನ, ಉಭಯಮುಖೀ ದಾನಗಳನ್ನು ಕೊಟ್ಟಳೆಂಬ ಅಂಶವು ತಿಳಿದು ಬರುತ್ತದೆ. ಇದರಿಂದ ದೇವಾಲಯದ ಸೂಳೆಯರು ಕೂಡ ದಾನಗಳನ್ನು ನೀಡುತ್ತಿದ್ದರೆಂದು ಪಟ್ಟದ ಕಲ್ಲಿನ ಶಾಸನದಿಂದ ತಿಳಿದುಬರುತ್ತದೆ (IA., vol XI., pp 124 ff & plates).

ಕ್ರಿ.ಶ. ೬ ರಿಂದ ೯ ನೆಯ ಶತಮಾನದವರೆಗೆ ಇವರು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಗೌರವ ಸ್ಥಾನವನ್ನು ಹೊಂದಿದ್ದರು. ಸೂಳೆಯರಿಗೂ, ವೇಶ್ಯೆಯರಿಗೂ ವ್ಯತ್ಯಾಸವಿದೆ. ದೇವಾಲಯದಲ್ಲಿ ಸೇವೆಯನ್ನು ಮಾಡುತ್ತಿದ್ದ ಸ್ತ್ರೀಯರನ್ನು ಶಾಸನಗಳು ಸೂಳೆಯರೆಂದೇ ಕರೆದಿದೆ. ವೇಶ್ಯಾವೃತ್ತಿಯನ್ನು ನಡೆಸುತ್ತಿದ್ದವರು ವೇಶ್ಯೆಯರು. ದೇವಾಲಯದಲ್ಲಿ ಅಂಗಭೋಗ, ರಂಗಭೋಗಗಳು ಹೆಚ್ಚಿದಂತೆ ಇವರ ಸಂಖ್ಯೆಯೂ ಹೆಚ್ಚಿತೆನ್ನಬಹುದು. ಕಾಲಕ್ರಮದಲ್ಲಿ ವೇಶ್ಯಯರಿಗೂ, ಸೂಳೆಯರಿಗೂ ಇದ್ದ ಅರ್ಥ ವ್ಯತ್ಯಾಸವು ಹೊರಟುಹೋಯಿತು. ವೇಶ್ಯಾವೃತ್ತಿಯಲ್ಲಿದ್ದ ಸೂಳೆಯರು ಸೂಳೆಗೇರಿಗಳಲ್ಲಿ ವಾಸ ಮಾಡುತ್ತಿದ್ದರು. ವೇಶ್ಯಾವೃತ್ತಿಯ ಮೇಲೆ ಕನ್ನಡಿವಣ, ಸೂಳೆವಣ ಮುಂತಾದ ತೆರಿಗೆಗಳನ್ನು ಹಾಕಲಾಗಿತ್ತು. ಶಾಸನಗಳಲ್ಲಿ ಇವುಗಳನ್ನು ಸೂಳೆದೆರೆ, ಕನ್ನಡಿವಣ ಎಂದೇ ಕರೆಯಲಾಗಿದೆ. ಸೂಳೆಗಾರಿಕೆಯು ನಿಷಿದ್ಧವಾದ ವೃತ್ತಿಯಾಗಿರಲಿಲ್ಲ. ವಿದೇಶೀ ಪ್ರವಾಸಿಗ ಆಲ್ಬೆರೂನಿಯ ಪ್ರಕಾರ "ಸೂಳೆದೆರೆ ಮತ್ತುಕಂದಾಯಗಳಿಂದ ಬರುವ ಆದಾಯವನ್ನು ಸೈನ್ಯದ ಖರ್ಚುವೆಚ್ಚಗಳಿಗೆ ಉಪಯೊಗಿಸುತ್ತಿದ್ದರು." (ಪ್ರವಾಸಿ ಕಂಡ ಇಡಿಯಾ, ಸಂ ೧, ಪು-೩೮೬).

ದೇವಾಲಯದ ಸೂಳೆಯರು ಭೋಗಜೀವನದಲ್ಲಿಯೆ ಮಗ್ನರಾಗದೆ ಸಾಮಜಿಕವಾಗಿ, ಧಾರ್ಮಿಕವಾಗಿ ಕೂಡ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದರು. ದಾನಧರ್ಮಗಳನ್ನು ಮಾಡುವುದರಲ್ಲಿ ಕೂಡ ಇವರು ಹಿಂದೆ ಬಿದ್ದಿರಲಿಲ್ಲವೆಂಬ ಅಂಶ ನಮಗೆ ಶಾಸನಗಳಿಂದ ತಿಳಿದುಬರುತ್ತದೆ. ರಾಷ್ಟ್ರಕೂಟರ ಕಾಲದಲ್ಲಿ ಕೂಡ ಇಂತಹ ಅನೇಕ ಶಾಸನಗಳು ಕಂಡುಬರುತ್ತವೆ. ಇದರಿಂದ ವೇಶ್ಯೆಯರಿಗೆ ಸ್ವಾತಂತ್ರ್ಯವಿದ್ದಿತೆಂಬ

ಅಂಶವು ತಿಳಿದು ಬರುತ್ತದೆ. ದೇವಾಲಯದ ಬಳಿಯೇ ಸೂಳೆಗೇರಿಗಳಿರುತ್ತಿದ್ದವು. ಸೂಳೆಗೇರಿಯ ನಿರ್ಮಾಣವನ್ನು ಪುಣ್ಯದ ಕಾರ್ಯವೆಂದೇ ಭಾವಿಸಿದ್ದರು.

ಎರಡನೆಯ ಕೃಷ್ಣನ ಕಾಡಚ್ಚಿ ಶಾಸನದಲ್ಲಿ (EI., vol XI., No. Dg 17) ಸೂಳೆ ಕಾಡಚ್ಚಿಯ ಉಲ್ಲೇಖ ಬರುತ್ತದೆ. ಈಕೆಯನ್ನು ಮಯಿಂದಮರಸನ ಸೂಳೆ ಎಂದು ಕರೆಯಲಾಗಿದೆ. ಈಕೆಯ ಹೆಣ್ಣು ಸಂತತಿಯ ಹೆಸರುಗಳನ್ನು ಉಲ್ಲೇಖಿಸುತ್ತದೆ. ಕಾಡಚ್ಚಿಯ ಮಗಳು ಕಾಡಬ್ಬೆ, ಅವಳ ಮಗಳು ಅಯ್ವಬ್ಬೆ, ಅವಳ ಮಗಳು ಕಳಿಂಗಬ್ಬೆ.........ಆಕೆಯ ಮಗ ಪರಕಯ್ಯನು ಪಾರಂಪರ್ಯವಾಗಿ ಅನೇಕ ದಾನಗಳನ್ನು ನೀಡಿದ್ದನ್ನು ದಾಖಲಿಸುತ್ತದೆ. ಕ್ರಿ.ಶ. ೯೬೪ ರ ಶನಿಕ್ಕವಾಡಿಯ ಶಾಸನದಲ್ಲಿ (RITC., No. 72) ಮೂರನೆಯ ಕೃಷ್ಣನು ಆಕಾಶಕ್ಕೆ ಮುತ್ತಿಡುವಂತಹ ಎತ್ತರವಾದ ಮತ್ತು ವಿಶಾಲವಾದ ರಂಗಮಂಟಪವನ್ನು ಕಟ್ಟಿಸಿದ್ದನ್ನು ಉಲ್ಲೇಖಿಸುತ್ತದೆ. ರಾಷ್ಟ್ರಕೂಟ ದೊರೆ ರಣಾವಲೋಕ ಕಂಬಯ್ಯನ ಕಾಲದ ಮೇಲಾಗಣಿ ಶಾಸನದಲ್ಲಿ (MAR., 1926, no. 100) ಸಾಮಂತ ವಿಟ್ಟರಸನು ಕುವಲಾಳ ನಾಡು ಮೂನೂಱನ್ನು ಆಳುತ್ತಿದ್ದಾಗ ,ಅವನ ಪೆರ್ಗಡೆ ಗೌಡ ಶ್ರೀಪುಲಿ ಎಂಬುವವನು ಅಗಳಿ-೧೨ ನ್ನು ಆಳುತ್ತಿದ್ದನು .ಪಾಳುಕೋಡ ಕೆರೆಗೆ ಅಯ್ದೊನ್ದಿ ಎಂಬ ಕರವನ್ನು ಉಳಿಸಿಕೊಂಡು ಪತ್ತೊನ್ದಿ ಎಂಬ ಕರವನ್ನು ಬಿಟ್ಟರೆಂದೂ, ಗೊಟ್ಟಿಱಯರ ಅಮ್ಬಾಲಕೆ ಐಯ್ದುಮ್ಬು ಕಱನಿ, ಪೊಡ್ಡಿಪಾಡಿಯರಿಗೆ ಐದುಮ್ಬು ಕಱನಿ ಕೊಟ್ಟನೆಂದು ತಿಳಿದುಬರುತ್ತದೆ. ಸೂಳೆಯರು ಜನಸಾಮಾನ್ಯರಲ್ಲ. ಅವರು ದೇವರಿಗಾಗಿಯೇ ಎಲ್ಲ ಕೆಲಸಗಳನ್ನು ಮಾಡುತ್ತಿದ್ದರು. ಕಾಲ ಕ್ರಮದಲ್ಲಿ ಸೂಳೆ, ವೇಶ್ಯೆ ಎಲ್ಲರನ್ನೂ ಒಂದೇ ರೀತಿ ಕೀಳು ಅರ್ಥದಲ್ಲಿ ಗುರುತಿಸಲು ಪ್ರಾರಂಭಿಸಿದರು.

## ಮಠ

ದೇವಾಲಯ ಮತ್ತು ಮಠ ಹೊಂದಿಕೊಂಡಂತೆ ಇರುತ್ತಿದ್ದವು. ಮಠಗಳು ವಿದ್ಯಾಕೇಂದ್ರಗಳಾಗಿದ್ದವು. ದೇವಾಲಯದಲ್ಲಿ ಪೂಜಾ ಕೈಂಕರ್ಯಗಳನ್ನು ಮಾಡುತ್ತಿದ್ದ ಬ್ರಾಹ್ಮಣರು ಮಠಗಳಲ್ಲಿ ವಿದ್ಯಾದಾನವನ್ನು ಮಾಡುತ್ತಿದ್ದರು ಅಥವಾ ವಿದ್ಯೆಯನ್ನು ಕಲಿಸುತ್ತಿದ್ದರು ಎನ್ನಬಹುದು. ಧ್ಯಾನ, ಜಪ, ತಪಗಳಲ್ಲಿ ಮಗ್ನರಾಗುತ್ತಿದ್ದ ಸಾಧಕರು ವಿದ್ಯೆಯನ್ನು ಕಲಿಸುತ್ತಿದ್ದರು ಎನ್ನಬಹುದು. ಮಠಗಳಲ್ಲಿ ಇರುತ್ತಿದ್ದ ಪಂಡಿತರು,

ಯತಿಗಳು, ತಪೋಧನರು ಅಹಾರ ದಾನಕ್ಕೆಂದು ನೀಡಿದ ದಾನಶಾಸಗಳನ್ನು ಗಮನಿಸಿದಾಗ, ಮಠಗಳಲ್ಲಿ ಮುನಿಗಳು, ವಿದ್ಯಾರ್ಥಿಗಳು ವಾಸವಾಗಿದ್ದರೆಂದು ಊಹಿಸಬಹುದಾಗಿದೆ.

## ಶಿಕ್ಷಣ

"ಪುಣ್ಯನದಿಗಳಲ್ಲಿ ಸ್ನಾನ ಮಾಡುವ ಸಲುವಾಗಿ ತೀರ್ಥಯಾತ್ರೆ ಮಾಡಿದರೆ ಎಷ್ಟು ಪುಣ್ಯ ಬರುವುದೋ ಅದರ ಕೋಟಿಯಷ್ಟು ಪುಣ್ಯವು ಶಿಕ್ಷಣಕ್ಕಾಗಿ ಸಹಾಯ ಮಾಡುವ ದಾನಿಗೆ ಸಿಗುತ್ತದೆ" ಎಂಬ ನಂಬಿಕೆಯಿತ್ತು ಎಂಬುದಾಗಿ ಶಾಸನವೊಂದು ತಿಳಿಸುತ್ತದೆ. ವಿದ್ಯಾಭ್ಯಾಸದ ಗುರಿ ಆತ್ಮವಿಕಸನ. ವಿದ್ಯೆಯನ್ನು ಶ್ರಮದಿಂದ ಗಳಿಸಬೇಕು. ಆಗಲೇ ಅದರ ಪೂರ್ಣತೆಯ ಕಡೆಗೆ ಸಾಗುವ ಮಾರ್ಗ ದೊರಕುತ್ತದೆ.

ಹಿಂದೆ ಬೌದ್ಧವಿಹಾರಗಳು ಒಂದು ರೀತಿಯಲ್ಲಿ ವಿದ್ಯಾಸಂಸ್ಥೆಗಳಾಗಿದ್ದವು. ಅವುಗಳ ಪ್ರೇರಣೆಯಿಂದ ಹಿಂದೂ ವಿದ್ಯಾಸಂಸ್ಥೆಗಳು ಹುಟ್ಟಿರಬಹುದೆಂದು ಅಲ್ಟೇಕರರು ಅಭಿಪ್ರಾಯಪಡುತ್ತಾರೆ (Education in Ancient India, P 164, Altekar A.S). ಇದಕ್ಕೆ ಕೌಟಿಲ್ಯನ ಉದಾಹರಣೆ ಕೊಡುತ್ತಾರೆ. ಬೌದ್ಧಧರ್ಮ ಹುಟ್ಟುವ ಮೊದಲಿನಿಂದಲೂ ವಿದ್ಯಾಭ್ಯಾಸ ಪದ್ಧತಿಯಿತ್ತೆನ್ನಬಹುದು. ವಿದ್ಯೆಯನ್ನು ಒಂದೆಡೆ ಕುಳಿತು ಕಲಿಯುವುದಕ್ಕೆ ಮೂಲವನ್ನು ಹೀಗೆ ಊಹಿಸಬಹುದೆ. ಹಿರಿಯರು ತಮ್ಮ ಅನುಭವಗಳಿಂದ ಕಲಿತ ಪಾಠವನ್ನು ಕಿರಿಯರಿಗೆ ತಿಳಿಸುವುದರ ಮೂಲಕ ಅವರು ಸರಿದಾರಿಯಲ್ಲಿ ನಡೆಯಲು ಸಹಾಯ ಮಾಡುತ್ತಾರೆ. ಅಶೋಕನ ಶಾಸನಗಳಲ್ಲಿ ಅಂತೇವಾಸಿಗಳ ಉಲ್ಲೇಖ ಬರುತ್ತದೆ.

ಯಾರು ಹೆಚ್ಚು ಅನುಭವಿಗಳೋ ಅಂತಹವರ ಬಳಿ ಹೆಚ್ಚು ಜನ ಹೋಗುತ್ತಿದ್ದರು. ಅವರು ಹೇಳಿದ ವಿಚಾರಗಳನ್ನು ಅನುಷ್ಠಾನಕ್ಕೆ ತಂದು ಜೀವನವನ್ನು ನಿರಾತಂಕವಾಗಿ ಸಾಗಿಸುತ್ತಿದ್ದರು. ವಿದ್ಯಾರ್ಥಿಗಳು ತಮಗೆ ತಿಳಿಯದೇ ಇರುವ ವಿಚಾರಗಳನ್ನು ಗುರುವಿನ ಮುಖಾಂತರ ಕಲಿತು, ಸ್ವಪ್ರಯತ್ನದಿಂದ ರೂಢಿಸಿಕೊಂಡು ಕರಗತ ಮಾಡಿಕೊಳ್ಳುತ್ತಿದ್ದರು. ಹಾಗೆ ಮಾಡುವುದರಿಂದ ಅವರೂ ಅನುಭವಿಗಳೂ, ದಕ್ಷರೂ, ಹಿರಿಯರೂ ಆಗುತ್ತಿದ್ದರು. ಗುಂಪುಗೂಡಿ ಕುಳಿತು ವಿಚಾರಗಳನ್ನು ತಿಳಿದುಕೊಳ್ಳುವ ಪರಿಪಾಠವೇ ಗುರುಶಿಷ್ಯ ಪರಂಪರೆಗೆ ನಾಂದಿಯಾಯಿತೆನ್ನಬಹುದು.

ಹಿಂದೆ ಲಿಪಿಯ ಬಳಕೆ ತೀರ ಕಡಿಮೆ ಇದ್ದ ಕಾಲದಲ್ಲಿ ಬಾಯಿಂದ ಬಾಯಿಗೆ, ಕಿವಿಯಿಂದ ಕಿವಿಗೆ ಹರಿದು ಬಂದಿದ್ದು ವೇದ, ಉಪನಿಷತ್ತು, ಕಾವ್ಯ, ಪುರಾಣಗಳು. ಪ್ರತಿಯೊಬ್ಬ ಮಾನವನೂ ವೈಯಕ್ತಿಕವಾಗಿ ಗುರುವೂ ಶಿಷ್ಯನೂ ಆಗಿದ್ದಾನೆ ಎಂಬುದನ್ನು ಮರೆಯುವಂತಿಲ್ಲ. ಕೌಟಿಲ್ಯನು ವಿದ್ಯಾಸಂಸ್ಥೆಯಲ್ಲೇ ಕಲಿತಿರಬೇಕೆಂಬ ನಿಯಮವಿಲ್ಲ. ಆದ್ದರಿಂದ ಬೌದ್ಧವಿಹಾರಗಳು ಅಥವಾ ಬೌದ್ಧ ಶಿಕ್ಷಣ ಕೇಂದ್ರಗಳ ಪ್ರೇರಣೆಯಿಂದ ವಿದ್ಯಾಸಂಸ್ಥೆಗಳು ಹುಟ್ಟಿರಬಹುದೆಂಬ ಅಭಿಪ್ರಾಯವನ್ನು ಒಪ್ಪುವುದು ಕಷ್ಟವಾಗುತ್ತದೆ. ಬೌದ್ಧವಿಹಾರಗಳು ವೈದಿಕ ಗುರುಕುಲಗಳಿಗಿಂತ ಭಿನ್ನವಾಗಿದ್ದವು. ಗುರುಕುಲಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆಯಿದ್ದರೆ, ವಿಹಾರಗಳಲ್ಲಿ ಗುರು – ಶಿಷ್ಯರೆಲ್ಲರೂ ಒಟ್ಟಿಗೆ ವಾಸಿಸುತ್ತಿದ್ದರು. ಅದಕ್ಕಾಗಿ ಭೂದಾನಗಳನ್ನು ಪಡೆಯುತ್ತಿದ್ದರು. ಇದರ ಸಹಾಯದಿಂದ ಬೌದ್ಧವಿಹಾರಗಳು ಸ್ವಾವಲಂಬಿಯಾಗಿದ್ದವು. ದಾನವಾಗಿ ಬಂದ ಭೂಮಿಯಲ್ಲಿ ವ್ಯವಸಾಯ, ಪಶುಪಾಲನೆ ಮುಂತಾದ ಕಾರ್ಯಗಳನ್ನು ಮಾಡುತ್ತಿದ್ದರು. ಜೀವನ ನಿರ್ವಹಣೆ ಮತ್ತು ಜ್ಞಾನಸಂಪಾದನೆ ಎರಡೂ ಒಟ್ಟಾಗಿ ನಡೆಯುತ್ತಿತ್ತೆಂದು ಭಾವಿಸಬಹುದು. ಇವೇ ಕ್ರಮೇಣ ವಿದ್ಯಾಕೇಂದ್ರಗಳಾಗಿ, ವಿಶ್ವವಿದ್ಯಾಲಯಗಳಾಗಿ ಮಾರ್ಪಟ್ಟವೆಂದು ಹೇಳಬಹುದು. ವೈದಿಕ ಗುರುಕುಲಗಳಲ್ಲಿನ ಪರಿಸ್ಥಿತಿಯನ್ನು ಬೌದ್ಧವಿಹಾರಗಳಲ್ಲಿ ನಡೆಯುತ್ತಿದ್ದ ವಿದ್ಯಾಭ್ಯಾಸದ ಜೊತೆಗೆ ಹೋಲಿಸಲಾಗದು. ಇವೆರಡರ ನಡುವೆ ಅಗಾದ ವ್ಯತ್ಯಾಸವಿದೆ.

ವೈದಿಕ ವಿದ್ಯಾಭ್ಯಾಸದ ಬಗ್ಗೆ ಗಮನಿಸಿದರೆ ಅನೇಕ ವಿಚಾರಗಳು ತಿಳಿದುಬರುತ್ತವೆ. ವಿದ್ಯಾಭ್ಯಾಸವನ್ನು ಪ್ರಾರಂಭಿಸಲು ಕೆಲವು ನಿಯಮಗಳನ್ನು ಅನುಸರಿಸುತ್ತಿದ್ದರು. ವಿದ್ಯಾಭ್ಯಾಸವನ್ನು ಪ್ರಾರಂಭಿಸುವ ಮುನ್ನ ವಿದ್ಯಾರ್ಥಿಗೆ ಉಪನಯನವನ್ನು ಮಾಡುತ್ತಿದ್ದರು. ಉಪನಯನ ಎಂದರೆ ಗುರುವಿನ ಬಳಿ ಕರೆದುಕೊಂಡು ಹೋಗುವುದು. ಉಪನಯನದ ನಂತರ ವಿದ್ಯಾರ್ಥಿ ಗುರುವಿನ ಜೊತೆಯಲ್ಲಿಯೇ ವಾಸವಾಗಿದ್ದುಕೊಂಡು ವಿದ್ಯಾಭ್ಯಾಸವನ್ನು ಪೂರೈಸಬೇಕಾಗಿತ್ತು. ಗುರುಕುಲ ಪದ್ಧತಿಯಲ್ಲಿ ತನ್ನ ಶಿಷ್ಯನಿಗೆ ಸ್ವತಃ ಗುರುವೇ ಗಮನವಿಟ್ಟು ಕಲಿಸುತ್ತಿದ್ದನು. ಇಂತಹ ಸಂದರ್ಭಗಳಲ್ಲಿ ಹೆಚ್ಚು ಜನ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳುವುದು ಸಾಧ್ಯವಿರಲಿಲ್ಲ. ವಿದ್ಯಾಭ್ಯಾಸ ನಡೆಸುತ್ತಿದ್ದ ಸ್ಥಳಗಳನ್ನು ವಿದ್ಯಾಕೇಂದ್ರಗಳೆಂದು ಕರೆಯುತ್ತಿದ್ದರು. ಅವುಗಳನ್ನು ದೇವಸ್ಥಾನ, ಮಠ, ಅಗ್ರಹಾರಗಳು, ಬ್ರಹ್ಮಪುರಿ ಮತ್ತು

ಘಟಿಕಾಸ್ಥಾನಗಳೆಂದು ವಿಭಾಗಿಸಬಹುದು. ರಾಷ್ಟ್ರಕೂಟರ ಕಾಲದಲ್ಲಿ ಇದ್ದವುಗಳೆಲ್ಲ ಉನ್ನತ ಶಿಕ್ಷಣಕೇಂದ್ರಗಳು. ಇವರ ಕಾಲದಲ್ಲಿದ್ದ ಪ್ರಾಥಮಿಕ ಶಿಕ್ಷಣ ಕೇಂದ್ರಗಳ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. "ಸಾಮಾನ್ಯವಾಗಿ ಪ್ರಾಥಮಿಕ ಶಿಕ್ಷಣ ಕರ್ನಾಟಕದಲ್ಲಿ ಕನ್ನಡದಲ್ಲಿ ನಡೆಯುತ್ತಿತ್ತು. ಉನ್ನತ ಶಿಕ್ಷಣವು ಬಹುಶಃ ಸಂಸ್ಕೃತದಲ್ಲೇ ನಡೆಯುತ್ತಿದ್ದಿರಬೇಕು" ಎಂದು ಅಲ್ಟೇಕರರು ಅಭಿಪ್ರಾಯಪಡುತ್ತಾರೆ. ಆದರೆ ರಾಷ್ಟ್ರಕೂಟರ ಕಾಲದ ಸಾಹಿತ್ಯದ ಗುಣಮಟ್ಟವನ್ನು ಗಮನಿಸಿದಾಗ, ಎಲ್ಲ ಹಂತಗಳಲ್ಲಿಯೂ ಸಿಗುತ್ತಿದ್ದ ಶಿಕ್ಷಣವು ಉತ್ತಮವಾಗಿಯೇ ಇತ್ತು ಎಂದು ತಿಳಿದುಬರುತ್ತದೆ. ಉನ್ನತ ಶಿಕ್ಷಣದಲ್ಲಿ ವೇದ, ಷಡ್ದರ್ಶನಗಳು, ಸಾಹಿತ್ಯ, ತಂತ್ರಗಳಲ್ಲದೆ ಚಿತ್ರಕಲೆ, ಶಿಲ್ಪಕಲೆ, ಸಂಗೀತ, ನೃತ್ಯ ಮುಂತಾದವುಗಳನ್ನು ಕೂಡ ಕಲಿಸಲಾಗುತ್ತಿತ್ತು.

**ಮಠ ಮತ್ತು ದೇವಾಲಯಗಳು:** ದೇವಸ್ಥಾನಗಳು ಕ್ರಿ.ಶ ೯ ನೆಯ ಶತಮಾನದ ಹೊತ್ತಿಗೆ ಶಿಕ್ಷಣ ಸಂಸ್ಥೆಗಳಾಗಿದ್ದವು. ದೇವಾಲಯಕ್ಕೆ ಹೊಂದಿಕೊಂಡಂತೆ ಮಠವೊಂದಿರುತಿತ್ತು. ಅಷ್ಟೇ ಅಲ್ಲದೆ ಈ ಮಠಗಳು ಶೈವಯತಿಸ್ಥಾನವೂ ಆಗಿರುತ್ತಿದ್ದವು. ಇದರಲ್ಲಿದ್ದ ಯತಿಗಳು ಪರಿವ್ರಾಜಕರಾಗಿರದೆ, ಒಂದೆಡೆ ನೆಲೆ ನಿಂತವರಾಗಿದ್ದರು. ಇವರು ಕೇವಲ ಧ್ಯಾನ, ಜಪ, ತಪಗಳಲ್ಲಿ ಮಗ್ನರಾಗಿರದೆ ವಿದ್ಯೆಯನ್ನೂ ಹೇಳಿಕೊಡುತ್ತಿದ್ದರು. ಭಕ್ತರು ದೇವಾಲಯಕ್ಕೆ ದಾನ ನೀಡುವಾಗ ಅಲ್ಲಿ ನಡೆಯುತ್ತಿದ್ದ ವಿದ್ಯಾಭ್ಯಾಸದ ವ್ಯವಸ್ಥೆಗೂ ದಾನ ನೀಡಿರುವುದುಂಟು. ದೇವಾಲಯಗಳು, ಪ್ರಾಥಮಿಕ ಮತ್ತು ಉನ್ನತಶಿಕ್ಷಣ ಕೇಂದ್ರಗಳೂ ಆಗಿರುತ್ತಿದ್ದವು. ಇದಕ್ಕೆ ಉದಾಹರಣೆಯಾಗಿ ತಾಳಗುಂದದ ಪ್ರಣವೇಶ್ವರ ದೇವಾಲಯದ ವಿದ್ಯಾಕೇಂದ್ರವನ್ನು ಹೆಸರಿಸಬಹುದು. ಸಾಮಾನ್ಯವಾಗಿ ದೇವಾಲಯಗಳು ಮಠಗಳು ಪ್ರಾಥಮಿಕ ವಿದ್ಯಾಭ್ಯಾಸ ಕೇಂದ್ರಗಳಾಗಿದ್ದವು. ಅಪರೂಪಕ್ಕೊಮ್ಮೆ ಉನ್ನತ ಕೇಂದ್ರಗಳೂ ಆಗಿರುತ್ತಿದ್ದವು. ರಾಷ್ಟ್ರಕೂಟರ ಕಾಲದಲ್ಲಿ ಮಠ, ದೇವಾಲಯ, ವಿದ್ಯಾದಾನಸತ್ರ, ವಿದ್ಯಾರ್ಥಿ ತಪೋಧನರು ಮುಂತಾದವರುಗಳಿಗೆ ನೀಡಿರುವ ದಾನಗಳು ಹೆಚ್ಚಿನ ಸಂಖ್ಯೆಯಲ್ಲಿ ಸಿಗುತ್ತವೆ. ಇದರಿಂದ ರಾಷ್ಟ್ರಕೂಟರು ವಿದ್ಯಾಭ್ಯಾಸಕ್ಕೆ ನೀಡಿದ ಪ್ರೋತ್ಸಾಹದ ಅರಿವಾಗುತ್ತದೆ.

ಕ್ರಿ.ಶ. ೯೩೭ ರ ಚಿತ್ರದುರ್ಗ ಶಾಸನವು (EC., vol XI, Cd. 76) ಸಾಮಂತ ಕನ್ನಯ್ಯನು ಕದಂಬಳಿಗೆ ಸಾವಿರವನ್ನು ಆಳುತ್ತಿದ್ದಾಗ, ಕಾಕಂಬಾಚಿ ಪಂಚಮಠಸ್ಥಾನದ

ಗಾವುಂಡ ಕಂಭಯ್ಯನು ಗೊಗ್ಗಿಯ ದೇವಾಲಯದ ಧರ್ಮರಾಶಿ ಭಟಾರರ ಕಾಲನ್ನು ತೊಳೆದು ದಾನ ಮಾಡಿದರೆಂಬ ಉಲ್ಲೇಖವಿದೆ. ಇದೇ ಕಂಭಯ್ಯ ಕಾಕಂಬಾಚಿ ಕಂಬಗಾವುಂಡನ ಸಮ್ಮುಖದಲ್ಲಿ ಶ್ರೀ ಬಾಳಚಂದ್ರ ಪಂಡಿತ ದೇವರ ಕಾಲ್ತೊಳೆದು ಭೋಗೇಶ್ವರ ದೇವಾಲಯದ ಜೀರ್ಣೋದ್ಧಾರಕ್ಕೆ ಮತ್ತು ಮಠದಲ್ಲಿ ಓದುತ್ತಿದ್ದ ವಿದ್ಯಾರ್ಥಿ ತಪೋಧನರಿಗೆ, ವಿಧ್ಯಾರ್ಥಿ ಮಾಣಿಗಳಿಗೆ, ಗದ್ದೆ ಮತ್ತು ಮುನ್ನೂರು ಬಳ್ಳಿಯ ತೋಟವನ್ನು ಇತ್ತಿದ್ದನ್ನು ದಾಖಲಿಸುತ್ತದೆ. ಈ ಶಾಸನದಿಂದ ಭೋಗೇಶ್ವರ ದೇವಾಲಯಕ್ಕೆ ಸೇರಿದ ಮಠವೊಂದಿತ್ತು ಎಂದು ತಿಳಿಯುತ್ತದೆ. ಈ ಶಾಸನದಲ್ಲಿ (EC., vol XI, No. Cd 77) ವಿದ್ಯಾರ್ಥಿ ತಪೋಧನರು ಮತ್ತು ವಿದ್ಯಾರ್ಥಿ ಮಾಣಿಗಳು ಎಂದು ಪ್ರತ್ಯೇಕವಾಗಿ ಉಲ್ಲೇಖಿಸಿರುವುದನ್ನು ಕಾಣಬಹುದು.

ಕ್ರಿ.ಶ. ೯೩೯ ರ ಓಟೂರು ಶಾಸನವು (EC., vol VIII, no. S6 70-71) ಮೂರನೆಯ ಕೃಷ್ಣನ ಆಳ್ವಿಕೆಯಲ್ಲಿ ಮಾಟೂರ ವಂಶದ ಅರಸ ಮಾಜಿಯರಸನು ಬನವಾಸಿ ಪನ್ನಿರ್ಚ್ಛಾಸಿರವನ್ನು ಆಳುತ್ತಿದ್ದನು. ಚಿತ್ತರಟಿಹಳ್ಳಿ ಮತ್ತು ಓಟೂರನ್ನು ಅಭ್ಯಂತರ ಸಿದ್ಧಿಯಾಗಿ ಆಳುತ್ತಿದ್ದ ಮೂಲಿಗನ ತಮ್ಮನು ಮಠವನ್ನು ಕಟ್ಟಿಸಿದನೆಂಬ ಉಲ್ಲೇಖವಿದೆ. ಸೊರಟೂರು ಶಾಸನದಲ್ಲಿ (IA., vol XII, pp 257, 951 AD) ಪೆರ್ಗಡೆ ಆಚಪಯ್ಯನು ಮತ್ತು ಊರೊಡೆಯ ಪಿಟ್ಟಯ್ಯ ಮತ್ತು ಗಾಮುಂಡ ಸಾಮಿ ಕಚ್ಚಿಯಮ್ಮ ಇವರುಗಳು ಮಠಕ್ಕೆ ಮತ್ತು ವಿದ್ಯಾದಾನಕ್ಕೆಂದು ಹನ್ನೆರಡು ಮತ್ತರು ಹೊಲವನ್ನು ಕೊಟ್ಟರೆಂದು ತಿಳಿದುಬರುತ್ತದೆ. ಕ್ರಿ.ಶ. ೯೬೫ ರಲ್ಲಿ ಮೂರನೆಯ ಕೃಷ್ಣನ ಸಾಮಂತನೊಬ್ಬ ಶಾಂತಿ ಭಟಾರರಿಗೆ ಮೂವರು ಗಾವುಂಡರು ಮತ್ತು ಕಂಬಚಿ ಕಂಭಯ್ಯನು ಸೇರಿ ಪಂಚಮಠಸ್ಥಾನಕ್ಕೆ ದಾನ ನೀಡಿದುದನ್ನು ಉಲ್ಲೇಖಿಸುತ್ತದೆ (EC., vol XI, No. Hk-33).

ಕ್ರಿ.ಶ. ೯೬೬ ರ ಮೂರನೆಯ ಕೃಷ್ಣನ ಶಾಸನದಲ್ಲಿ (RITC., No.84) ತಕ್ಕೋಲಂ ಊರಿನಲ್ಲಿ ತಿರುವೂರ ಮಠವಿದ್ದುದನ್ನು ಉಲ್ಲೇಖಿಸುತ್ತದೆ. ಇದಕ್ಕೆ ಒಡೆಯನಾಗಿ ವಿಜ್ಞಾನ ಕ್ಷೇಮಭಟ್ಟಾರರ ಮಗ ವಾಚಸ್ಪತಿ ಭಟ್ಟಾರಕನಿದ್ದನೆಂಬ ವಿಚಾರ ತಿಳಿದುಬರುತ್ತದೆ. ಇದೇ ಕಾಲಕ್ಕೆ ಸೇರಿದ ಕೊಳಗಲ್ಲು ಶಾಸನದಲ್ಲಿ (ಹಂ.ಕ.ವಿ.ವಿ., ಶಾ.ಸಂ. ೧, ಬಳ್ಳಾರಿ, ೫೨) ಅಯ್ಯಪ್ಪಗಾವುಂಡನ ತಮ್ಮ ಚಂಗಗಾವುಂಡನು, ಮಠದ

ಮುಂದಿನ ಗಾಣವನ್ನು ಮತ್ತು ಒಂದು ತೋಟವನ್ನು ನಲವತ್ತೆರಡು ಮಹಾಜನರ ಸಮ್ಮುಖದಲ್ಲಿ ಶತರಾಸಿ ಭಟ್ಟಾರರ ಕಾಲನ್ನು ತೊಳೆದು ವಿದ್ಯಾದಾನ ಪತ್ರವಾಗಿ ಮಠಕ್ಕೆ ದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಈ ಸಮಯದಲ್ಲಿ ಸ್ವಾಮಿ ಕಾರ್ತಿಕೇಯ ತಪೋವನಾಧಿಪತಿ ಶ್ರೀಮತ್ ಗಜಾಧರಯ್ಯನು ಕೊಳ್ಗಲ್ಲನ್ನು ಆಳುತ್ತಿದ್ದನೆಂದು ತಿಳಿದು ಬರುತ್ತದೆ.

ಕ್ರಿ.ಶ. ೯೬೮ ರ ಕ್ಯಾಸಾಪುರ ಶಾಸನವು (EC., vol XI, Cd 50; EC., vol VIII, Plate II, No.S6 531 ) ಖೊಟ್ಟಿಗನ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ. ಇದರಲ್ಲಿ ಪರತ್ರ ಮಠದ ಉಲ್ಲೇಖವಿದೆ ಮತ್ತು ಪಂಚಮಠಸ್ಥಾನದವರ ಸಾಕ್ಷಿಯಲ್ಲಿ ನೀಡಿದ ದಾನವನ್ನು ಉಲ್ಲೇಖಿಸುತ್ತದೆ. ಇದೇ ಉಲ್ಲೇಖವನ್ನು ಬೇವಿನಹಳ್ಳಿ ಶಾಸನವು (EC., vol XI, Cd 74) ನೀಡುತ್ತದೆ. ಕ್ರಿ.ಶ. ೯೭೦ ರ ಸವಡಿ ಶಾಸನದಲ್ಲಿ (SII, Vol XI, No.42) ಖೊಟ್ಟಿಗನ ಆಳ್ವಿಕೆಯಲ್ಲಿ ಯೇಚಿನಾಯಕನು ಭಗವತಿಯನ್ನು ಪ್ರತಿಷ್ಠಾಪಿಸಿ, ಮಠವನ್ನು ಮಾಡಿಸಿಕೊಟ್ಟಿದ್ದನ್ನು ದಾಖಲಿಸುತ್ತದೆ. ಕ್ರಿ.ಶ.೯೭೨ ರ ಬಾಗಳಿ ಶಾಸನವು (ಹಂ.ಕ.ವಿ.ವಿ., ಶಾ.ಸಂ. ೧, ಹರಪ. ೧೨೫) ತ್ರುಟಿತವಾಗಿದ್ದು ಜೈನಗುರು ಮಹೇಂದ್ರದೇವ ಪಂಡಿತರ ಹೆಸರನ್ನು ಉಲ್ಲೇಖಿಸಿದೆ. ಮಠಕ್ಕೆ ಮತ್ತು ಮಠದಲ್ಲಿರುವ ತಪಸ್ವಿಗಳಿಗೆ, ದೇವರ ನೈವೇದ್ಯಕ್ಕೆಂದು ಭೂದಾನ ಮಾಡಿದ ಉಲ್ಲೇಖವಿದೆ.

ಕ್ರಿ.ಶ. ಸುಮಾರು ೧೨ ನೆಯ ಶತಮಾನದ ಮೇವುಂಡಿ ಶಾಸನದಲ್ಲಿ (SII, Vol XI, Plate I, No.30) ದಂಡಿನಗೋವ ಕುಪ್ಪರಸನು, ರಾಜಧಾನಿ ಮೆಳುವೀಡಿನಲ್ಲಿ ದೇವರ ಪ್ರತಿಷ್ಠಾಪನೆಯನ್ನು ಮಾಡಿದನೆಂದು ತಿಳಿದುಬರುತ್ತದೆ. ಶಾಸನದ ಮುಂದಿನ ಭಾಗವು ತ್ರುಟಿತವಾಗಿದೆ. ಇನ್ನೂರು ಜನರಿಗೆ ಸಂಬಂಧಿಸಿದ ಪಂಚಠದ ಸ್ಥಾನವನ್ನು ಉಲ್ಲೇಖಿಸುತ್ತದೆ. ಇದೇ ಕಾಲದ ಬೋಗನೂರು ಶಾಸನದಲ್ಲಿ (SII, Vol XV, No.585) ಹಾನುಗಲ್ಲಿನ ಇಂದ್ರವಲ್ಲಭನು ರಾಜಧಾನಿ ಬಂಕಾಪುರದ ನಗರೇಶ್ವರ ದೇವರ ಸ್ಥಾನಾಚಾರ್ಯರು, ರಾಜಗುರು ಚಂದ್ರಭೂಷಣ ದೇವರ ಸ್ಥಳ ನವಿಲಗುಂದದ ಗಡಿಯರಮಠದ ರಾಮನಾಥ ದೇವರಾಗಿದ್ದ ತೈಲನ ಸಳವಾಡಿಗೆ ನೆಟ್ಟ ನಂದಿಯ ಕಂಭ. ಗಡಿಯರ ಎಂದರೆ ಇಲ್ಲಿ ಸಮಯ ಸೂಚಿಸುವ ಅರ್ಥವೆಂದು ಭಾವಿಸಬಹುದು ಎನಿಸುತ್ತದೆ.

ರಾಷ್ಟ್ರಕೂಟರ ಕಾಲದಲ್ಲಿ ಅಗ್ರಹಾರ, ಬ್ರಹ್ಮಪುರಿ ಮಠ ಮತ್ತು ಘಟಿಕಾಸ್ಥಾನಗಳಿದ್ದವೆಂದು ತಿಳಿದುಬರುತ್ತದೆ. ಕನ್ಹೇರಿ (ARIE., 1949-50, No.B-172, 843 AD), ಪೈಠಣ್, ನಾಸಿಕ್, ಕರ್ಹಾಡ್, ಗೌಜೆ, ಕದರಮಂಡಲಗಿ, ಕಾಂಧಾರ್, ಕೊಳಗಲ್ಲು, ನಾಗಾವಿ, ಸಾಲೊಟಗಿ, ನರೇಗಲ್ಲು, ಚೆನ್ನೂರು, ಸಾಲೂರು, ಬಿದಿರ್ವಳ್ಳಿ, ಕಾಡಿಯೂರು, ಡಂಬಳ ಇವೆಲ್ಲ ವಿದ್ಯಾಭ್ಯಾಸ ಕೇಂದ್ರಗಳಾಗಿದ್ದವೆಂದು ತಿಳಿದು ಬರುತ್ತದೆ.

ಅಗ್ರಹಾರ: ಅಗ್ರಹಾರವೆಂದರೆ ಶ್ರೇಷ್ಠವಾದ ಅಹಾರ ಎಂದರ್ಥ. ಅನೇಕ ರಾಜರು ವಿದ್ಯಾಭಿವೃದ್ಧಿಗಾಗಿ ಅಗ್ರಹಾರಗಳನ್ನು ನಿರ್ಮಿಸುತ್ತಿದ್ದರು. ಅದರಲ್ಲಿ ವಿದ್ಯಾಸಂಪನ್ನರಾದ ಬ್ರಾಹ್ಮಣರನ್ನು ವಿದ್ಯಾಭ್ಯಾಸ ಮಾಡಿಸಲು ನೇಮಿಸುತ್ತಿದ್ದರು. ವಿದ್ಯಾವಂತ ಬ್ರಾಹ್ಮಣರುಗಳಿಗೆ ಊರುಗಳನ್ನು ದಾನ ನೀಡುವುದು ರೂಢಿಯಲ್ಲಿತ್ತು. ಅಗ್ರಹಾರವನ್ನು ದಾನ ಪಡೆದ ಬ್ರಾಹ್ಮಣರನ್ನು ಮಹಾಜನರೆಂದು ಕರೆಯುತ್ತಿದ್ದರು. ಕೆಲ ವಿದ್ವಾಂಸರ ಪ್ರಕಾರ, ಮಹಾಜನರು ಬ್ರಾಹ್ಮಣರೇ ಆಗಿರಬೇಕಿರಲಿಲ್ಲ. 'ಮಹಾಜನಗಳಲ್ಲಿ ಬ್ರಾಹ್ಮಣೇತರರೂ ಇರಬಹುದು, ಎಂದು ಅಲ್ಟೇಕರರು ಅಭಿಪ್ರಾಯ ಪಡುತ್ತಾರೆ (Rashtrakutas and their times, p 200-01). ಅಲ್ಟೇಕರರ ಅಭಿಪ್ರಾಯವನ್ನು ಚಿದಾನಂದಮೂರ್ತಿಯವರು ಅಲ್ಲಗಳೆದಿದ್ದಾರೆ (ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪು.೨೧೧) ರಾಷ್ಟ್ರಕೂಟ ಅರಸರು ವಿದ್ಯಾಭ್ಯಾಸಕ್ಕೆ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಸಹಾಯ ಮಾಡುತ್ತಿದ್ದರು. ರಾಷ್ಟ್ರಕೂಟರ ಬಹಳಷ್ಟು ತಾಮ್ರಪಟಗಳು ಬ್ರಾಹ್ಮಣರಿಗೆ ನೀಡಿದ ದಾನಗಳನ್ನು ಕುರಿತು ವಿವರಿಸುತ್ತವೆ. ಅದೇ ರೀತಿ ದಾನ ನೀಡಿರುವ ವ್ಯಕ್ತಿಗಳು ಹೆಚ್ಚಾಗಿ ಬ್ರಾಹ್ಮಣೇತರರೇ ಆಗಿದ್ದಾರೆಂಬುದನ್ನು ಗಮನಿಸಬೇಕು. ದಾನವನ್ನು ಸ್ವೀಕರಿಸುವವರು ವೇದ, ವೇದಾಂಗ, ಪುರಾಣ ಸ್ಮೃತಿಗಳನ್ನು ತಿಳಿದವರೂ, ಷಟ್ಕರ್ಮನಿರತರೂ ಆಗಿರಬೇಕೆಂದು ತಿಳಿದುಬರುತ್ತದೆ. ಕ್ರಿ.ಶ. ೮೭೦ ನೆಯ ಒಂದನೆಯ ಅಮೋಘವರ್ಷನ ಸಾಲೂರು ಶಾಸನದಲ್ಲಿ (MAR., 1927, p 133, no. 155) ಯಮ, ನಿಯಮ, ಧ್ಯಾನ, ಧಾರಣ, ಮೌನ ಮುಂತಾದವುಗಳನ್ನು ಅಭ್ಯಾಸ ಮಾಡಿರುವ ಮತ್ತು ತರ್ಕಶಾಸ್ತ್ರ, ವೇದಪಾರಂಗತರಾದ ಬ್ರಾಹ್ಮಣರಿಗೆ ಅಗ್ರಹಾರವನ್ನು ನೀಡಿದ್ದನ್ನು ದಾಖಲಿಸುತ್ತದೆ. ಅಗ್ರಹಾರವನ್ನು ದಾನ ಪಡೆದ ಬ್ರಾಹ್ಮಣರು ಅದರ ಸಂಪೂರ್ಣ ಅಧಿಕಾರವನ್ನು ಹೊಂದಿದ್ದರು. ಅದರಲ್ಲಿ ವಾಸಿಸುವರೆಲ್ಲರೂ ಬ್ರಾಹ್ಮಣರಾಗಿರದೆ,

ಬೇರೆಯವರೂ ಇರಬಹುದಿತ್ತು. ಅಥವಾ ಈ ಗ್ರಾಮದಲ್ಲಿ ವಾಸವಿರಬಹುದು ಅಥವಾ ಇಲ್ಲದಿರಬಹುದು. ಆದರೆ ಅದರ ಉತ್ಪನ್ನವೆಲ್ಲ ನಿಗದಿತ ಬ್ರಾಹ್ಮಣರಿಗೆ ಹೋಗುತಿತ್ತು.

ಅಗ್ರಹಾರವು ಪ್ರೌಢ ವಿದ್ಯಾಭ್ಯಾಸ ಕೇಂದ್ರ. ಇಲ್ಲಿ ಬ್ರಾಹ್ಮಣರು ಷಟ್ಕರ್ಮಗಳಲ್ಲಿ ನಿರತರಾಗಿರುತ್ತಿದ್ದರು. ಷಟ್ಕರ್ಮಗಳೆಂದರೆ, ಯಜನ (ಯಜ್ಞ ಮಾಡುವುದು), ಯಾಜನ (ಯಜ್ಞ ಮಾಡಿಸುವುದು), ಅಧ್ಯಯನ (ವಿದ್ಯೆ ಕಲಿಯುವುದು), ಅಧ್ಯಾಪನ (ವಿದ್ಯೆ ಕಲಿಸುವುದು), ದಾನ (ಇತರರಿಗೆ ನೀಡುವುದು), ಪರಿಗ್ರಹ (ಇತರರಿಂದ ಪಡೆಯುವುದು) ಇವು ಷಟ್ಕರ್ಮಗಳಾಗಿದ್ದವು. ಅಗ್ರಹಾರಗಳಲ್ಲಿ ಪಾಠಗಳನ್ನು ಆರಂಭಿಸುವ ಮೊದಲು 'ಉಪಾಕರ್ಮ'ಗಳನ್ನು ಮಾಡುತ್ತಿದ್ದರು. ಬಾದಾಮಿ ಚಲುಕ್ಯರ ಕಾಲದಲ್ಲಿ ಬಾದಾಮಿ ಒಂದು ಮುಖ್ಯ ಅಗ್ರಹಾರವಾಗಿತ್ತು. ಕ್ರಿ.ಶ. ೬೯೯ ರ ಶಾಸನವೊಂದು ಬಾದಾಮಿಯು ಒಂದು 'ಅಧಿಷ್ಠಾನ'ವಾಗಿತ್ತು ಎಂದು ತಿಳಿಸುತ್ತದೆ. 'ಅಧಿಷ್ಠಾನ' ಎಂದರೆ ವೇದಶಿಕ್ಷಣ ಕೇಂದ್ರ ಅಥವಾ ಧಾರ್ಮಿಕ ಶಿಕ್ಷಣ ಕೇಂದ್ರವೆನ್ನಬಹುದು. ಅದಕ್ಕೆ ಮೂಲ ಎಂಬ ಅರ್ಥವೂ ಇದೆ. ರಾಷ್ಟ್ರಕೂಟರ ಕಾಲದಲ್ಲಿದ್ದ ಐಹೊಳೆ ಅಥವಾ ಆರ್ಯಪುರ ಇನ್ನೊಂದು ಮುಖ್ಯ ಅಗ್ರಹಾರವಾಗಿತ್ತು. ಇಲ್ಲಿ ಐನೂರು ಜನ ಚತುರ್ವೇದಿ ಬ್ರಾಹ್ಮಣರಿದ್ದರೆಂದು ತಿಳಿದುಬರುತ್ತದೆ.

ಸಾಲೊಟಗಿ: ಗದುಗಿನ ಹತ್ತಿರ ಕೋಟಿಮಚಿಗೆ, ಸಾವಂಶಿ, ಗುಡಗೇರಿ, ಕಾಡಿಯೂರು (ಕಳಸ), ಹೆಬ್ಬೂರು, ಸವಣೂರು, ಹತ್ತಿಮತ್ತೂರು, ಲಕ್ಕುಂಡಿ, ಇಟಗಿ, ಕುಕ್ಕನೂರು, ಮಾಳದ ಆಲೂರು, ರೋಣ, ಸೂಡಿ, ಲಕ್ಷ್ಮೇಶ್ವರ, ಬನವಾಸಿ, ಬಳ್ಳಿಗಾವೆ, ತಾಳಗುಂದ, ಬೇಗೂರು, ಈಸೂರು, ಕಡೇನಂದಿಹಳ್ಳಿ, ಸಾಲೂರು ಮಂತಾದ ಕಡೆ ರಾಷ್ಟ್ರಕೂಟರ ಕಾಲದ ನೂರಾರು ಅಗ್ರಹಾರಗಳಿದ್ದವು. ನಾಲ್ಕನೆಯ ಗೋವಿಂದನ ಕಾಲದಲ್ಲಿ ೪೦೩ ಅಗ್ರಹಾರಗಳಿದ್ದವೆಂದು ವಿದ್ವಾಂಸರು ಗುರುತಿಸಿದ್ದಾರೆ. ಅಕಾಲವರ್ಷನು (ಬದ್ದೆಗ). ಕ್ರಿ.ಶ. ೯೪೧ ರಲ್ಲಿ ಗೋದಾವರಿ ನದಿ ದಡದಲ್ಲಿದ್ದ ಒಂದು ಅಗ್ರಹಾರವನ್ನು ವನಯೂರಿನ ತಮ್ಮಯ್ಯನಿಗೆ ದಾನವಾಗಿ ನೀಡಿದನೆಂದು ಚೆನ್ನೂರಿನ ಶಾಸನವು ಉಲ್ಲೇಖಿಸುತ್ತದೆ. ಕ್ರಿ.ಶ. ೯೬೮ ರ ಕ್ಯಾಸಾಪುರ ಶಾಸನದಲ್ಲಿ (EC., vol XI, no. Cd 50) ಕೆರೆಯೂರಿನ ಅಣ್ಣಯ್ಯನು ಕಟ್ಟಿಸಿದ ಕಲ್ಲೇಶ್ವರ ದೇವಾಲಯಕ್ಕೆ, ಆತನು ಕಟ್ಟಿಸಿದ ಕೆರೆಯ ಕೆಳಗೆ ನಾಲ್ಕು ಮತ್ತರು ಭೂಮಿಯನ್ನು ಬಿಡುವುದಕ್ಕೆ ಬೀರವೂರು ಮುತ್ತು ಬಿದಿರ್ವಳ್ಳಿಯನ್ನು ಒಂದು ಅಗ್ರಹಾರವನ್ನಾಗಿ ಮಾಡಿ ಅಲ್ಲಿಯ ಬ್ರಾಹ್ಮಣರಿಗೆ ಬಿಟ್ಟರೆಂದು

ತಿಳಿದುಬರುತ್ತದೆ. ಇದಕ್ಕೆ ಸಾಕ್ಷಿಯಾಗಿ ಬಾಚಿಗಾವುಂಡ, ಕಂಭಯ್ಯ, ಕಳವುಣಯೂರಿನ ಮಹಾಜನರು ಗೊಗ್ಗಿಯಪುರದ ಬಾಳಚೆನು, ಪರತ್ರದೇವರ ಮಠದ ಖೇಹರ ಶತ್ತಿಭಂ, ಬಸದಿಯ ರಾವಚನ್ದ್ರ ಕೀರ್ತ್ರಯ್ಯ, ಸಯಿರನಾಡು–೫೦ ಅಗ್ರಹಾರಗಳು, ಮತ್ತು ಪಂಚ ಮಠಸ್ಥಾನವೇ ಸಾಕ್ಷಿ ಎಂದು ದಾಖಲಿಸುತ್ತದೆ. ಅಕಾಲವರ್ಷನು ರಾಜ್ಯಭಾರ ಮಾಡುತ್ತಿದ್ದಾಗ, ಈತನ ಸಾಮಂತ, ಸೂದ್ರಕಯ್ಯನು ಕಡಂಬಳಿಗೆ ಸಾವಿರವನ್ನು ಆಳುತ್ತಿದ್ದನು. ಕ್ರಿ.ಶ. ೯೬೯ ರಲ್ಲಿ ಸಿಡಿಲಂಕ ರಾಮನು ಮಾಡಿಸಿದ ಸಿಡಿಲೇಶ್ವರ ದೇವಾಲಯಕ್ಕೆ ಮತ್ತು ದಿವ್ಯಲಿಂಗಿ ಭಟಾರರಿಗೆ ನೀಡಿದ ದಾನದಲ್ಲಿ ೫೦ ಅಗ್ರಹಾರದವರು ಇತರರ ಜೊತೆಯಲ್ಲಿ ಸಾಕ್ಷಿಯಾಗಿದ್ದರು.

ಬ್ರಹ್ಮಪುರಿ: ಬ್ರಹ್ಮಪುರಿ ಉಚ್ಚ ಶಿಕ್ಷಣ ಕೇಂದ್ರವಾಗಿತ್ತು. ಅಗ್ರಹಾರಗಳು ಪೂರ್ಣವಾಗಿ ಒಂದು ಹಳ್ಳಿಯಾಗಿರುತ್ತಿತ್ತು. ಪಟ್ಟಣದ ಅಥವಾ ನಗರದ ಒಂದು ಭಾಗವಾಗಿರುತ್ತಿತ್ತು. ಬ್ರಹ್ಮಪುರಿಯ ಉಪಾಧ್ಯಾಯರುಗಳು ಘನ ವಿದ್ವಾಂಸರುಗಳು ಆಗಿರುತ್ತಿದ್ದರು. ಅನೇಕ ದೊರೆಗಳು ಬ್ರಹ್ಮಪುರಿಗಳನ್ನು ಸ್ಥಾಪಿಸಿದ್ದರೆಂದು ತಿಳಿದುಬರುತ್ತದೆ. ಸೂಡಿ, ವಿಕ್ರಮಪುರ, ಬಳ್ಳಿಗಾವೆ, ಅಣ್ಣಿಗೇರಿ, ತಲಕಾಡು ಮುಂತಾದ ಕಡೆಗಳಲ್ಲಿ ಬ್ರಹ್ಮಪುರಿಗಳಿದ್ದವು. ಸುಮಾರು ಹತ್ತನೆಯ ಶತಮಾನದ ಆರಂಭದಲ್ಲಿ ಪುಲಿಗೆಱೆಯಲ್ಲಿ ಬದ್ದೆಗ ಬ್ರಹ್ಮಪುರಿಯಿತ್ತು ಎಂಬ ಅಂಶ ಸೂದಿಯ ಶಾಸನದಿಂದ ಸ್ಪಷ್ಟವಾಗುತ್ತದೆ (EI., vol XV, pp 74 ff). ಬದ್ದೆಗೇಶ್ವರ ದೇವರ ಸನ್ನಿಧಿಯಲ್ಲಿ ಯಮ, ನಿಯಮ, ಸ್ವಾಧ್ಯಾಯ, ಧ್ಯಾನಾನುಷ್ಠಾನದಲ್ಲಿ ನಿರತರಾಗಿದ್ದ, ಮೂರ್ತಿ ಶಿವಾಚಾರ್ಯ ಮತ್ತು ಈಟ್ವಿದಿಂಬರು ಸಾಕ್ಷಿಯಾಗಿದ್ದಾಗ, ಪುಲಿಗೆಱೆಯನ್ನು ಬದ್ದೆಗ ಬ್ರಹ್ಮಪುರಿಯೆಂದು ಹೆಸರಿಸಿದನು. ಬದ್ದೆಗೇಶ್ವರದ ಮುಂದೆ ಸಾವಿರ ತಪೋಧನರಿಗೆ ಆಹಾರಕ್ಕೆ ಅನುಕೂಲ ಮಾಡಿಕೊಟ್ಟಿದ್ದನ್ನು ಈ ಶಾಸನವು ದಾಖಲಿಸುತ್ತದೆ. ಇಲ್ಲಿ ನಡೆಯುತ್ತಿದ್ದ ವಿದ್ಯಾಭ್ಯಾಸದಲ್ಲಿ ಏನೇನನ್ನು ಹೇಳಿಕೊಡುತ್ತಿದ್ದರೆಂದು ಸ್ಪಷ್ಟವಾಗುವುದಿಲ್ಲ. ಸೂಡಿ, ವಿಕ್ರಮಪುರ, ಬಳ್ಳಿಗಾವೆ, ಅಣ್ಣಿಗೇರಿ, ತಲಕಾಡು, ಮುಂತಾದ ಕಡೆಗಳಲ್ಲಿ ಬ್ರಹ್ಮಪುರಿಗಳಿದ್ದವು.

ಘಟಿಕಾಸ್ಥಾನ: ಘಟಿಕಾಸ್ಥಾನದ ಶಿಕ್ಷಣವು ಎಲ್ಲಕ್ಕಿಂತ ಮೇಲಿನದಾಗಿತ್ತು. ದಕ್ಷಿಣಭಾರತದಲ್ಲಿ, ಪ್ರಾಚೀನ ಕಾಲದಿಂದಲೂ ಕಂಚಿಯು ಪ್ರಮುಖ ಘಟಿಕಾಸ್ಥಾನವಾಗಿತ್ತು. ಕದಂಬ ಮಯೂರಶರ್ಮನು ವಿದ್ಯಾಭ್ಯಾಸಕ್ಕಾಗಿ ಕಂಚಿಯ

ಘಟಿಕಾಸ್ಥಾನಕ್ಕೆ ಹೋಗಿದ್ದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಕಾಲಕ್ರಮೇಣ ಕರ್ನಾಟಕದಲ್ಲಿ ಕೂಡ ಘಟಿಕಾಸ್ಥಾನಗಳು ಪ್ರಾರಂಭವಾದವು. ಘಟಿಕಾಸ್ಥಾನಗಳಲ್ಲಿ ಉಪಾಧ್ಯಾಯರು ಮತ್ತು ವಿದ್ಯಾರ್ಥಿಗಳು ವಿದ್ಯೆ ಕಲಿಯುವುದರ ಜೊತೆಗೆ ಚರ್ಚೆ, ವಾದ ಪ್ರತಿವಾದಗಳನ್ನು ನಡೆಸುತ್ತಿದ್ದರು. ಇದು ಕೂಡ ಕಲಿಕೆಯ ಒಂದು ಭಾಗವಾಗಿತ್ತು. ಘಟಿಕಾಸ್ಥಾನದಲ್ಲಿ ಸೈ ಎನಿಸಿಕೊಂಡವರನ್ನು "ಘಟಿಕಾ ಸಾಹಿಸಿ" ಎಂದು ಕರೆಯುತ್ತಿದ್ದರು.

ಕ್ರಿ.ಶ. ೯೧೮ ರ ಗದಗ ಶಾಸನವು (SII., vol XVIII, no. 22) ನಿತ್ಯವರ್ಷ ಮೂರನೆಯ ಇಂದ್ರನದಾಗಿದೆ. ಈ ಶಾಸನವು ಬಹಳ ತ್ರುಟಿತವಾಗಿದ್ದು, ಇಂದ್ರವಲ್ಲಭನು ರಾಜ್ಯವಾಳುತ್ತಿದ್ದಾಗ ಬೆಳ್ವೊಲ-೩೦೦ ರ ಒಡೆಯ ಮಹಾಶ್ರೀಮಂತನು ಬಟ್ಟೆಕೆಱೆಯ ಮಹಾಜನರ ನಡುವೆ ನಡೆದ ಒಪ್ಪಂದಗಳನ್ನು ಉಲ್ಲೇಖಿಸುತ್ತದೆ. ಮಹಾಜನರು ಬೇಡಿದಾಗ, ಸೋಮದೆವನೆಂಬ ವ್ಯಕ್ತಿಯು ಹೋಗಿ ಅರಸನನ್ನು ಕೇಳಿಕೊಂಡನೆಂಬ ವಿವರವು ಅಸ್ಪಷ್ಟವಾಗಿ ತಿಳಿಯುತ್ತದೆ. ಭಟ್ಟರು, ಘಯ್ಯಸಾಸಿಗಳು,ಸೋಮಯಾಜಿಗಳು ಮುಂತಾದವರ ಉಲ್ಲೇಖ ಬರುತ್ತದೆ. ಕ್ರಿ.ಶ. ೭೦೩ ರ ಶಾಸನವೊಂದು 'ಘಟಿಕಾ ಸಾಹಸಿ'ಯೊಬ್ಬನನ್ನು ಉಲ್ಲೇಖಿಸುತ್ತದೆ. ಅಲ್ಲಿ 'ಘಟಿಕಾಪ್ರಹರಿ'ಗಳಿರುತ್ತಿದ್ದರು. ಘಟಿಕಾಸ್ಥಾನದ ಎಲ್ಲಾ ಕಾರ್ಯಗಳೂ ವೇಳಾಪಟ್ಟಿಯಂತೆ ನಡೆಯುತ್ತಿದೆಯೋ ಇಲ್ಲವೋ ಎಂಬುದನ್ನು ಗಮನಿಸುವುದು ಇವರ ಕೆಲಸವಾಗಿತ್ತು.

ಘಟಿಕಾಸ್ಥಾನಗಳಲ್ಲಿ ನಡೆಯುತ್ತಿದ್ದ ಚರ್ಚೆಗಳಲ್ಲಿ ವಿಜೇತರಾದವರಿಗೆ ಬಿರುದುಗಳನ್ನು ಕೊಡುತ್ತಿದ್ದರೆಂದು ತಿಳಿದುಬರುತ್ತದೆ. ಇವರ ಶಿಕ್ಷಣದ ಕೊನೆಯ ಹಂತವು ಪರೀಕ್ಷೆಗಳಿಂದ ಮುಗಿಯುತ್ತಿತ್ತು. ಪರೀಕ್ಷೆಯು ನಡೆಯುತ್ತಿದ್ದ ವಿಧಾನವೂ ಕುತೂಹಲಕಾರಿಯಾಗಿತ್ತು. ಪರೀಕ್ಷೆಗಳಲ್ಲಿ ಘಟಿಕೆಗಳನ್ನು ಇಟ್ಟಿರುತ್ತಿದ್ದರು. ಅವುಗಳು ಒಂದೊಂದು ವಿಷಯಕ್ಕೆ ಸಂಬಂಧಿಸಿದವುಗಳಾಗಿರುತ್ತಿದ್ದವು. ವಿದ್ಯಾರ್ಥಿಯು ತನ್ನ ಅಧ್ಯಯನಕ್ಕೆ ಸಂಬಂಧಿಸಿದ ಘಟಿಕೆಯಿಂದ ಚೀಟಿಯನ್ನು ತಗೆದುಕೊಂಡು ಅದರಲ್ಲಿ ಹೇಳಿರುವಂತೆ ಮಾಡಬೇಕಿತ್ತು. ಇಂದಿನ ಪ್ರಶ್ನೆಪತ್ರಿಕೆಗಳಿದ್ದಂತೆ ಅಂದು ಘಟಿಕೆಗಳಲ್ಲಿ ಪ್ರಶ್ನೆಗಳಿರುತ್ತಿದ್ದವು. ಈ ರೀತಿಯ ಪರೀಕ್ಷೆಯಲ್ಲಿ ಗೆದ್ದುಬಂದವರನ್ನು 'ಘಟಿಕಾ ಸಾಹಸಿ', 'ಘೈ ಸಾಹಸಿ' ಮುಂತಾದ ಬಿರುದುಗಳಿಂದ ಗೌರವಿಸುತ್ತಿದ್ದರು.

ಗುಲ್ಬರ್ಗಾ ಜಿಲ್ಲೆಯ ನಾಗಾಯಿ, ಹೆಂಜೇರಿನ ನೊಳಂಬೇಶ್ವರ ದೇವಾಲಯ, ಧಾರವಾಡ ಜಿಲ್ಲೆಯ ಹೊಟ್ಟೂರು, ಸಿಂಧ್(ಸಿಂಧಿ) ತಾಲ್ಲೂಕಿನ ಕಡಲೆವಾಡದ ಸ್ವಯಂಭೂ ದೇವಾಲಯ, ಕುಕ್ಕನೂರು, ಮೊರಿಗೆರೆ, ಹೆಂಜೇರು, ರಾಯಭಾಗ ಇವೆಲ್ಲವೂ ಘಟಿಕಾಸ್ಥಾನಗಳಾಗಿದ್ದವೆಂದು ತಿಳಿಯುತ್ತದೆ. ಇಲ್ಲಿನ ಅಧ್ಯಯನದ ವಿಷಯಗಳಲ್ಲಿ ಮುಖ್ಯವಾದುದು ವೇದ, ವೇದಾಂಗಗಳಾಗಿದ್ದವು. ಉಳಿದಂತೆ ವ್ಯಾಕರಣ, ವೇದಾಂತ, ಪುರಾಣ, ಕಾವ್ಯ, ನಾಟಕ, ಸಂಗೀತ ಮುಂತಾದವುಗಳನ್ನು ಕಲಿಸಲಾಗುತಿತ್ತು. ಧಾರವಾಡದ ಲೊಕ್ಕಿಗುಂಡಿಯಲ್ಲಿ 'ಪ್ರಾಭಾಕರ'ವನ್ನು ವಿಶೇಷವಾಗಿ ಅಧ್ಯಯನ ಮಾಡುತ್ತಿದ್ದರು. ನಾಗಾವಿಯಲ್ಲಿ 'ಶುಕಶಾಸ್ತ್ರ', 'ಮನುಧರ್ಮಶಾಸ್ತ್ರ' ಮುಂತಾದವುಗಳನ್ನು ಕಲಿಸುತ್ತಿದ್ದರು. ಉಮ್ಮಜ್ಜಿಗೆಯಲ್ಲಿ ಖಗೋಲಶಾಸ್ತ್ರ, ಗಣಿತಶಾಸ್ತ್ರಗಳನ್ನು ಕಲಿಸುತ್ತಿದ್ದರೆಂದು ತಿಳಿದುಬರುತ್ತದೆ. ಹೂಲಿ ಎಂಬಲ್ಲಿ ಅರ್ಥಶಾಸ್ತ್ರವನ್ನು , ಶಿಲ್ಪಶಾಸ್ತ್ರ, ವಾಸ್ತುಶಾಸ್ತ್ರಗಳನ್ನು ಕಲಿಸುತ್ತಿದ್ದರು. ಪಠ್ಯಗಳಾಗಿ ವ್ಯಾಕರಣ, ಖಗೋಳ, ಜ್ಯೋತಿಷ್ಯ ಮುಂತಾದ ಗ್ರಂಥಗಳಿರುತ್ತಿದ್ದವು.

ಉಪಾಧ್ಯಾಯರಿಗೆ ಕೂಡ ಕನಿಷ್ಠ ಅರ್ಹತೆಗಳಿರಬೇಕಾಗಿತ್ತು. ಇವರನ್ನು 'ಭಟ್ಟವೃತ್ತಿ'ಯವರೆಂದು ಕರೆಯುತ್ತಿದ್ದರು. 'ಭಟ್ಟ' ಅಥವಾ 'ಭಟ್ಟೋಪಾಧ್ಯಾಯ'ನೆಂದೂ ಕರೆಯುತ್ತಿದ್ದರು. ಈತ ಸಾಮವೇದಿಯ ಮಗನಾಗಿರಬೇಕಿತ್ತು. ಎರಡು ವೇದಗಳು ಮತ್ತು ಮೀಮಾಂಸಾ ಶಾಸ್ತ್ರವನ್ನು ಭೋಧಿಸಲು ತಕ್ಕ ಪಾಂಡಿತ್ಯವಿರಬೇಕಾಗಿತ್ತು. ಕೆಲವು ವಿದ್ಯಾರ್ಥಿಗಳಿಗೆ ಒಂದು ಹೊತ್ತಿನ ಆಹಾರ ಕೊಟ್ಟು ನಂತರ ವಿದ್ಯೆಯಲ್ಲಿ ಅವರನ್ನು ಪರಿಣಿತನಾಗಿಸಬೇಕಿತ್ತು.

ವಾದಿ ಘಂಗಾಲಭಟ್ಟನೆಂಬ ಉಪಾಧ್ಯಾಯನು ಗಂಗರ ಆಸ್ಥಾನದಲ್ಲಿದ್ದನು. ಈತ ರಾಜಕುಮಾರರಿಗೆ ಶಿಕ್ಷಣ ನೀಡುತ್ತಿದ್ದನೆಂದು ಕೂಡ್ಲೂರು ಪಟಗಳು ವರ್ಣಿಸುತ್ತವೆ. ರಾಜನೀತಿಶಾಸ್ತ್ರದಲ್ಲಿ ಅವನು ತನ್ನ ಶಿಷ್ಯ ಗಂಗದೊರೆಗೆ ನೀಡಿದ ಬೋಧನೆಯು ರಾಷ್ಟ್ರಕೂಟ ದೊರೆ ವಲ್ಲಭನ ಮನಸ್ಸನ್ನು ಆಕರ್ಷಿಸಿತ್ತು. ಅರಸನು ಭಟ್ಟನ ಪಾಂಡಿತ್ಯವನ್ನು ಮೆಚ್ಚಿ ಗೌರವಿಸಿದ್ದರಿಂದ ಅವನ ಹೆಸರು ಎಲ್ಲರಿಗೂ ತಿಳಿಯಿತೆಂದು ವಿವರಿಸಲಾಗಿದೆ.

ಅಧ್ಯಾಪಕರ ಅಶನ-ವಸನಗಳಿಗೆ ತೊಂದರೆಯಾಗದಂತೆ ವೇತನ ಕೊಡುತ್ತಿದ್ದರು. ವಾಸಿಸಲು ಮನೆ, ಉಡಲು ವಸ್ತ್ರ, ವೈದ್ಯಕೀಯ ಸಹಾಯ ಎಲ್ಲವೂ

ಇರುತಿತ್ತು.. ಇದನ್ನು 'ಭಟ್ಟವೃತ್ತಿ' ಎಂದು ಕರೆಯುತ್ತಿದ್ದರು. ಅದೇ ರೀತಿ ವಿದ್ಯಾರ್ಥಿಗಳಿಗೂ ಭಟ್ಟವೃತ್ತಿಗಳನ್ನು ನೀಡುತ್ತಿದ್ದರು.

**ಕಾರ್ತಿಕೇಯ ತಪೋವನ:** ಸಾಲೊಟಗಿ ಅಥವಾ ಪಾವಿಟ್ಟಗೆಯು ಒಂದು ವಿದ್ಯಾಕೇಂದ್ರವಾಗಿತ್ತು. ಕ್ರಿ.ಶ. ೧೦ ನೆಯ ಶತಮಾನದಲ್ಲಿ ಮೂರನೆಯ ಕೃಷ್ಣನ ಪ್ರಧಾನಮಂತ್ರಿಯಾಗಿದ್ದ ನಾರಾಯಣನು ಇದನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ. ಇಲ್ಲಿ ಅಧ್ಯಯನ ಮಾಡಲು ದೇಶದ ಎಲ್ಲ ಕಡೆಗಳಿಂದಲೂ ವಿದ್ಯಾರ್ಥಿಗಳು ಬರುತಿದ್ದರು. ವಿದ್ಯಾರ್ಥಿಗಳ ವ್ಯಾಸಂಗಕ್ಕಾಗಿ ಇಪ್ಪತ್ತೇಳು ಕೊಠಡಿಗಳಿದ್ದವು. ಸುಮಾರು ಅರವತ್ತು ಎಕರೆ ಭೂಮಿಯನ್ನು ದೀಪದ ಖರ್ಚಿಗೆಂದು ಬಿಟ್ಟುಕೊಟ್ಟಿದ್ದಾಗಿ ತಿಳಿಯುತ್ತದೆ. ಊರಿನಲ್ಲಿ ನಡೆಯುವ ಸಮಾರಂಭದ ಸಮಯದಲ್ಲಿ ಇಲ್ಲಿಗೆ ದಾನವನ್ನು ಹಣದ ರೂಪದಲ್ಲಿ ನೀಡುತ್ತಿದ್ದರು.

ನಾಗಾವಿ ಶಾಸನವು (SII., vol XI, Part I, No. 41, 969 AD) ಖೊಟ್ಟಿಗನ ಆಳ್ವಿಕೆಯನ್ನು ತಿಳಿಸುತ್ತದೆ. ನಾಗವಾವಿಯ ರಾಮೇಶ್ವರದ ಸತ್ರಕ್ಕೆ ವಿದ್ಯಾದಾನಕ್ಕಾಗಿ ರಾಜಮಾನವನು, ಸರ್ವಬಾಧಾಪರಿಹಾರವಾಗಿ ಇಪ್ಪತ್ತೈದು ಮತ್ತರು ಹೊಲವನ್ನು ಮತ್ತು ಒಂದು ತೋಟವನ್ನು ಸತ್ರದೊಳಿರುವ ನಲವತ್ತು ತಪೋಧನರ ಅನುಕೂಲಕ್ಕಾಗಿ ನೀಡಿದ್ದನ್ನು ದಾಖಲಿಸುತ್ತದೆ.

ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಸಿಕ್ಕಿದಷ್ಟೂ, ಉತ್ತಮವಾದ ಸಾಹಿತ್ಯವು ಬೆಳವಣಿಗೆಯಾಗಲು ಸಹಾಯವಾಗುತ್ತದೆ. ಅರಸರು ವಿದ್ಯಾವಂತರಾಗಿರುತ್ತಿದ್ದರು. ಅವರು ವಿದ್ಯಾಪ್ರೇಮಿಗಲಾಗಿದ್ದರೆ ಹೆಚ್ಚಿನ ಪ್ರೋತ್ಸಾಹವು ದೊರೆಯುತ್ತಿತ್ತು. ಅರಸನ ಅಧಿಕಾರಿಗಲೌ ಸಾಮಾನ್ಯವಾಗಿ ವಿದ್ಯಾವಂತರಿರುತ್ತಿದ್ದರು. ಇನ್ನೊಂದು ಗುಂಪು ವೃತ್ತಿಗೆ ಸಂಬಂಧಿಸಿದ್ದು. ಇದರಲ್ಲಿ ವಿದ್ಯೆಯು ವಾಂಶಿಕವಾಗಿ ಬರುತ್ತಿತ್ತು. ಕುಲವೃತ್ತಿಯನ್ನು ತಂದೆ ತನ್ನ ಮಕ್ಕಳಿಗೆ ಕಲಿಸುವುದರ್ ಮೂಲಕ ಇಂತಹ ವಿದ್ಯಾಪರಂಪರೆ ಮುಂದುವರೆಯುತ್ತಿತ್ತು. ಅರಸರು ಮತ್ತು ಪ್ರತಿಷ್ಠಿತ ವ್ಯಕ್ತಿಗಳು ಮಾತ್ರ ಪ್ರತ್ಯೇಕವಾಗಿ ಗುರುಗಳನ್ನು ನೇಮಿಸಿಕೊಳ್ಳುತ್ತಿದ್ದರೆನ್ನಬಹುದು. ಇದಕ್ಕೆ ಆಧಾರವಾಗಿ ಅಮೋಘವರ್ಷನು ತನ್ನ ಮಗ ಕೃಷ್ಣನಿಗೆ ಗುರುವಾಗಿ ಗುಣಭದ್ರಾಚಾರ್ಯರನ್ನು ನೇಮಿಸಿದ್ದನ್ನು ಉಲ್ಲೇಖಿಸಬಹುದು (Yazdani., Opcit., p 306).

ಶಿಕ್ಷಣವು ಬಹಳ ಮುಖ್ಯವಾದ ಅವಶ್ಯಕತೆಗಳಲ್ಲೊಂದು. ರಾಷ್ಟ್ರಕೂಟರ ಕಾಲದಲ್ಲಿ ಶಿಕ್ಷಣ ಪದ್ಧತಿಯು ಬಹಳ ಚೆನ್ನಾಗಿಯೇ ಇತ್ತು. ಅದರ ಫಲವೇ ವಿಪುಲವಾದ ಸಾಹಿತ್ಯ ಸೃಷ್ಟಿ. ರಾಷ್ಟ್ರಕೂಟ ದೊರೆಗಳ ಕಾಲದಲ್ಲಿ ಅನೇಕ ಕವಿಗಳಿಗೆ ರಾಜಾಶ್ರಯವೂ ದೊರೆತಿತ್ತು. ವಿದ್ಯಾಕೇಂದ್ರಗಳಿಗೆ ಧಾರಾಳವಾಗಿ ಪ್ರೋತ್ಸಾಹ, ದಾನ ದತ್ತಿಗಳನ್ನು ನೀಡುತ್ತಿದ್ದರು. ಅರಸರಷ್ಟೇ ಅಲ್ಲದೆ ವರ್ತಕರು, ಅನೇಕ ಶ್ರೀಮಂತರು ಕೂಡ ಶಿಕ್ಷಣಕ್ಕಾಗಿ ದಾನಗಳನ್ನು ನೀಡುತ್ತಿದ್ದರು. ಹೀಗಾಗಿ ರಾಷ್ಟ್ರಕೂಟರ ಕಾಲದಲ್ಲಿ ಬಹಳಷ್ಟು ಸಾಹಿತ್ಯದ ರಚನಾಕಾರ್ಯ ನಡೆಯಿತು. ಸಂಸ್ಕೃತ, ಪ್ರಾಕೃತ, ಕನ್ನಡ ಹೀಗೆ ಮೂರೂ ಭಾಷೆಗಳಲ್ಲಿ ಗ್ರಂಥಗಳು ಲಭ್ಯವಾಗಿವೆ.

ವಿದ್ಯಾಭ್ಯಾಸದಲ್ಲಿ ಹೆಚ್ಚಾಗಿ ಧರ್ಮವನ್ನು, ತತ್ವವನ್ನು ಹೇಳಿಕೊಡುತ್ತಿದ್ದರು. ಅದರಿಂದಾಗಿ ಇವು ಸೀಮಿತ ಜನರಿಗೆ ತಲಪುತ್ತಿದ್ದ ಸಾಧ್ಯತೆಗಳೂ ಇವೆ. 'ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಇವರು ಹನ್ನೆರಡು ವರ್ಷಗಳವರೆಗೆ ವೇದಾಧ್ಯಯನ ಮಾಡಬೇಕೆಂದು ಧರ್ಮಗಳು ಬೋಧಿಸುತ್ತವೆ' ಎಂದಿದ್ದಾರೆ. ಆದರೆ ರಾಷ್ಟ್ರಕೂಟರ ಕಾಲಕ್ಕಾಗಲೇ ವೈಶ್ಯರು ಇದರಿಂದ ವಂಚಿತರಾಗಿದ್ದರು. ಕ್ಷತ್ರಿಯರ ಸಂಖ್ಯೆ ಕೂಡ ಗಣನೀಯವಾಗಿ ಇಳಿಮುಖವಾಗಿತ್ತೆಂದು ತಿಳಿದುಬರುತ್ತದೆ (Rastrakutas and their Times., p 400, Dr. Altekar A.S).

## ಮಹಾಜನರು

ಡಾ॥ ಫ್ಲೀಟರು ಮಹಾಜನರೆಂದರೆ ಬ್ರಾಹ್ಮಣರ ಗುಂಪು ಎಂದಿದ್ದಾರೆ (EI., vol V, p10). ಮಹಾಜನ ಎಂದರೆ ವರ್ತಕರು ಎನ್ನುವ ಅಭಿಪ್ರಾಯವನ್ನು ಡಾ॥ ಆರ್.ಸಿ. ಮಜುಂದಾರರು ನೀಡಿದ್ದಾರೆ (Social work in Ancient and Medieval India, P 32, (ed) Wadia A.R.).

ಅಲ್ಟೇಕರರು ಮಹಾಜನರೆಲ್ಲಾ ಬ್ರಾಹ್ಮಣರಾಗಿರಲ್ಲಿಲ್ಲ (Rashtrakuta and their times., Altekar, p 201) ಎನ್ನುತ್ತಾರೆ. ಇದಕ್ಕೆ ಆಧಾರವಾಗಿ ರಾಧನಪುರ ಶಾಸನದಲ್ಲಿ (Ibid., p 246) ನಲವತ್ತು ಮಹಾಜನರ ಉಲ್ಲೇಖವಿದ್ದು, ಅವರ ಪ್ರಕಾರ ಅದರಲ್ಲಿ ಹತ್ತು ಜನರು ಮಾತ್ರವೇ ಬ್ರಾಹ್ಮಣರು. ಉಳಿದವರು ಬೇರೆಯವರು. ಹತ್ತಿಮತ್ತೂರಿನ ಶಾಸನದಲ್ಲಿ (IA., vol XII, p 125, 917 AD), ಇದರಲ್ಲಿದ್ದ

ಮುಖಂಡರಾದ ಐವತ್ತು ಜನರಲ್ಲಿ ತೆಲ್ಲಿಗ ಜಯಸಿಂಗಯ್ಯ ಸೆಟ್ಟಿ, ಜುಮ್ಮಿಸೆಟ್ಟಿ, ಮಾಲಿಸೆಟ್ಟಿ, ನಾಮಿಸೆಟ್ಟಿ, ಕಾಂವಿಸೆಟ್ಟಿ ಎಂಬ ಹೆಸರುಗಳು ಬರುತ್ತದೆ. ಇವರೆಲ್ಲ ಬ್ರಾಹ್ಮಣರಲ್ಲ ಎಂದು ಅಲ್ಟೇಕರರ ಅಭಿಪ್ರಾಯ.

ಮಹಾಜನರೆಂದರೆ ಊರ ಹಿರಿಯರ ಗುಂಪು ಎಂದಿದ್ದಾರೆ. ಶಿರೂರಿನ ಶಾಸನದಲ್ಲಿ (Rashtrakuta and their times., Altekar, p 201) ಇನ್ನೂರ ಮೂವತ್ತು ಮಹಾಜನರ ಉಲ್ಲೇಖ, ನರಗುಂದ್ ಶಾಸನದಲ್ಲಿ ಇನ್ನೂರ ಇಪ್ಪತ್ತು ಮಹಾಜನರ ಉಲ್ಲೇಖವಿದೆ. ಇವುಗಳನ್ನು ನೋಡಿದಾಗ ಪ್ರತಿಯೊಂದು ಕುಟುಂಬದ ಒಡೆಯ ಮಹಾಜನರ ಗುಂಪಿಗೆ ಬರುತ್ತಾನೆ ಎಂದಿದ್ದಾರೆ. ಒಟ್ಟಿನಲ್ಲಿ ಪ್ರತಿಯೊಂದು ಗ್ರಾಮದಲ್ಲಿಯೂ ಮಹಾಜನರಿರುತ್ತಾರೆ. ಮನೋರ್ ಶಾಸನವು (IHQ., vol XXX, 1959, No. 3, 749 AD) ಮಹಾಜನರು ನೀಡಿದ ದಾನವನ್ನು ಉಲ್ಲೇಖಿಸಿದೆ. ದೇವಾಲಯದ ನಿರ್ಮಾಣ, ವೀರಗಲ್ಲು, ಗೋಸಾಸ ಮೇಂಟಿ ಸ್ಥಾಪನೆ, ದಾನ, ಮುಂತಾದ ಕಾರ್ಯಕ್ರಮಗಳು ಮಹಾಜನರ ಸಮ್ಮುಖದಲ್ಲೇ ನಡೆಯುತ್ತಿತ್ತು. ಇದು ಮಹಾಜನರಿಗೆ ಸಮಾಜದ ಮೇಲಿದ್ದ ಹಿಡಿತವನ್ನು ಪ್ರತಿಬಿಂಬಿಸುತ್ತದೆ. ಇವರು ಆಡಳಿತದಲ್ಲಿ ಕೂಡ ಸಹಾಯ ಮಾಡುತ್ತಿದ್ದರು.

ಒಟ್ಟಿನಲ್ಲಿ ಮಹಾಜನರ ಜಾತಿಯ ಬಗ್ಗೆ ವಾದವಿವಾದ ಮಾಡುವುದಕ್ಕಿಂತ ಸಮಾಜದ ಹಿತಕ್ಕಾಗಿ ದುಡಿಯುತ್ತಿದ್ದ, ಆಡಳಿತದಲ್ಲಿ ಸಹಾಯ ಮಾಡುತ್ತಿದ್ದ ಒಂದು ಗುಂಪೆಂದು ಭಾವಿಸಿದರೆ ಉತ್ತಮ. ಏಕೆಂದರೆ ಮಹಾಜನರು ಎಂದೊಡನೆ ಗೌರವ ಸಲ್ಲಿಸುತ್ತಿದ್ದ ಜನತೆಯ ಪ್ರತಿಕ್ರಿಯೆಗೂ ಬೆಲೆ ಕೊಡಬೇಕಾಗುತ್ತದೆ. ಮಹಾಜನರೆಲ್ಲಾ ಬ್ರಾಹ್ಮಣರಲ್ಲ, ಬಹುಪಾಲು ಜನ ಬ್ರಾಹ್ಮಣರು ಎಂದು ಭಾವಿಸಿದರೆ ಸಾಕೆನಿಸುತ್ತದೆ.

ಸಮಾಜದಲ್ಲಿ ಮಹಾಜನರಿಗೆ ಪ್ರಾಮುಖ್ಯತೆಯಿತ್ತು. ಶ್ರೇಷ್ಠರಾದ ಜನರೆಂದು ಬಹಳ ಗೌರವದಿಂದ ಕಾಣುತ್ತಿದ್ದರು. ಯಾವುದೇ ಮುಖ್ಯ ಕಾರ್ಯಗಳು ನಡೆಯಬೇಕಾದರೂ ಮಹಾಜನರ ಸಮ್ಮುಖದಲ್ಲಿಯೇ ನಡೆಯುತ್ತಿತ್ತು. ಕ್ರಿ.ಶ. ೭೮೦ ರ ಆಲಂಪುರ ಶಾಸನವು (APGAS., vol III, no.99) ಧಾರವರ್ಷ ಧ್ರುವನ ಕಾಲದಲ್ಲಿನಡೆದ ಶ್ರೀವಾಗಿಲು ನಿರ್ಮಾಣವಾದ ಸಂದರ್ಭದಲ್ಲಿ ನೀಡಿದ ದಾನಗಳಲ್ಲಿ

ಮಹಾಜನರಿಗೆ ಕೂಡ ದಾನ ನೀಡಿದ್ದನ್ನು ಉಲ್ಲೇಖಿಸಿದೆ. ಗುಂಡಗಟ್ಟಿಯ ಶಾಸನದಲ್ಲಿ (ARIE., 1957-58, no.B 268) ಕೆರೆಯೂರಿನ ಮಹಾಜನರ ಉಲ್ಲೇಖವಿದೆ.

ಮಹಾಜನರನ್ನು ಸಂಖ್ಯೆಗಳ ಸಮೇತ ಕೂಡ ಗುರುತಿಸಿದ್ದಾರೆ. ಒಂದನೆಯ ಅಮೋಘವರ್ಷನ ಶಿಗ್ಗಾಂವ್ ಶಾಸನವು (EI., vol VII, No.28, p 201, 865 AD) ಎಙ್ಬುಣುಸೆಯ ನಾಲ್ಪದಿಂಬರ ಸಮ್ಮುಖದಲ್ಲಿ ನಡೆದ ಭೂಮಿದಾನವನ್ನು ಉಲ್ಲೇಖಿಸಿದೆ. ಇದೇ ಅರಸನ ಗಾವರವಾಡ ಶಾಸನದಲ್ಲಿ (SII., vol XI, part I, No.13, 869 AD) ವಡಿವಾಡದ ಮಹಾಜನರ ಪಾದವನ್ನು ತೊಳೆದು ತುಪ್ಪ ದೇಱಿಯನ್ನು ಬಿಟ್ಟಿದ್ದನ್ನೂ ದಾಖಲಿಸಿದೆ. ಎರಡನೆಯ ಕೃಷ್ಣನ ಮೇವುಂಡಿ ಶಾಸನದಲ್ಲಿ (SII., vol XI, part I, no.22, 869AD) ದೇಗುಲ ನಿರ್ಮಾಣವಾದ ಸಂದರ್ಭದಲ್ಲಿ ಅನೇಕ ನೂರು ಮಹಾಜನರ ಸಮ್ಮುಖದಲ್ಲಿ ಅನೇಕ ನೂರು ಮತ್ತರು ಭೂಮಿಯನ್ನು ವೇದವಾಹನ ಭಟ್ಟಾರರ ಕಾಲನ್ನು ತೊಳೆದು ದಾನ ಮಾಡಿದ್ದನ್ನು ಉಲ್ಲೇಖಿಸಿದೆ. ಮೂರನೆಯ ಇಂದ್ರನ ಹಿರೇಮಗನೂರು ಶಾಸನದಲ್ಲಿ (SII., vol XVIII, no.20, 916 AD) ತಾಣಗುಂದೂರು (ತಾಳಗುಂದ) ಮಹಾಜನರೇ ಹರಕೆಯಿಂದ ಚಿತ್ರ ಗೋಸಾಸವನ್ನು ಮಾಡಿಸಿ ಎರಡು ಕೆರೆಗಳನ್ನು ಕಟ್ಟಿಸಿದ್ದನ್ನು ದಾಖಲಿಸಿದೆ. ನಿತ್ಯವರ್ಷನ ಹಳೇರಿತ್ತಿ ಶಾಸನದಲ್ಲಿ (ARSIE., 1930-34, no. B47, 928 AD) ನರೆಯಂಗಲ್ಲು ಮಹಾಜನರ ಸಮ್ಮುಖದಲ್ಲಿ ಗೋಸಹಸ್ರವನ್ನು ನೀಡಿದ ಉಲ್ಲೇಖವಿದೆ.

ಮೂರನೇ ಕೃಷ್ಣನ ದೇವಿಹೊಸೂರು ಶಾಸನದಲ್ಲಿ (EI., vol XVI, no.21, 962AD) ಉತ್ತರಾಯಣ ಸಂಕ್ರಾಂತಿಯಂದು ಹೊಸೂರ ಮಹಾಜನ ಎಪ್ಪತ್ತೈದು ಐವತ್ತೈದು ಗದ್ಯಾಣ ಪೊನ್ನಬೆಳ್ಳಕರಂ ನೀಡಿದ್ದನ್ನು ಉಲ್ಲೇಖಿಸಿದೆ. ಖೊಟ್ಟಿಗನ ಬೇವಿನಹಳ್ಳಿ ಶಾಸನದಲ್ಲಿ (EC., vol XI, no.Cd 74, 968 AD) ಬಾಡದ ಮಹಾಜನರ ಸಾಕ್ಷಿಯಲ್ಲಿ ನೀಡಿದ ದಾನವನ್ನು ಉಲ್ಲೇಖಿಸಿದೆ.

## ದಾನ

ದಾನ ಎನ್ನುವುದು ಶ್ರೇಷ್ಠವಾದ ಸಹಾಯ. ಇದನ್ನು ನೀಡುವ ಕ್ರಮದಲ್ಲಿ ವ್ಯತ್ಯಾಸವಿದ್ದರೂ ಉದ್ದೇಶ ಒಂದೇ ಆಗಿರುತ್ತದೆ. ಪರೋಪಕಾರದ ಮುಖಾಂತರ ಆತ್ಮೋದ್ಧಾರ ಮತ್ತು ಪುಣ್ಯಸಂಪಾದನೆ. ದಾನಗಳಲ್ಲಿ ಅನೇಕ ಬಗೆಗಳಿವೆ.

**ದಶದಾನಗಳು:** ಭೂಮಿ, ಗೋವು, ಚಿನ್ನ, ಬೆಳ್ಳಿ, ವಸ್ತ್ರ, ಲವಣ, ಎಳ್ಳು, ತುಪ್ಪ, ಬೆಲ್ಲ (ಗುಡ), ಧಾನ್ಯಗಳು.

ಗೋ ಭೂ ತಿಲಹಿರಣ್ಯಾಜ್ಯ ವಾಸೋ ಧಾನ್ಯಗುಡಾನಿಚ।

ರೌಪ್ಯಂ ಲವಣಮಿತ್ಯಾಹುರ್ದಶ ದಾನಾನ್ಯನುಕ್ರಮಾತ್॥

(ಕರ್ಮಸಮುಚ್ಚಯ)

**ಷೋಡಶದಾನಗಳು:** ಮೇಲಿನ ದಶದಾನಗಳು ಮತ್ತು ಛತ್ರ, ದಂಡ, ಪಾದುಕೆ, ಪಾತ್ರ, ಶಯ್ಯಾ, ವ್ಯಂಜನಗಳು, ಷೋಡಶ ದಾನಗಳೆನಿಸಿಕೊಳ್ಳುತ್ತವೆ. ಇವಲ್ಲದೆ ಷೋಡಶ ಮಹಾದಾನಗಳೆಂದು ಶ್ರೀ, ತುಲಾಭಾರ, ಹಿರಣ್ಯಗರ್ಭ, ತಿಲಶೈಲ, ಸ್ವರ್ಣಭೂಮಿ, ಕಲ್ಪವೃಕ್ಷ, ಸ್ವರ್ಣಗಣಪತಿ, ಸ್ವರ್ಣಧೇನು, ಶ್ರೀತಿಲಧೇನು, ಗೋಸಹಸ್ರ, ಹಿರಣ್ಯಾಕ್ಷ, ಕನ್ಯಾದಾನ, ಹಿರಣ್ಯವೃಷಭ, ಸ್ವರ್ಣಲೋಕಪಾಲಾಷ್ಟಕ, ಹಿರಣ್ಯಗಜ, ಮೂರ್ತಿತ್ರಯ, ಪ್ರತಿಮಾದಾನಗಳನ್ನು ಲಿಂಗಪುರಾಣದಲ್ಲಿ ಉಲ್ಲೇಖಿಸಲಾಗಿದೆ.

ಹೀಗೆ ಅನೇಕ ಬಗೆಯ ದಾನಗಳಿರುವುದರಿಂದ ಜನ ತಮ್ಮ ಕೈಗೆಟಕುವಂತಹ ದಾನಗಳನ್ನು ನೀಡುತ್ತಿದ್ದರೆಂದು ಭಾವಿಸಬಹುದಾಗಿದೆ. ಒಟ್ಟಿನಲ್ಲಿ ಸಮಾಜಕ್ಕೆ ಉಪಯೋಗವಾಗುವಂತೆ, ಸಾಮಾಜಿಕ ಸಂಬಂಧಗಳನ್ನು ಹೆಚ್ಚು ಸರಳೀಕರಿಸುವಂತೆ, ಸಮಾಜದ ಸೌಲಭ್ಯಕ್ಕಾಗಿ ಸಹಾಯ ಮಾಡುವಂತಹ ಸರಳ ಉಪಾಯವಾಗಿ ದಾನದ ಪ್ರಕ್ರಿಯೆಯು ಬೆಳೆದಿರುವಂತೆ ಕಾಣುತ್ತದೆ. ಇಂತಹ ದಾನಗಳನ್ನು ನೀಡಿದರೆ ಅದು ಎಲ್ಲರಿಗೂ ತಲುಪಬೇಕಾದುದು ಕೂಡ ಅಷ್ಟೇ ಮುಖ್ಯವಾಗುತ್ತದೆ. ಆದ್ದರಿಂದ ದೇವಾಲಯಗಳಿಗೆ ಹೆಚ್ಚಾಗಿ ದಾನಗಳನ್ನು ನೀಡುತ್ತಿದ್ದರು. ದೇವಾಲಯವು ಒಂದು ಸಾಮಾಜಿಕ ಮತ್ತು ಸಾಂಸ್ಕೃತಿಕ ಕೇಂದ್ರವಾಗಿರುವುದರಿಂದ ಇದರ ಮೂಲಕ ದಾನದ ಫಲವು ಹೆಚ್ಚು ಜನರಿಗೆ ದಕ್ಕುತ್ತಿತ್ತು.

ದಾನಗಳನ್ನು ವ್ಯಕ್ತಿಗತ ದಾನ, ಸಂಯುಕ್ತ ದಾನ ಮತ್ತು ಸಾಮೂಹಿಕ ದಾನ ಎಂದು ಮೂರು ಬಗೆಗಳಲ್ಲಿ ಗುರುತಿಸಬಹುದಾಗಿದೆ. ವ್ಯಕ್ತಿಗತ ದಾನದಲ್ಲಿ ಒಬ್ಬನೇ ವ್ಯಕ್ತಿಯು ದಾನ ನೀಡುತ್ತಾನೆ. ಸಂಯುಕ್ತ ದಾನದಲ್ಲಿ ಒಂದಕ್ಕಿಂತ ಹೆಚ್ಚಿನ ಜನರು ಸೇರಿ ದಾನ ನೀಡಿರುವುದನ್ನು ಕಾಣಬಹುದು. ಸಾಮೂಹಿಕ ದಾನದಲ್ಲಿ ಒಂದಕ್ಕಿಂತ ಹೆಚ್ಚು ಜನರು ಗುಂಪಾಗಿ ಸೇರಿಕೊಂಡು ದಾನ ನೀಡಿರುವುದನ್ನು ಗುರುತಿಸಬಹುದು.

ದಾನದ ಮೊತ್ತ ಅಧಿಕವಾಗಲೆಂಬ ಗುರಿಯಿರುವ ಸಾಧ್ಯತೆಗಳನ್ನು ಇಲ್ಲಿ ಗುರುತಿಸಬಹುದಾಗಿದೆ.

**ಗೋಸಾಸ**

ದೇವಾಲಯಕ್ಕೆ ನೀಡುವ ಅನೇಕ ದಾನಗಳಲ್ಲಿ ಗೋಸಾಸವೂ ಒಂದಾಗಿದೆ. ಹಸುವಿನಿಂದ ಬಂದ ಉತ್ಪನ್ನಗಳನ್ನು ದೇವರ ಅಂಗಭೋಗ ನೈವೇದ್ಯಾದಿಗಳಿಗೆ ಬಳಸಿಕೊಳ್ಳಲಾಗುತ್ತಿತ್ತು. ಹಾಲು, ಬೆಣ್ಣೆ, ತುಪ್ಪ ಮುಂತಾದವುಗಳನ್ನು ದೇವರ ಅಲಂಕಾರಕ್ಕೆ, ನೈವೇದ್ಯಕ್ಕೆ ಬಳಸಲಾಗುತ್ತಿತ್ತು. ರಾಷ್ಟ್ರಕೂಟರ ಕಾಲದಲ್ಲಿ ಕಂಡುಬರುವ ಗೋಸಾಸಗಳಿಗೆಲ್ಲ ಒಂದೇ ಅರ್ಥವಿದೆಯೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಹಲವಾರು ಉದ್ದೇಶಗಳಿಗೆ ಗೋಸಹಸ್ರ ದಾನವನ್ನು ನೀಡಿದ್ದಾರೆ. ಕಲ್ಲು ನೆಡಿಸಿ ನೀಡುವ ಗೋಸಾಸ ದಾನಕ್ಕೂ, ದೇವಾಲಯಕ್ಕೆ ನೀಡುವ ಗೋಸಾಸ ದಾನಕ್ಕೂ ವ್ಯತ್ಯಾಸಗಳಿರಬಹುದೆಂದು ಭಾಸವಾಗುತ್ತದೆ. ಗೋಸಾಸ ನೀಡುವುದಕ್ಕೂ ಗೋಸಾಸ ಬಿಳಿಯುವುದಕ್ಕೂ ಮೇಂಟಿಯಿರಿಸುವುದಕ್ಕೂ ಸ್ಪಷ್ಟವಾದ ಅರ್ಥವನ್ನು ನೀಡಲು ಸಾಧ್ಯವಾದರೆ ಮಾತ್ರ ಸಾಮಾಜಿಕವಾಗಿ ಗೋಸಾಸಕ್ಕೆ ಇದ್ದ ಮಹತ್ವವೇನೆಂದು ತಿಳಿದುಬರುತ್ತದೆ. ಒಟ್ಟಿನಲ್ಲಿ ಸಮಾಜದ ಒಂದು ಅಂಗವಾಗಿ ಅಥವಾ ಒಂದು ಸಾಮಾಜಿಕ ದಾನವಾಗಿ ಗೋಸಾಸ ದಾನದ ಸಂಪ್ರದಾಯವಿತ್ತೆಂದು ಹೇಳಬಹುದಾಗಿದೆ.

**ವೇಳೆವಾಳಿ**

ಒಡೆಯನಿಗಾಗಿ ಸೇವಕನು ತನ್ನ ಪ್ರಾಣವನ್ನು ಕೊಡುವುದೆ ವೇಳೆವಾಳಿ. ಇದಕ್ಕೆ ಸಮಾನಾರ್ಥಕವಾಗಿ ಕೀಳ್ಕುಂಟೆ, ಕೀಲ್ಗುಣಿ ಮುಂತಾದ ಹೆಸರುಗಳಿವೆ. ಕೆಳಗೆ ಕುಣಿ, ತಗ್ಗು ಎಂದು ಅರ್ಥೈಸಿದ್ದಾರೆ. ಒಡೆಯನ ಸಮಾಧಿಯ ಅಥವಾ ಚಿತಾಕುಂಡದ ಕೆಳಗೆ ವೇಳೆವಾಳಿಯಾದ ವ್ಯಕ್ತಿಯನ್ನು ಮಲಗಿಸುತ್ತಿದ್ದರು ಎಂದಿದ್ದಾರೆ ವಿದ್ವಾಂಸರು.

ಒಡೆಯನ ಸಾವು ಉನ್ನತವಾದುದು. ಅಂತಹವನೇ ಹೋದ ಮೇಲೆ ತಾನೇನು ಎಂಬ ಭಾವವಿಟ್ಟುಕೊಂಡವರು ಎನ್ನುವ ಅರ್ಥಕೊಡಲು ಸಾಧ್ಯವೇ? ರಾಜಾ ಪ್ರತ್ಯಕ್ಷ ದೇವತಾ ಎಂದು ನಂಬಿದವರು ಪ್ರಾಣಾರ್ಪಣೆ ಮಾಡುತ್ತಿದ್ದರೆಂದು ಭಾವಿಸಬಹುದು.

ಆದರೆ ಪ್ರಜೆಗಳೆಲ್ಲ ಬಹುಪಾಲು ಹಾಗೆಯೇ ನಂಬಿದ್ದರೂ, ವೀರರು ತಮ್ಮದೇ ಆದ ರೀತಿಯಲ್ಲಿ ತೋರಿಸುತ್ತಿದ್ದ ಗೌರವವೆಂದು ಭಾವಿಸಬಹುದಾಗಿದೆ.

ಪುರುಷರಂತೆ ಸ್ತ್ರೀಯರೂ ವೇಳೆವಾಳಿಗಳಾಗಬಹುದಿತ್ತು. ಮನೆಮಗತಿ, ಮನೆವಗತಿ, ಮನೆಯಗತಿ ಎಂದು ಅವರುಗಳನ್ನು ಕರೆಯತ್ತಿದ್ದರು. ಒಂದನೆಯ ಅಮೋಘವರ್ಷನ ಮೇವುಂಡಿ ಶಾಸನದಲ್ಲಿ (SII. Vol. XI. Pt-I, no-II AD 865) ಕುಪ್ಪೆಯರಸನ ಮಗ ಅಣ್ಣುಗ ರಟ್ಟಯಣ್ಣನು ಕೀಲ್ಗುಂಟೆಯಾದನೆಂದು ಉಲ್ಲೇಖಿಸಿದೆ. ನಾಲ್ಕನೆಯ ಗೋವಿಂದನ ನಂದಿಗುಡಿ ಶಾಸನದಲ್ಲಿ (EC.XI. no. 119, A.D. 930) ಬೆಳವಡಿಚನು ಕೀಲ್ಗುಣಿಯಾದನೆಂದು ಉಲ್ಲೇಖಿಸಿದೆ.

ಒಂದನೆಯ ಅಮೋಘವರ್ಷನ ಹೇಮಾವತಿ ಶಾಸನದಲ್ಲಿ (ಹಂ.ಕ.ವಿ.ವಿ., ಆಂಧ್ರಪ್ರದೇಶ ಭಾಗ–೧) ಮಯ್ಲಮ್ಮನು ಕೀಲ್ಗುಣಿಯಾದನೆಂದು ಉಲ್ಲೇಖಿಸಿದೆ. ಬಂಕೇಯನ ಮಗ ಕುಂದಟಿಯು ಮೂವತ್ತು ದಿನಗಳ ಕಾಲ ಸನ್ಯಸನ ವಿಧಿಯಿಂದ ಉಪವಾಸ ಮಾಡಿ ಮರಣ ಹೊಂದಿದನೆಂದು ತಿಳಿಸುತ್ತದೆ.

## ಸಿಡಿತಲೆ

ತನ್ನ ಯಜಮಾನನಿಗೆ ಶುಭವಾಗಲಿ ಎಂಬ ಹಾರೈಕೆಯನ್ನು ತೋರ್ಪಡಿಸಲು ಸಿಡಿತಲೆ ಸಂಪ್ರದಾಯವಿತ್ತು.

ಜಗತ್ತುಂಗನ ನಿಲೋಗಲ್ ಶಾಸನದಲ್ಲಿ (SII. Vol, XVIII, no 35, A.D. 910) ಪೀಗನೆಂಬುವನು ಹೋರಾಟದಲ್ಲಿ ಮಡಿದಾಗ ಕಡಿತಲೆಯಾದುದನ್ನು ಉಲ್ಲೇಖಿಸಿದೆ. ೩ ನೆಯ ಅಮೋಘವರ್ಷನ ಮಾಸಣಗಿ ಶಾಸನದಲ್ಲಿ (ARIE 1960-61, no.B. 440,936 A.D) ಮಾಸಲಿಗೆಯ ಅವ್ವೆಯರ ಪುಣುಸೆಯಮ್ಮ, ಅಮ್ಮಣ, ಅಣ್ಣಿಗನು ಕಾದಾಡಿದರು. "ಅಮ್ಮಣನು ಕೆಡಗೆವೋಗಿ ಒನ್ದಣದೊಳ್ಳುದುರೆಯಿನ್ದಿೞಿದು ಕಡಿತಲೆಗೊಣ್ಡು ಆನೆಗಳೋಳ್ವೆಣಿದು ಅಣಿಯಣಿಯೊಳ್ತಪಗಳ್ಮಣಿಯದೆ ತನ್ನೋೞ್ಪುತಳ್ತು-----" ಎಂದು ಅವನು ಕಡಿತಲೆಯಾದುದನ್ನು ಉಲ್ಲೇಖಿಸುತ್ತದೆ. ಕಡಿತಲೆಯ ಪರಂಪರೆಯಿದ್ದರೂ ರಾಷ್ಟ್ರಕೂಟರ ಕಾಲದಲ್ಲಿ ಜನಪ್ರಿಯವಾಗಿರಲಿಲ್ಲ ಎನ್ನಬಹುದು.

## ಸ್ತ್ರೀಯರ ಸ್ಥಾನಮಾನ

ರಾಷ್ಟ್ರಕೂಟ ಅರಸರ ಮಡದಿಯರು ಸುಸಂಸ್ಕೃತರು. ಆಡಳಿತದಲ್ಲಿ ಪಾಲ್ಗೊಂಡವರ ಸಂಖ್ಯೆ ಕಡಿಮೆಯಾದರೂ, ದಾನ ಧರ್ಮಗಳಲ್ಲಿ ನಿರತವಾಗಿ, ತಮ್ಮ ಕಾಲವನ್ನು ಕಳೆಯುತ್ತಿದ್ದರೆಂದು ಭಾವಿಸಬಹುದು. ರಾಷ್ಟ್ರಕೂಟ ಅರಸರು ಬೇರೆ ಬೇರೆ ರಾಜವಂಶಗಳ ರಾಜಕುಮಾರಿಯರನ್ನು ವಿವಾಹವಾಗಿ ಆಡಳಿತದಲ್ಲಿ ಸಮತೋಲನವನ್ನು ಕಾಪಾಡಿಕೊಂಡು ಬಂದರು.

ರಾಷ್ಟ್ರಕೂಟ ಅರಸು ಇಂದ್ರರಾಜನು ಖೇಟಕ ಮಂಡಲದಲ್ಲಿ ನಡೆದ ಯುದ್ಧದಲ್ಲಿ ಚಲುಕ್ಯ ರಾಜಕುಮಾರಿ ಭವಗಣಾ ಅಥವಾ ಭವನಾಗಾಳನ್ನು ಅಪಹರಿಸಿಕೊಂಡು ಬಂದು ರಾಕ್ಷಸ ರೀತಿಯಿಂದ ವಿವಾಹವಾದನೆಂದು ಸಂಜಾನ್ ಶಾಸನದಲ್ಲಿದೆ. (EI Vol XVIII P 45, 871AD)

ಇನ್ದ್ರರಾಜಸ್ತತೋಽ ಗೃಹ್ಣಾತ್ ಯಶ್ಚಲುಕ್ಯನೃಪಾತ್ಮಾಜಂ

ರಾಕ್ಷಸೇನ ವಿವಾಹೇನ ರಣೇ ಖೇಟಮಂಡಲೇ॥

ದಂತಿದುರ್ಗನು ಚಲುಕ್ಯ ಕೀರ್ತಿವರ್ಮನ ಮಗಳು ಲಕ್ಷ್ಮೀದೇವಿಯನ್ನು ವಿವಾಹವಾಗಿದ್ದ. ಇದು ಪ್ರೇಮವಿವಾಹವಾಗಿತ್ತು ಎಂಬುದರ ಬಗ್ಗೆ ಮುಳಿಯ ತಿಮ್ಮಪ್ಪಯನವರು ಗಮನ ಸೆಳೆದಿದ್ದಾರೆ. (ಕವಿರಾಜಮಾರ್ಗ ವಿವೇಕ ಪು. ೯). ಏಕೆಂದರೆ ನವಸಾರಿ ಶಾಸನದ ಪಾಠವು ವಿವರಿಸುವಂತೆ ಸ್ವಯಂ ರಾಜಕುಮಾರಿಯೇ ಎನ್ನುವ ಅರ್ಥವನ್ನು ಗಮನಿಸಿದಾಗ ಅವರ ಊಹೆ ಸರಿಯೆನ್ನಿಸುತ್ತದೆ. “ಚಾಲುಕ್ಯವಂಶಜಲಧೇ: ಸ್ವಯಮೇವ ಲಕ್ಷ್ಮೀರ್ಯಂಶಂಖಚಕ್ರಕರಲಾಂಛನ ಮಾಜಾಗಾಮ”

ಮಾತೃ ಭಕ್ತನಾದ ದಂತಿದುರ್ಗನ ತಾಯಿ ನಾಲ್ಕು ಲಕ್ಷ ಗ್ರಾಮಗಳಿದ್ದ ರಾಷ್ಟ್ರಕೂಟ ಸಾಮ್ರಾಜ್ಯದಲ್ಲಿ ಪ್ರತಿ ಗ್ರಾಮದಲ್ಲಿಯೂ ಭೂದಾನ ಮಾಡಿದ್ದಳೆಂದು ಮಾತೃಭಕ್ತಿ: ಪ್ರತಿಗ್ರಾಮಂ ಗ್ರಾಮಲಕ್ಷಚತುಷ್ಯಯೇ

ದದತ್ಯಾಭೂಪ್ರದಾನಾನಿಯಸ್ಯ ಮಾತ್ರಾ ಪ್ರಕಾಶಿತಾ॥

ಬಾದಾಮಿ ಚಲುಕ್ಯ ನಾಲ್ಕನೆಯ ವಿಷ್ಣುವರ್ಧನನು ರಾಷ್ಟ್ರಕೂಟರ ದ್ವೇಷವನ್ನು ಕಟ್ಟಿಕೊಳ್ಳದೇ ತನ್ನ ಮಗಳು ಶೀಲಮಹಾದೇವಿಯನ್ನು ಧ್ರುವನಿಗೆ ವಿವಾಹ ಮಾಡಿಕೊಟ್ಟು ಕಪ್ಪವನ್ನು ಸಲ್ಲಿಸಿದನೆಂದು ಜೇಥ್ವಾಯಿ ತಾಮ್ರಪಟಗಳು ಉಲ್ಲೇಖಿಸಿದೆ. (EI Vol XXII P98, 786 AD) ಈಕೆ ಆಡಳಿತದಲ್ಲಿ ಅರಸನಿಗೆ ಸಹಾಯಕಳಾಗಿದ್ದಳೆಂದು ಶಾಸನಗಳಿಂದ ತಿಳಿದುಬರುತ್ತದೆ.

ಮಹಾರಾಜಾಧಿರಾಜ ಪರಮೇಶ್ವರ ಧಾರಾವರ್ಷ

ಶ್ರೀ ಧ್ರುವರಾಜಸ್ಯ ಮಹಾದೇವೋ ಸರ್ವಲೋಕ

ಶ್ರೇಯ ವಿಷ್ಣುವರ್ಧನ ಶ್ರೀ ವಿಟ್ಟರಸದುಹಿತಾ

ಪರಮೇಶ್ವೇರೀ ಪರಮಭಟ್ಟಾರಿಕಾ ಶ್ರೀಶೀಲಮಹಾದೇವಿ॥

ಶೀಲಮಹಾದೇವಿಯು ರಾಷ್ಟ್ರಕೂಟರ ಸಾಮ್ರಾಜ್ಞಿಯಾಗಿದ್ದಳು ಮತ್ತು ದಕ್ಷ ಆಡಳಿತಗಾರ್ತಿಯಾಗಿದ್ದಳು.

ಮೂರನೆಯ ಗೋವಿಂದನ ಮಡದಿ ಗಾಮುಂಡಬ್ಬೆಯು ಕೂಡ ಪತಿಗೆ ಆಡಳಿತದಲ್ಲಿ ಸಹಾಯ ಮಾಡುತ್ತಿದ್ದಳೆಂದು ಶಾಸನಗಳಿಂದ ತಿಳಿದುಬರುತ್ತದೆ. ಮೂರನೆಯ ಗೋವಿಂದನು ಉತ್ತರ ಭಾರತದ ದಂಡ ಯಾತ್ರೆಗೆ ಹೋಗಿದ್ದಾಗ ಈಕೆಯೂ ಜೊತೆಯಲ್ಲಿ ಹೋಗಿದ್ದಳು(EI, Vol. XVIII, p235, 871AD).

ಶಾಂತಿಪ್ರಿಯನಾದ ಒಂದನೆಯ ಅಮೋಘವರ್ಷನು ಗಂಗರೊಂದಿಗಿನ ವೈರತ್ವವನ್ನು ನಿಲ್ಲಿಸಲು ತನ್ನ ಮಗಳು ಚಂದ್ರೋಬಲಬ್ಬೆಯನ್ನು ಒಂದನೆಯ ಬೂತುಗನಿಗೆ ವಿವಾಹ ಮಾಡಿಕೊಟ್ಟ. (ಕ್ರಿ. ಶ.೮೬೦) ಅದೇ ರೀತಿ ಪಲ್ಲವ ನಂದಿವರ್ಮನಿಗೆ ಇನ್ನೊಬ್ಬ ಮಗಳು ಶಾಂತಾದೇವಿಯನ್ನು ವಿವಾಹ ಮಾಡಿಕೊಟ್ಟ (ಅಂಬೂರಿನ ತುಳು ಶಾಸನಗಳು). ಎರಡನೆಯ ಕೃಷ್ಣನು ಚೇದಿಯ ದೊರೆ ಒಂದನೆಯ ಕೊಕ್ಕಲ್ಲನ ಮಗಳನ್ನು ಮದುವೆಯಾಗಿದ್ದನು. ಈಕೆಯ ಸೋದರ ಯುವರಾಜ ಶಂಕರಗಣ, ಈತನ ಮಗಳು ಲಕ್ಷ್ಮೀದೇವಿಯನ್ನು ಯುವರಾಜ ಜಗತ್ತುಂಗನಿಗೆ ತಂದುಕೊಂಡಿದ್ದ. ಜೊತೆಗೆ ಜಗತ್ತುಂಗನು ಅವನ ಇನ್ನೊಬ್ಬ ಮಗಳು ಗೋವಿಂದಬ್ಬೆಯನ್ನು ವಿವಾಹವಾಗಿದ್ದ.

ಜಗತ್ತುಂಗ ಮತ್ತು ಲಕ್ಷ್ಮೀದೇವಿಗೆ ಹುಟ್ಟಿದ ಇಂದ್ರನು (ಕ್ರಿ. ಶ. ೯೦೦) ಚೇದಿಯ ರಾಜಕುಮಾರಿ ವಿಜಯಾಂಬೆಯನ್ನು ಮದುವೆಯಾಗಿದ್ದನೆಂದು ತಿಳಿದುಬರುತ್ತದೆ. ಇದೇ ಚೇದಿ ದೊರೆ ಶಂಕರಗಣನ ಸಹೋದರನಾದ ಮುಗ್ಧತುಂಗನ ಮೊಮ್ಮಗಳು ಕುಂದಕದೇವಿಯನ್ನು ಇಂದ್ರನ ಮಲತಮ್ಮ ಅಮೋಘವರ್ಷನು ಮದುವೆಯಾಗಿದ್ದನೆಂದು ತಿಳಿದುಬರುತ್ತದೆ. ಈ ರೀತಿ ಚೇದಿವಂಶದವರೊಂದಿಗೆ ರಾಷ್ಟ್ರಕೂಟರ ಸಂಬಂಧ ಬಹಳ ವರ್ಷಗಳ ಕಾಲ ಮಧುರವಾಗಿ ಮುನ್ನಡೆದಿತ್ತು. ಕೊನೆ ಕೊನೆಯಲ್ಲಿ ನಾನಾಕಾರಣಗಳಿಂದ ಇಬ್ಬರಿಗೂ ವೈಮನಸ್ಯ ಉಂಟಾಗಿ ರಾಷ್ಟ್ರಕೂಟರು ಆಪಾತ್ತಿನಲ್ಲಿದ್ದಾಗಲೂ ಅವರು ಸಹಾಯಕ್ಕೆ ಬರಲ್ಲಿಲ್ಲವೆಂದು ಶಾಸನಗಳಿಂದ ತಿಳಿದುಬರುತ್ತದೆ. ಎರಡನೆಯ ಕೃಷ್ಣನು ತನ್ನ ಮಗಳನ್ನು ಚೋಳದೊರೆ ಒಂದನೆಯ ಆದಿತ್ಯನಿಗೆ ವಿವಾಹ ಮಾಡಿಕೊಟ್ಟಿದ್ದ.

ಮೂರನೆಯ ಅಮೋಘವರ್ಷನ ಮಗಳು ರೇವಕ ನಿರ್ಮಡಿಯು ಎಡದೊರೆ ನಾಡು ಮತ್ತು ಇನ್ನೊಂದು ನಾಡನ್ನು ಆಳುತ್ತಿದ್ದಳೆಂದು ಉಲ್ಲೇಖಿಸಿದೆ. ಗಂಗ ಬೂತುಗನಿಗೆ ವಿವಾಹ ಮಾಡಿಕೊಟ್ಟಾಗ ಬಳುವಳಿಯಾಗಿ ಪುಲಿಗೆಱೆ ಮುನ್ನೂರು, ಬೆಳುವಲ ಮುನ್ನೂರು, ಕಿಸುಕಾಡು ಎಪ್ಪತ್ತುಮತ್ತು ಬಾಗೆ ಎಪ್ಪತ್ತನ್ನು ನೀಡಿದ್ದನೆಂದು ಹೆಬ್ಬಾಳೆ ಶಾಸನದಿಂದ ತಿಳಿದುಬರುತ್ತದೆ(EI, Vol. IV, p354). ಈಕೆಯು ಸ್ವತಂತ್ರವಾಗಿ ಆಳ್ವಿಕೆ ನಡೆಸುತ್ತಿದ್ದಳೆಂದು ಕೆನಭಾವಿ ಶಾಸನದಲ್ಲಿ ತಿಳಿದುಬರುತ್ತದೆ.

ಪ್ರಭು ರಾಮಮಂಗಲದ ತಾಮ್ರಪಟದಲ್ಲಿ (ಐತಿಹಾಸಿಕ ಲೇಖನಗಳು, ಪು ೨೧೮–೨೪೧ ಹುಲ್ಲೂರು ಶ್ರೀನಿವಾಸ ಜೋಯಿಸರು) ಆದಿತ್ಯದೇವನ ಪ್ರತಿಷ್ಠೆ ಮತ್ತು ನೊಳಂಬ ಪೊಳಲ್ಚೋರನ ದಕ್ಷಿಣೆಗಾಗಿ ಗೊರವೂರನ್ನು ಬ್ರಾಹ್ಮಣನೊಬ್ಬನಿಗೆ ದಾನಮಾಡಿದ್ದನ್ನು ಉಲ್ಲೇಖಿಸುತ್ತದೆ. ಈ ರೇವಕನಿರ್ಮಡಿಯು ಇಮ್ಮಡಿ ಅರಿಕೇಸರಿಯ ಬದ್ದೆಗನ ಮಗಳೇ ಅಥವಾ ರಾಷ್ಟ್ರಕೂಟ ಅರಸನ ಮಗಳೇ ಎನ್ನುವುದರ ಬಗ್ಗೆ ಸ್ವಲ್ಪ ವಿವಾದವಿದೆ. ರೇವಕ ನಿರ್ಮಡಿಯು ತನ್ನ ಚಾರಿತ್ರ್ಯದಿಂದ ಪ್ರಸಿದ್ಧಳಾಗಿದ್ದಾಳೆ.

ಒಟ್ಟಿನಲ್ಲಿ ರಾಷ್ಟ್ರಕೂಟ ರಾಣಿಯರ ಕೆಲವು ಹೆಸರುಗಳು ಮತ್ತು ಅವರ ಬಗ್ಗೆ ಒಂದೆರಡು ಹೊಗಳಿಕೆಯ ಮಾತು ಬಂದಿವೆಯೇ ಹೊರತು, ಆಡಳಿತದಲ್ಲಿ,

ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ ಹೇಗೆ ನಡೆದುಕೊಳ್ಳುತ್ತಿದ್ದರು ಎಂದು ತಿಳಿಯುವುದಿಲ್ಲ.

ಪ್ರಾಚೀನ ಕರ್ನಾಟಕದಲ್ಲಿ ಸ್ತ್ರೀಯರಿಗೆ ಹೆಚ್ಚಿನ ಸ್ವಾತಂತ್ರ್ಯವಿತ್ತು. ದಾನ ನೀಡುವುದು, ದೇವಾಲಯ ಕಟ್ಟಿಸುವುದು, ಯುದ್ಧದಲ್ಲಿ ಭಾಗಿಯಾಗುವುದು, ಆಡಳಿತದಲ್ಲಿ ಸಹಾಯ, ಸ್ವತಂತ್ರ ಆಡಲಿತ, ಹೀಗೆ ಎಲ್ಲಾ ಕ್ಷೇತ್ರಗಳಲ್ಲೂ ಸ್ವಾತಂತ್ರ್ಯವಿತ್ತು. ಅಮೋಘವರ್ಷನ ಮಗಳು ರೆವಕ ನಿರ್ಮಡಿಯು ಎಡದೊರೆ ನಾಡನ್ನು ಆಳುತ್ತಿದ್ದಳು. (BKI. 1, i7, 837 A.D.) ನಾಗರಖಂಡ ಎಪ್ಪತ್ತರ ನಾಲ್ಗಾವುಂಡನಾದ ನಾಗರ್ಜುನನು ಮರಣ ಹೊಂದಿದಾಗ ಅವನ ಪತ್ನಿಯು ಆಳ್ವಿಕೆಯನ್ನು ಮುಂದುವರಿಸುತ್ತಾಳೆಂದು ಶಾಸನವು ತಿಳಿಸುತ್ತದೆ (EC Vol VII, Sk 219, 918 A.D.). ಬೂತುಗನ ರಾಣಿಯು ಕುರ್ಗಲ್ಲನ್ನು ಆಳುತ್ತಿದ್ದಳು. ವೇಶ್ಯೆಯ ಸಂತತಿಯು ಸಹ ಧರ್ಮ ಸಮ್ಮತವೆಂದು ತಿಳಿದು ಸಂತತಿಯ ಪಟ್ಟಿಯನ್ನು ನೀಡಿದೆ. (EC XI, DG 17, 889 A.D.) "ಮಯ್ದುಮರಸರ ಸೂಳೆ ಕಾಡಚ್ಚಿ, ಕಾಡಚ್ಚಿಯ ಮಗಳ್ ಕಾಡಬ್ಬೆ, ಕಾಡಬ್ಬೆ ಮಗಳ್ ಅಯ್ಯವಬ್ಬೆ, ಅಯ್ಯವೆ ಮಗಳ್ ಕಳಿಂಗಬ್ಬೆ, ಕಳಿಂಗಬ್ಬೆಗಳಯ್ಯ ಪಲ್ಲಹಾರಕೆ, ಪರಕಿಯ ಮಗಳ್ ಕಳಿಂಗಬ್ಬೆ, ಕಳಿಂಗಬ್ಬೆಯಮಗಂ ಪರಕಯ್ಯನಿ(ಇ)ಂತಹ ಪಾರಂಪರ್ಯಾಯ ಮೆಡೆವಱಿಯದೆ ಬಂದ ಧರ್ಮಸಂತತಿ".

## ಸ್ತ್ರೀಯರ ವಿದ್ಯಾಭ್ಯಾಸ

ಪುರುಷಪ್ರಧಾನ ಸಮಾಜದಿಂದಾಗಿ ಹೆಣ್ಣುಮಕ್ಕಳ ವಿದ್ಯಾಭ್ಯಾಸವು ಕುಂಟಿತವಾಯಿತು. ವೈದಿಕ ಪರಂಪರೆಯಲ್ಲಿ ಸ್ತ್ರೀ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರಾಶಸ್ತ್ಯ ಇಲ್ಲವಾಗಿತ್ತು. ಜೈನ ಬೌದ್ಧ ಸಂಪ್ರದಾಯಗಳಲ್ಲಿ ಕಿಂಚಿತ್ತಾದರೂ ಅವಕಾಶ ಸಿಕ್ಕಿದ್ದರಿಂದ ಕೆಲವು ಸ್ತ್ರೀಯರಾದರು ವಿದ್ಯಾಭ್ಯಾಸವನ್ನು ಮಾಡಲು ಅವಕಾಶವಾಗಿತ್ತು.

ಪ್ರಾಚೀನ ಕಾಲದಿಂದ ಸ್ತ್ರೀಗೆ ಸಿಕ್ಕಿದ ವಿದ್ಯಾಭ್ಯಾಸ ಕಡಿಮೆ. ವೇದಗಳನ್ನು ಅಧ್ಯಯನ ಮಾಡಿದ್ದ ಗಾರ್ಗಿ, ಮೈತ್ರೇಯಿಯರನ್ನು ಬಿಟ್ಟು ಬೇರೆ ಸ್ತ್ರೀಯ ಉಲ್ಲೇಖಗಳು ಬಹಳ ಅಪರೂಪವಾಗಿ ಸಿಗುತ್ತವೆ. ಇನ್ನು ಧರ್ಮಶಾಸ್ತ್ರಗಳ ಕಾಲಕ್ಕೆ ಬಂದರೆ, ಅಲ್ಲಿ ಸ್ತ್ರೀಯರಿಗೆ ವಿದ್ಯಾಭ್ಯಾಸ ಕಲಿಯುವ ಅವಕಾಶವೇ ತಪ್ಪಿಹೋಗಿರುವುದು ಕಂಡು ಬರುತ್ತದೆ. 'ನ ಸ್ತ್ರೀ ಸ್ವಾತಂತ್ರಮರ್ಹತಿ' ಎಂಬ

ಮಾತಿನಿಂದ ಅವಳು ತನ್ನ ಸ್ವಾತಂತ್ರ್ಯವನ್ನೂ ಕಳೆದುಕೊಂಡಳೆಂದು ವಿದಿತವಾಗುತ್ತದೆ. ಪುರುಷ ಪ್ರಾಧಾನ್ಯತೆಯ ಪರಾಕಾಷ್ಠೆಯಲ್ಲಿ ಸ್ತ್ರೀ ತನ್ನ ಅಸ್ತಿತ್ವವನ್ನೇ ಕಳೆದುಕೊಂಡದ್ದೊಂದು ವಿಪರ್ಯಾಸ.

ಶಾಸನಗಳಲ್ಲಿ ಸ್ತ್ರೀ ಶಿಕ್ಷಣದ ಬಗ್ಗೆ ಸಿಗುವ ಉಲ್ಲೇಖಗಳು ಕಡಿಮೆ. ರಾಜವಂಶದ ಸ್ತ್ರೀಯರು ವಿದ್ಯಾವಂತೆಯಾಗಿರುತ್ತಿದ್ದರು. ಸ್ತ್ರೀಯರು ಸಾಮಾನ್ಯವಾಗಿ ಶಾಸ್ತ್ರವಿದ್ಯೆಗಳಿಗಿಂತ ಕಲೆಗಳನ್ನು ಕಲಿಯುವುದರಲ್ಲಿ ಆಸಕ್ತರಾಗಿದ್ದರು. ಅರಮನೆಯ ಸ್ತ್ರೀಯರನ್ನು ಬಿಟ್ಟರೆ ದೇವಾಲಯದ ಸೂಳೆಯರು, ವೇಶ್ಯೆಯರು, ಸಂಗೀತದವರು, ಪಾತ್ರದವರು, ಸಂಗೀತ ನೃತ್ಯಗಳಂತಹ ಕಲೆಗಳನ್ನು ಕಲಿತಿರುತ್ತಿದ್ದರು. ಇನ್ನು ಜನಸಾಮಾನ್ಯರ ಶಿಕ್ಷಣದ ಬಗ್ಗೆ ಶಾಸನ ಉಲ್ಲೇಖಗಳು ಇಲ್ಲವೆಂದೇ ಹೇಳಬೇಕು. ರಾಷ್ಟ್ರಕೂಟರ ಕಾಲದಲ್ಲಿ ಒಂದೆರಡು ಸ್ತ್ರೀ ಶಿಕ್ಷಣದ ಉಲ್ಲೇಖವಿದೆ.

ವಡ್ಡಾರಾಧನೆಯ ನಾಗಶ್ರೀ, ಆದಿಪುರಾಣದಲ್ಲಿ ಸ್ತ್ರೀಯರ ಅಧ್ಯಯನದ ಉಲ್ಲೇಖ, ಕೋಲಾರದ ಬಂಗಾರಪೇಟೆಯ ಶಾಸನದ (EC. Vol. X, Bowringpet 65, Karubele 900AD) ಸಾವಿನಿರ್ಮಡಿ ಹೀಗೆ ಕೆಲವೇ ಬೆರಳಣಿಕೆಯಷ್ಟು ಮಂದಿಯನ್ನು ಹೆಸರಿಸಬಹುದಾಗಿದೆ. “ನಾಗಾರ್ಜುನಯ್ಯ ನನ್ದಿಂಗೆಯಬ್ಬೆಯ ಮಗಳು ಸಾವಿನಿರ್ಮಡಿ ಸರ್ವಶಾಸ್ತ್ರ ಪ್ರಸಿದಿಂ....” ಎಂದು ಹೇಳುವ ಈ ಶಾಸನ ಸುಮಾರು ಹತ್ತನೆಯ ಶತಮಾನದ್ದು.

## ಆರ್ಥಿಕ

### ನೀರಾವರಿ

ನಮ್ಮದು ವ್ಯವಸಾಯ ಪ್ರಧಾನವಾದ ನಾಡಾಗಿದೆ. ನಮ್ಮ ದೇಶದ ಆರ್ಥಿಕ, ಸಾಮಾಜಿಕ ಸ್ತರವನ್ನು ಗುರುತಿಸಲು ವ್ಯವಸಾಯದ ಗುಣಮಟ್ಟವನ್ನು ನಿರೀಕ್ಷಿಸಿದರೆ ಸಾಕು. ರಾಷ್ಟ್ರಕೂಟರ ಕಾಲದಲ್ಲಿ ದೇಶವು ಸಮೃದ್ಧವಾಗಿರುವುದಕ್ಕೆ ದಖ್ಖನ್ ಪ್ರಸ್ಥಭೂಮಿಯು ಒಂದು ಪ್ರಮುಖ ಕಾರಣವಾಗಿದೆ. ಉತ್ಕೃಷ್ಟವಾದ ಭೂ ಪ್ರದೇಶಗಳಿಂದ ಬಂದ ಉತ್ಪಾದನೆಗಳಿಂದ ದೇಶದ ಆರ್ಥಿಕ ಪರಿಸ್ಥಿತಿ ಸುಭಿಕ್ಷವಾಗಿತ್ತು. ಸಾಮಾನ್ಯವಾಗಿ ಗದ್ದೆ, ಒಣನೆಲ, ಅರಣ್ಯಪ್ರದೇಶ ಮತ್ತು ಬೆಟ್ಟಗುಡ್ಡಗಳಿಂದ ತುಂಬಿರುವ ನಾಡು ನಮ್ಮದಾಗಿದೆ.

ರಾಷ್ಟ್ರಕೂಟರು ತಮ್ಮ ಲಾಂಛನವಾಗಿ ನೇಗಿಲನ್ನು ಬಳಸಿರುವುದರಿಂದ ಇವರ ಕಾಲದಲ್ಲಿ ವ್ಯವಸಾಯಕ್ಕೆ ಪ್ರಾಧನ್ಯತೆ ಇತ್ತೆಂಬುದು ನಿರ್ವಿವಾದ. ಯಾವ ರೀತಿಯ ವ್ಯವಸಾಯ ಪದ್ಧತಿಯಿತ್ತು ಎಂದು ತಿಳಿದುಬರದಿದ್ದರೂ ಶಾಸನಗಳಲ್ಲಿ ಉಲ್ಲೇಖಿಸಿರುವ ದಾನ ದತ್ತಿಗಳನ್ನು ಗಮನಿಸಿದಾಗ ಅನೇಕ ವಿಚಾರಗಳು ತಿಳಿಯುತ್ತವೆ. ಸಾವಿರಬಳ್ಳಿಯ ತೋಟ, ನೀರ್ಮಣ್ಣುನೆಲ, ಒಣಜಮೀನು ಮುಂತಾದವುಗಳನ್ನು ದಾನವಾಗಿ ನೀಡಿರುವುದನ್ನು ಗಮನಿಸಬೇಕು. ಜೊತೆಗೆ ಇವುಗಳಿಗೆ ಸುಂಕಗಳನ್ನೂ ಹಾಕುತ್ತಿದ್ದರು. ದಾನ ನೀಡಿದಾಗ ಕರರಹಿತವಾಗಿ ನೀಡುತ್ತಿದ್ದರು.

ಭೂಮಿಯನ್ನು ದಾನ ಮಾಡುವಾಗ ಭೂಮಿಯ ವಿಸ್ತೀರ್ಣವನ್ನು ಖಂಡುಗ, ಮತ್ತರುಗಳ ಲೆಕ್ಕದಲ್ಲಿ ಹೇಳುತ್ತಿದ್ದರು. ಇರ್ಮತ್ತರು, ಹನ್ನೆರಡು ಮತ್ತರು, ಅರ್ಧಮತ್ತರು, ಇರ್ಖಂಡುಗ, ಒರ್ಖಂಡುಗ ಇತ್ಯಾದಿಯಾಗಿ. ಮತ್ತರು ಖಂಡುಗಗಳು ಧಾನ್ಯವನ್ನು ಅಳೆಯುವ ಅಳತೆಯಾಗಿದ್ದು, ಅಷ್ಟು ಬೀಜ ಬಿತ್ತುವಷ್ಟು ಭೂಮಿಯನ್ನು ನೀಡಿದ್ದರೆಂದು ಭಾವಿಸಬಹುದಾಗಿದೆ.

ಕೆರೆ ನಿರ್ಮಾಣ ಮಾಡುವುದು ಕೆರೆಯ ಹೂಳು ಎತ್ತಿಸುವುದು, ಕೆರೆಗೆ ತೂಬು ಮಾಡಿಸುವುದು ಏರಿಯನ್ನು ದುರಸ್ತಿಗೊಳಿಸುವುದು ಮುಂತಾದ ಉಲ್ಲೇಖಗಳು ಶಾಸನಗಳಲ್ಲಿ ಹಲವಾರು ಸಿಗುತ್ತವೆ. ಹಿರಿಯಕೆರೆ, ಕಿರಿಯಕೆರೆ, ಸೂಳೆಗೆರೆ, ರೇವಚನ ಕೆರೆ, ದೇವರಕೆರೆ, ಎಂದು ನಾನಾ ಹೆಸರುಗಳಲ್ಲಿ ಕೆರೆ ಕಟ್ಟಿಸಿರುವ ಉಲ್ಲೇಖಗಳಿವೆ. ಬಾವಿ ತೋಡಿಸುವುದು ನೀರಿನ ಹಳ್ಳ ತೋಡಿಸುವುದು, ಕಾಲುವೆ ತೋಡಿಸುವುದು ಇವೆಲ್ಲಾ ಜನೋಪಯೋಗಿ ಕೆಲಸಗಳಾಗಿದ್ದವು. ಬಾವಿ ತೋಡಿಸಿ ದಾನ ಮಾಡಿದ ಉಲ್ಲೇಖಗಳು ಬಹಳಷ್ಟು ಸಿಕ್ಕಿವೆ ತೂಬು ಕಾಯುವ ಅಧಿಕಾರಿಗಳ ಉಲ್ಲೇಖವು ಸಿಗುವುದರಿಂದ ನೀರಾವರಿಗೆ ಸಂಬಂಧಿಸಿದಂತೆ ಪ್ರತ್ಯೇಕ ಅಧಿಕಾರಿಯು ಇರುತ್ತಿದ್ದನೆಂದು ಊಹಿಸಬಹುದಾಗಿದೆ.

**ಬೆಳೆಗಳು**

ಮೂರನೆಯ ಕೃಷ್ಣನ ಕೀಜೂರು ಶಾಸನದಲ್ಲಿ (RITC No. 45 ಕ್ರಿ. ಶ. ೯೧೧) ನೆನ್‌ಮಲ್ಯೆ ಸಭೆಯ ಸದಸ್ಯರು ದಾನವನ್ನು ಸ್ವೀಕರಿಸಿದರು. ಇಪ್ಪತ್ತು ಕಲಂ ಧಾನ್ಯವನ್ನು, ಬಡ್ಡಿಯ ಹಣ ಒಂದು ಕಲಾಂಜುವಿಗೆ ಒಂದು ಕಲಂ ದರದಲ್ಲಿ, ಭತ್ತವನ್ನು ಅಕ್ಕಿ ಮಾಡುವುದಕ್ಕೆ ಮತ್ತು ದೇವಾಲಯಕ್ಕೆ ತಂದು ಒಪ್ಪಿಸಲು ಒಪ್ಪಿಕೊಂಡರು.

ಧಾರಾವರ್ಷ ಧ್ಯವನ ಆಲಂಪುರ ಶಾಸನದಲ್ಲಿ (APGAS., vol III, No. 99, ಕ್ರಿ.ಶ. ಸುಮಾರು ೭೮೦) ಮಾಘಾಪತ್ಯವನ್ನು ಮಾಡಿದಾಗ ಸಹಸ್ರ ಭೋಜನಕ್ಕೆ ಆಳಂಪುರ ೩೦ ರ ಗಾವುಂಡ ಪ್ರಜೆಗಳು ಅಕ್ಕಿ ಮತ್ತು ತುಪ್ಪವನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ. ಒಂದನೆಯ ಅಮೋಘವರ್ಷನ ಸಾಲೂರು ಶಾಸನದಲ್ಲಿ (MAR 1927 No.151 Page 133 ಕ್ರಿ.ಶ. ೮೭೦) ಸಾಲಿವೂರ ಅಗ್ರಹಾರದ ಆಂಗೀರಸ ಗೋತ್ರದ ಊರೊಡೆಯ ಪೂಜೆಯನ್ನು ಕೊಟ್ಟು ಅತಿಥಿ ಅಭ್ಯಾಗತರಿಗೆ ಭೋಜನಕ್ಕೆಂದು ಭೂದಾನ ಮಾಡಿದನೆಂದು ತಿಳಿದು ಬರುತ್ತದೆ. ಭೋಜನದ ಪರಿಕಾರಗಳಾಗಿ ೬ ಮಾನ ಅಕ್ಕಿ ೧ ಮಾನ ತುಪ್ಪವನ್ನು ದಾನವಾಗಿ ನೀಡಿದ್ದನ್ನು ಉಲ್ಲೇಖಿಸುತ್ತದೆ. ಮೂರನೆಯ ಕೃಷ್ಣನ ತಿರುವಡನ್‌ಡೈ ಶಾಸನದಲ್ಲಿ (RITC 32 ಕ್ರಿ. ಶ. ೯೫೯) ಆಮೂರು ಕೊಟ್ಟಂ ಪ್ರದೇಶದ ತಿರುವಡಂದೈ ಗ್ರಾಮದ ವರಾಹ ಸ್ವಾಮಿ ದೇವಾಲಯದಲ್ಲಿ ಮೂರ್ತಿಯನ್ನು ಪ್ರತಿಷ್ಠಾಪಿಸಿ ನಜ್ಗೈವಡುಗಿಯಾರ್ ಭೂದತ್ತಿಯನ್ನೂ ಅಮೃತಪಡಿ ನೈವೇದ್ಯಕ್ಕೆ ನೀಡಿದಳು. ಈ ಭೂಮಿಯನ್ನು ಕರರಹಿತವನ್ನಾಗಿ ಮಾಡಲಾಯಿತು. ದೇವಸ್ಥಾನದಲ್ಲಿ ಸಂಜೆಯಿಂದ ದೇವಾಲಯದ ಬಾಗಿಲು ಮುಚ್ಚುವವರೆಗೆ ದೀಪ ಬೆಳಗಲು ತಿರುವಂದಾದಿ ಸಭೆಯು ಒಪ್ಪಿಕೊಂಡಿತು. ಕ್ರಮವು ತಪ್ಪಿದರೆ ಪ್ರತಿನಿತ್ಯ ಒಂದು ನಾಟಿ ಅಕ್ಕಿಯನ್ನು ದಂಡ ತೆರುವುದಾಗಿ ಒಪ್ಪಿಕೊಂಡಿತು.

ಧಾರಾವರ್ಷ ಧ್ರುವನ ಭೋರ್ ಮ್ಯೂಸಿಯಂ ತಾಮ್ರಪಟದಲ್ಲಿ (EI Vol XXII Page 176 ಕ್ರಿ. ಶ. ೭೮೦) ಪೂದಾರು ಬೆಳೆ ಉಲ್ಲೇಖ ಬರುತ್ತದೆ. ಈ ಬೆಳೆಯನ್ನು ವಿದ್ವಾಂಸರು ಸೂರ್ಯಕಾಂತಿ ಪುಷ್ಪ ಎಂದು ಗುರುತಿಸಿದ್ದಾರೆ. ಇದರಿಂದ ಸೂರ್ಯಕಾಂತಿ ಎಣ್ಣೆಯ ಬಳಕೆಯೂ ಇತ್ತು ಎಂದು ತಿಳಿದುಬರುತ್ತದೆ. ಒಂದನೆಯ ಅಮೋಘವರ್ಷನ ಖಾಜಿಪೇಟೆ ಶಾಸನದಲ್ಲಿ (Inscriptions AP Warangal District, No. 1, P 16 ಕ್ರಿ.ಶ. ೮೭೨) ಜೋಳವನ್ನು ದಾನಮಾಡಿದ ಉಲ್ಲೇಖ ಇದೆ. ದೀವಳಿಗೆಯ ಪರ್ವದಂದು, ಅಮಾವಾಸ್ಯೆಯಲ್ಲಿ, ತಳಾರನಿಗೆ ಒಂದು ಬಳ್ಳ ಸಗರೆಕ್ಕೆಲಲ್ಲಿ ನೀಡಿದನೆಂದು ಉಲ್ಲೇಖ ಇದೆ. ಅಮೋಘವರ್ಷನ ಅಣಜಿ ಶಾಸನದಲ್ಲಿ (Kri Collections 1948-49) ಲೋಕಟೆಯ ಬನವಾಸಿ ನಾಡನ್ನು ಆಳುತ್ತಿದ್ದಾಗ ಐಯ್ಯಪ್ಪ ಗಾವುಂಡನ ದೇವಾಲಯಕ್ಕೆ ಇರ್ಮತ್ತರು ನೀರ್ಮಣ್ಣು ಪನ್ನೀರ್ಮತ್ತರು ತೋಟವನ್ನು

ನೀಡಿದರು. ವಸಯಾನ ದೇಗುಲಕ್ಕೆ ಅನುಬರಂ ಪಿಡಿ ಮೆಳಾಸು ನೀಡಿದರು ಎನ್ನುವ ವಿಷಚು ತಿಳಿಯುತ್ತದೆ.

## ವ್ಯಾಪಾರ

ರಾಷ್ಟ್ರಕೂಟರ ಕಾಲದಲ್ಲಿ ವ್ಯಾಪಾರ ವ್ಯವಹಾರಗಳು ಪ್ರಮುಖವಾಗಿತ್ತು, ಇದಕ್ಕೆ ಶಾಸನಗಳಲ್ಲಿ ಸಿಗುವ ವರ್ತಕ ಸಂಘ, ಶ್ರೇಣಿಗಳು, ವಿವಿಧ ವರ್ತಕರ ಉಲ್ಲೇಖ, ನಾನಾ ಉದ್ಯಮಗಳು, ಇವುಗಳನೆಲ್ಲ ಕಂಡಾಗ ವಾಣಿಜ್ಯೋದ್ಯಮವು ಬೆಳೆವಣಿಗೆಯಾಗಿದ್ದು ಆಮದು, ರಫ್ತು ಇವುಗಳಿಂದ ಪೂರ್ಣಪ್ರಮಾಣದ ವ್ಯಾಪಾರ ವಾಣಿಜ್ಯ ಸಂಬಂಧಗಳಿದ್ದವೆಂದು ಊಹಿಸಬಹುದಾಗಿದೆ. ಅರಬ್ಬರ ವ್ಯಾಪಾರದ ಬಗ್ಗೆ ಹೌರಾನಿಯವರು ಒಂದು ಗ್ರಂಥವನ್ನು (Arab Seafaring in the Indian Ocean in Ancient India and Medieval Times, Princeton N. J., 1951) ಡಬ್ಲ್ಯೂ.ಎಚ್. ಸಿದ್ದಿಖಿಯವರು (India's Contribution to the Arab Civilization, India's to World Thought and Culture, Vivekanamda Rock Memorial Committee.) ಇನ್ನೊಂದು ಗ್ರಂಥವನ್ನು ಬರೆದಿದ್ದಾರೆ. ಇದರಿಂದ ಅನೇಕ ವಿಷಯಗಳು ತಿಳಿಯುತ್ತವೆ. ರಾಷ್ಟ್ರಕೂಟರ ಮತ್ತು ಅರಬ್ಬರ ವ್ಯಾಪಾರ ಸಂಬಂಧದ ಬಗ್ಗೆ ರಾಷ್ಟ್ರಕೂಟರ ಶಾಸನಗಳು ಯಾವ ವಿಚಾರವನ್ನು ಹೇಳುವುದಿಲ್ಲ. ಸಾಹಿತ್ಯ ಕೃತಿಗಳು ಇದರ ಬಗ್ಗೆ ಒಂದಿಷ್ಟು ಮಾಹಿತಿ ನೀಡುತ್ತದೆ. ಉದ್ಯೋತನ ಸೂರಿಯ ಪ್ರಾಕೃತ ಗ್ರಂಥ ಕುವಲಯಮಾಲಾ (ಸಂ. ಉಪಾಧ್ಯಾಯ ಆ.ನೆ. ಬಾಂಬೆ ೧೯೭೦), ಸೋಮದೇವ ಸೂರಿಯ ಯಶಸ್ತಿಲಕ ಚಂಪು ಗ್ರಂಥಗಳು ಇದರ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನೀಡುತ್ತವೆ.

## ವ್ಯಾಪಾರಿ

ಮೂರನೇ ಇಂದ್ರನ ಹತ್ತಿಮತ್ತೂರು ಶಾಸನವು (SII., vol I, Part II, Page 415, 916 AD) ಮಹಾಸಾಮಂತ ಸಳುಕಿ ಶ್ರೀಮತ್ ಲೆಣ್ಡೆಯರಸರು ಪುರಿಗೆಱೆ ಮುನ್ನೂಱುವನ್ನು ಆಳುತ್ತಿದ್ದಾಗ ಭೋಗೇಶ್ವರ ದೇವರಿಗೆ ಐವತ್ತೊಕ್ಕಲುಗಳು ದೀಪಕ್ಕಾಗಿ ಸೊಂಟಿಗೆ ಎಣ್ಣೆಯನ್ನು, ಅಂಗಡಿಯ ಸೆಟ್ಟಿಯರು ನೀಡಿದ್ದನ್ನು ದಾಖಲಿಸುತ್ತದೆ.

ಮೂರನೇ ಕೃಷ್ಣನ ನಾಯಕಲ್ಲು ಶಾಸನವು (ARIE., 1952-53, No. B 290, ಕ್ರಿ.ಶ ೯೬೭) ನಟಿವಾಡಿ ೫೦೦ ರ ವೀರಬಳಂಜರು ಸೂರ್ಯಗ್ರಹಣದ ಸಂದರ್ಭದಲ್ಲಿ ದೇವಮಾನವೆಂದು ಸರಕುಗಳಾದ ಅಡಿಕೆ,ಅರಿಸಿನ ಮುಂತಾದವುಗಳ ನಿರ್ದಿಷ್ಟ ಭಾಗವನ್ನು ಗೌವರೇಶ್ವರ ದೇವರಿಗೆ ಸಲ್ಲಿಸಬೇಕು ಎಂದು ತಿಳಿಸುತ್ತದೆ. ಬಳಂಜಂಗಳನ್ನು ಪ್ರಶಸ್ತಿಗಳಿಂದ ಪರಿಚಯಿಸಲಾಗಿದೆ. ಇದೇ ಅರಸನ ತಿರುವಞ್ಞಿಯೂರ್ ಶಾಸನದಲ್ಲಿ (RITC., no. 18, 957 AD) ಕಟಕದ ವ್ಯಾಪಾರಿ ಲಕ್ಷ್ಮಣಯ್ಯನ ಪುತ್ರ ನರಸಿಂಗಯ್ಯನು ತಿರುವಞ್ಞಿಯಾರ ಮಹಾದೇವರಿಗೆ ನಂದಾ ದೀಪ ಬೆಳಗಲು ೩೦ ಕಟಿಞ್ಜು ಚಿನ್ನದ ನಾಣ್ಯಗಳನ್ನು ದಾನವಾಗಿ ನೀಡಿದ್ದನ್ನು ದಾಖಲಿಸುತ್ತದೆ. ಈತ ವೈಶ್ಯ ಕುಲದವನು. ಮಾನ್ಯಖೇಟದಲ್ಲಿ ಹುಟ್ಟಿದವನು ಎಂದು ತಿಳಿಸುತ್ತದೆ. ಈತ ವ್ಯಾಪಾರದ ಸಲುವಾಗಿ ಈ ಪ್ರದೇಶದವರೆಗೂ ಬಂದಿದ್ದನು ಎಂದು ಊಹಿಸಬಹುದಾಗಿದೆ. ಇದೇ ಅರಸನ ಬಾಹೂರು ಶಾಸನದಲ್ಲಿ (RITC., no.51. 961 AD) ವಾಗೂರು ಸಭೆಯು ನೂರು ಚೆಱುವು ಭೂಮಿಯನ್ನು ಅಧಿರಾಜ ಮಙ್ಗಲ್ಯಪುರಮ್ಮಿನ ವ್ಯಾಪಾರಿ ಮುರುಗನ್ನನಿಗೆ ಕರದ ಹಣ, ಭೂಮಿಯ ಹಣ ಎರಡನ್ನೂ ಸ್ವೀಕರಿಸಿ ಮಾರಿದರೆಂದು ತಿಳಿಸುತ್ತದೆ.

ರಾಷ್ಟ್ರಕೂಟರ ಶಾಸನಗಳಲ್ಲಿ ಅನೇಕ ಮಂದಿ ವ್ಯಾಪಾರಸ್ಥರ ಹೆಸರುಗಳ ಉಲ್ಲೇಖವಿದೆ. ಇವರುಗಳ ಉಲ್ಲೇಖಗಳಿದೆಯೇ ಹೊರತು, ಇವರು ನಡೆಸುತ್ತಿದ್ದ ವ್ಯಾಪಾರದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನೀಡುವುದಿಲ್ಲ. ಎರಡನೆಯ ಕೃಷ್ಣನ ದೇವೀಹೊಸೂರು ಶಾಸನದಲ್ಲಿ (SII., vol XVIII, no. 16, 907-08 AD) ನಿಭಯದ ಬಳೆಗಾರ ಪೆರ್ಮಾಡಿ ನಾಯಿಗನ ಮಗ ಸರುವಯ್ಯಸೆಟ್ಟಿಯು ಕುಳರೆ ಕಾಳಗದೊಳಗೆ ಸತ್ತಿದ್ದನ್ನು ದಾಖಲಿಸುತ್ತದೆ. ಕಾಂವಿಸೆಟ್ಟಿ, ನಾಮಿಸೆಟ್ಟಿ ಮಾಳಿಸೆಟ್ಟಿ, ತೆಲ್ಲಿಗ ಜಯಸಿಂಗಯ್ಯಸೆಟ್ಟಿ (ಎಣ್ಣೆ ವ್ಯಾಪಾರಿ), ಅಂಗಡಿಯ ಸೆಟ್ಟಿ, ಕೊಮರಯ ಸೆಟ್ಟಿ, ಬಳೆಗಾರ ಕುರಳಕಾಮಸೆಟ್ಟಿ, ಭವಾನಿ ಸೆಟ್ಟಿ ಮುಂತಾದ ಹೆಸರುಗಳು ಸಿಗುತ್ತವೆ. ಕನ್ನರದೇವನ ಈಟೂರಿನ ಕಾಲವಿಲ್ಲದ ಶಾಸನವು (ARSIE., 1932, no. 219) ಪೃಥ್ವೀರಾಮ ಸೆಟ್ಟಿಯು ಮಂಗಳ ಗ್ರಾಮದಲ್ಲಿ ನಡೆದ ಗೋಕಾಳಗದಲ್ಲಿ ಸತ್ತನೆಂದು ಉಲ್ಲೇಖಿಸುತ್ತದೆ. ಮೂರನೇ ಕೃಷ್ಣನ ಮಧ್ಯ ಪ್ರದೇಶದ ಜುರಾ ಶಾಸನವು (EI., vol XIX, p 287, ಕ್ರಿ.ಶ. ಸುಮಾರು ೧೦ನೇ ಶತಮಾನ) ಪ್ರಶಸ್ತಿ ಶಾಸನವಾಗಿದ್ದು ಕನ್ನಡದಲ್ಲಿದೆ. ಈ ಶಾಸನವನ್ನು ಉಬ್ಬಿಕಾಮೈಸೆಟ್ಟಿಯ ತಮ್ಮ ತುಯ್ಯಲಚನ್ದಯ್ಯನು

ಬರಸಿದನೆಂದು ಉಲ್ಲೇಖವಿದೆ. ಇದರಿಂದ ಮೂರನೇ ಕೃಷ್ಣನು ಜುರಾದಲ್ಲಿ ವ್ಯಾಪಾರಸ್ಥರ ಶ್ರೇಣಿಗೆ ಭೇಟಿ ನೀಡಿದ್ದನು ಎಂಬುದನ್ನು ಊಹಿಸಬಹುದಾಗಿದೆ.

**ಉದ್ಯಮಗಳು: ತೈಲೋದ್ಯಮ**

ರಾಷ್ಟ್ರಕೂಟರ ಕಾಲದಲ್ಲಿ ತೈಲ ಉತ್ಪಾದನೆಯು ಪ್ರಮುಖವಾಗಿತ್ತು. ಬಳಕೆಯು ಕೂಡ ಹೆಚ್ಚಾಗಿತ್ತು. ದೈನಂದಿನ ಉಪಯೋಗಗಳಾದ ದೀಪ, ಅಡಿಗೆ, ದೇವರ ದೀಪ, ಮುಂತಾದುವುಗಳಲ್ಲದೆ ದಾನಕ್ಕೆ ನೀಡುವ ಅಂಶಗಳಲ್ಲಿ ಎಣ್ಣೆಯೂ ಮುಖ್ಯವಾದುದಾಗಿದೆ. ದೇವಾಲಯಗಳಲ್ಲಿ ನಂದಾ ದೀಪಗಳಿಗಾಗಿ ನೀಡಿದ ದಾಖಲೆಗಳು ಹೇರಳವಾಗಿ ಸಿಗುತ್ತವೆ. ಎಳ್ಳೆಣ್ಣೆಯನ್ನು ಅರಬ್ ದೇಶಗಳಿಗೆ ರಫ್ತು ಮಾಡುತ್ತಿದ್ದರೆಂದು ತಿಳಿದು ಬರುತ್ತದೆ. (Social and Economic Conditions under the Imperial Rashtrakutas., Jayashree Mishra)

ಕ್ರಿ.ಶ. ಸುಮಾರು ೭೮೦ ರ ಆಲಂಪುರ ಶಾಸನವು (APGAS., vol III, no.99) ಧಾರಾವರ್ಷ ಧ್ರುವನ ಆಳ್ವಿಕೆಯ ಮೊದಲ ವರ್ಷವನ್ನು ಉಲ್ಲೇಖಿಸುತ್ತಿದ್ದು, ಶ್ರೀವಾಗಿಲು ನಿರ್ಮಾಣವಾದ ಸಂದರ್ಭದಲ್ಲಿ ದೇವಾಲಯಕ್ಕೆ "ತೆಲ್ಲಿರಙುಗುಳ ಎಣ್ಣೆ" ನೀಡಿದ್ದನ್ನು ದಾಖಲಿಸುತ್ತದೆ. ಮೂರನೆಯ ಇಂದ್ರನ ಹತ್ತಿಮತ್ತೂರು ಶಾಸನದಲ್ಲಿ (SII, Vol. I, Part II, p145) ಭೋಗೇಶ್ವರ ದೇವರಿಗೆ ತೆಲ್ಲಿಗ ಜಯಸಿಂಗಯ್ಯಸೆಟ್ಟಿ ಜುಂಮ್ಮಿಸೆಟ್ಟಿ, ಮಾಳಿಸೆಟ್ಟಿ, ನಾಮಿಸೆಟ್ಟಿ, ಇನ್ನು ಮುಂತಾದವರು ಐವತ್ತು ಒಕ್ಕಲುಗಳಿದ್ದು ದೀಪಕ್ಕಾಗಿ ಸೊಂಟಿಗೆ ಎಣ್ಣೆಯನ್ನು ನೀಡಿದುದನ್ನು ಮತ್ತು ಅಂಗಡಿಯ ಸೆಟ್ಟಿಯರು ಸೊಂಟಿಗೆ ಎಣ್ಣೆ, ಹೊಲ್ಲಿಸೆಟ್ಟಿ ಭಟವನ್ನು ಬಿಟ್ಟನೆಂದು ದಾಖಲಿಸುತ್ತದೆ.

ಕ್ರಿ.ಶ. ೯೫೭ರ ಉತ್ತರ್‌ಮೇರೂರ್ ಶಾಸನವು (RITC, No.20.) ಮೂರನೆಯ ಕೃಷ್ಣನ ಆಳ್ವಿಕೆಯನ್ನು ತಿಳಿಸುತ್ತಿದ್ದು ಚಿನ್ನದ ಕಟಙ್ಚುವನ್ನು ದತ್ತಿಯಾಗಿ ನೀಡಿದ್ದನ್ನು ಉಲ್ಲೇಖಿಸುತ್ತದೆ. ವಂಗೀಪುರದ ವೇಟ್ಟಿಡೈ ಇಳೈಚಂದ್ರನ ಬ್ರಾಹ್ಮಣ ಪತ್ನಿ ಶೀಙಿಯನಜ್ಸ್ಸಿಚ್ಚಾನಿಯು ನೀಡಿದ್ದಳು. ತನ್ನ ಅವಸಾನ ಕಾಲದಲ್ಲಿ ನೀಡಿದ ದಾನವನ್ನು ಆಕೆಯ ಪರವಾಗಿ ಚಂಡೇಶ್ವರ ದಾಸನು ಉತ್ತೈರ್‌ಮೇರೂರಿನ ಚತುರ್ವೇದಿ ಮಂಗಲದ ಸಭೆಗೆ ಒಪ್ಪಿಸಿದನು. ಅವರು ಪುದುವಟ್ಟಿನ ರೂಪದಲ್ಲಿ ಹಣವನ್ನು ಪಡೆದರು. ನಂದಾ ದೀಪ ಬೆಳಗಲು ಅಗತ್ಯವಾಗಿರುವ ಎಣ್ಣೆಯ ಖರ್ಚನ್ನು ಅಂದಾಜು ಮಾಡಿ ಅಷ್ಟು

ಹಣವನ್ನು ಸ್ವೀಕರಿಸಿದರೆಂದು ಉಲ್ಲೇಖಿಸಿದೆ. ಕ್ರಿ.ಶ. ೯೫೯ ರ ಕೀಜೂರು ಶಾಸನವು (RITC,No.37.) ಮೂರನೆಯ ಕೃಷ್ಣನ ಆಳ್ವಿಕೆಯಲ್ಲಿ ಮಲ್ಲಣ್ ಅಣ್ಣಾವನ್ ಎಂಬ ವ್ಯಕ್ತಿ ತಿರುಕ್ಕೋವಲೂರು ತಿರುವೀರಟ್ಟಾನತ್ತು ಆಳ್ವಾರರಿಗೆ ನಂದಾದೀಪವನ್ನು ಬೆಳಗಿಸಲು ಹದಿನೈದು ಚಿನ್ನದ ಕಳಂಜುಗಳನ್ನು ದಾನವಾಗಿ ನೀಡಿದನು. ಪ್ರತಿದಿನ ಒಂದು ಉಳಕ್ಕು ಎಣ್ಣೆಯನ್ನು ನೀಡಲು ವ್ಯವಸ್ಥೆಯಾಗಿದ್ದನ್ನು ಶಾಸನವು ದಾಖಲಿಸುತ್ತದೆ. ಇದೇ ಕಾಲದ ಇನ್ನೊಂದು ಶಾಸನವು (RITC No.31) ಮಲಾಡು ಪ್ರದೇಶದ ತಿರುಕ್ಕೋವಲೂರು ತಿರುವೀರಟ್ಟಾನ ಆಳ್ವಾರ ದೇವಾಲಯದಲ್ಲಿ ನಂದಾದೀಪಕ್ಕಾಗಿ (ಹದಿ) ಐದು ಚಿನ್ನದ ಕಳಂಜುಗಳನ್ನು ದತ್ತಿಯಾಗಿ ನೀಡಿದ್ದನ್ನು ಉಲ್ಲೇಖಿಸಿದೆ. ವೈದುಂಬದೊರೆ ವಿಕ್ರಮಾದಿತ್ಯ ಪತ್ನಿ ಭೋಗಿನಾಯನ್ ವೀರರಾಣಿಯರು ಈ ದತ್ತಿಯನ್ನು ನೀಡಿದರೆಂದೂ, ಪ್ರತಿದಿನ ಒಂದು ಉಳಕ್ಕು ಎಣ್ಣೆಯನ್ನು ನೀಡಲು ನಗರತ್ತಾರರು ಒಪ್ಪಿದರೆಂದು ಉಲ್ಲೇಖಿಸಿದೆ.

ಕ್ರಿ.ಶ. ೯೬೧ ರ ವ್ಯಾಸಪುರಮ್ ಶಾಸನವು (RITC No.47) ಕೃಷ್ಣನ ಆಳ್ವಿಕೆಯಲ್ಲಿ ಪಡುವೊರಕ್ಕೋಟ್ಟಂ ಪ್ರದೇಶದ ಮೋಡನ್ ಆರುಮ್ಬಾಕ್ಕ ಸ್ಥಳದ ಮಹಾದೇವರಿಗೆ ಆ ಊರಿನ ಕಲಿಯನ್ ಎಂಬಾತ ತೊಂಬತ್ತು ಕುರಿಗಳನ್ನು ದೇವಾಲಯದಲ್ಲಿ ಅಗತ್ಯದ ದೀಪದ ವ್ಯವಸ್ಥೆಗಾಗಿ ನೀಡಿದನು. ಒಂದು ಉಳಕ್ಕು ಎಣ್ಣೆಯನ್ನು ಪ್ರತಿದಿನ ನೀಡುವುದಕ್ಕೆ ವ್ಯವಸ್ಥೆಯಾಯಿತು ಎಂಬ ವಿವರವು ತಿಳಿದು ಬರುತ್ತದೆ. ಕ್ರಿ.ಶ. ೯೬೫ ರ ಚಿಂತಾಮಣಿ ಶಾಸನವು (RITC No.80) ಕನ್ನರನ ಆಳ್ವಿಕೆಯಲ್ಲಿ ಕುರುಜ್ಞಾಲಿ ಗ್ರಾಮದ ಊರಸಭೆಯು ಮಾಡಿದ ವಿಜ್ಞಾಪನೆಯ ಮೇರೆಗೆ ಆ ಊರಿನ ದಂಡ, ಕುಳ್ಳಿಂ ಮುಂತಾದ ಆದಾಯಗಳನ್ನು ಮೊದಲಿನಂತೆ ತಿರುಪ್ಪಾಗವನುಹಾರೈ ಮಹಾದೇವರ ದೇವಾಲಯಕ್ಕೆ ಸಲ್ಲಿಸಬೇಕೆಂದೂ, ಅದರಿಂದ ದೇವಾಲಯದಲ್ಲಿ ದೀಪ ಬೆಳಗಿಸಲು ಎಣ್ಣೆಯನ್ನು ಪೂರೈಸಲು ಬಳಸಬೇಕೆಂದು ಆಜ್ಞೆ ಮಾಡಲಾಯಿತು ಎಂಬ ಉಲ್ಲೇಖವು ದೊರಕುತ್ತದೆ.

ಕ್ರಿ.ಶ. ೯೭೯ ರ ಕೊಡಗನೂರು ಶಾಸನವು (EC.Vol.XI. no. Dg.152) ಕಕ್ಕಲದೇವನ ಕಾಲದಲ್ಲಿ ಹೊರಡಿಸಲಾಗಿದೆ. ಮಹಾಸಾಮಂತನಾಗಿದ್ದ ಪಡಿಯಂಕಯ್ಯನು ಕದಂಬಳಿಗೆ-೧೦೦೦ ವನ್ನು ಆಳುತ್ತಿದ್ದಾಗ, ಕೊಡಗನೂರು

ಮಹಾಜನರ ಕಾಲನ್ನು ತೊಳೆದು, ಹನ್ನೆರಡು ಗದ್ಯಾಣದಿಂದ ಒಳಗಾದ ದಂಡವನ್ನು ಮತ್ತು ಮೂರು ಕಾಡಿ ಒಳ್ಳೆಣ್ಣೆಯನ್ನು ಬಿಟ್ಟಿದ್ದನ್ನು ಉಲ್ಲೇಖಿಸುತ್ತದೆ.

ಎಣ್ಣೆಯನ್ನು ದಾನ ಮಾಡುವ ಪರಿಪಾಠವಿರುವುದರಿಂದ ತೈಲ ಉತ್ಪಾದನೆಯೂ ಇತ್ತು ಎಂದು ತಿಳಿದು ಬರುತ್ತದೆ. ಶಾಸನಗಳಲ್ಲಿ ಗಾಣದ ಬಗ್ಗೆಯೂ ಉಲ್ಲೇಖಗಳು ಸಿಗುತ್ತದೆ. ಕ್ರಿ.ಶ.೯೪೮ ರ ಕುಡಿತಿನಿ ಶಾಸನವು (S11, vol IX, pt.I, No.65), (ಮೂರನೆಯ ಕೃಷ್ಣನ ಸಾಮಂತನಾಗಿದ್ದ) ವ್ರತ ಜಪ ನಿಯಮ ಹೋಮ ಸಂಯುಕ್ತ, ಸ್ವಾಮಿ ಕಾರ್ತಿಕೇಯ ತಪೋವನದ ಅಧಿಕಾರಿಯಾದ ಮಹಾಮಹನೀಯ ಲೋಕಯ್ಯ ಗಾವುಂಡನು ದೇಕಮ್ಮನ ದೇವಾಲಯಕ್ಕೆ ಗಾಣವನ್ನು ಸರ್ವಬಾಧಾಪರಿಹಾರವಾಗಿ ದಾನ ಮಾಡಿದ್ದನ್ನು ತಿಳಿಸುತ್ತದೆ. ಈ ಶಾಸನದಲ್ಲಿ ಲೋಕಯ್ಯ ಗಾವುಂಡನಿಗೆ ಸಮಧಿಗತ ಪಂಚಮಹಾಶಬ್ದ ಎಂಬ ಗೌರವ ಸೂಚಕಗಳನ್ನು ಹೇಳಲಾಗಿದೆ. ಕ್ರಿ.ಶ.೮೮೮ ರ ಕೊಳಗಲ್ಲು ಶಾಸನವು (S11, vol IX, pt. I, No.67), ಅಕಾಲವರ್ಷನ ಆಳ್ವಿಕೆಯಲ್ಲಿ ಅಯ್ಯಪ ಗಾವುಂಡನ ತಮ್ಮ ಚಂಗಗಾವುಂಡನು ಸೂಜಿಗಲ್ಲಿನ ಪಶ್ಚಿಮಕ್ಕೆ ಭೂದಾನದ ಜೊತೆಗೆ, ಮಠದ ಮುಂದೆ ಒಂದು ಗಾಣವನ್ನು ನಲವತ್ತೆರಡು ಮಹಾಜನರು, ನಾಲ್ವರು ಗಾವುಂಡರ ಸಮಕ್ಷಮದಲ್ಲಿ ಶತರಾಸಿಭಟಾರರ ಕಾಲನ್ನು ತೊಳೆದು ವಿದ್ಯಾದಾನ ಸತ್ರವಾಗಿ ಮಠಕ್ಕೆ ಕೊಟ್ಟಿದ್ದನ್ನು ಉಲ್ಲೇಖಿಸುತ್ತದೆ. ಸ್ವಾಮಿ ಕಾರ್ತಿಕೇಯ ತಪೋವನದ ಅಧಿಪತಿಯಾದ ಗಜಾಧರಯ್ಯನು ಕೊಳಗಲ್ಲನ್ನು ಆಳುತ್ತಿದ್ದಾಗ ಆತನ ಸಮಕ್ಷಮದಲ್ಲಿ ಸರ್ವಬಾಧಾಪರಿಹಾರವಾಗಿ ಈ ದಾನವನ್ನು ನೀಡಲಾಗಿದೆಯೆಂದು ಶಾಸನವು ಉಲ್ಲೇಖಿಸುತ್ತದೆ. ನಿಟ್ಟಳ್ಳಿಯ ಶಾಸನವು (S11, Vol.XVIII, No.32), ಮೂರನೆಯಕೃಷ್ಣನ ಆಳ್ವಿಕೆಯಲ್ಲಿ, ಬನವಾಸಿ ದೇಶವನ್ನು ಗರ್ವಿಂದರನು, ಗೊಟ್ಟೆಗಳಿಯನ್ನು ಪಂಪಯ್ಯನಾಳುತ್ತಿದ್ದಾಗ, ಬಷರಿಗೆ (ಬಳರಿಗೆ) ಹದಿನೈದು ಮತ್ತರು ಹೊಲ ಮತ್ತು ಎರಡು ಗಾಣವನ್ನು ಮಾದೆಯ್ಯಿಂಬೆಯ ಮಗಳ ಮಗ ಕಂಡಮ್ಮನವರ ಹೆಸರಿನಲ್ಲಿರಿಸಿದುದನ್ನು ಉಲ್ಲೇಖಿಸುತ್ತದೆ.

ಕ್ರಿ.ಶ. ಸುಮಾರು ೧೨ ನೆಯ ಶತಮಾನದ ಮೇವುಂಡಿ ಶಾಸನದಲ್ಲಿ (SII, vol XI, pt.I, No.30), ಕೃಷ್ಣ ಕನ್ನರನು (ಕೃಷ್ಣ III) ಆಳ್ವಿಕೆ ನಡೆಸುತ್ತಿದ್ದಾಗ, ದಂಡಿನ ಗೋವ ಕುಪ್ಪದೇವರಸರು ಮಾಡಿದ ಹಲವಾರು ದಾನಗಳಲ್ಲಿ ಗಾಣವನ್ನ ನೀಡಿದ

ಉಲ್ಲೇಖವಿದೆ. ಕ್ರಿ.ಶ. ಸುಮಾರು ೧೦ ನೆಯ ಶತಮಾನದ ಮುಧೋಳದ ಶಾಸನವು (ARIE, 1976 –77, No.B.152) ಗೋಣಯ್ಯನು ಮುದುವೋಳಲ್ ಪ್ರಾಂತವನ್ನು ಆಳುತ್ತಿದ್ದಾಗ, ಈತನ ಸಾಮಂತ ಗೂಳಿಗಾಮುಂಡ ಮತ್ತು ಇನ್ನೊಬ್ಬನು (ಹೆಸರಿಲ್ಲ) ಸೇರಿ ದೇವಾಲಯವೊಂದನ್ನು ಕಟ್ಟಿ, ಮೂರು ಮತ್ತರು ಭೂಮಿ, ಒಂದು ತೋಟ, ಎಣ್ಣೆಯ ಗಾಣ, ಹತ್ತು ಮನೆ ಕಟ್ಟಲು ಜಾಗವನ್ನು ನೀಡಿದುದನ್ನು ಉಲ್ಲೇಖಿಸುತ್ತದೆ.

ಮೇಲಿನ ಶಾಸನಗಳನ್ನು ಗಮನಿಸಿದಾಗ ಎಣ್ಣೆಗೆ ಮತ್ತು ಎಣ್ಣೆಯ ಉದ್ಯೋಗದವರಿಗೆ ಪ್ರೋತ್ಸಾಹವಿದ್ದು, ಉದ್ಯೋಗವು ಚೆನ್ನಾಗಿ ನಡೆಯುತ್ತಿತ್ತು ಎಂದು ತಿಳಿದು ಬರುತ್ತದೆ.

### ಮೀನುಗಾರಿಕೆ

ಮೂರನೆಯ ಕೃಷ್ಣನ ಚಿಂತಾಮಣಿ ಶಾಸನವು (RITC. No. 80, ಕ್ರಿ.ಶ.೯೬೫)ಕುರುಜ್ಕಲಿ ಗ್ರಾಮದ ಸಬೆಯಲ್ಲಿ ವಿನಂತಿಯಂತೆ ಮುನ್ನೈಪ್ಪಾಡಿ ಮೂವೇನ್ದವೇಳಾನನು ಆ ಊರಿನ ಆದಾಯಗಳನ್ನು ಮೊದಲಿನಂತೆಯೇ ತಿರುಪ್ಪಾಗವನುರೆ ಮಹಾದೇವರ ದೇವಾಲಯಕ್ಕೆ ಸಲ್ಲಿಸಬೇಕು ಎಂದು ಆಜ್ಞೆ ಮಾಡಿದುದನ್ನು ದಾಖಲಿಸುತ್ತದೆ. ತೆರಿಗೆ ಅಥವಾ ಸುಂಕಗಳಿಂದ ಬಂದ ಹಣವನ್ನು ದೇವಾಲಯದಲ್ಲಿ ದೀಪ ಬೆಳಗಿಸುವುದಕ್ಕೆ ಉಪಯೋಗಿಸಿದರೆ, ಮೀನು ಹಿಡಿಯುವುದರ ಮೇಲಿನ ಸುಂಕವನ್ನು ದೇವಾಲಯದ ವಾದ್ಯ ನುಡಿಸುವ ಪರೆಕಾರನಿಗೆ ಸೇವೆಯ ಪ್ರತಿಫಲವಾಗಿ ನೀಡಬೇಕೆಂದು ಉಲ್ಲೇಖಿಸಿದೆ. ಇದರಿಂದ ಮೀನುಗಾರಿಕೆಯು ಇತ್ತು. ಆದರೆ ತಮಗೆ ಇಷ್ಟ ಬಂದಂತೆ ಮೀನು ಹಿಡಿಯುವಂತಿಲ್ಲದೆ, ಅದಕ್ಕೆ ಸುಂಕವನ್ನೂ ನೀಡಬೇಕಾಗುತ್ತಿತ್ತೆಂದು ತಿಳಿದು ಬರುತ್ತದೆ.

### ದೋಣಿಯ ಉಲ್ಲೇಖ

ಅಬು ಜೈದ್ ಎಂಬ ಅರಬ್ ಪ್ರವಾಸಿಗನು ದೋಣಿ ತಯಾರಿಕೆಯ ಬಗ್ಗೆ ಬರೆಯುತ್ತಾನೆ. ಈತನು ತಿಳಿಸುವಂತೆ ತೆಂಗು ಬೆಳೆಯುತ್ತಿದ್ದ ಪ್ರದೇಶಗಳಲ್ಲಿ ದೋಣಿ, ಚಿಕ್ಕ, ಚಿಕ್ಕ ಹಡಗುಗಳ ತಯಾರಿಕೆಗಳು ನಡೆಯುತ್ತಿತ್ತು. ಬಾದಾಮಿ ಚಲುಕ್ಯರ ಕಾಲದಲ್ಲಿ ಕೂಡ ಯುದ್ಧ

ನೌಕೆಗಳಿದ್ದವೆಂದು ತಿಳಿದು ಬರುತ್ತದೆ. ನಮಗೆ ಸಿಗುವ ಆಧಾರಗಳು ಬಹಳ ಕಡಿಮೆಯಿರಬಹುದು. ರಾಷ್ಟ್ರಕೂಟರ ಕಾಲದಲ್ಲಿ ಹಡಗುಗಳ ಬಳಕೆ ಇರಲಿಲ್ಲ ಎನ್ನಲು ಸಾಧ್ಯವಿಲ್ಲ. ರಾಷ್ಟ್ರಕೂಟರು ಎಲಿಫೆಂಟಾದಲ್ಲಿ ಕೆಲವು ಗುಹೆಗಳನ್ನು ಕೊರೆಸಿದ್ದಾರೆ. ಕೆಲವು ಗುಹೆಗಳನ್ನು ಕೊರೆಸಿದ್ದಾರೆ. ಅಲ್ಲಿಗೆ ಹೋಗಲು ದೋಣಿಯ ಅಗತ್ಯ ಇದ್ದೇ ಇದೆ. ಆದ್ದರಿಂದ ದೋಣಿಯ ಬಳಕೆಯಂತೂ ಇತ್ತು. ದೋಣಿ ತಯಾರಿಕೆಯು ಉದ್ಯಮವಾಗಿ ಬೆಳೆಯುವಷ್ಟು ದೊಡ್ಡದಾಗಿತ್ತು ಎಂದು ಹೇಳಲು ಸಾಧ್ಯವಿಲ್ಲ. ಬಂದರುಗಳು ಎಲ್ಲೆಲ್ಲಿ ಇತ್ತೆಂಬುದು ಸ್ಪಷ್ಟವಾಗಿ ತಿಳಿಯದು.

**ಶ್ರೇಣಿಗಳು**

ವ್ಯಾಪಾರಿಗಳ ಸಮುದಾಯವು ಸಾಮೂಹಿಕವಾಗಿ ನಡೆಸುವ ಚಟುವಟಿಕೆಗಳಿಗೆ ಶ್ರೇಣಿ ಎಂದು ಕರೆಯಬಹುದಾಗಿದೆ. ಕರ್ನಾಟಕದಲ್ಲಿ ಅಯ್ಯಾವೊಳೆ ಅಯ್ನೂರ್ವರು, ತೆಲ್ಲಿಗರೈವತ್ತೊಕ್ಕಲು, ತೆಲ್ಲಿಗ, ಸಾಲಿಗ ಮುನ್ನೂರ್ವರು ಮುಂತಾದವರುಗಳನ್ನು ಹೆಸರಿಸಬಹುದು. "ಅಯ್ಯಾವೊಳೆ ಐನೂರ್ವರು" ಎಂಬುದು ಐನೂರು ಸದಸ್ಯರಿದ್ದ ವರ್ತಕರ ಸಂಘವಾಗಿದೆ. ಆ ಕಾಲಕ್ಕೆ ಇಡೀ ದಕ್ಷಿಣ ಭಾರತದಲ್ಲಿ ಪ್ರಸಿದ್ಧವಾದ ಶ್ರೇಣಿಯಾಗಿತ್ತು. ಇದು ಹತ್ತನೆಯ ಶತಮಾನಕ್ಕಿಂತ ಹಿಂದೆ ಇದ್ದಂತಹ ವರ್ತಕರ ಸಂಘವಾಗಿತ್ತು. ಸೆಟ್ಟಿ, ಬಣಂಜಿಗರು, ನೇಕಾರರು ಮುಂತಾದವರು ಈ ವರ್ತಕ ಸಂಘದಲ್ಲಿದ್ದರೆಂದು ತಿಳಿದುಬರುತ್ತದೆ. ವೀರಬಣಂಜು ಧರ್ಮ ಪ್ರತಿಪಾಳನರಾದ ಇವರು "ಗುಡ್ಡಧ್ವಜ ಭಲ್ಲುಂಕಿ ದಂಡಹಸ್ತ"ರಾಗಿದ್ದರೆಂದು ವಿದ್ವಾಂಸರು ತಿಳಿಸಿದ್ದಾರೆ. (ಶಾಸನಗಳಲ್ಲಿ ಕರ್ನಾಟಕದ ವರ್ತಕರು ಕ್ರಿ.ಶ. ೮೬೦)

ಧಾರಾವರ್ಷನ ಆಲಂಪುರ ಶಾಸನವು (APGAS, Vol. III, No. 99, 780AD) ಧ್ರುವನು ರಾಜ್ಯಭಾರವನ್ನು ಪ್ರಾರಂಭಿಸಿದ ವರ್ಷದಲ್ಲಿ ಸೋಮಾದಿಭಟ್ಟನೆಂಬುವನು ಮಾಘಾಪತ್ಯವನ್ನು ಮಾಡಿದಾಗ ದುಣಭಟರೆಯೂ ಪರಿಯಾಳ ಮೂನುಱಱವತ್ತು ಪತ್ತರ್ಪಾನಾಸಿನ ಮೇಲೆ ಶ್ರೀವಾಗಿಲನ್ನು ನಿರ್ಮಾಣಮಾಡಿದನು. ಈ ಸಂದರ್ಭದಲ್ಲಿ ಇಟ್ಟಗಿಯ ಎರಡು ಭಾಗದಲ್ಲಿ ಒಂದು ಭಾಗವನ್ನು ಶಾಸನವಾಗಿ ನಿಲ್ಲಿಸಿದರು. ಆಗ ಮಹಾನೋಂಪಿಯ ಸಹಸ್ರ ಭೋಜನಕ್ಕೆ ಆಳಂಪುರ -೩೦ರ ಗಾಮುಂಡ ಪ್ರಜೆಗಳು ಅಕ್ಕಿ ಮತ್ತು ತುಪ್ಪವನ್ನು ಸಲ್ಲಿಸುವ ನಗರ ಸಾಸಿರ್ವರ ಮೇಲೆ ಸಾವಿರ ಫಲ ಅಡಿಕೆ

ನೀಡಿದ್ದನ್ನು ತಿಳಿಸುತ್ತದೆ. ಇದರಿಂದ ನಗರ ಸಾಸಿರ್ವರು ಎಂಬ ವರ್ತಕರ ಶ್ರೇಣಿ ಇತ್ತೆಂದು ಊಹಿಸಬಹುದಾಗಿದೆ. ಮೂರನೆಯ ಗೋವಿಂದನ ಲಕ್ಷ್ಮೇಶ್ವರ ಶಾಸನದಿಂದ (EI. Vol. VI, No. 16, 793AD) ಪುಲಿಗೆರೆಯ ಮೂಱನ್ ಕೇರಿಯಲ್ಲಿ ಪಟ್ಟನಾಗರರ ಶ್ರೇಣಿಯೊಂದಿತ್ತೆಂದು ತಿಳಿದುಬರುತ್ತದೆ.

ಮೂರನೆಯ ಇಂದ್ರನ ಕಡಬಗೆರೆ ಶಾಸನವು (SII, Vol. IX, Pt I, No. 57, 922AD) ಮಹಾಸಾಮಂತ ಬಿರುದರ ಱೊಟ್ಟ, ಬಿರುದರ ಮೈಕುತ್ತಿ ಬಿಜ್ಜನು ಕೋಗಳಿ –೫೦೦, ಮಾಸಿಯವಾಡಿ –೧೪೦ನ್ನು ಆಳುತ್ತಿದ್ದಾಗ ನಕರಾಧಿಷ್ಟಿತನ ಉಲ್ಲೇಖ ಬರುತ್ತದೆ. ಮೂರನೆಯ ಕೃಷ್ಣನ ತಿರುವಡಿ ಶಾಸನದಲ್ಲಿ (RITC. No. 8, 955AD) ಮಾಂಕಲ್ಯಪುರದ ಗೊವಿಂದ ವಿಷ್ಣುದೇವರಿಗೆ ರಾಜಾದಿತ್ಯ ಪಲ್ಲವರಾಯ ದೊರೆಯಿಂದ ನಂದಾದೀಪಕ್ಕಾಗಿ ೯೬ ಕುರಿಗಳನ್ನು ಸ್ವೀಕರಿಸಲಾಯಿತು. ಈ ದತ್ತಿಯನ್ನು ರಕ್ಷಿಸುವ ಅಧಿಕಾರವು ಅಲ್ಲಿನ ನಗರತ್ತಾರ, ವೀರಗಣತ್ತಾರ ಮತ್ತು ಶ್ರೀವೈಷ್ಣವರಿಗೆ ಇದ್ದಿತು ಎಂದು ತಿಳಿದುಬರುತ್ತದೆ. ಇದೇ ಅರಸನ ಕೀಱೂರು ಶಾಸನವು (RITC. No. 37, 959AD) ಮಲ್ಲಣ್ ಅಣ್ಣಾವನ್ ಎಂಬುವನು ತಿರುಕ್ಕೋವಲೂರಿನ ತಿರುವೀರಟ್ಟಾನತ್ತು ಆಳ್ವಾರರಿಗೆ ನಂದಾದೀಪಕ್ಕಾಗಿ ೧೫ ಚಿನ್ನದ ಕೞಞ್ಜುಗಳನ್ನು ದಾನವಾಗಿ ನೀಡಿದನು. ತಿರುಕ್ಕೋವಲೂರಿನ ನಗರತ್ತಾರರು ಸ್ವೀಕರಿಸಿದರು. ಇದೇ ಪ್ರದೇಶದ ಇನ್ನೊಂದು ಶಾಸನವು (RITC. No. 31, 959AD)ವೈದುಂಬ ದೊರೆಯ ಪತ್ನಿ ಭೋಗಿನಾಯನ್ ವೀರನಾರಣಿಯಾರ್ ಎಂಬಂವಳು ೧೫ ಚಿನ್ನದ ಕೞಞ್ಜುಗಳನ್ನು ಮೇಲೆ ಉಲ್ಲೇಖಿಸಿರುವ ದೇವಾಲಯದ ನಗರತ್ತಾರರಿಗೆ ನೀಡಿದಳು ಎಂದಂ ಉಲ್ಲೇಖಿಸಿದೆ

ಕನ್ನರದೇವನ ಪಾಡೂರು ಶಾಸನವು (RITC. No. 82, 964AD) ವ್ಯಾಪಾರಸ್ಥರ ಗುಂಪಿಗೆ ಆರಾಮದತ್ತಿ ಎಂದರೆ ವಿಶ್ರಾಮಕ್ಕಾಗಿ ಬಿಟ್ಟ ದತ್ತಿ ನೀಡಿದ್ದನ್ನು ಉಲ್ಲೇಖಿಸುತ್ತದೆ. ಎಣ್ಣೂಱ್ವರ್ ಭಟ್ಟಪುತ್ತಿಕಾರ್ ಎನ್ನುವ ಸಹಸ್ರ ಜನರ ಗುಂಪಿಗೆ ಮತ್ತು ಐನೂರ್ವರ್, ಮೂನೂರ್ವರ್ ಎಂಬ ಗುಂಪುಗಳನ್ನು ಹೊಂದಿದ್ದವರಿಗೆ ಈ ದಾನವನ್ನು ನೀಡಿದನು. ಕಞ್ಜಿಕಾನ್ ತಞ್ಜೆಯುಞ್ಗೊಂಡ ಈ ಬಿರುದಿನ ಆಧಾರದಿಂದ ಇಲ್ಲಿನ ಕನ್ನರದೇವ ಮೂರನೆಯ ಕೃಷ್ಣನೆಂದು ತಿಳಿದುಬರುತ್ತದೆ. ಇವನಿಗೆ ಅಚಲ ಕುಲೋತ್ತಮನ್, ಆನೈವಿಟಙ್ಗನ್(ಆನೆವೆಡಂಗ) ಎಂಬ ಬಿರುದುಗಳಿದ್ದವು. ವ್ಯಾಪಾರಸ್ಥರ

ಗುಂಪಿನ ಕೆಲವು ಹೆಸರುಗಳು ಹೀಗಿವೆ: ಕರಿಯಮಾರಮನ್, ಎಯ್ಯಶಿವಮಣಿ, ನಾಗಜ್ನಾಞ್ಞನ್, ಕುನ್ದೈಯನ್, ವಿಞ್ಞಯನ್, ಕಞ್ಞನಾಂ, ಶೂಲಱಯಮ್ಮೈಯ್ಯೈನ್, ಪುಱಲಿಕಾನ್, ಸಿಮ್ಮನ್, ಕೇಚ್ಚೆಯನ್, ಮರುಕನ್, ಆಚ್ಚಯನ್, ಇಡನ್ ಚಿಕ್ಕನ್, ಕಲ್ಯೆಯನಾಯಕನ್, ಬೋಟಕೇತ್ತುಕಾನ್, ಸೊಪ್ಪುಕನ್, ಅಂಬಯನ್, ಸಾನ್ದಿಕಾನ್ ಮುಂತಾದ ಹೆಸರುಗಳಿವೆ. ಇದರಲ್ಲಿ ಊಟದ ಪ್ರಸ್ತಾಪವೂ ಇದೆ. ಇದೇ ಅರಸನ ಜಾಮ್ಬೈ ಶಾಸನದಲ್ಲಿ (RITC. NO. 94, 967AD) ತಾನ್ ಱೋನ್ ಱಪ್ಪಿರಾನ್ ಎಂಬ ದೇವರಿಗೆ ಚಿನ್ನದ ಕಱಂಞ್ಞಗಳನ್ನು ದಾನವಾಗಿ ನೀಡಿದ್ದನ್ನು ದಾಖಲಿಸುತ್ತದೆ. ಇದರಲ್ಲಿ ನಗರತ್ತಾರರ ಉಲ್ಲೇಖವಿದೆ.

**ವಾಣಿಜ್ಯ ಕೇಂದ್ರಗಳು**

ರಾಷ್ಟ್ರಕೂಟರ ದಾಖಲೆಗಳು ಅರಬ್ಬರ ಬಗ್ಗೆ ತೀರ ಕಡಿಮೆ ಉಲ್ಲೇಖಿಸಿದರೆ, ಅರಬ್ಬರು ದಾಖಲೆಗಳು ಬಹಳ ಗೌರವ, ವಿಶ್ವಾಸಗಳಿಂದ ರಾಷ್ಟ್ರಕೂಟರ ಬಗ್ಗೆ ದಾಖಲಿಸಿದ್ದಾರೆ. ಯಾವುದೇ ಪಕ್ಷಪಾತವಿಲ್ಲದೆ ಅರಬ್ಬರನ್ನು ನೋಡಿಕೊಳ್ಳುತ್ತಿದ್ದ ಬಲ್ಹರನನ್ನು ಶ್ರೇಷ್ಠ ದೊರೆ ಎಂದು ವರ್ಣಿಸಿದ್ದಾರೆ (ಖುರ್ದಾದ್‌ಬೆ). ಆಲ್ ಇದ್ರಿಸಿಯು ಕ್ರಿ.ಶ. ೧೧-೧೨ ನೆಯ ಶತಮಾನದಲ್ಲಿ ಬಂದಿದ್ದರೂ, ತನ್ನ ಬರವಣಿಗೆಯಲ್ಲಿ ಹಿಂದಿನವರ ದಾಖಲೆಗಳನ್ನು ಗಮನಿಸಿದ್ದಾನೆ. ಅರಬ್ಬರು ಮಸೀದಿಯನ್ನು ಕಟ್ಟಿಕೊಳ್ಳಲು ಅನುಮತಿಯನ್ನು ಕೊಡಲಾಗಿತ್ತು. ಇವರು ವ್ಯಾಪಾರದಲ್ಲಿ ಅಮದು ಮತ್ತು ರಫ್ತಿನ ವಹಿವಾಟಷ್ಟೆ ಅಲ್ಲದೆ ದಕ್ಷಿಣ ಭಾರತದ ವ್ಯವಹಾರಗಳಲ್ಲೂ ಪಾಲ್ಗೊಂಡರೆಂದು ತಿಳಿದುಬರುತ್ತದೆ.

ಸಮುದ್ರಮಾರ್ಗದಲ್ಲಿ ಸರಕು ಸಾಗಾಣಿಕೆ ನಡೆಯುತ್ತಿತ್ತು. ಅನೇಕ ಬಂದರುಗಳಿದ್ದವು. ಯೂಫ್ರೆಟಿಸ್ ಮತ್ತು ಟೈಗ್ರಿಸ್ ಬಂದರುಗಳು ಭಾರತೀಯ ವಸ್ತು ಮಾರಾಟದ ಪ್ರಮುಖ ಆಕರ್ಷಣೀಯ ಕೇಂದ್ರವಾಗಿತ್ತು. ಅಲ್ಲಿ ಇನ್ನು ಅನೇಕ ಮಾರುಕಟ್ಟೆಗಳು, ಗೋದಾಮುಗಳು ಇದ್ದು, ಭಾರತದ ಮರಗಳಾದ ತೇಗ (Siddiqui, W.H. p581), ಮುಂತಾದ ಮರಗಳು ಮಾರಾಟವಾಗುತ್ತಿದ್ದವು. ಭಾರತದಲ್ಲಿ ಅರಬ್ಬರೇ ಹೇಳುವಂತೆ ಸೊಪಾರ, ಸಂಜಾನ, ಸೈಮೂನ್ ಮತ್ತು ಗೋವಾಗಳಲ್ಲಿ ಮರಗಳು ಮಾರಾಟವಾಗುತ್ತಿತ್ತೆಂದು ವಿವರಿಸಿದ್ದಾರೆ (ಅರಬ್ ಔರ್ ಭಾರತ್ ಕೇ ಸಂಬಂಧ್,

[ಮೂಲ] ಮೌಲಾನ ಸೈಯ್ಯದ್ ಸುಲೈಮಾನ್ ನಾದ್ವಿ, [ಅನು] ಬಾಬು ರಾಮಚಂದ್ರವರ್ಮ, ಪು.೪೬–೪೭., ಪ್ರಯಾಗ, ೧೯೩೦ p46-47).

ಕಲ್ಯಾಣದ ಬಂದರಿನಿಂದ ಬಟ್ಟೆ, ಕಂಚು, ಕರಿಮರದ ದಿಮ್ಮಿ, ತೊಲೆಗಳು ಮುಂತಾದ ಅನೇಕ ಸಾಮಗ್ರಿಗಳು ರಫ್ತು ಆಗುತ್ತಿತ್ತು. ನೌಸಾರಿ, ದಬೋಲ್, ಜಯಗಢ, ದೇವಗಢ ಮುಂತಾದ ಬಂದರುಗಳು ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು. ಸುಲೈಮಾನ್‌ನ ಪ್ರಕಾರ ಬಲ್ಹರನ ಸಾಮ್ರಾಜ್ಯವು ಸಮುದ್ರದ ತಡಿಯಿಂದಲೇ ಪ್ರಾರಂಭವಾಗುತ್ತಿತ್ತು. ಕೊಂಕಣಪ್ರದೇಶವು ರಾಷ್ಟ್ರಕೂಟರ ವಾಣಿಜ್ಯ ವ್ಯವಹಾರದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿತ್ತು ಎನ್ನಬಹುದು. ಕರಾವಳಿ ಪ್ರದೇಶಕ್ಕೆ ಸೇರಿದ ಥಾಣದ ಸಮೀಪದ ಸ್ಥಳಗಳು ಕೂಡಾ ಅರಬ್ಬರ ದಾಖಲೆಗಳಲ್ಲಿವೆ. ಥಾಣಾ, ಸೊಪಾರ, ಸಂದನ್, ಸೈಮೂರ್, ಕನಬಾಯ್(ಕ್ಯಾಂಬೆ), ಬರುಸ್ ಮುಂತಾದ ಪ್ರದೇಶಗಳಿಗೆ ಅರಬ್ಬರು ಬೇಟಿ ಕೊಡುತ್ತಲೇ ಇರುತ್ತಿದ್ದರು. ಎಲ್ಲ ಪ್ರವಾಸಿ ಅರಬ್ ಬರಹಗಾರರು ಈ ಪಟ್ಟಣಗಳ ಕುರಿತು ಬರೆದಿದ್ದಾರೆ. ಕ್ರಿ.ಶ. ೯–೧೦ ನೆ ಶತಮಾನದ ಹೊತ್ತಿಗೆ ಈ ಪ್ರದೇಶಗಳು ಬಹಳ ಸಮೃದ್ಧವಾಗಿದ್ದವೆಂದು ಹೇಳಬಹುದು. ಈ ಪ್ರದೇಶವನ್ನು ಸಂದರ್ಶಿಸಿದವರಲ್ಲಿ ಸುಲೈಮಾನ್, ಇದ್ರಿಖೀ, ಹಖಲ್ ಮುಂತಾದವರುಗಳನ್ನು ಹೆಸರಿಸಬಹುದು. ಕ್ರಿ.ಶ. ೯–೧೦ ನೆ ಶತಮಾನದ ಹೊತ್ತಿಗೆ ಥಾಣಾ ಪ್ರದೇಶದಲ್ಲಿ ಮುಸ್ಲಿಮರು ಹೆಚ್ಚಿನ ಸಂಖ್ಯೆಯಲ್ಲಿ ಸೇರಿಕೊಂಡು ತಮ್ಮ ಸ್ಥಳ,ವಸತಿಗಳನ್ನು ಭದ್ರಪಡಿಸಿಕೊಂಡಿದ್ದರು ಎಂದು ಹೇಳಬಹುದು.

**ತೂಕ**

ತೂಕಗಳ ಬಗ್ಗೆ ರಾಷ್ಟ್ರಕೂಟರ ಕಾಲದಲ್ಲಿ ಸಿಗುವ ಮಾಹಿತಿ ಬಹಳ ಕಡಿಮೆ, ಇಲ್ಲವೆಂದರು ತಪ್ಪಿಲ್ಲ. ಸಾಹಿತ್ಯ ಕೃತಿಗಳೂ ಈ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನೀಡುವುದಿಲ್ಲ. ವಾಣಿಜ್ಯೋದ್ಯಮವು ಇದ್ದುದರಿಂದ ಅನೇಕ ವರ್ತಕರು, ವರ್ತಕ ಸಂಘಗಳೂ ಇದ್ದಿದ್ದರಿಂದ ತೂಕಕ್ಕೆ ಸಂಬಂಧಿಸಿದಂತೆ ವ್ಯವಹಾರವಿತ್ತು ಎಂದು ಖಚಿತವಾಗಿ ತಿಳಿಸಬಹುದು.

## ಅಳತೆ

ಅಳತೆಗೆ ಸಂಬಂಧಿಸಿದಂತೆ ಸಾಕಷ್ಟು ಮಾಹಿತಿಗಳು ಲಭ್ಯವಿದೆ. ಭೂಮಿಯನ್ನು ಅಳೆಯುವುದಕ್ಕೆ ಬಳಸುತ್ತಿದ್ದ ಮಾಪನಗಳು, ಧಾನ್ಯವನ್ನು ಅಳೆಯುವುದಕ್ಕೆ ಬಳಸುತ್ತಿದ್ದ ಮಾಪನಗಳು ಮುಂತಾದವುಗಳನ್ನು ಇಲ್ಲಿ ಹೆಸರಿಸಬಹುದು. ಭೂಮಿಯನ್ನು ಮತ್ತರು, ಖಂಡುಗ, ನಿವರ್ತನ, ಅಳತೆಗೋಲು ಇವುಗಳಿಂದ ಅಳೆಯುತ್ತಿದ್ದರು. ಅಳತೆಗೋಲುಗಳ ಉದ್ದದಲ್ಲಿ ಪ್ರಾದೇಶಿಕವಾಗಿ ಅಲ್ಪಸ್ವಲ್ಪ ವ್ಯತ್ಯಾಸ ಇರುವುದು ಕಂಡುಬರುತ್ತದೆ. ಅದಕ್ಕೆ ನಿರ್ಧಿಷ್ಟವಾದ ಹೆಸರನ್ನು ಪ್ರಾದೇಶಿಕವಾಗಿಯೇ ನೀಡಿದ್ದರೆಂದು ತಿಳಿದುಬರುತ್ತದೆ.

ಪ್ರಾದೇಶಿಕವಾಗಿ ಇದಕ್ಕೆ ಬೇರೆಬೇರೆ ಹೆಸರುಗಳನ್ನು ನೀಡಿದ್ದರೆಂದು ತಿಳಿದುಬರುತ್ತದೆ. ತಮಿಳುನಾಡಿನ ಶಾಸನಗಳಲ್ಲಿ 'ಕುಚಿ' ಎಂಬ ಪ್ರಸ್ತಾಪವಿದ್ದು, 'ಹನ್ನೆರಡು ಕುಚಿ ಭೂಮಿ' ಇತ್ಯಾದಿಯಾಗಿ ಉಲ್ಲೇಖಿಸಿದೆ. 'ಪೇಱು' ಎಂಬುದು ಅಳತೆಯಾಗಿದ್ದು, 'ಒಬ್ಬ ಮನುಷ್ಯನು ಅಥವಾ ಒಂದು ಪ್ರಾಣಿಯು ಹೊರುವಷ್ಟು ಭಾರ ಅಥವಾ ಅಳತೆಯೆಂದು ಊಹಿಸಬಹುದಾಗಿದೆ. 'ಪಱಿಂ' ಎನ್ನುವ ಅಳತೆಯೂ ಇದೆ. ಕೊಳಗ, ಉಳಕ್ಕು, ಸೊಂಟಿಗೆ ಮುಂತಾದ ಅಳತೆಗಳೂ ಇವೆ. ಒಟ್ಟಿನಲ್ಲಿ ಅಳತೆ ಮಾಡುವ ಪದ್ಧತಿಯಿತ್ತು. ಇದರಿಂದ ವ್ಯವಸ್ಥಿತವಾಗಿ ಅವರ ವ್ಯಾಪಾರ ವಹಿವಾಟುಗಳು ನಡೆಯುತ್ತಿತ್ತೆಂದು ಊಹಿಸಬಹುದಾಗಿದೆ.

## ನಾಣ್ಯಗಳು

ಹಣವಿದ್ದರೆ ಉಳಿದೆಲ್ಲ ಕೆಲಸ ಕಾರ್ಯಗಳು ನಿರಾತಂಕವಾಗಿ ನಡೆಯುತ್ತದೆ. ಇದಕ್ಕೆ ಯಾವ ಕಾಲವೂ ಹೊರತಾಗಿಲ್ಲ. ರಾಷ್ಟ್ರಕೂಟರ ಕಾಲದಲ್ಲಿ ಹಣಕಾಸಿನ ಉಪಯೋಗ ನಡೆಯುತ್ತಿತ್ತು. ಅನೇಕ ರಾಜವಂಶಗಳ ನಾಣ್ಯಗಳು ನಮಗೆ ದೊರಕುತ್ತವೆ. ಆದರೆ ರಾಷ್ಟ್ರಕೂಟರ ಕಾಲದ ಒಂದೇ ಒಂದು ನಾಣ್ಯವು ಇದುವರೆಗೆ ಸಿಕ್ಕಿರಲಿಲ್ಲ. ಈಗ ಮೂರು ನಾಣ್ಯಗಳು ಸಿಕ್ಕಿವೆ. ಇನ್ನೂರೈವತ್ತು ವರ್ಷಗಳ ಕಾಲ ವಿಜೃಂಭಣೆಯಿಂದ ಆಳಿದ ರಾಷ್ಟ್ರಕೂಟರು ತಮ್ಮದೇ ಆದ ನಾಣ್ಯಗಳನ್ನು ಉಪಯೋಗಿಸುತ್ತಿರಲಿಲ್ಲವೆ? ಬಾದಾಮಿ ಚಲುಕ್ಯರ ಕಾಲದಲ್ಲಿದ್ದ ನಾಣ್ಯಗಳನ್ನೇ ಉಪಯೋಗಿಸುತ್ತಿದ್ದರೆ ಎನ್ನುವ ಪ್ರಶ್ನೆ ಏಳುತ್ತದೆ. ಹಿಂದಿನದನ್ನು ಉಪಯೋಗಿಸಿದ್ದರೂ

ಮತ್ತೆ ಮತ್ತೆ ಟಂಕಿಸಬೇಕಾದ ಅವಶ್ಯಕತೆ ಇರುತ್ತದೆ. ಆದ್ದರಿಂದ ಟಂಕಸಾಲೆ ಇತ್ತು ಎಂದು ಊಹಿಸಬಹುದು. ಶಾಸನಗಳಲ್ಲಿ ಮತ್ತು ಸಾಹಿತ್ಯದಲ್ಲಿ ಹಣಕಾಸಿನ ಉಲ್ಲೇಖಗಳಿವೆ. ವಿವಿಧ ರೀತಿಯ ವಿವಿಧ ಹೆಸರುಗಳ ನಾಣ್ಯಗಳು ದೊರಕುತ್ತವೆ. ಕ್ರಿ.ಶ. ೭೦೯–೭೧೦ ರಲ್ಲಿ ರೂಪಕ ಮತ್ತು ಕೃಷ್ಣರಾಜರೂಪಕ ನಾಣ್ಯಗಳ ಬಳಕೆಯ ಬಗ್ಗೆ ನಾಸಿಕದ ಶಾಸನವು ಉಲ್ಲೇಖಿಸಿದೆ (EI Vol. XXV, p232-235). ಇದು ನೇರವಾಗಿ ರಾಷ್ಟ್ರಕೂಟರಿಗೆ ಸಂಬಂಧಿಸಿದ್ದಲ್ಲ. ಆ ಕಾಲದ್ದು ಎನ್ನಬಹುದು ಅಷ್ಟೆ.

ರಾಷ್ಟ್ರಕೂಟರ ಕಾಲದಲ್ಲಿ ಬಳಕೆಯಲ್ಲಿದ್ದ ನಾಣ್ಯಗಳ ಹೆಸರುಗಳು ತಿಳಿದಿದೆಯೇ ಹೊರತು ಅದರ ಮೌಲ್ಯವಾಗಲೀ ತೂಕವಾಗಲೀ ತಿಳಿಯದು. ಚಿನ್ನ ಬೆಳ್ಳಿಯಲ್ಲಿ ಮಾಡಿರುವ ನಾಣ್ಯಗಳನ್ನು ಶಾಸನಗಳು ಹೆಸರಿಸುತ್ತವೆ. ಉಳಿದಂತೆ ಇನ್ಯಾವ ಲೋಹವನ್ನು ಬಳಸುತ್ತಿದ್ದರೋ ತಿಳಿಯುವುದಿಲ್ಲ. ಡಾ॥ ಅಲ್ಟೇಕರರು ನಾಣ್ಯಗಳ ತೂಕ ಮತ್ತು ಬೆಲೆಯನ್ನು ಗುರುತಿಸಲು ಪ್ರಯತ್ನಪಟ್ಟಿದ್ದಾರೆ (Rastrakutas and Their Times, p363). ನಾಣ್ಯಗಳಲ್ಲಿ ದ್ರಮ್ಮದ ಉಲ್ಲೇಖ ಒಂದನೆಯ ಅಮೋಘವರ್ಷನ ಕನ್ಹೇರಿ ಗುಹಾಶಾಸನದಲ್ಲಿದೆ (Indian Antiquery, Vol XIII, p136). ಕಂಧಗಿರಿ(ಕನ್ಹೇರಿ)ಯ ಬೌದ್ಧಸಂಘಕ್ಕೆ ದಾನ ನೀಡಿದ ಉಲ್ಲೇಖವಿದೆ. ದ್ರಮ್ಮಗಳನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ. ನಂತರ ಇನ್ನೂ ನೂರಿಪ್ಪತ್ತು ಕಾಂಚನ ದ್ರಮ್ಮಗಳನ್ನು ನೀಡಿದ್ದನ್ನು ಉಲ್ಲೇಖಿಸುತ್ತದೆ. ಅಲ್ಟೇಕರರು ಇದರ ಬಗ್ಗೆ ವಿವರಿಸುತ್ತಾ "ಮೊದಲು ನೀಡಿದ್ದು ಬೆಳ್ಳಿಯದು, ನಂತರ ನೀಡಿದ್ದು ಚಿನ್ನದ್ದು" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ (Rashtrakutas and Their Times, Altekar. P 364). ವಿ.ವಿ. ಮಿರಾಷಿಯವರು ಇದನ್ನು ಒಪ್ಪದೆ ಮಧ್ಯಕಾಲೀನ ಭಾರತದಲ್ಲಿ ಚಿನ್ನದ ನಾಣ್ಯಗಳೆಂದರೆ ಸುವರ್ಣ, ನಿಷ್ಕ ಮತ್ತು ಟಂಕ ಅಥವಾ ಗದ್ಯಾಣ ಮಾತ್ರ ಎಂದಿದ್ದಾರೆ (Indological Studies Vol. IV).

ರಾಷ್ಟ್ರಕೂಟರ ನಾಣ್ಯಗಳೆಂದು ತಪ್ಪಾಗಿ ಗುರುತಿಸಿರುವ ನಾಣ್ಯಗಳು ಎಷ್ಟೇ ತಿಳಿದಿದ್ದರೂ ಅದರಲ್ಲಿ ಗಾಧಿಯವೆಂಬ ನಾಣ್ಯಗಳು ಪೂನಾದಲ್ಲಿ ಸಿಕ್ಕಿತ್ತು. ಅದನ್ನು ರಾಷ್ಟ್ರಕೂಟರ ನಾಣ್ಯಗಳೆಂದು ಗುರುತಿಸಲಾಗಿದೆ (Comprehensive History of India, Vol. III, Part II, Majumdar R.C. And Dasguptha K.K).

ನಾಲ್ಕು ಸಿಂಹಗಳು ಪರಸ್ಪರ ಬೆನ್ನಿಗೆ ಒರಗಿಕೊಂಡು ಕುಳಿತಿರುವ ಚಿತ್ರವೊಂದು ಕಡೆ ಇನ್ನೊಂದು ಕಡೆ ಹೂವಿನ ಚಿತ್ರಗಳಿರುವ ಎಂಟು ನಾಣ್ಯಗಳು ಪ್ರೊ.ಎಂ.ಹೆಚ್. ಕೃಷ್ಣ ಅವರಿಗೆ ಸಿಕ್ಕಿದ್ದು, ಇವು ರಾಷ್ಟ್ರಕೂಟರವು ಇರಬಹುದು ಎಂದಿದ್ದಾರೆ (MAR-1939, p87). ರಾಷ್ಟ್ರಕೊಟರದೇ ಎನ್ನಲು ಯಾವ ಆಧಾರವನ್ನು ಕೊಟ್ಟಿಲ್ಲ.

ಶಾಸನಗಳಲ್ಲಿ ಪಣದ ಉಲ್ಲೇಖವಿದೆ. ಕಾಣಂನ ಉಲ್ಲೇಖ ರಾಷ್ಟ್ರಕೂಟರ ತಮಿಳು ಶಾಸನಗಳಲ್ಲಿ ಬರುತ್ತದೆ. ಗದ್ಯಾಣಗಳಲ್ಲಿ ಪೊಂಗದ್ಯಾಣ, ರೋಣದಗದ್ಯಾಣ, ಗದ್ಯಾಣಪೊನ್ನು ಮುಂತಾದ ಉಲ್ಲೇಖಗಳಿವೆ. ಅದೇ ರೀತಿ ದ್ರಮ್ಮಗಳಲ್ಲಿ ಕೂಡ ಅನೇಕ ಬಗೆಗಳಿವೆ. ಕರಿಯದ್ರಮ್ಮ, ಹಿರೇದ್ರಮ್ಮ, ಗಂಭುವಕದ್ರಮ್ಮ ಇತ್ಯಾದಿ. ಕಾಸುಗಳ ಪ್ರಯೋಗ ಮತ್ತು ಬಳಕೆಯಿತ್ತು. ಮಾಷ, ನಿಷ್ಕ, ಧರಣ, ಪೊಂಧರಣ, ಮಾಸಕ ಮುಂತಾದ ನಾಣ್ಯಗಳನ್ನು ಬಳಸುತ್ತಿದ್ದರು. ಇದಲ್ಲದೆ ರಾಷ್ಟ್ರಕೂಟರ ತಮಿಳು ಶಾಸನಗಳಲ್ಲಿ ಕಳಿಂಜ್ಜುಗಳ ಪ್ರಯೋಗವಿದೆ. ಚಿನ್ನದ ಕಳಿಂಜ್ಜು ಎಂದು ಕರೆದಿರುವ ಉಲ್ಲೇಖಗಳೂ ಇವೆ. ಇದನ್ನು ದಾನವಾಗಿ, ದಂಡರೂಪದಲ್ಲಿ ಪಡೆಯುತ್ತಿದ್ದ ಉಲ್ಲೇಖಗಳಿವೆ. ರಾಷ್ಟ್ರಕೂಟರ ಕಾಲದಲ್ಲಿ ವಾಣಿಜ್ಯ ಸಂಬಂಧಗಳು, ವ್ಯಾಪಾರ ಉತ್ತಮ ಮಟ್ಟದ್ದಾಗಿದ್ದರಿಂದ ಹಣಕಾಸಿನ ಬಳಕೆ ಚೆನ್ನಾಗಿಯೇ ಆಗುತ್ತಿತ್ತೆಂದು ಊಹಿಸಬಹುದಾಗಿದೆ. ಆದರೆ ಅವರದೇ ನಾಣ್ಯಗಳು ಸಿಕ್ಕಿಲ್ಲದೇ ಇರುವುದರಿಂದ ಅನೇಕ ಅನುಮಾನಗಳಿಗೆ ಉತ್ತರ ದೊರಕುವುದಿಲ್ಲ. ತಮಿಳು ಶಾಸನಗಳಲ್ಲಿ ಮೂವತ್ತು, ಇಪ್ಪತ್ತೈದು, ಇಪ್ಪತ್ತು ಚಿನ್ನದ ಕಳಿಂಜ್ಜುಗಳನ್ನು ನೀಡಿರುವ ಉಲ್ಲೇಖ ಬರುತ್ತದೆ. ಕಳಿಂಜ್ಜುಗಳ ಸಂಖ್ಯೆ ನಲವತ್ತನ್ನು ದಾಟುವುದಿಲ್ಲ. ಆದ್ದರಿಂದ ಕಳಿಂಜ್ಜುವಿನ ಬೆಲೆ ಹೆಚ್ಚು ಎಂದು ಊಹಿಸಲು ಅವಕಾಶವಿದೆ. ಒಟ್ಟಿನಲ್ಲಿ ರಾಷ್ಟ್ರಕೊಟರ ಕಾಲದಲ್ಲಿ ನಾಣ್ಯಗಳ ಬಳಕೆ ಇತ್ತು, ಆದರೆ ಸಿಕ್ಕಿರುವ ನಾಣ್ಯಗಳ ಹೆಸರು ಮಾತ್ರ ತಿಳಿದಿದ್ದು ಅರ್ಥ ತಿಳಿಯದಿರುವುದರಿಂದ ಖಚಿತವಾಗಿ ಹೀಗೇ ಇತ್ತು ಎಂದು ಹೇಳುವುದು ಕಷ್ಟಸಾಧ್ಯವಾಗಿದೆ.

**ವಿವಿಧ ತೆರಿಗೆಗಳು**

ರಾಜ್ಯದ ಸಪ್ತಾಂಗಗಳಲ್ಲಿ ಕೋಶವು ಒಂದಾಗಿದೆ. ಕೋಶವು ತುಂಬಿದ್ದರೆ ದೇಶವು ಸುಭಿಕ್ಷವಾಗಿದೆಯೆಂದು ಭಾವಿಸಬಹುದು. ಕೋಶ ತುಂಬಬೇಕಾದರೆ ತೆರಿಗೆ

ಸುಂಕ ಮುಂತಾದವುಗಳ ಸಹಾಯ ಬೇಕೇಬೇಕು. ತೆರಿಗೆ ವಿಧಿಸುವಾಗಲೂ ಕೂಡ ಕೆಲವು ನಿಯಮಗಳನ್ನು ಪಾಲಿಸಬೇಕಿತ್ತು. ಮಹಾಭಾರತದಲ್ಲಿ "ದೇಶವು ಹಸುವಿದ್ದಂತೆ; ಪ್ರಜೆಗಳು ಕರುಗಳಿದ್ದಂತೆ, ಎಲ್ಲಾ ಹಾಲನ್ನೂ ಸ್ವಂತಕ್ಕೆ ಕರೆದುಕೊಂಡರೆ ಕರುಗಳು ಬಡವಾಗಿ ಮುಂದೆ ಭಾರ ಹೊರಲು ಅಸಮರ್ಥವಾಗುತ್ತವೆ.......... ಬಳ್ಳಿಗೆ, ಹೂವಿಗೆ ನೋವಾಗದಂತೆ ದುಂಬಿಯೂ ಜೇನನ್ನು ಸ್ವೀಕರಿಸುವಂತೆ ಜನರಿಂದ ತೆರಿಗೆಗಳನ್ನು ಸಂಗ್ರಹಿಸಬೇಕು." (ತರ್ದವಾಡಿ ನಾಡು: ಒಂದು ಅಧ್ಯಯನ, ಡಾ||ಎಸ್.ಕೆ. ಕೊಪ್ಪಾ) ಕಾಲ, ದೇಶ, ರೀತಿ ನೀತಿಗಳಿಗನುಗುಣವಾಗಿ ತೆರಿಗೆಯ ನಿಯಮಗಳಿರಬೇಕೆಂದು ಹೇಳಿದೆ. ತೆರಿಗೆಗಳನ್ನು ಸಂಗ್ರಹಿಸಲು ಅಧಿಕಾರಿಗಳಿರುತ್ತಿದ್ದರು. ನಾನಾ ರೀತಿಯ ಕಂದಾಯಗಳನ್ನು ಸಂಗ್ರಹಿಸಲಾಗುತ್ತಿತ್ತು.

ಭೂಕಂದಾಯ

ಭೂಕಂದಾಯಗಳು ರಾಜ್ಯದ ಆದಾಯಕ್ಕೆ ದೊಡ್ಡ ಪ್ರಮಾಣದಲ್ಲಿ ಸೇರುತ್ತಿತ್ತು. ಇದರಲ್ಲಿಯೂ ಅನೇಕ ಭಾಗಗಳನ್ನಾಗಿ ಮಾಡಿ ಕಂದಾಯವನ್ನು ಸಂಗ್ರಹಿಸುತ್ತಿದ್ದರು.

ಕ್ರಿ.ಶ.೯೫೯ ರ ಮೂರನೆಯ ಕೃಷ್ಣನ ತಿರುವಡನ್ ಡೈ (RITC. NO. 32) ಶಾಸನವು ಪಡುವೂರನಾಡಿನ ತಿರುವಡಂದ್ಯೆ ಗ್ರಾಮದ ಆಳ್ವಾರ ಶ್ರೀ ವರಾಹಸ್ವಾಮಿ ದೇವಾಲಯದಲ್ಲಿ ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಿದಾಗ ಆಲತ್ತೂಟಾನ ರಣಕೇಸರಿಯ ಪತ್ನಿ ನಜ್ಗೈವಡುಗಿಯಾರ್ ಅನೇಕ ದಾನಗಳನ್ನು ನೀಡಿದಾಗ ಅದರಲ್ಲಿ ಭೂಮಿದಾನ ಕರಗಳನ್ನು ಹಾಕದಂತೆ ವ್ಯವಸ್ಥೆ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಭೂಮಿಯ ಮೇಲೆ ಇಱೈ, ತಿಱೈ, ಎಚ್ಚೋಱು, ವೆಟ್ಟಿ, ಅಮಞ್ಞ ಮತ್ತು ನೀರಿಲೈ ಎಂಬ ಕರಗಳನ್ನು ಹಾಕುತ್ತಿದ್ದರೆಂದು ಮೂರನೆಯ ಕೃಷ್ಣನ ಪೋಲೂರು ಶಾಸನದಿಂದ ತಿಳಿಯುತ್ತದೆ(RITC. No. 96).

ಗದ್ದೆ, ಸಾಗುವಳಿ ಭೂಮಿ, ಖುಷ್ಕಿ ಜಮೀನು ತೋಟ, ಕರಿಮಣ್ಣಿನ ಭೂಮಿ ಮುಂತಾದವುಗಳಿಗೆ ಕಂದಾಯದ ಮೊತ್ತ ವಿವಿಧ ರೀತಿಯಲ್ಲಿರುತ್ತಿದ್ದವು. ಮೊದಲೇ ನಿಯಮಗಳನ್ನು ವಿಧಿಸಿ ಅದರಂತೆ ಸಂಗ್ರಹಿಸುವ ಆದಾಯ ಸಿದ್ಧಾಯವೆನಿಸಿಕೊಂಡಿತ್ತು (ತರ್ದವಾಡಿನಾಡು; ಒಂದು ಅಧ್ಯಯನ, ಡಾ||ಎಸ್.ಕೆ. ಕೊಪ್ಪಾ, ಪು.೨೨೪).

ಹತ್ತನೆಯ ಶತಮಾನದ ಲಿಪಿಯಲ್ಲಿರುವ ಲಕ್ಷ್ಮೇಶ್ವರ ಶಾಸನದಲ್ಲಿ ಪುಲಿಗೆಱೆ ೩೦೦ನ್ನು ಆಳುತ್ತಿದ್ದ ಅಧಿಕಾರಿಯೊಬ್ಬನು ಶೆಟ್ಟಿಯ ಜಮೀನು ಮತ್ತು ತೆರಿಗೆಯಿಂದ ಬಂದ ಹಣವನ್ನು ಬೀರನಾರಾಯಣ ದೇವರಿಗೆ ಕೊಟ್ಟನೆಂದು ಉಲ್ಲೇಖವಿದೆ. ಇದೇ ರೀತಿಯ ದಾನವೊಂದನ್ನು ಕೇಶವ ಎಂಬುವವನು ಬೀರನಾರಾಯಣನಿಗೆ ಕೊಟ್ಟಿದ್ದನ್ನು ಉಲ್ಲೇಖಿಸುತ್ತದೆ. ಬಹಳ ಅಸ್ಪಷ್ಟವಾಗಿರುವ ನೀರಲಗಿಯ ಶಾಸನವು ತೆರಿಗೆಗಳನ್ನು ಸಂದಾಯ ಮಾಡಿದ್ದನ್ನು ಉಲ್ಲೇಖಿಸುತ್ತದೆ.

ಕ್ರಿ. ಶ. ಸುಮಾರು ೯ ನೆಯ ಶತಮಾನದ ಅಳವಂಡಿ ಶಾಸನದಲ್ಲಿ (ಹಂ.ವಿ.ವಿ., ಶಾ.ಸ., ಕೊಪ್ಪಳ) ಭೂಮಿ, ಮನೆ ಮತ್ತು ತೆರಿಗೆಯ ಕೊಡುಗೆಯಾಗಿ ನೀಡಿದ್ದನ್ನು ದಾಖಲಿಸುತ್ತದೆ.

ಮೂರನೆಯ ಕೃಷ್ಣನ ಬಾಹೂರು ಶಾಸನದಲ್ಲಿ (RITC., No. 51, 961 AD) ವಾಗೂರ ಸಭೆಯು ನೂರು ಚೆಱುವು ಭೂಮಿಯನ್ನು ಕರರಹಿತವಾಗಿ ಮಾಡಿ ಅಧಿರಾಜ ಮಙ್ಗಲ್ಯಪುರಂ ನ ವ್ಯಾಪಾರಿ ಮುರುಗನ್ನನಿಗೆ ಭೂಮಿಯ ಬೆಲೆ ಕರದ ಹಣ ಎರಡನ್ನೂ ಸೇರಿಸಿ ಭೂಮಿಯನ್ನು ಮಾರಿದರೆಂದು ತಿಳಿದುಬರುತ್ತದೆ. ಭೂಮಿಯನ್ನು ಖರೀದಿಸಿದ ಆ ವ್ಯಕ್ತಿಯು ಅದನ್ನು ಅದೇ ಊರಿನಲ್ಲಿ ಭಟ್ಟವೃತ್ತಿಯನ್ನು ಕೈಗೊಂಡಿರುವ ಬ್ರಾಹ್ಮಣರಿಗೆ ದತ್ತಿಯಾಗಿ ನೀಡಿದನೆಂದು ದಾಖಲಿಸುತ್ತದೆ. ಇದೇ ಅರಸನ ಉತ್ತೈರ್‌ಮೇರೂರ್ ಶಾಸನದಲ್ಲಿ (RITC., No. 75, 964 AD) ಸಭೆಯ ಅಧಿಕಾರಿ ವರ್ಗದವರನ್ನು, ನ್ಯಾಯ ತೀರ್ಮಾನ ಮಾಡುವ ಮಧ್ಯಸ್ಥರು, ಪಂಚಾಯಿತಿ ಅಧಿಕಾರಿಗಳು, ಮುಂತಾದವರು ಆಕ್ಷೇಪಿಸಿದರೆ ಪೆರುಮಕ್ಕಳು (ಸಮಿತಿ) ಅಂತಹವರನ್ನು ಶಿಕ್ಷಿಸಬಹುದಿತ್ತು. ಶುಲ್ಕ, ದಂಡಗಳನ್ನು ವಿಧಿಸಬಹುದು ಎಂದು ಉಲ್ಲೇಖಿಸುತ್ತದೆ. ಮೂರನೆಯ ಕೃಷ್ಣನ ಕಾಪ್ಪಲೂರು ಶಾಸನದಲ್ಲಿ (RITC., No. 34, 959 AD) ವಸಗೂರು ನಾಡಿನಲ್ಲಿರುವ ೧೫೦೦ ಕುೞಿ ಭೂಮಿಯನ್ನು 'ದಾನಪ್ಪುರಂ' ಎಂದು ಮಾಡುವುದಕ್ಕೆ ವಿಲೈದ್ರವ್ಯ, ಇರೈದ್ರವ್ಯ ಎರಡನ್ನೂ ನಾಲ್ವರ ಕಡೆಯಿಂದ ಸ್ವೀಕರಿಸಿದುದನ್ನು ಉಲ್ಲೇಖಿಸುತ್ತದೆ. ಇದೇ ಅರಸನ ಚಿಂತಾಮಣಿ (RITC., No. 80, 965 AD) ಶಾಸನದಲ್ಲಿ ಮನ್‌ಱುಪಾಡು, ದಣ್ಣಂ, ಕುೞ್ಞಂ, ಮುಂತಾದ ಆದಾಯಗಳು ಸಂಗ್ರಹವಾಗುತ್ತಿದ್ದವೆಂದು ತಿಳಿದುಬರುತ್ತದೆ. ಇವು ತೆರಿಗೆ ಮತ್ತು

ಸುಂಕಗಳಾಗಿದ್ದವೆಂದು ವಿವರಿಸಿದ್ದಾರೆ. ಇದೇ ಅರಸನ ತಿರುಕ್ಕುಱಕುನ್ರಂ ಶಾಸನದಲ್ಲಿ (RITC., No. 24, 958AD) ಭೂಮಿಯನ್ನು ಖರೀದಿಸಿ ಮಂಟಪಕ್ಕೆ, ನೀರು ಮತ್ತು ಅಗ್ಗಿಷ್ಠಗೆಗಳ ವ್ಯವಸ್ಥೆಗೆ ದತ್ತಿಬಿಟ್ಟಾಗ ಊರ ಸಭೆಯು ಅದರ ಮೇಲಿನ ಕಂದಾಯ ಮತ್ತು ತೆರಿಗೆಗಳನ್ನು ಮನ್ನಾಮಾಡಿತು. ಅದಕ್ಕಾಗಿ ನಿಗದಿತ ಹಣವನ್ನು ದಾನಿಯಿಂದ ಮೊದಲೇ ಸ್ವೀಕರಿಸಿತೆಂದು ಉಲ್ಲೇಖಿಸಿದೆ.

ಮೂರನೆಯ ಕೃಷ್ಣನ ಸಿದ್ಧಲಿಂಗಮಢಂನ ಶಾಸನದಲ್ಲಿ (RITC., No.1, 949 AD) ಚಿಲ್ಲಿಱೈ ಹಾಗು ಎಚ್ಚೋರು ಎಂಬ ಕರಗಳನ್ನೂ ಮನ್ನಾ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಇದೇ ಅರಸನ ತಿರುವಡನ್‌ಡೈ ಶಾಸನವು (RITC., No.32 959 AD) ರಣಕೇಶರಿಯ ಪತ್ನಿ ನಙ್ಗೈವಡುಗಿಯಾರ್ ಎಂಬುವವಳು ದೇವರ ಅಮೃತಪಡಿಗೆ ಪ್ರತಿದಿನ ಒಚಿದು ಹೊತ್ತಿನ ನೈವೇದ್ಯಕ್ಕೆ ಭೂದಾನ ಮಾಡಿದಳು. ಪಡುವೂರ ನಾಟ್ಟಾರರು ಆ ಭೂಮಿಗೆ ಯಾವುದೇ ಕಂದಾಯವಿಲ್ಲದಂತೆ ವ್ಯವಸ್ಥೆ ಮಾಡಲು ಒಪ್ಪಿದರೆಂದು ಉಲ್ಲೇಖಿಸುತ್ತದೆ. ಇದೇ ಅರಸನ ಕುರುಗಣಿಮುಟ್ಟಂ ಶಾಸನದಲ್ಲಿ (RITC., No. 67, 963 AD) ಕಲ್ಲುಮಂಟಪದ ತಿರುವಡಿ ದೇವರಿಗೆ ನಿತ್ಯ ಮೂರು ಸಲ ನೈವೇದ್ಯ ಮಾಡಲು ಒಂಬತ್ತೂವರೆ ಮಾ. ಭೂಮಿಯ ಹಾಕಿದ್ದ ಇಱೈ ಮತ್ತು ಎಚ್ಚೂರು ತೆರಿಗೆಗಳನ್ನು ಮನ್ನಾಮಾಡಲು ಸಭೆಯು ತೀರ್ಮಾನಿಸಿತು. ನಂತರ ವೈಖಾನಸ ಆಗಮದ ಕಣ್ಣನ್‌ಭಟ್ಟನಿಗೆ ಒಪ್ಪಿಸಲಾಯಿತು.

**ಗೃಹಕಂದಾಯ**

ಮನೆಯ ನಿವೇಶನಕ್ಕೆ, ಕಟ್ಟಿದ ಹೊಸಮನೆ, ಹಳೆಯಮನೆಗಳಿಗೆ ಬೇರೆಬೇರೆ ತೆರಿಗೆ ಇರುವುದನ್ನು ಮನೆದೆರೆಯಲ್ಲಿ ಕಾಣಬಹುದು (ತರ್ದವಾಡಿನಾಡು; ಒಂದು ಅಧ್ಯಯನ, ಡಾ||ಎಸ್.ಕೆ. ಕೊಪ್ಪಾ, ಪು.೨೨೮).

**ಪಶುಗಂದಾಯ**

ರಾಷ್ಟ್ರಕೂಟರ ಕಾಲದಲ್ಲಿ ಪಶುಗಂದಾಯವಿತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ.ಶ. ೯೬೨ ರ ಮೂರನೆಯ ಕೃಷ್ಣನ ಶಾಸನದಲ್ಲಿ (RITC., no. 54 ಪಶುಗಂದಾಯದ ಆಯಂ) ಬಗ್ಗೆ ಉಲ್ಲೇಖವಿದೆ. ಕುರಿಗಳ ಮೇಲೆ ಅಟ್ಟುಕಿಱೈ (ಆಣಿಲ್ಲು), ಹಸುಗಳ ಮೇಲೆ, ಎಮ್ಮೆಗಳ ಮೇಲೆ ಕರ (ಎರುಮೈ ಪೊನ್) ಮುಂತಾದ

ತೆರಿಗೆಗಳನ್ನು ಮನ್ನಾ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಮನ್ನಾ ಮಾಡುವುದಕ್ಕಿಂತ ಮೊದಲು ಈ ತೆರಿಗೆಯ ಹಣವನ್ನು ಈಶ್ವರ ಭಟ್ಟಾರರ ದೇವಾಲಯದಲ್ಲಿ ಶ್ರೀ ಬಲಿಯ ಕಾಲದಲ್ಲಿ ಸೇವೆ ಮಾಡುತ್ತಿದ್ದ ಡೋಲು ಹಾಗೂ ವಾದ್ಯಗೋಷ್ಠಿಯವರು ಅನುಭೋಗಿಸುತ್ತಿದ್ದರು. ವೃತ್ತಿಗಳ ಮೇಲೆ ಕೂಡ ತೆರಿಗೆಗಳನ್ನು ಹಾಕಿರುವ ಉಲ್ಲೇಖಗಳಿವೆ. ಇದೇ ಶಾಸನದಲ್ಲಿ ಮಗ್ಗದ ಮೇಲೆ, ಒಗೆಯುವ ಕಲ್ಲಿನ ಮೇಲೆ ಹಾಕಿದ ತೆರಿಗೆಗಳನ್ನು ಮನ್ನಾ ಮಾಡಿದ್ದಾರೆ.

**ಉತ್ಪಾದನಾ ತೆರಿಗೆ**

ವಸ್ತುಗಳ ಮೇಲೆ ಕೂಡ ತೆರಿಗೆ ಹಾಕಲಾಗುತ್ತಿತ್ತು. ಕ್ರಿ. ಶ. ೯ನೆಯ ಶತಮಾನದ ಖಂಡೇಬಾಗೂರು ಶಾಸನವು ಎಱೆಯಮ್ಮನು ಆ ಪ್ರಾಂತವನ್ನು ಆಳುತ್ತಿದ್ದಾಗ, ಪನ್ನಾಸುವನ್ನು ಕೊಡುಗೆಯಾಗಿ ಕೊಟ್ಟಿದ್ದನ್ನು ದಾಖಲಿಸುತ್ತದೆ. ಪನ್ನಾಸು, ಪನ್ನಾಯ ಎಂದರೆ ವೀಳ್ಯದೆಲೆಯ ಮೇಲೆ ಹಾಕುವ ತೆರಿಗೆ. ಇದೇ ಕಾಲದ ಒಂದನೆಯ ಅಮೋಘವರ್ಷನ ಶಾಸನವು (SII., vol IX, Pt. I, No.54) ಆತನ ಮಗ ದುದ್ದಯ್ಯನು ನೂರ ಎಂಟು ಮತ್ತರು ಪನ್ನಾಸುವನ್ನು ಕೊಟ್ಟನೆಂದು ದಾಖಲಿಸುತ್ತದೆ. ಕಾಲದ ಉಲ್ಲೇಖವಿಲ್ಲದ ಧಾರಾವರ್ಷ ಧ್ರುವನ ಕಛವಿ ಶಾಸನದಲ್ಲಿ (KRIPR., no.1, p 65) ಮದೆಲೂರ ರಾಮನ ಅಗ್ರಮಹಿಷಿ ಅಪ್ಪೊವಿನೇತಿಗಳ ಮಗ ಕತ್ತಿಯರಸನು, ಕಚ್ಚವಿಯ ಮಾರಿಬ್ಬೆಗೆ ತುಪ್ಪದ ತೆರಿಗೆಯನ್ನು ಕೊಟ್ಟನೆಂದು ತಿಳಿದುಬರುತ್ತದೆ.

**ವ್ಯಾಪಾರ ತೆರಿಗೆ**

ವ್ಯಾಪರಕ್ಕೆ ಸಂಬಂಧಿಸಿದಂತೆ ಅಪಾರ ಪ್ರಮಾಣದಲ್ಲಿ ತೆರಿಗೆ, ಸುಂಕಗಳು ಸಂಗ್ರಹವಾಗುತ್ತಿದ್ದವು. ಅದಕ್ಕಾಗಿ ಸುಂಕದ ಕಟ್ಟೆಗಳಿರುತ್ತಿದ್ದವು. ಇದರಲ್ಲಿ ಹೆಜ್ಜುಂಕ, ಕಿರುದೆರೆ, ಬಿಲ್ಕೊಡೆ, ಪನ್ನಾಯಗಳು ಪ್ರಮುಖವಾದವು.

ಒಂದನೆಯ ಅಮೋಘವರ್ಷನ ಸೊರಟೂರು ಶಾಸನವು (SII., vol XI, pt. I, No.12, 867-8 AD) ಕುಪ್ಪೆಯರಸನು ಪುರಿಗೆಱೆಯನ್ನು ಆಳುತ್ತಿರುವಾಗ ಸರಟಪುರ(ಸೊರಟೂರು) ಐವತ್ತೆರಡು ಮಹಾಜನರಿಗೆ ತುಪ್ಪದೆಱೆಯನ್ನು ನೀಡಿದ್ದನ್ನು ಉಲ್ಲೇಖಿಸುತ್ತದೆ. ಇದೇ ಅರಸನ ಗಾವರವಾಡ ಶಾಸನವು (SII., vol XI, Pt. I, No. 13, 869 AD) ಬೆಳ್ವೊಲ-೩೦೦ನ್ನು ದೇವಯ್ಯನು ಆಳುತ್ತಿದ್ದಾಗ ಅಲ್ಲಿನ ಬಲದೇವ,

ಗೋವಣ್ಣಯ್ಯ, ಚನ್ನಯ್ಯರು ವಡಿವಾಡದ ಐವತ್ತೆರಡು ಮಹಾಜನರ ಕಾಲನ್ನು ತೊಳೆದು ತುಪ್ಪದೆಱೆಯನ್ನು ದಾನವನ್ನಾಗಿ ನೀಡಿದ್ದನ್ನು ಉಲ್ಲೇಖಿಸುತ್ತದೆ. ನೃಪತುಂಗದೇವನ ಹೊಟ್ಟೂರು ಶಾಸನವು (ARSIE., 1944, No. BK 10) ಇದ್ದತಯ್ಯನು ಬನವಾಸಿ–೧೨೦೦೦ವನ್ನು ಆಳುತ್ತಿದ್ದಾಗ ತುಪ್ಪದ ಮೇಲೆ ತೆರಿಗೆಯನ್ನು ಹಾಕಿದ್ದನ್ನು ಉಲ್ಲೇಖಿಸುತ್ತದೆ.

## ನೀರಿನ ಮೇಲೆ ತೆರಿಗೆ

ನೀರಿನ ಮೇಲೆ ಕೂಡ ಕಂದಾಯವನ್ನು ವಿಧಿಸುತ್ತಿದ್ದರೆಂದು ಶಾಸನಗಳಿಂದ ತಿಳಿದು ಬರುತ್ತದೆ. ಮೂರನೆಯ ಕೃಷ್ಣನ ಕ್ರಿ. ಶ. ೯೫೬ ರ ತಿರುವಡನ್ ಡೈ (RITC., No. 32) ಶಾಸನವು ಕೆರೆಯ ಏರಿಯ ಮೇಲಿನ ನೀರ ಕಂದಾಯವನ್ನು ಮನ್ನಾಮಾಡಲು ಒಪ್ಪಿಕೊಂಡಿದ್ದನ್ನು ಉಲ್ಲೇಖಿಸುತ್ತದೆ. ಇದರಿಂದ ಕೆರೆಯ ಏರಿಯ ಮೇಲಿನ ನೀರಿಗೂ ಕಂದಾಯ ಕಟ್ಟಬೇಕೆಂಬ ಅಂಶವು ತಿಳಿದುಬರುತ್ತದೆ. ಇದೇ ಅರಸನ ಕ್ರಿ. ಶ. ೯೬೨ ರ ಉತ್ತೈರ್‌ಮೇರೂರ್ (RITC., No. 54) ಶಾಸನದಲ್ಲಿ ಹೊಲಗದ್ದೆಗಳಿಗೆ ಬಿಡುವ ನೀರಿನ ತೆರಿಗೆಯ ಹಣ, ನೀರಾವರಿಯ ನೀರಗಂಟಿಯು ನೀರ ಕಂದಾಯವನ್ನು ಮನ್ನಾಮಾಡಿದ್ದನ್ನು ಉಲ್ಲೇಖಿಸುತ್ತದೆ. ಇದರಿಂದ ಹೊಲಗದ್ದೆಗಳ ಮೇಲೆ ಬಿಡುವ ನೀರಿಗೂ ಕಂದಾಯ ಕಟ್ಟಬೇಕಿತ್ತೆಂದು ತಿಳಿದುಬರುತ್ತದೆ. ಇದೇ ದೊರೆಯ ಕ್ರಿ. ಶ. ೯೬೪ ರ ಕಾಪ್ಪಲೂರು ಶಾಸನವು (RITC., No. 73) ನೀರ ಕಂದಾಯವನ್ನು ವಸುಗೂರ ಸಭೆಯು ಬಂಡವಾಳವಾಗಿ ತೆಗೆದುಕೊಂಡಿತೆಂದು ವಿವರಿಸುತ್ತದೆ. ಮೂರನೆಯ ಕೃಷ್ಣನ (RITC., No. 96) ಪೋಲೂರು ಶಾಸನವು ಅನೇಕ ಬಗೆಯ ಕರಗಳನ್ನು ಇಱೈ, ತಿಱೈ, ಎಚ್ಚೊಱು, ವೆಟ್ಟಿ, ಆಮಞ್ಜ ಮತ್ತು ನೀರಿಲ್ಲೈ ಎಂದು ಹೆಸರಿಸುತ್ತದೆ. ಇದೇ ರಾಜನ ಪೋಲೂರು ಶಾಸನವು (RITC., No. 96) ಊರಿನ ಸಭೆಯು ೧೦೮೦ ಕುೞಿ ಭೂಮಿಯನ್ನು ವಿಕ್ರಯಿಸಿತು. ಆ ಭೂಮಿಯನ್ನು ಊರ ಮಧ್ಯದಲ್ಲಿರುವ ಮಂಟಪಕ್ಕೆ ಅಗತ್ಯವಾದ ನೀರು, ದೀಪವನ್ನು ಒದಗಿಸಲು, ಮುಖ್ಯವಾಗಿ ಬೇಸಿಗೆಯಲ್ಲಿ ನೀರು, ಚಳಿಗಾಲದಲ್ಲಿ ಸೌದೆ, ಮುಂತಾದವುಗಳನ್ನು ಖರೀದಿಸಲು ದಾನವಾಗಿ ನೀಡಲಾಯಿತು. ಸಭೆಯು ಈ ಹಣವನ್ನು ಸ್ವೀಕರಿಸಿ ಭೂಮಿಯನ್ನು ಅನೇಕ ಬಗೆಯ ತೆರಿಗೆಗಳಿಂದ ಮುಕ್ತಗೊಳಿಸಿತ್ತು. ಅದರಲ್ಲಿ "ನೀರಿಲ್ಲೈ" ಎಂಬ ತೆರಿಗೆಯು ನೀರಿನ ಮೇಲೆ

ಹಾಕುತ್ತಿದ್ದುದು ಎಂಬ ಅಂಶವು ತಿಳಿಯುತ್ತದೆ. ಕ್ರಿ.ಶ. ೯೬೫ ರ ಮೂರನೆಯ ಕೃಷ್ಣನ ಚಿಂತಾಮಣಿ ಶಾಸನದಲ್ಲಿ (RITC., no. 80) ದೇವಾಲಯದ ಪರೆಕಾರನಿಗೆ (ವಾದ್ಯಬಾರಿಸುವವನು) ಪ್ರತಿಫಲವನ್ನು ನೀಡಲು ಮೀನು ಹಿಡಿಯುವುದರ ಮೇಲಿನ ಸುಂಕದಿಂದ ಬರುವ ಹಣವನ್ನು ಉಪಯೋಗಿಸಬೇಕೆಂದು ಊರಸಭೆಯು ನಿರ್ಧರಿಸುದುದನ್ನು ದಾಖಲಿಸುತ್ತದೆ. ಇದರಿಂದ ಮೀನುಗಾರಿಕೆಯ ಮೇಲೆ ಕೂಡ ತೆರಿಗೆ ವಿಧಿಸುತ್ತಿದ್ದರು ಎನ್ನುವ ವಿವರವಲ್ಲದೇ ಮೀನುಗಾರ ವೃತ್ತಿ ಮತ್ತು ಮೀನುಗಾರಿಕೆಯು ವ್ಯಾಪಕವಾಗಿತ್ತು ಎಂಬ ವಿಚಾರವು ತಿಳಿದುಬರುತ್ತದೆ.

ಖರೀದಿಸಿ ದಾನ

ದಾನ ನೀಡುವ ಉದ್ದೇಶದಿಂದಲೇ ಭೂಮಿಯನ್ನು ಖರೀದಿಸಿ ನಂತರ ದಾನ ನೀಡಿರುವ ಉಲ್ಲೆಖಗಳು ಹಲವಾರಿವೆ. ಮೂರನೆಯ ಕೃಷ್ಣನ ಕೀಱೂರು ಶಾಸನದಲ್ಲಿ (RITC., No. 38, 960 AD) ವೈದುಂಬ ದೊರೆ ಶನ್ದಯನ್ ತಿರುವಯನ್ ಎಂಬುವವನು ಹಲವು ತುಕಡಿ ಭೂಮಿಯನ್ನು ಖರೀದಿಸಿ ದತ್ತಿಬಿಟ್ಟನು. ಆ ಭೂಮಿಯನ್ನು ಕರರಹಿತವಾಗಿ ಮಾಡಲು ಸುವರ್ಣವನ್ನು ಕೊಡಲಾಯಿತೆಂದು ದಾಖಲಿಸುತ್ತದೆ. ಅದೇ ಶಾಸನದಲ್ಲಿ ಚೊತ್ತಿರದೇವಿಯು ಕಡಮ್ಬನ್ ಮತ್ತು ಉತ್ತಿರನ್ ಎಂಬುವವರಿಂದ ಭೂಮಿಯನ್ನು ಖರೀದಿಸಿ ಉವಚ್ಚಕಲನ್ (ಉಪಾಧ್ಯಾಯರ ವ್ಯವಸ್ಥೆಗೆ) ಎಂಬ ವ್ಯವಸ್ಥೆಗೆ ನೀಡಿದ್ದನ್ನು ಉಲ್ಲೇಖಿಸುತ್ತದೆ. ಮೂರನೆಯ ಕೃಷ್ಣನ ಕಾಪ್ಪಲೂರು ಶಾಸನದಲ್ಲಿ (RITC., No. 71, 964 AD) ೨೦೦೦ ಕುಱಿ ಭೂಮಿಯನ್ನು ವಿಶೇಷ ಸೇವೆ ಮಾಡುವ ಬ್ರಾಹ್ಮಣರಿಗೆ ದತ್ತಿಯಾಗಿತ್ತರು. ದತ್ತಿ ನೀಡಿದ ಆ ಭೂಮಿಯನ್ನು ಹಣ ಕೊಟ್ಟು ಖರೀದಿಸಿ ಕಂದಾಯದ ಹಣವನ್ನು ನೀಡಿ ಕರರಹಿತವಾಗಿ ಮಾಡಿಸಿದರು. ಇದೇ ಅರಸನ ಬಾಹೂರು ಶಾಸನದಲ್ಲಿ (RITC., No. 87, 966 AD) ೧೭ ಚೆಱುವು ಭೂಮಿಯನ್ನಿ ಖರೀದಿಸಿ ಹಣಕೊಟ್ಟು ಕಂದಾಯರಹಿತವಾಗಿಸಿ ಆ ಭೂಮಿಯಿಂದ ಬಂದ ಬೆಳೆಯ ಆದಾಯದಲ್ಲಿ ಬ್ರಾಹ್ಮಣರಿಗಾಗಿ ವಿನಿಯೋಗಿಸಿದ್ದುದ್ದನ್ನು ದಾಖಲಿಸುತ್ತದೆ.

ಕೀಱೂರು ಶಾಸನದಲ್ಲಿ (RITC., No. 45, 961 AD) ೨೦ ಕಲಮ್ ಧಾನ್ಯವನ್ನು ಬಡ್ಡಿಯ ಹಣಕ್ಕೆ, ಪ್ರತಿ ಕಱಞ್ಜುವಿಗೆ ಒಂದು ಕಲಮ್ ದರದಲ್ಲಿ

ಪೆರಿಳಮ್ಮೆ ಬೆಲೆಯಲ್ಲಿ ಭತ್ತವನ್ನು ಅಕ್ಕಿಯಾಗಿ ಮಾಡುವುದಕ್ಕೆ ಮತ್ತು ತಲುಪಿಸುವುದಕ್ಕೆ ಒಪ್ಪಿಕೊಂಡರೆಂದು ಉಲ್ಲೇಖಿಸುತ್ತದೆ. ಇದರಿಂದ ಪ್ರತಿಯೊಂದು ವ್ಯವಹಾರಕ್ಕೂ ಅಥವಾ ಹಣಕ್ಕೆ ಶೇಕಡ ಎನ್ನುವ ರೀತಿಯಲ್ಲಿ ದರ ಎಂದು ಕರೆದು ಬಡ್ಡಿ ವಸೂಲು ಮಾಡುತ್ತಿರಬಹುದೇ? ಎನ್ನುವ ಅನುಮಾನ ಬರುತ್ತದೆ. ಇದೇ ಅರಸನ ಉಕ್ಕಲ್‌ನ ಶಾಸನದಲ್ಲಿ (SII., Vol III, No. 7, p12, 955 AD) ಎಲ್ಲರಿಗೂ ಸಂಬಂಧಿಸಿದ ಭೂಮಿಯನ್ನು ಮಾರುವ ಹಕ್ಕು ಸಭೆಗಿದೆ ಎನ್ನುವ ಮೂಲಕ ಅದಕ್ಕಿರುವ ಅಧಿಕಾರವನ್ನು ಸ್ಪಷ್ಟಪಡಿಸುತ್ತದೆ. ವಿರೋಧಿಸುವವರ ಮೇಲೆ ದಂಡ ವಿಧಿಸುವ ಬಗ್ಗೆಯೂ ಉಲ್ಲೇಖಿಸಿದೆ. ಇದೇ ಅರಸನ ಕಾಪ್ಪಲೂರು ಶಾಸನದಲ್ಲಿ (RITC., No. 73, 964 AD) ದಾನವಾಗಿ ಬಂದ ಭೂಮಿ ಕಂದಾಯ ಮತ್ತು ನೀರ್ಗಂದಾಯದ ಹಣವನ್ನು ಬಂಡವಾಳವಾಗಿ ಸ್ವೀಕರಿಸಿತು. ಧಾರಾವರ್ಷ ಧ್ರುವನ ಮಗ ರಣಾವಲೋಕ ಕಂಬಯ್ಯರಸನು ಗಂಗಮಂಡಲವನ್ನು ಆಳುತ್ತಿದ್ದನು. ಅರಸನು ತೇತ್ತಾಮಿಗೂಡಲ್ ಗ್ರಾಮದಲ್ಲಿ ಬೀಡು ಬಿಟ್ಟಿದ್ದಾಗ ಮಾಧವ ಅಥವಾ ಬ್ರಹ್ಮವೀರ ವಲ್ಲಭನೆಂಬ ಬ್ರಾಹ್ಮಣನಿಗೆ ಗೊಟ್ಟೆಮಡಿ ಗ್ರಾಮವನ್ನು ದಾನವಾಗಿ ನೀಡಿದನು. ಆತ ಅದನ್ನು ತಲವನಪುರದ ರಾಜಶಾಲೆಗೆ ದೇಣಿಗೆಯಾಗಿ ನೀಡಿದನೆಂದು ಉಲ್ಲೇಖಿಸಿದೆ. (ARIE., 1968-69, 782 AD)

ಆಯಂ ಎನ್ನುವುದು ಸಣ್ಣಪುಟ್ಟ ತೆರಿಗೆಗಳನ್ನು ಸೂಚಿಸುತ್ತದೆ. ಏರಕ್ಕಾಡಿ ಎಂಬ ಹಲದಕರ, ತಲೈಯರೈ, ಆಣೆಲ್ಲು (ಪಶುಗಂದಾಯ), ತಿಜ್ಗಟಚೋರು ಎಂಬ ಊಟದ ವ್ಯವಸ್ಥೆಯ ಹಣ ಮುಂತಾದವುಗಳನ್ನು ಹೆಸರಿಸುತ್ತದೆ. ಒಂದನೆಯ ಅಮೋಘವರ್ಷನ ರಾಮದುರ್ಗ ಶಾಸನವು (SII., vol IX, Pt. I, No. 54, 962 AD) ಮಾಯಿಲದಱಿ, ಬಾಲವಣ, ಸಿದ್ಧಾಯ, ಮುಂತಾದವುಗಳನ್ನು ಶಾಶ್ವತವಾಗಿ ಬಿಟ್ಟನೆಂಬ ಉಲ್ಲೇಖವಿದೆ. ಮೂರನೆಯ ಕೃಷ್ಣನ ಕೂರಮ್ ಶಾಸನದಲ್ಲಿ (RITC., No. 6, 954 AD) ಆಹಾರದಾನಕ್ಕೆ ದತ್ತಿಯನ್ನು ನೀಡಿದ ಅಶಿರಿಯನ್ ಆದಿಯಣ್ಣನು, ದೇವಾಲಯದ ಭಟ್ಟಶಿವ ಎಂಬ ಇನ್ನೊಬ್ಬ ಬ್ರಾಹ್ಮಣನೊಂದಿಗೆ ಒಪ್ಪಂದವನ್ನು ಮಾಡಿಕೊಂಡಿದ್ದನ್ನು ಉಲ್ಲೇಖಿಸುತ್ತದೆ. ಇದೇ ಅರಸನ ಬಾಹೂರು ಶಾಸನದಲ್ಲಿ (RITC., No. 83, 966AD) ಒಪ್ಪಂದ ಮಾಡಿಕೊಂಡು ೨೦ ಚೆಱುವು ಭೂಮಿಯನ್ನು

ಕರರಹಿತವಾಗಿ ಮಾಡಿಕೊಂಡರೆಂದು ಉಲ್ಲೇಖವಿದೆ. ಇದೇ ಅರಸನ ಕಟಿತ್ತೂರು ಶಾಸನದಲ್ಲಿ (RITC., No. 95, 967 AD) ೨೫ ಕಟಿಇಞ್ಜು ದಾನದತ್ತಿಯನ್ನು ನೀಡಿದ್ದನ್ನು ಸ್ವೀಕರಿಸಿ ನಂದಾದೀಪವನ್ನು ತಪ್ಪದೇ ಉರಿಸುವುದಾಗಿ ಒಪ್ಪಿಕೊಂಡರು. ಹಾಗೇನಾದರೂ ತಪ್ಪಿದರೆ, ದೀಪಕ್ಕೆ ಎರಡು ಪಟ್ಟು ತಪ್ಪು ದಂಡ, ಆ ತಪ್ಪಿಗೆ ತಕ್ಕ ಶಿಕ್ಷೆ, ದಂಡರೂಪದ ಪಾಪಗಳನ್ನೆಲ್ಲ ಅನುಭವಿಸುವುದಕ್ಕೆ ಒಪ್ಪಿಕೊಂಡಿದ್ದೇವೆಂದು ಕರಾರುಪತ್ರದ ಮುಲಕ ಸ್ಥಿರಪಡಿಸಿಕೊಂಡರು. ಇದಕ್ಕೆ ಸಾಕ್ಷಿಗಳು ಹಸ್ತಾಕ್ಷರವನ್ನೂ ಹಾಕಿದ್ದಾರೆ.

ಕ್ರಿ.ಶ. ೯೧೮ ರ ದಂಡಾಪುರ ಶಾಸನದಲ್ಲಿ (SII., vol XVIII, No. 25) ಪ್ರಭೂತವರ್ಷನ ಆಳ್ವಿಕೆಯಲ್ಲಿ ಪನ್ನಿರ್ಮತ್ತರು ಮಾನ್ಯ ಕೊಡಬೇಕೆಂದು ಹೇಳಿ ಧೋರನ ಹೇಳಿಕೆಯಂತೆ ನನ್ನವೆಡಂಗನು ಕೊಟ್ಟುದ್ದನ್ನು ದಾಖಲಿಸುತ್ತದೆ. ಇದೇ ಸಾಸನದಲ್ಲಿ ಹಿರಣ್ಯಾಯದ ಹಣವನ್ನು ಪೆರ್ಗೆರೆಗೆ ಆಯವೆಂದು ಬ್ರಾಹ್ಮಣರು ನೀಡಿದ್ದನ್ನು ದಾಖಲಿಸುತ್ತದೆ. ಮೂರನೆಯ ಕೃಷ್ಣನ ಬಾಗಳಿ ಶಾಸನದಲ್ಲಿ (SII., vol IX, Pt. I, No.68, 956 AD) ಸಂಕ್ರಾಂತಿಯಂದು ಬಾಳ್ಗುಳಿಗೆ ಸಂಬಂಧಿಸಿದ ರಾಜದ್ರವ್ಯವನ್ನೆಲ್ಲ ಬಿಟ್ಟರೆಂದು ಉಲ್ಲೇಖಿಸುತ್ತದೆ. ಇದೇ ಅರಸನ ಕಟಿತ್ತೂರು ಶಾಸನದಲ್ಲಿ (RITC., No.95, 967 AD) ತಾವು ಒಪ್ಪಿಕೊಂಡ ಕೆಲಸವನ್ನು ಮಾಡದ ತಪ್ಪಿಗೆ ಶಿಕ್ಷೆ ಅನುಭವಿಸುತ್ತೇವೆಂದು ಕರಾರು ಪತ್ರ ಬರೆದುಕೊಟ್ಟಿದ್ದನ್ನು ದಾಖಲಿಸುತ್ತದೆ. ಇದೇ ಅರಸನ ಉತ್ತೈರ್‌ಮೇರೂರ್ ಶಾಸನದಲ್ಲಿ (RITC., No. 75, 964 AD) ಸಭೆಯು ಅಧಿಕಾರಿಯೇ ಆದರೂ ತಪ್ಪು ಮಾಡಿದವರ ಮೇಲೆ ದಂಡ ವಿಧಿಸುತ್ತಿತ್ತು, ಹಿಂಜರಿಯುತ್ತಿರಲಿಲ್ಲ ಎಂಬುದನ್ನು ಉಲ್ಲೇಖಿಸುತ್ತದೆ.

ಮೂರನೆಯ ಗೋವಿಂದ ಮುದಿಗೆರೆ ಶಾಸನದಲ್ಲಿ (MAR., 1942, No. 47, p 175) ಪ್ರಭುತುಜ್ಗಮಾಳನಿಗೆ ಸರ್ವ ಪರಿಹಾರವನ್ನು ಮಾಡಿಕೊಟ್ಟರು. ಆಱುಗದ್ಯಾಣ, ಹನ್ನೆರಡು ಗದ್ಯಾಣ ದಂಡ ಎಲ್ಲವನ್ನು ಪರಿಹಾರ ಮಾಡಿತ್ತೆಂದು ಉಲ್ಲೇಖಿಸಿದೆ. ಒಂದನೆಯ ಅಮೋಘವರ್ಷನ ಸೊರಟೂರು ಶಾಸನದಲ್ಲಿ (SII., vol XI, Pt. I, No. 12, 867-8 AD) ತುಪ್ಪದೆಱೆಯನ್ನು ಬಿಟ್ಟಿದ್ದನ್ನು ಉಲ್ಲೇಖಿಸಿದೆ. ಅದೇ ಶಾಸನದಲ್ಲಿ ಎರಡು ಕೊಯಿಲು ಪರಿಹಾರ ಕೊಟ್ಟಿದ್ದನ್ನು ಉಲ್ಲೇಖಿಸುತ್ತದೆ. ಹಾಳುಮಾಡಿದವರು

ಭೂಮಿಗೆ ಹನ್ನೆರಡು ವರ್ಷ ಪರಿಹಾರವಾಗಿ ಎರಡು ಮತ್ತರಿಗೆ ಒಂದು ದ್ರಮ್ಮ ಎರಡೂ ನೀಡಬೇಕೆಂದು ಉಲ್ಲೇಖಿಸುತ್ತದೆ. ಮೂರನೆಯ ಕೃಷ್ಣನ ನೇಮಲಿ ಶಾಸನದಲ್ಲಿ (RITC., No. 90, 967 AD) ಸಹಸ್ರ ಕುಚಿ ಭೂಮಿಯನ್ನು ನೂರು ಬಿನ್ನಂ ಕೀಱೇರಿಯ ಕೆಳಗೆ, ೧೭೦ ನೆಡುಮವಣ್ಣೈಚ್ಚೇರಿಯ ಕೆಳಗೆ ಇದ್ದುದ್ದನ್ನು ದತ್ತಿಯಾಗಿ ನೀಡಿದಾಗ, ಸಭೆಯು ಅದನ್ನು ಸರ್ವಭಾದಾಪರಿಹಾರ ಮಾಡಿತು. ಅಕಾಲವರ್ಷದೇವನ ಕೊಳಗಲ್ಲು ಶಾಸನದಲ್ಲಿ (ಹಂ.ಕ.ವಿ.ವಿ., ಬಳ್ಳಾರಿ ಸಂ. ನಂ. ೫೨, ಕ್ರಿ.ಶ.೯೬೬) ಶತರಾಸಿ ಭಬಾರರ ಕಾಲನ್ನು ತೊಳೆದು ವಿದ್ಯಾದಾನ ಸತ್ರಕ್ಕಾಗಿ ಮಠಕ್ಕೆ ದಾನ ನೀಡಿದರು. ಚಂಗಗಾವುಂಡನು ನೀಡಿದ ಮೂವತ್ತು ಮತ್ತರು ಭೂಮಿ, ಒಂದು ತೋಟ, ಒಂದು ಗಾಣವನ್ನು ಸರ್ವಮಾನ್ಯವಾಗಿ ಬಿಟ್ಟಿತು. ಅಕಾಲವರ್ಷನ ಕಲ್ಲುಕಂಭದ ಹಾಳು ಶಾಸನದಲ್ಲಿ (EC., vol XI, No. Hk 23, 969 AD) ಸಿಡಿಲೇಶ್ವರ ದೇವರಿಗೆ ಸೂದ್ರಕಯ್ಯನು ನಮಸ್ಕರಿಸಿ, ಸಿಡಿಲಯ್ಯನ ಕಾಲನ್ನು ತೊಳೆದು, ಕೂರವಾಡಿ ಮುನ್ನೂರರ ಬಳಿಯ ಲೋಕಾಯ್ತವೊಱಲು ಗುಣ್ಡೆಯಲ್ಲಿ ಇಪ್ಪತ್ನಾಲ್ಕು ಮತ್ತರು ಭೂಮಿ, ಮೊದಲೇರಿಯಲ್ಲಿ ಸಾವಿರ ಬಳ್ಳಿಯ ತೋಟ, ಎರಡು ಗಾಣ, ದೇವಾಲಯದ ಮುಂದೆ ನಲ್ವತ್ತು ಮನೆಯ ನಿವೇಶನಗಳನ್ನು ಕೊಟ್ಟನು. ಸಾಯಿರನಾಡ ಪ್ರಭುಗಳು ಐವತ್ತೆಂಟು ಅಗ್ರಹಾರದವರು ಇದನ್ನು ಸರ್ವಬಾಧಾ ಪರಿಹಾರವಾಗಿಸಿ ಕೊಟ್ಟರು. ಮೂರನೆಯ ಕೃಷ್ಣನ ಕುರಂಗಣಿಮಟ್ಟಮ್ ಶಾಸನದಲ್ಲಿ (RITC., No. 67, 963 AD) ದೇವರ ಮೂರು ಹೊತ್ತಿನ ನೈವೇದ್ಯಕ್ಕೆ ಒಂಬತ್ತೂವರೆ ಮಾ. ಭೂಮಿದಾನ ಮಾಡಿದಾಗ ಅದಕ್ಕೆ ಕಂದಾಯ, ನೀರ್ಗ್ಗಂದಾಯಗಳನ್ನು ಮನ್ನಾ ಮಾಡಿತು. ಆಡನೂರು ಶಾಸನದಲ್ಲಿ (EC., vol XI, No. Hk 30, 964 AD) ಲೋಕಯ್ಯನು ಉಮಾಮಹೇಶ್ವರನನ್ನು ಪ್ರತಿಷ್ಠಾಪಿಸಿ ಅಮೃತರಾಸಿ, ಭಟಾರರಿಗೆ ತೋಟ, ಭೂಮಿದಾನ ಮಾಡಿದರು. ಈ ದಾನವನ್ನು ಸರ್ವಪರಿಹಾರಗಳಿಂದ ಮುಕ್ತಗೊಳಿಸಿ ನೀಡಲಾಯಿತು.

ಮೂರನೆಯ ಕೃಷ್ಣನ ಕಾಪ್ಪಲೂರು ಶಾಸನವು (RITC., No. 73, 964 AD) ಅಙ್ಙಣ್ಡಿ ಇಳೈಯ ಶಾವಾದಿರನ್ ಎಂಬುವವನು ಕಾಮಪುಲ್ಲೂರಿನ ಮಧ್ಯದ ಮಂಟಪದಲ್ಲಿ ದಿನವೂ ಎರಡು ದೀಪಗಳನ್ನು ಬೆಳಗಲು ಅರ್ಧವೇಳಿ ಭೂಮಿಯನ್ನು ನೀಡಿದನೆಂದಿದೆ. ಇದರ ಕಂದಾಯ ಮತ್ತು ನೀರ್ಗಂದಾಯಗಳನ್ನು ಬಂಡವಾಳವಾಗಿ

ಪಡೆಯಿತು. ಮೂರನೆಯ ಕೃಷ್ಣನ ವ್ಯಾಶೂರು ಶಾಸನದಲ್ಲಿ (RITC., No. 5, 953 AD) ೫೦೦ ಕುೞಿ ಭೂಮಿಯು ಮಾರಾಟವಾಗಿದ್ದನ್ನು ಉಲ್ಲೇಖಿಸುತ್ತದೆ. ಮಾರಾಟಕ್ಕೆ ಮೊದಲು ಅದರ ಕ್ರಯ ಮತ್ತು ಕಂದಾಯವನ್ನು ವಸುಗೂರ ಸಭೆಯು ಪಡೆದಿತ್ತು ಎಂದು ಉಲ್ಲೇಖಿಸುತ್ತದೆ. ಇದೇ ಅರಸನ ಪೊನ್ನೂರು ಶಾಸನದಲ್ಲಿ (RITC., No. 15, 956 AD) ಅಮ್ಮದೇವಿಯೆಂಬ ಮಹಿಳೆ ನಾಲ್ಕು ಚೆಯ್ ಎಂದರೆ ಸುಮಾರು ೧೦೦೦ ಕುೞಿಯಷ್ಟು ಭೂಮಿಯನ್ನು ಪೊನ್ನೂರಿನ ಪರಮೇಶ್ವರ ದೇವರ ಅಮೃತಪಡಿ ನೈವೇದ್ಯಕ್ಕೆ ದತ್ತಿಯಾಗಿ ನೀಡಿದಳು. ಭೂಮಿಯನ್ನು ಖರೀದಿಸಿ ೪೦ ಕೞಂಜು ಕಂದಾಯವನ್ನು ರದ್ದು ಮಾಡಿಸಿ ಅದನ್ನು ಬಾಧಾಪರಿಹಾರವಾಗಿಸಿ ನೀಡಿದಳು. ಈ ಭೂಮಿಗೆ ಅಮ್ಮದೇವಿ ಪಟ್ಟಿ ಎಂದೇ ಹೆಸರಿಟ್ಟರು. ಇದೇ ಅರಸನ ಬಾಹೂರು ಶಾಸನದಲ್ಲಿ (RITC., No. 87, 966 AD) ೧೭ ಚೆಱುವು ಭೂಮಿಯನ್ನು ಊರಸಭೆಯಿಂದ ಖರೀದಿಸಿ ಅದನ್ನು ಕರರಹಿತವನ್ನಾಗಿ ಮಾಡಿಸಿಕೊಟ್ಟರು. ಈ ಭೂಮಿಯನ್ನು ಖರೀದಿಸಲು ಸಮಿತಿಯ ಸದಸ್ಯನಾದ ಗೋವಿಂದ ಚೋಮಾಶಿಯರ ಮಗ ಮದಿಶೂದಕ್ರಮವಿತ್ತನ್ ನಿಂದ ಹಣವನ್ನು ಪಡೆದರು. ಹಣವನ್ನು ಹಿಂದಿರುಗಿಸುವ ಬದಲು ಆತನಿಗೆ ದಿನಕ್ಕೆ ಎರಡು ಹೊತ್ತು ಊಟ ಹಾಕುವಂತೆ ಒಪ್ಪಂದ ಮಾಡಿಕೊಂಡರು. ಬೆಳೆಯ ಆದಾಯದಲ್ಲಿ ಆತನ ಊಟದ ಖರ್ಚನ್ನು ಬಿಟ್ಟು ಉಳಿದ ಹಣವನ್ನು ಬ್ರಾಹ್ಮಣರಿಗಾಗಿಯೇ ಖರ್ಚು ಮಾಡಿದ್ದನ್ನು ಈ ಶಾಸನವು ಉಲ್ಲೇಖಿಸಿದೆ.

ಇದೇ ಅರಸನ ಬಾಹೂರು ಶಾಸನದಲ್ಲಿ (RITC., No. 83, 966 AD) ೨೦ ಚೆಱುವು ಭೂಮಿಯನ್ನು ಖರೀದಿಸಿ ವೇದಪಾರಂಗತರಾದ ಬ್ರಾಹ್ಮಣರಿಂದ ನೆಲ್ಲಿಪಟ್ಟಂ ಅಭಿಷೇಕ ಮತ್ತು ಇನ್ನಿತರ ಕೈಂಕರ್ಯಗಳು ನಡೆಯಲೆಂದು ದಾನವಾಗಿತ್ತರು. ಈ ಭೂಮಿಗೆ ಒಪ್ಪಂದದಂತೆ ಕಂದಾಯ ಮನ್ನಾ ಮಾಡಲಾಯಿತು. ಈ ಒಪ್ಪಂದವನ್ನು ವಿರೊಧಿಸುವವರು ೨೫ ಕೞಂಜು ಸುವರ್ಣವನ್ನು ಸಲ್ಲಿಸಬೇಕೆಂಬ ನಿರ್ಬಂಧವಿತ್ತು. ಆದರೆ ಆ ದಂಡವನ್ನು ಸಂಬಂಧಿಸಿದ ಅಧಿಕಾರಿಗೆ ಧನುರ್ಮಾಸದಲ್ಲಿ ಇಲ್ಲದಿದ್ದರೆ ಅನುಕೂಲವಾದ ಸಮಯದಲ್ಲಿ ನೀಡಬಹುದೆಂಬ ವ್ಯವಸ್ಥೆಯಿತ್ತು.

ಕಿರುದೆರೆ

ಕಾಲದ ಉಲ್ಲೇಖವಿಲ್ಲದ ಒಂದನೆಯ ಅಮೋಘವರ್ಷನ ಶಿಗ್ಗಾಂವ್ (EI., vol XXXV, p 85) ಶಾಸನದಲ್ಲಿ ಊರಗಾವುಂಡನಾದ ಕಲ್ಲಮನ ಕೋರಿಕೆಯ ಮೇರೆಗೆ ಸಿಗ್ಗಾಮೆಯ ಕಲ್ಲವಳ್ಳವನ್ನು ಕಲ್ನೆಱೆತಿ ಭಟ್ಟಾರರು ಮತ್ತು ಲೋಕಾಕ್ಷರ ಭಟಾರರಿಗೆ ಕೊಟ್ಟನು. ಕುಪ್ಪೆಯರಸನು ಕಿಱುದೆರೆಗಳಲ್ಲೆವನ್ನೂ ಬಿಟ್ಟನೆಂದು ದಾಖಲಿಸುತ್ತದೆ. ಮೂರನೆಯ ಕೃಷ್ಣನ ನರೇಗಲ್ ಶಾಸನವು (SII., vol XI, Pt. I, No. 38, 950 AD) ಕೊಂಡಕುಂದಾನ್ವಯ, ದೇಸಿಗಗಣದ ಮಹೇಂದ್ರಪಂಡಿತರ ಶಿಷ್ಯ ವೀರಣಂದಿ ಪಂಡಿತರ ಶಿಷ್ಯ, ಗುಣಚಂದ್ರ ಪಂಡಿತರ ಕಾಲನ್ನು ತೊಳೆದು ಕೆರೆಯನ್ನು ನೀಡಿದ್ದನ್ನು ಉಲ್ಲೇಖಿಸುತ್ತದೆ. ಕಿರುತೆರಿಗೆ ಒಂದು ಗದ್ಯಾಣವರುವಣವೆಂದು ಉಲ್ಲೇಖಿಸುತ್ತದೆ. ಇದೇ ಅರಸನ ನರಸಲಗೀ ಶಾಸನವು (SII., vol XI, Pt. I, No. 40, 965 AD) ದಂಡಾಯವೆಂಬ ತೆರಿಗೆಯನ್ನು ಉಲ್ಲೇಖಿಸುತ್ತದೆ. ಶಾಸನದಲ್ಲಿ ವಿವರವಿರುವ ಭಾಗವು ಹಾಳಾಗಿರುವುದರಿಂದ ಹೆಚ್ಚಿನ ಮಾಹಿತಿ ಸಿಗುವುದಿಲ್ಲ.

ಕುಟುಂಬದೆರೆಯ ಉಲ್ಲೇಖ ಶಾಸನದಲ್ಲಿದೆ (MAR-1933, p236). ಇದು ಕುಟುಂಬದ ಮೇಲೆ ಹಾಕುತ್ತಿದ್ದ ತೆರಿಗೆ ಎನ್ನಬಹುದು. ಒಂದನೆಯ ಅಮೋಘವರ್ಷನ ರಾಮದುರ್ಗಾ ಶಾಸನದಲ್ಲಿ (SII., vol IX, Pt. I, No.54, C 9th Century) ಸಿದ್ಧಾಯ, ಬಾಲವಣ, ಆಯಿಲದೆರೆಗಳ ಉಲ್ಲೇಖವಿದೆ.

**ಆಯಿಲದೆಱೆ**: ಕ್ರಿ.ಶ. ಸುಮಾರು ೮೬೦ರ ಶಾಸನದಲ್ಲಿ ಆಯಿಲದೆಱೆಯ ಉಲ್ಲೇಖವಿದೆ (SII, Vol IX, Part I, p54). ಇದರ ಅರ್ಥ ಸ್ಪಷ್ಟವಾಗಿಲ್ಲ. ಇವಿಷ್ಟೇ ಅಲ್ಲದೇ **ಕಾಱುದೆಱೆ** (EC Vol IX, p161: 913 AD), **ಅಡ್ಡದೆಱೆ** (EC Vol. IX Cp, p161: 913AD), ಅಱುವಣಗಳ ಉಲ್ಲೇಖವಿದ್ದು ವಿವರಗಳು ಲಭ್ಯವಿಲ್ಲ.

**ಅಟ್ಟದೆಱೆ**: (EC Vol. III Mi, p30: 909AD) ಮಹಡಿಮನೆಗಳಿಗೆ ವಿಧಿಸುತ್ತಿದ್ದ ತೆರಿಗೆ.

**ತುಪ್ಪದೆಱೆ**: (EC Vol. VIII, Sb, p83: 941AD) ತುಪ್ಪದ ಮೇಲೆ ಹಾಕುತ್ತಿದ್ದ ತೆರಿಗೆ.

ಬಾಲವಣ: ಬಹುಶಃ ಪ್ರಾಣಿಗಳ ಮೇಲೆ ಹಾಕುತ್ತಿದ್ದ ತೆರಿಗೆ. (SII, Vol. IX, Part i, p5) ಕ್ರಿ.ಶ. ಸುಮಾರು ೮೬೦ರ ಶಾಸನದಲ್ಲಿ ಬಾಲವಣದ ಉಲ್ಲೇಖವಿದೆ.

**ಪುದುವಟ್ಟು**

ಮೂರನೆಯ ಕೃಷ್ಣನ ಉತ್ತಿರಮೇರೂರು ಶಾಸನದಲ್ಲಿ (RITC., No. 20, 957 AD) ನಜ್ಗಿಚ್ಚಾನಿಯೆಂಬ ಸ್ತ್ರೀಯು ತನ್ನ ಅವಸಾನ ಕಾಲದಲ್ಲಿ ದಾನವನ್ನು ನೀಡಿದಳು. ಆ ಪುದುವಟ್ಟಿನ ಹಣದಿಂದ ದೇವರ ದೀಪ ಬೆಳಗುವುದಕ್ಕೆ ಎಣ್ಣೆಯನ್ನು ಅಂದಾಜು ಮಾಡಿ, ಆ ಹಣವನ್ನು ನಿಗದಿಗೊಳಿಸಿತೆಂದು ಉಲ್ಲೇಖಿಸುತ್ತದೆ. ಇದೇ ಅರಸನ ಜಮ್ಬೈ ಶಾಸನದಲ್ಲಿ (RITC., No. 62, 963 AD) ತಿರುತ್ತಾನ್ತೋಱಿ ಪೆರುಮಾಳ್ ದೇವಾಲಯದಲ್ಲಿ ನಂದಾದೀಪವನ್ನು ಉರಿಸಲು ವಡುಗನ್ ಕಾಳೈಯಾನ್ ಅಚ್ಚನ್ ಎಂಬ ವ್ಯಕ್ತಿಯು ಹತ್ತು ಕಟಿಞ್ಜ ಸುವರ್ಣ ನಾಣ್ಯಗಳನ್ನು ಪುದುವಟ್ಟಾಗಿ ಇಟ್ಟನೆಂದು ಉಲ್ಲೇಖಿಸಲಾಗಿದೆ. ಇದೇ ದೊರೆಯ ಪುಡುಪ್ಪಾಳೈಯಮ್ ಶಾಸನದಲ್ಲಿ (RITC., No. 78, 965 AD) ಒಂದನೆಯ ಪರಾಂತಕನ ಅಧಿಕಾರಿಯಾಗಿದ್ದ ಪರಮೈಯನ್ ಎಂಬುವವನು ಗಣಪತಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿ ದೇವರಿಗೆ ನಂದಾದೀಪ ಉರಿಸಲು ಹತ್ತು ಪೊನ್ನು ಹಣವನ್ನು ಪುದುವಟ್ಟಾಗಿಟ್ಟನೆಂದು ದಾಖಲಿಸುತ್ತದೆ.

**ಬಡ್ಡಿ**

ಮೂರನೆಯ ಕೃಷ್ಣನ ಬ್ರಹ್ಮದೇಶಮ್ (RITC., No. 217, 956 AD) ಶಾಸನದಲ್ಲಿ ಗಿರಿನಾಪಿಕನ್ನಯ್ಯನು ಪೊನ್ದೈಪೆರುಮಾನಡಿ ದೇವರಿಗೆ ನಂದಾದೀಪಕ್ಕಾಗಿ ೨೧ ಏಡಾರಪುರಂ ಕಟಿಞ್ಜುಗಳನ್ನು (ಸುವರ್ಣ ನಾಣ್ಯ) ದಾನ ಮಾಡಿ ಹಣವನ್ನು ಪುದುವಟ್ಟಾಗಿ ಇಟ್ಟು ಅದರ ಬಡ್ಡಿಯ ಹಣದಲ್ಲಿ ನಂದಾದೀಪವನ್ನು ಉರಿಸಲು ಒಪ್ಪಿದರೆಂದು ತಿಳಿದುಬರುತ್ತದೆ. ದೇವಾಲಯದ ಭಂಡಾರದಿಂದ ನಲವತ್ತು ಸುವರ್ಣ ಕಟಿಞ್ಜುಗಳನ್ನು ಆ ಊರಿನ ಒರೆಗಟ್ಟಿಗೆ ಬರೆದು ಸ್ವೀಕರಿಸಿದುದನ್ನು ಉಲ್ಲೇಖಿಸುತ್ತದೆ. ಅದಕ್ಕೆ ಪ್ರತಿಯಾಗಿ ನಲವತ್ತು ಕಲಂ ಶುದ್ಧ ಮಾಡಿದ ಭತ್ತವನ್ನು ಬಡ್ಡಿಯ ರೂಪದಲ್ಲಿ ಕೊಟ್ಟಿತಲ್ಲದೇ, ಭತ್ತವನ್ನು ಸಂಗ್ರಹಿಸಲು ಬರುವ ವ್ಯಕ್ತಿಗೆ ಊಟೋಪಚಾರವನ್ನು ಒದಗಿಸಲು ಒಪ್ಪಿತೆಂದು ತಿಳಿಸುತ್ತದೆ. (RITC., No. 16, 957 AD). ತಿರುವಱಿಯೂರ್ ಶಾಸನದಲ್ಲಿ (RITC., No. 18, 957 AD) ವಲ್ಲಭರಾಯನ

ವ್ಯಾಪಾರಿ ಲಕ್ಷ್ಮಣನ ಮಗ ನರಸಿಂಗಯ್ಯನು ದೇವರ ನಂದಾದೀಪಕ್ಕಾಗಿ ನೀಡಿದ ದಾನವನ್ನು ಉಲ್ಲೇಖಿಸುತ್ತದೆ. ಮೂವತ್ತು (ಮೂವತ್ತು ನಿಕಷ), ಸುವರ್ಣದ ಕಟಿಙ್ಜುಗಳನ್ನು ದಾನದತ್ತಿಯಾಗಿ ಸ್ವೀಕರಿಸಿದರು. ಅದಕ್ಕೆ ತಿಂಗಳಿಗೆ 2¼ ಕಟಿಙ್ಜು ಬಡ್ಡಿ ಕೊಡಲು ಒಪ್ಪಿದರು. ಬಡ್ಡಿಯ ದರ ಒಂದು ಕಟಿಙ್ಜುವಿಗೆ ಮೂರು ಮಙ್ಜಡಿ. ಕನ್ನರದೇವನ ಆಳ್ವಿಕೆಯ ೧೮ನೆಯ ವರ್ಷದಲ್ಲಿ ಈ ವ್ಯವಹಾರವು ಪ್ರಾರಂಭವಾಯಿತು. ಬಡ್ಡಿ ಸಂಗ್ರಹಿಸಲು ಬರುವ ದೇವಾಲಯದ ಅಧಿಕಾರಿಗೆ ದಿನವೂ ಎರಡು ಹೊತ್ತು ಊಟ ಕೊಡಲು ಒಪ್ಪಿದರು. ಅದು ತಪ್ಪಿದಾಗ, 8½ ಕಾಣಿಕೆಗಳನ್ನು ದಂಡವಾಗಿ ನೀಡಲು ಒಪ್ಪಿಕೊಂಡರೆಂದು ದಾಖಲಿಸುತ್ತದೆ. ಮೂರನೆಯ ಕೃಷ್ಣನ ಕೀಙೂರು ಶಾಸನವು (RITC., No. 45, 961 AD) ವೈದುಂಬ ದೊರೆ ತಿರುವೈನಾರನ ಮಹಾರಾಣಿ ಮುತ್ತು ದೇವಿಯಾರ್ ತಿರುವೀರಟ್ಟಾನತ್ತ ಆಳ್ವರ ದೇವರಿಗೆ ಇತ್ತ ೩೦ ಕಟಿಙ್ಜು ಸುವರ್ಣವನ್ನು ಸ್ವೀಕರಿಸಿದರು. ದೇವಾಲಯಕ್ಕೆ ಇಪ್ಪತ್ತು ಕಲಂ ಭತ್ತವನ್ನು ಬಡ್ಡಿಯ ಹಣ ಪ್ರತಿ ಕಟಿಙ್ಜುವಿಗೆ ಒಂದು ಕಲಂ ದರದಲ್ಲಿ ಪೆರಿಳಮ್ಮೈ ಬೆಲೆಯಲ್ಲಿ ಭತ್ತವನ್ನು ಅಕ್ಕಿಯಾಗಿ ಮಾಡುವುದಕ್ಕೆ ಮತ್ತು ದೇವಾಲಯಕ್ಕೆ ತಂದೊಪ್ಪಿಸಲು ಒಪ್ಪಿಕೊಂಡಿದ್ದನ್ನು ದಾಖಲಿಸುತ್ತದೆ. ಇದೇ ಅರಸನ ಜಮ್ಮೈ ಶಾಸನದಲ್ಲಿ (RITC., No. 99) ದಾನಿಯು ಸುವರ್ಣ ನಾಣ್ಯಗಳನ್ನು ನಗರತ್ತಾರರ ಬಳಿ ಠೇವಣಿಯಾಗಿಟ್ಟಿದ್ದನ್ನು ಅದರಿಂದ ಬರುವ ಬಡ್ಡಿಯಿಂದ ಹಣದಲ್ಲಿ ದೇವರಿಗೆ ದೀಪ ಬೆಳಗಲು ವ್ಯವಸ್ಥೆ ಮಾಡಲಾಯಿತೆಂದು ತಿಳಿದುಬರುತ್ತದೆ. ನೂರ ಎಂಟು ಮತ್ತರು ಪನ್ನಾಸುವನ್ನು ಕೊಟ್ಟನೆಂದು ದಾಖಲಿಸುತ್ತದೆ. ಕಾಲದ ಉಲ್ಲೇಖವಿಲ್ಲದ ಧಾರಾವರ್ಷ ಧೃವನ ಕಳವಿ ಶಾಸನದಲ್ಲಿ (KRIPR., No. I, p 65) ಮದೆಲೂರ ರಾಮನ ಅಗ್ರಮಹಿಷಿ ಅಪ್ಪಾವಿನೇತಿಗಳ ಮಗ ಕತ್ತಿಯರಸಮ, ಕಚ್ಚವಿಯ ಮಾರಿಬ್ಬೆಗೆ ತುಪ್ಪದ ತೆರಿಗೆಯನ್ನು ಕೊಟ್ಟನೆಂದು ತಿಳಿದುಬರುತ್ತದೆ.

**ಆಯ:**

ಆಯದ ಹಣವೆಂದರೆ ಆದಾಯದ ಹಣ. ದಂಡಾಪುರ ಶಾಸನದಲ್ಲಿ (SII., vol XVIII, no. 25, 918 AD) ಬ್ರಾಹ್ಮಣರ ಮದುವೆಯಲ್ಲಿ ಮೂರು ದ್ರಮ್ಮ, ಮಾಣಿಯೊಳೆರಡು, ಶೂದ್ರರ ಮದುವೆಯಲಿ ಒಂದು ದ್ರಮ್ಮವನ್ನು

ಪ್ರಾಯಶ್ಚಿತ್ತರೂಪದಲ್ಲಿ ಆಯದ ಹಣವನ್ನು ನೀಡಬೇಕೆಂದು ಅದನ್ನು ಬ್ರಾಹ್ಮಣ ಪೆರ್ಗಡೆಗೆ ಆಯವೆಂದು ಹೇಳಿಕೊಟ್ಟರೆಂದು ದಾಖಲಿಸುತ್ತದೆ.

ಸಾಮಾನ್ಯವಾಗಿ ಈ ತೆರಿಗೆಗಳು ಧಾನ್ಯರೂಪದಲ್ಲಿ ವಸೂಲಾಗುತ್ತಿದ್ದವು. ಅಗ್ರಹಾರಗಳಿಂದ ಬರುವ ಆಧಾಯವು ಬ್ರಾಹ್ಮಣರಿಗೆ ಸಲ್ಲುತ್ತಿತ್ತು. ಕ್ರಿ.ಶ. ೯೪೨ ರ ಶಾಸನದಲ್ಲಿ ಮಹಾಮಾಂಡಳಿಕನು 'ಭತಾಯ'(ಭತ್ತದ ಆಯ)ವನ್ನು ನೀಡಬೇಕೆಂದು ಒತ್ತಾಯ ಮಾಡಿದಾಗ ರೋಣದ ಪಂಪಯ್ಯ 'ನಾನೊಂದು ಅಕ್ಷತೆಯನ್ನೊ ಕೊಡುವುದಿಲ್ಲ' ಎಂದು ತಿಳಿಸುವುದಲ್ಲದೆ, ಮಹಾಜನರ ಅನುಮತಿಯಿಂದ ಮಾಂಡಳಿಕನ ವಿರುದ್ಧ ಹೋರಾಡಿ ಸಾಯುತ್ತಾನೆ (BKI Vol. I Part I, p36: 942AD).

### ವಡ್ಡರಾವುಳ

ವಡ್ಡರಾವುಳವನ್ನು ವ್ಯಾಪಾರ ಸಮಗ್ರಿಗಳ ಮೇಲೆ ಹಾಕುವ ತೆರಿಗೆಯೆಂದು ವಿದ್ವಾಂಸರು ಊಹಿಸಿದ್ದಾರೆ (ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ: ಚಿದಾನಂದ ಮೂರ್ತಿ). ವಡ್ಡರು ವ್ಯವಾಹಾರಿಗಳು ನೀಡುತ್ತಿದ್ದ ಕಾಣಿಕೆ ವಡ್ಡರಾವುಳ. ಇದರಿಂದ ಇದೊಂದು ನಿಯಮಿತವಾದ ಮಾರಟ ತೆರಿಗೆಯೆಂದು ತಿಳಿಯಬಹುದಾಗಿದೆ. ಅದನ್ನು ಸಂಗ್ರಹಿಸಲು ಪ್ರತ್ಯೇಕವಾಗಿ ನಿಯುಕ್ತರಾದ ಅಧಿಕಾರಿಗಳಿದ್ದರು

### ಹೆಜ್ಜುಂಕ

ಹಿರಿದಾದ ಸುಂಕವನ್ನು ಹೆಜ್ಜುಂಕ ಅಥವಾ ಪೆಜ್ಜುಂಕ ಎಂದು ಕರೆಯುತ್ತಿದ್ದರು. ಸಣ್ಣಪುಟ್ಟ ಸುಂಕಗಳಲ್ಲದೆ ದೊಡ್ಡ ಸುಂಕಗಳು ಇತ್ತೆಂದು ಭಾವಿಸಬಹುದು. ಪೆಜ್ಜುಂಕವನ್ನು ಯಾವುದರ ಮೇಲೆ ವಿಧಿಸುತ್ತಿದ್ದರೆಂಬುದು ನಿಖರವಾಗಿ ತಿಳಿದಿಲ್ಲ. ಬಹಶಃ ವರ್ತಕರ ಸರಕುಗಳ ಮೇಲೆ ಹಾಕುತ್ತಿದ್ದರೆಂದು ಊಹಿಸಬಹುದಾಗಿದೆ.

### ಸಿದ್ಧಾಯ

ಇದೊಂದು ಭೂಕಂದಾಯವಾಗಿದೆ. ಹನ್ನೆರಡು ಮತ್ತರು ಭೂಮಿಗೆ ಆರು ಕರಿಯ ದ್ರಮ್ಮಗಳೆಂದು ಶಾಸನದಲ್ಲಿದೆ (IA, Vol XII, p257).

ಅಕಾಲವರ್ಷನ (ಕೃಷ್ಣ III) ತುಪ್ಪದ ಕುರಹಟ್ಟ ಶಾಸನದಲ್ಲಿ (EI., vol XIV, p 364, 946 AD) ದೇವಾಲಯಕ್ಕೆ ಬಿಟ್ಟ ಕೆಯ್ ರಾಜಮಾನ ೫೦ ಮತ್ತರು, ತೋಟಕ್ಕೆಂದು ಕೊಟ್ಟ ಮತ್ತರೊಂದು, ಇದಕ್ಕೆ ಅರಸರ ದೆಸೆಗೆ ಸಿದ್ಧಾಯ, ಪೊಂಗದ್ಯಾಣ ಎರಡು, ನಾಲ್ಗುಮಂಡರ ದೆಸೆಗೆ ಸಿದ್ಧಾಯಂ ಪೊಂಗದ್ಯಾನ ಎರಡು, "ದೇವಂಗೇರಿಯೊಳೇೞ್ಕುಯ್ಯೊಳ ಮಯ್ಗಯ್ಯೊಳಂ" ಮನೆಯ ನಿವೇಷಣ ೨೪, ಇವು ಯಾವುದಕ್ಕೂ ಬೇರೆ ತೆರಿಗೆಗಳಿಲ್ಲ ಎಂದು ಉಲ್ಲೇಖಿಸಿದೆ.

ಖೊಟ್ಟಿಗನ ಬೇವಿನಹಳ್ಳಿ ಶಾಸನದಲ್ಲಿ (EC., vol XI, No. Cd 74, 968 AD) ಆಚಾರ್ಯ ಅಷ್ಟೋಪವಾಸದ ಭಟಾರರ ಕಾಲನ್ನು ತೊಳೆದು ಎರಡು ಊರಿಗೆ ಸಿದ್ಧಾಯ ಐವತ್ತು ಗದ್ಯಾಣವನ್ನು ನೀಡಿದರು. ಅವರಾಳುವ ಬಾಡಗಳಲ್ಲಿ ಮೇಲಾಳ್ಕೆ ಮತ್ತು ಕೆಱುದೆಱೆಗಳಿಲ್ಲವೆಂದು ಉಲ್ಲೇಖಿಸುತ್ತದೆ.

## ಬಿಟ್ಟಿ

ಬಿಟ್ಟಿ ಶಬ್ದದ ಮೂಲರೂಪ ವಿಷ್ಟಿ. ಯಾವುದೇ ರೀತಿಯ ಆದಾಯವಿಲ್ಲದ ಜನರು ಮಾಡುವ ಕೆಲಸ.

## ನ್ಯಾಯ

ತಪ್ಪು ಮಾಡಿದವರನ್ನು ವಿಚಾರಣೆಗೆ ಗುರಿಪಡಿಸುವುದು ಮತ್ತು ನಡೆದ ತಪ್ಪಿಗೆ ಪ್ರಾಯಶ್ಚಿತ್ತವಾಗಿ ಶಿಕ್ಷೆ ಅಥವಾ ದಂಡ ವಿಧಿಸಲಾಗುತ್ತಿತ್ತು. ಸಾಮಾನ್ಯವಾಗಿ ದಂಡವು ಹಣದ ರೂಪದಲ್ಲಿರುತ್ತಿತ್ತು. ಇದರಿಂದಾಗಿ ರಾಜ್ಯಕ್ಕೆ ಆದಾಯವು ಬರುತ್ತಿತ್ತು. ನ್ಯಾಯ ತೀರ್ಮಾನ ಮಾಡುವುದಕ್ಕೆ ಅನೇಕ ವಿಧಾನಗಳಿದ್ದವು. ದೇವಾಲಯವು ನ್ಯಾಯ ತೀರ್ಮಾನ ಮಾಡುವ ಸ್ಥಳವಾಗಿತ್ತು. ಅಲ್ಲಿಗೆ ದೂರುಗಳನ್ನು ತಂದವರು ಮೊದಲು ಹಣವನ್ನು ಕಟ್ಟಬೇಕಾಗುತ್ತಿತ್ತು. ನ್ಯಾಯ ತೀರ್ಮಾನವು ಪಕ್ಷಪಾತವಿಲ್ಲದೆ ನಡೆಯುತ್ತಿತ್ತೆಂದು ಭಾವಿಸಬಹುದಾಗಿದೆ.

## ದಂಡ

ತಪ್ಪು ಮಾಡಿದವರಿಗೆ ದಂಡ ವಿಧಿಸಿದಾಗ, ದಂಡರೂಪದಲ್ಲಿ ಬಂದ ಹಣವು ರಾಜ್ಯಾದಾಯಕ್ಕೆ ಸೇರುತ್ತಿತ್ತು. ಇದನ್ನು ದಂಡಾಯ, ದಂಡದೋಷ, ದಂಡದೋಷಕಾಣಿಕೆ ಮುಂತಾದ ಹೆಸರುಗಳಿಂದ ಗುರುತಿಸುತ್ತಿದ್ದರು.

ಕಾಲದ ಉಲ್ಲೇಖವಿಲ್ಲದ ಮೂರನೆಯ ಗೋವಿಂದನ ಶಾಸನವು (MAR., 1942, No. 47, p 175) ಪ್ರಭುತುಂಗ ಮಾಳನಿಗೆ ಸರ್ವಪರಿಹಾರವನ್ನು ನೀಡಿದರೆಂದು 'ಅಗದ್ಯಾಣ ರಾಣಿದೆ ಹನ್ನೆರಡು ಗದ್ಯಾಣ ದಂಡ' ಎಂದು ಉಲ್ಲೇಖಿಸಿ ಸಾಕ್ಷಿಗಳನ್ನು ಹೆಸರಿಸುತ್ತದೆ. ಮೂರನೆಯ ಕೃಷ್ಣನ ಶಾಸನವು (SII, Vol III, No. 7, p 12, 955 AD) ಸರ್ವರಿಗೂ ಸಂಬಂಧಿಸಿದ ಭೂಮಿಯ ಮೇಲೆ ಮಾರುವ ಹಕ್ಕನ್ನು ಸಭೆಯು ಹೊಂದಿರುತ್ತದೆ. ದಾನವಾಗಿ ಬಂದ ಭೂಮಿ ಇದಕ್ಕೆ ಹೊರತಾದುದು. ಇಂತಹ ಭೂಮಿಯನ್ನು ಕಂದಾಯ ಕೊಟ್ಟು ಪಡೆಯಬಹುದಾಗಿತ್ತು. ಆ ಭೂಮಿಯ ಮೇಲೆ ಯಾರಿಗೂ ಹಕ್ಕು ಇರಲಿಲ್ಲ. ಹಾಗೇನಾದರು ವಿರೋಧಿಸಿದರೆ ಅವರಿಗೆ ದಂಡ ವಿಧಿಸುವ ಹಕ್ಕನ್ನು ಧರ್ಮಾಸನವು ಹೊಂದಿತ್ತು ಎಂದು ಉಲ್ಲೇಖಿಸುತ್ತದೆ. ಇದೇ ಅರಸರ ತಿರುವಡನ್‌ಡೈ ಶಾಸನವು (RITC., No. 32, 959 AD) ಪಡುವೂರನಾಡಿನಲ್ಲಿರುವ ತಿರುವಡನ್‌ಡೈ ಗ್ರಾಮದ ಆಳ್ವಾರ ವರಾಹಸ್ವಾಮಿ ದೇವಾಲಯದಲ್ಲಿ ರಣಕೇಶರಿಯ ಪತ್ನಿ ನಜ್ಗ್ಲವಡುಗಿಯು ಅನೇಕ ದಾನಗಳನ್ನು ನೀಡಿದ್ದು, ಅದರಲ್ಲಿ ದೇವಾಲಯದ ಬಾಗಿಲು ಮುಚ್ಚುವವರೆಗೆ ತೂಗುದೀಪವನ್ನು ಬೆಳಗಲು ನೀಡಿದ ದಾನವು ಒಂದಾಗಿದ್ದು, ಅದನ್ನು ತಪ್ಪಿದರೆ ಒಂದು ನಾಱಿ ಅಕ್ಕಿಯನ್ನು ದಂಡವಾಗಿ ತೆರುವುದಕ್ಕೆ ಒಪ್ಪಿತ್ತು. ಇದೇ ದೊರೆಯ ಬಾಹೂರಿನ ಶಾಸನದಲ್ಲಿ (RITC., No. 42, 961 AD) ವಾಗೂರ ನಾಡಿನಲ್ಲಿ ಕುರುಬರು ವಿವಾಹ ಮಾಡಿದರೆ ಒಂದು ಕುರಿಯನ್ನು ನೀಡಬೇಕೆಂದೂ, ತಪ್ಪಿದರೆ ಎರಡು ಕುರಿಗಳನ್ನು ದಂಡ ರೂಪದಲ್ಲಿ ಹಿಡಿಯಲು ಸಭೆಯು ಅಧಿಕಾರ ಹೊಂದಿತ್ತೆಂದು ಉಲ್ಲೇಖಿಸುತ್ತದೆ. ಇದೇ ಅರಸನ ತಿರುವೊಟ್ರಿಯೂರು ಶಾಸನದಲ್ಲಿ (RITC., No. 40, 961 AD), ವಲ್ಲಭರಾಯ ಕನ್ನರದೇವನ ತಾಯಿಯಾದ [ಪೊ]ಲೈಚ್ಚಿರಾಣಿಯು ಮೂವತ್ತು ಸುವರ್ಣ ಕಱಞ್ಜುಗಳನ್ನು ನಂದಾದೀಪಕ್ಕಾಗಿ ದಾನ ನೀಡಿದಳು. ಇದೇ ಶಾಸನ ನಾಲ್ಕು ವರ್ಷ ಮೊದಲೇ ನೀಡಿದ ದಾನವನ್ನು ಕುರಿತು

ಮತ್ತೆ ವಿವರಿಸುತ್ತದೆ. ಮೊದಲಿನ ಶಾಸನದಲ್ಲಿ ದಾನ ನೀಡಿದವರ ಉಲ್ಲೇಖವಿಲ್ಲ. ಪ್ರತಿವರ್ಷ ನಾಲ್ಕೂವರೆ ಕಚಿಇಜ್ಜು ಸುವರ್ಣಗಳನ್ನು ಬಡ್ಡಿಯೆಂದೂ, ಮೂರು ಮಞ್ಜಾಡಿಯ ದರದಲ್ಲಿ ಸುವರ್ಣದ ನಾಣ್ಯವನ್ನು ಪ್ರತಿ ಕಚಿಇಜ್ಜುವಿಗೆ ಪ್ರತಿ ವರ್ಷವೂ ನೀಡಬೇಕೆಂದೂ, ಸಮಯಕ್ಕೆ ಬಡ್ಡಿ ಕೊಡಲು ತಪ್ಪಿದರೆ ಪ್ರತಿನಿತ್ಯ ಎಂಟುವರೆ ಕಾಣಂ ಹಣವನ್ನು ದಂಡವಾಗಿ ನ್ಯಾಯಾಲಯಕ್ಕೆ ನೀಡಲು ಒಪ್ಪಿಕೊಳ್ಳಲಾಯಿತು. ಇದೇ ದೊರೆಯ ಉತ್ತೈರ್‌ಮೇರೂರ್ ಶಾಸನವು (RITC., No. 54, 962 AD) ತಿರುವಳ್ಳಿಯೂರ ಈಶ್ವರ ಭಟ್ಟಾರಕರ ದೇವಾಲಯವನ್ನು ಊರ ಸಭೆಯವರು ರಕ್ಷಿಸಬೇಕಾಗಿತ್ತು. ಈ ವ್ಯವಸ್ಥೆಯನ್ನು ಯಾರು ತಪ್ಪಿಸುವರೋ ಅವರಿಗೆ ಇಪ್ಪತ್ತೈದು ಪೊನ್ನು ದಂಡವನ್ನು ವಿಧಿಸಲಾಗುವುದೆಂದು ನಿರ್ಧರಿಸಿದರು.

ಮೂರನೆಯ ಕೃಷ್ಣನ ಕಾಲದ ಉತ್ತೈರ್‌ಮೇರೂರ್ ಶಾಸನದಲ್ಲಿ (RITC., No. 75, 964 AD) ಅನೇಕ ದಂಡಗಳ ಬಗ್ಗೆ ಹೇಳುತ್ತದೆ. ಪುಂಡ ದುಷ್ಟರಿಗೆ ವಿಧಿಸುತ್ತಿದ್ದ ದಂಡ ದಂಡಗಳ ಹೊಂದಾಣಿಕೆ, ಹಣದ ರೂಪದ ದಂಡ, ದಂಡಗಳನ್ನು ಸಂಗ್ರಹಿಸಲು ಅಸಮರ್ಥರಾಗಿದ್ದರೆ, ದಂಡ ಸಂಗ್ರಹಿಸಿ ಹಣವನ್ನು ಸರಿಯಾಗಿ ಒಪ್ಪಿಸದಿದ್ದರೆ ಅಂತಹ ವ್ಯಕ್ತಿಗಳ ಮೇಲೆ ವೈಯಕ್ತಿಕವಾಗಿ ದಂಡ ವಿಧಿಸಬಹುದಾಗಿತ್ತೆಂದು ತಿಳಿದುಬರುತ್ತದೆ. ಅದೇ ರೀತಿ ತಪ್ಪಿತಸ್ಥರಿಗೆ ದಂಡ ವಿಧಿಸಲು ಹಿಂದೆ ಮುಂದೆ ನೋಡಬಾರದೆಂದೂ, ಅಂತಹ ದಂಡಗಳನ್ನು ಬಿಡದೆ ಸಂಗ್ರಹಿಸಬೇಕೆಂದೂ ಶಾಸನವು ಉಲ್ಲೇಖಿಸುತ್ತದೆ. ಈ ಶಾಸನದಿಂದ ದಂಡ ತೆರಲು ಯಾರೂ ಹೊರತಾಗಿರಲಿಲ್ಲ. ತಪ್ಪು ಮಾಡಿದವರು ದಂಡ ತೆರಲೇಬೇಕು ಎನ್ನುವ ನಿಯಮವನ್ನು ಗಮನಿಸಬಹುದಾಗಿದೆ. ಇದಕ್ಕೊಂದು ನಿಯಮವಿತ್ತು. ಅದು ಆಯಾಯಾ ವರ್ಷಕ್ಕೆ ಮಾತ್ರ ಸೀಮಿತವಾಗಿರುತ್ತಿತ್ತು. ಇದೇ ಅರಸನ ಚಿಂತಾಮಣಿ ಶಾಸನದಿಂದ (RITC., No. 80, 965 AD) ಸಂಗ್ರಹವಾದ ದಂಡದ ಹಣವನ್ನು ದೇವಾಲಯಕ್ಕೆ ಸಲ್ಲಿಸುತ್ತಿದ್ದರೆಂದು ತಿಳಿದುಬರುತ್ತದೆ.

ದಂಡ ನೀಡಲು ಕೂಡ ಸಮಯಾವಕಾಶ ಕೊಡುತ್ತಿದ್ದರೆಂದು ಮೂರನೆಯ ಕೃಷ್ಣನ ಬಾಹೂರು ಶಾಸನದಿಂದ (RITC., No. 83, 966 AD) ತಿಳಿದುಬರುತ್ತದೆ. ಒಪ್ಪಂದದಂತೆ ೨೦ ಚಟಿವು ಭೂಮಿಗೆ ಸಂಬಂಧಿಸಿದ ಕಂದಾಯವನ್ನು ಮನ್ನಾ ಮಾಡಿ

ವೇದ ಪಾರಂಗತರಾದ ಬ್ರಾಹ್ಮಣರಿಂದ ದೇವರಿಗೆ ನೆಲ್ಲಿಪಟ್ಟಂ ಅಭಿಷೇಕ ಮತ್ತು ತಿರುವಾರಾಧನೆ ಕೈಂಕರ್ಯ ನಡೆಸುವಂತೆ ಸೂಚಿಸಿದರು. ಈ ಒಪ್ಪಂದವನ್ನು ವಿರೋಧಿಸಿದರೆ ೨೫ ಕಟಿಇಙ್ಜು ಸುವರ್ಣವನ್ನು ದಂಡರೂಪದಲ್ಲಿ ನೀಡಬೇಕಿತ್ತು. ಆ ದಂಡವನ್ನು ಧನುರ್ಮಾಸ ಇಲ್ಲವೇ ಅವರಿಗೆ ಅನುಕೂಲವಾದ ಕಾಲದಲ್ಲಿ ಕೊಡಬಹುದೆಂದು ನಿರ್ಧರಿಸಲಾಗಿತ್ತು. ಇದೇ ಅರಸನ ನೇಮಲಿ ಶಾಸನವು (RITC., No. 90, 967 AD) ತಿರುಮೇಙ್ಜಳಿಪ್ಪೆರುಮಾಳ್ ದೇವಾಲಯದಲ್ಲಿ ಗಂಟೆ ಬಾರಿಸಲು ಸಾವಿರ ಕುಟಿ  ಭೂಮಿಯನ್ನು ಸರ್ವಬಾಧಾ ಪರಿಹಾರವಾಗಿ ದಾನವಾಗಿ ನೀಡಿದ್ದನ್ನು ದಾಖಲಿಸುತ್ತದೆ. ಇದಕ್ಕೆ ಅಡ್ಡಿ ಬಂದವರಿಗೆ ೨೫ ಕಟಿಇಙ್ಜು ಸುವರ್ಣ ನಾಣ್ಯಗಳನ್ನು ದಂಡ ವಿಧಿಸುತ್ತಿದ್ದರು. ಕ್ರಿ.ಶ.೯೭೮ರ ಕಕ್ಕಲದೇವನ ಕೊಡಗನೂರು ಶಾಸನವು (EC., vol XI, No. Dg 152) ಕೊಡಗನೂರಿನ ಮಹಾಜನದ ಕಾಲು ತೊಳೆದು ದಾನ ನೀಡಿದ್ದನ್ನು, ಪನ್ನೆರಡು ಗದ್ಯಾಣದಿಂದ ಒಳಗಿರುವ ದಂಡದಿಂದ ಮುಂಮ್ಮೂಟ್ಟಾಡಿ ಒಳ್ಳೆಣ್ಣೆಯನ್ನು ಅರಿಯಮನು ಬಿಟ್ಟನೆಂದು ಶಾಸನವು ದಾಖಲಿಸುತ್ತದೆ. ಇದೇ ಅರಸನ ಕಟಿತ್ತೂರು ಶಾಸನವು (RITC., No. 95, 967 AD) ದತ್ತಿ ಸ್ವೀಕರಿಸಿದವರು ನಂದಾ ದೀಪವನ್ನು ಬೆಳಗಲು ಒಪ್ಪಿದರು. ಅದಕ್ಕಾಗಿ ಕರಾರು ಪತ್ರವೊಂದನ್ನು ಸಿದ್ಧಪಡಿಸಿದರು. ಅದರಲ್ಲಿ ದೀಪ ಬೆಳಗಲು ತಪ್ಪಿಸಿದರೆ ದೀಪಕ್ಕೆ ಎರಡು ಪಟ್ಟು ದಂಡ, ಅದು ಬೇಡ ಎನ್ನುವುದಾದರೆ ತಪ್ಪಿಗೆ ತಕ್ಕ ಶಿಕ್ಷೆಗಳನ್ನು ದಂಡರೂಪದಲ್ಲಿ ಬರುವ ಪಾಪಗಳನ್ನೆಲ್ಲಾ ಅನುಭವಿಸಲು ಒಪ್ಪಿದರೆಂದು ಶಾಸನವು ಉಲ್ಲೇಖಿಸುತ್ತದೆ.

### ಬೀರವಣ

ವೀರರಿಗೆ ಕೊಡುವ ಹಣ ಬೀರವಣವೆನಿಸಿಕೊಳ್ಳುತ್ತದೆ. ವರ್ತಕರು ತಮ್ಮ ಸಾರಿಗೆಗಳ ರಕ್ಷಣೆಗಾಗಿ ಕೊಡುವ ಹಣವೂ ಹೌದು. ಬೀರವಣಿಗ ಎಂಬ ವರ್ತಕರಿದ್ದರೆಂದು ತಿಳಿದುಬಂದರೂ ಸ್ಪಷ್ಟ ಅರ್ಥವನ್ನು ಊಹಿಸುವುದು ಕ ಷ್ಟಸಾಧ್ಯವಾಗಿದೆ.

## ಹಿಟ್ಟುದೆರೆ

ಹಿಟ್ಟು ಎನ್ನುವುದು ಜಾತಿಯನ್ನು ಸೂಚಿಸುತ್ತದೆ. 'ಎಂಟು ಹಿಟ್ಟು', 'ಹನ್ನೆರಡು ಹಿಟ್ಟು' ಎನ್ನುವ ಉಲ್ಲೇಖಗಳಿವೆ. ಮೂಲಿಗರು ಎನ್ನುವ ಜಾತಿಯವರು ಹಿಟ್ಟು ಎನ್ನುವ ಗುಂಪಿನಲ್ಲಿಯೇ ಬರುತ್ತಾರೆ.

## ಧಾರ್ಮಿಕ ತೆರಿಗೆಗಳು

ಸರ್ವಬಾಧಾ ಪರಿಹಾರವಾಗಿ ಬಿಟ್ಟ ಹೆಚ್ಚಿನ ದೇವದತ್ತಿಗಳು ಸರಕಾರಕ್ಕೆ ಹೊರಲಾರದ ಹೊರೆಯಾದಾಗ ದೇವದತ್ತಿಗಳ ಉಪಯೋಗದ ಮೇಲೆ 'ಅರುವಣ' ತೆರಿಗೆ ವಿಧಿಸಿದಂತೆ ತೋರುತ್ತದೆ. ಆಯಾಯ ಭಾಗದ ಅಧಿಕಾರಿಗಳು, ಸ್ಥಳದ ಪ್ರಮುಖರು, ಪ್ರತಿವರ್ಷ ಅಯಾಯ ದತ್ತಿಯ ಅರುವಣವನ್ನು ನಿಗದಿಪಡಿಸುತ್ತಿದ್ದರೆನ್ನಬಹುದು. ಪೂರ್ಣವಾಗಿ ತೆರಿಯಿಂದ ಮುಕ್ತವಾದ ದತ್ತಿಗಳಿಗೆ ಇದು ಅನ್ವಯವಾಗುತ್ತಿರಲಿಲ್ಲ.

## ಕಾಣಿಕೆ

ರಾಜ ಮತ್ತು ಅಧಿಕಾರಿಗಳು ಕೆಲವು ವಿಶೇಷ ಸಂದರ್ಭಗಳಲ್ಲಿ ಧಾರ್ಮಿಕ ಕಾರ್ಯಗಳಿಗಾಗಿ ಜನರು ಕಾಣಿಕೆ ನೀಡುತ್ತಿದ್ದರು. ಅರಸ ಕಾಣಿಕೆ, ತಳಾರ ಕಾಣಿಕೆ, ಸತ್ರಕಾಣಿಕೆ ಇವುಗಳನ್ನು ನೀಡಿದ ಉಲ್ಲೇಖವಿದೆ. ಧಾರ್ಮಿಕ ಕಾರ್ಯಗಳಿಗೆ, ರಾಜ್ಯಕ್ಕೆ ಭಕ್ತಿ, ಗೌರವ, ಕೆಲವೊಮ್ಮೆ ಭಯದಿಂದ ನೀಡುವ ಹಣವನ್ನು ಕಾಣಿಕೆಯೆಂದು ಕರೆಯುತ್ತಿದ್ದರೆನ್ನಬಹುದು. ಇವೆಲ್ಲ ವಿಶೇಷ ಸಂಧರ್ಭಗಳಲ್ಲಿ ನೀಡುತ್ತಿದ್ದ ಕಾಣಿಕೆಗಳು.

ಸಾಲೊಟಗಿಯ ಶಾಸನದಲ್ಲಿ ವಿವಾಹದ ಸಮಯದಲ್ಲಿ ಶಾಲೆಗೆ ೫ ಪುಷ್ಪಗಳು, ಉಪನಯನ ಸಂದರ್ಭದಲ್ಲಿ ಎರಡೂವರೆ ಪುಷ್ಪಗಳನ್ನು ಚೂಡಾಕರ್ಮದ ಸಂದರ್ಭದಲ್ಲಿ ಒಂದೂಕಾಲು ಪುಷ್ಪವನ್ನು ಕೊಡಲು ಊರವರು ಒಪ್ಪಿದ್ದರೆಂದು ಉಲ್ಲೇಖಿಸಲಾಗಿದೆ.

## ವ್ಯಯ

ವ್ಯಯದ ಬಗ್ಗೆ ಹೇಳುವುದಾದರೆ ಕೋಟೆ, ಸೈನ್ಯ, ಆಯುಧಗಳ ವ್ಯವಸ್ಥೆ, ಅಧಿಕಾರಿಗಳ ವೇತನ, ಅರಮನೆಯ ಖರ್ಚು, ಮುಂತಾದವುಗಳಿಗೆ ಹೋಗುತ್ತಿತ್ತು. ಯುದ್ಧಗಳಿಗೆ ಹೋದಾಗ ಅಗತ್ಯವಾದ ಸಾಮಗ್ರಿಗಳು, ದಾನಕಾರ್ಯಗಳಿಗೆ ಹಣವಿನಿಯೋಗ, ಪ್ರಜೆಗಳಿಗೆ ಅನುಕೂಲವಾಗುವಂತೆ ನೀರಿನ ವ್ಯವಸ್ಥೆ, ಕೆರೆ, ಕಾಲುವೆ, ಅಡ್ಡಕಟ್ಟೆ, ತೂಬುಗಳ ವ್ಯವಸ್ಥೆಯನ್ನು ಮಾಡಿಸುವುದಕ್ಕೂ ಹಣ ಖರ್ಚಾಗುತ್ತಿತ್ತು. ಕೆಲವು ತೆರಿಗೆಗಳನ್ನು ಮನ್ನಾ ಮಾಡುವುದರಿಂದ ಹಾಗೂ ದೇವಾಲಯಗಳಿಗೆ ದತ್ತಿ, ಬ್ರಾಹ್ಮಣರಿಗೆ ಅಗ್ರಹಾರಗಳನ್ನು ಕೊಡುವುದರ ಮೂಲಕವೂ ಹಣ ವ್ಯಯವಾಗುತ್ತಿತ್ತು. ಬ್ರಾಹ್ಮಣರಿಗೆ ವಿದ್ಯಾಭ್ಯಾಸಕ್ಕೆ ಸಹಾಯ ಮಾಡುವುದು, ಕವಿಗಳಿಗೆ ಆಶ್ರಯ ನೀಡುವುದು, ಕಲೆಗೆ ಪ್ರೋತ್ಸಾಹ, ಧರ್ಮಕ್ಕೆ ಪೋಷಣೆ ಮೊದಲಾದವುಗಳ ಮೂಲಕ ವ್ಯಯವಾಗುತ್ತಿತ್ತು. ಕೆಲವೊಮ್ಮೆ ಪ್ರಕೃತಿಯ ವಿಕೋಪಕ್ಕೆ ತುತ್ತಾಗಿ ಜನರು ಕಷ್ಟಕ್ಕೆ ಸಿಲುಕಿದಾಗ ಅರಸನ ಸಹಾಯವಿದ್ದೇ ಇರುತ್ತಿತ್ತು. ಏಕೆಂದರೆ ರಾಜನು ಪ್ರಜಾವತ್ಸಲನಾದ್ದರಿಂದ ಪ್ರಜೆಗಳ ಯೋಗಕ್ಷೇಮ ಅವನಿಗೆ ಸೇರಿದ್ದು. ಇದಕ್ಕೆ ಅಪವಾದಗಳು ಇಲ್ಲದೇ ಇಲ್ಲ. ಒಟ್ಟಿನಲ್ಲಿ ಆಧಾಯವು ಎಷ್ಟಿರುತಿತ್ತೋ ಅದಕ್ಕೆ ತಕ್ಕಷ್ಟು ವ್ಯಯವೂ ಇರುತ್ತಿತ್ತೆಂದು ಭಾವಿಸಬಹುದು. ಆದಾಯ ಮತ್ತು ವ್ಯಯ ಎರಡೂ ಆಡಳಿತದ ಮುಖ್ಯ ಅಂಗಗಳಾಗಿರುತ್ತವೆ.

ಕಾಲಕಾಲಕ್ಕೆ ತೆರಿಗೆ, ಸುಂಕಗಳು ಸಂದಾಯವಾಗುತ್ತಿದ್ದರೆ ಕೋಶವು ಸುಸ್ಥಿತಿಯಲ್ಲಿರುತ್ತದೆ. ರಾಷ್ಟ್ರಕೂಟರ ಕಾಲದಲ್ಲಿದ್ದ ತೆರಿಗೆಗಳ ಸ್ವರೂಪವನ್ನು ಕಂಡಾಗ ಜನರಿಗೆ ಇದು ಭಾರವೆನಿಸುತ್ತಿರಲಿಲ್ಲ ಎನಿಸುತ್ತದೆ. ಏಕೆಂದರೆ ತೆರಿಗೆಯ ಹೆಚ್ಚಳದ ಬಗ್ಗೆಯಾಗಲೀ, ತೆರಿಗೆ ಸಲ್ಲಿಸದೇ ಇರುವ ಉಲ್ಲೇಖವಾಗಲೀ ಯಾವ ಶಾಸನದಲ್ಲೂ ಇಲ್ಲ. ಇದರಿಂದ ತೆರಿಗೆಯ ಬಗ್ಗೆ ಜನ ತೃಪ್ತರಾಗಿದ್ದರೆನ್ನಬಹುದು. ಮುಂದೆ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಮೂರನೆಯ ಕೃಷ್ಣನು ವಿಧಿಸಿದ್ದ ತೆರಿಗೆಯನ್ನು ಸ್ವಲ್ಪ ಹೆಚ್ಚಿಸಿದಾಗ ಜನರು ಪ್ರತಿಭಟಿಸಿದ ಉಲ್ಲೇಖವು ಸಿಗುತ್ತದೆ. ಈ ಸಮಸ್ಯೆಯು ಮೊದಲಿದ್ದ ತೆರಿಗೆಯನ್ನೇ ಸಲ್ಲಿಸುವುದು ಎನ್ನುವ ತೀರ್ಮಾನದೊಂದಿಗೆ ಪರಿಹಾರವಾಗುತ್ತದೆ. ತೆರಿಗೆಯ ಬಗ್ಗೆ ರಾಷ್ಟ್ರಕೂಟರ ತಮಿಳು ಶಾಸನಗಳಲ್ಲಿ ಬಹಳಷ್ಟು ಮಾಹಿತಿಗಳು ಸಿಗುತ್ತವೆ. ಉಳಿದ ಶಾಸನಗಳಲ್ಲಿ ಅಲ್ಲೊಂದು ಇಲ್ಲೊಂದು ಉಲ್ಲೇಖಗಳು ಸಿಗುತ್ತವೆ.

ಇದಕ್ಕೆ ಕಾರಣವೇನೆಂದು ಸ್ಪಷ್ಟವಾಗುವುದಿಲ್ಲ. ರಾಷ್ಟ್ರಕೂಟರ ಕಾಲದಲ್ಲಿ ಉತ್ಪಾದನೆಯೂ ಸಮೃದ್ಧವಾಗಿದ್ದು, ನಾನಾ ವಸ್ತುಗಳು ವಿದೇಶಗಳಿಗೆ ರಫ್ತಾಗುತ್ತಿದ್ದವು. ಒಟ್ಟಿನಲ್ಲಿ ಹಣಕಾಸಿನ ಪರಿಸ್ಥಿತಿಯು ಉತ್ತಮವಾಗಿತ್ತು ಎಂದು ಹೇಳಬಹುದು.

## ಧರ್ಮ

ಪ್ರಾಚೀನ ಕಾಲದಿಂದ ಬೆಳೆದು ಬಂದಿದ್ದ ನಂಬಿಕೆ ಮತ್ತು ಆಚರಣೆಗಳಿಗೆ ರಾಷ್ಟ್ರಕೂಟರ ಕಾಲ್ದಲ್ಲಿ ಧಕ್ಕೆ ಉಂಟಾಗಲಿಲ್ಲ. ಕ್ರಿ.ಶ. ೮ನೇ ಶತಮಾನದ ಹೊತ್ತಿಗೆ ಭಾರತದಲ್ಲಿ ಧಾರ್ಮಿಕ ಪರಿಸ್ಥಿತಿ ಹಲವಾರು ಪರಿವರ್ತನೆಗಳನ್ನು ಹೊಂದುತ್ತಿತ್ತು. ಈ ವೇಳೆಗೆ ಬೌದ್ಧ ಧರ್ಮದ ಪ್ರಾಬಲ್ಯ ಅಧೋಮುಖವಾಗುತ್ತಿತ್ತು. ಜೈನ ಮತ್ತು ವೀರಶೈವಮತಗಳು ಪ್ರಾಬಲ್ಯಕ್ಕೆ ಬರುತ್ತಿದ್ದವು. ವೈದಿಕ ಧರ್ಮದ ಪುನರುತ್ಥಾನವು ಆರಂಭವಾಗಿತ್ತು.

ಇದರಿಂದ ಜೈನಧರ್ಮದ ಪ್ರಗತಿಗೆ ಯಾವ ತೊಂದರೆಯೂ ಆಗಲಿಲ್ಲ. ಇದಕ್ಕೆ ಮುಖ್ಯ ಕಾರಣ ದಕ್ಷಿಣ ಭಾರತದಲ್ಲಿ ಜೈನ ಧರ್ಮಕ್ಕೆ ರಾಜಾಶ್ರಯ ದೊರೆತ್ತಿತ್ತು. ರಾಷ್ಟ್ರಕೂಟರು, ಗಂಗರು, ಚಲ್ಲಕೇತನರು ಜೈನಧರ್ಮಕ್ಕೆ ಪ್ರೋತ್ಸಾಹ ನೀಡುತ್ತಿದ್ದರು. ಹಿಂದೂ ಧರ್ಮದ ವೈಶಿಷ್ಟ್ಯತೆ ಎಂದರೆ ಸಹಿಷ್ಣುತೆ. ಆದುದರಿಂದಲೇ ಇಸ್ಲಾಂ ಧರ್ಮಕ್ಕೂ ಪ್ರೋತ್ಸಾಹ ದೊರೆಕಿತು.

ಒಂದನೆಯ ಅಮೋಘವರ್ಷದ ಕಾಲದ ಸಂಜಾನ ಮತ್ತು ಕ್ಯಾಂಬೆ ತಾಮ್ರಪಟಗಳಲ್ಲಿ ಬ್ರಾಹ್ಮಣರಿಗೆ ವಾಜಪೇಯ, ರಾಜಸೂಯ ಮುಂತಾದ ಯಾಗಗಳನ್ನು ಮಾಡಲು ದಾನಗಳನ್ನು ನೀಡಿರುವ ಉಲ್ಲೇಖವಿದೆ. ಧಾರ್ಮಿಕ ಕಾರ್ಯಗಳಿಗೆ ದಾನ ನೀಡಿರುವ ಉದಾಹರಣೆಗಳು ಹಲವಾರಿವೆ. ತೀರ್ಥಕ್ಷೇತ್ರಗಳಿಗೆ ಹೋಗಿ ದಾನ ನೀಡುವ ಸಂಪ್ರದಾಯವಿತ್ತು. ಅಶ್ವತ್ಥಾರಾಧನೆ, ನಾಗಾರಾಧನೆ, ಸೂರ್ಯಾರಾಧನೆಗಳೂ ಅಲ್ಲಲ್ಲಿ ಕಂಡುಬರುತ್ತವೆ. ವೈಷ್ಣವ ಆರಾಧನೆಗಳೂ ನಡೆದಿದ್ದವು. ಗೋವುಗಳನ್ನು ಪವಿತ್ರವೆಂದು ಪರಿಗಣಿಸಲಾಗಿದ್ದು, ಜಾತ್ರೆ, ಹಬ್ಬಗಳಲ್ಲಿ ಇವುಗಳಿಗೆ ಪೂಜೆ ಸಲ್ಲುತ್ತಿತ್ತು. ರಥಯಾತ್ರೆ, ಜ್ಯೋತಿಯಾತ್ರೆಗಳೂ ನಡೆಯುತ್ತಿದ್ದವು.

## ವೈದಿಕಧರ್ಮ

ರಾಷ್ಟ್ರಕೂಟರ ಆಳ್ವಿಕೆಯ ಆರಂಭದ ಕಾಲಕ್ಕೆ ವೈದಿಕ ಧರ್ಮದಲ್ಲಿ ಎಲ್ಲ ದೇವ ದೇವಿಯರ ಆರಾಧಾನೆಯು ನಡೆಯುತ್ತಿತ್ತು. ಶೈವ, ವೈಷ್ಣವ, ದ್ವೈತ, ಅದ್ವೈತ ಮುಂತಾದ ಯಾವುದೇ ವಿಭಾಗಗಳು ಇರಲಿಲ್ಲ. ಆದರೆ ನಂತರ ಉಂಟಾದ ಧಾರ್ಮಿಕ ಸಂಕ್ರಮಣದಿಂದಾಗಿ ಎಲ್ಲ ಧರ್ಮಗಳನ್ನೂ ಪ್ರತ್ಯೇಕವಾಗಿ ಕಾಣುವ ಸಂಪ್ರದಾಯವು ಬೆಳೆದು ಬಂತು. ಈ ಬದಲಾವಣೆಗೆ ಹಲವಾರು ಕಾರಣಗಳನ್ನು ಕೊಡಬಹುದು. ಶಂಕರಾಚಾರ್ಯರು ಆನೆಯ ಶತಮಾನದಲ್ಲಿ ಶಕ್ತಿಪೀಠಗಳನ್ನು ಸ್ಥಾಪಿಸುವುದರ ಜೊತೆಗೆ ಅದ್ವೈತ ಸಿದ್ಧಾಂತಕ್ಕೆ ಅಡಿಪಾಯ ಹಾಕಿದರು. ಆಕಾಲಕ್ಕೆ ಇದೊಂದು ದೊಡ್ಡ ಪರಿವರ್ತನೆಯಾದರೂ ಮತೀಯ ಸಂಘರ್ಷಗಳುಂಟಾದ ಬಗ್ಗೆ ದಾಖಲೆಗಳಿಲ್ಲ. ಇದಕ್ಕೆ ಬೌದ್ಧಧರ್ಮದ ಇಳಿಮುಖ ಮತ್ತು ಜೈನಧರ್ಮದಲ್ಲಿದ್ದ ಕಟ್ಟುನಿಟ್ಟಾದ ಆಚಾರ ವಿಚಾರಗಳು ಮತ್ತು ಸರಳ ಧಾರ್ಮಿಕ ತತ್ವಗಳ ನಿರೀಕ್ಷೆಯಲ್ಲಿದ್ದ ಸಾಮುನ್ಯ ಜನತೆ ಕಾರಣವಿರಬಹುದು. ಶಂಕರಾಚಾರ್ಯರ ಅದ್ವೈತ ತತ್ವದ ಸರ್ವಂ ಖಲ್ವಿದಂ ಬ್ರಹ್ಮ, ಅಹಂಬ್ರಹ್ಮಾಸ್ಮಿ ಮುಂತಾದ ಉಪದೇಶಗಳು ಸಾಮಾನ್ಯ ಜನರಿಗೆ ಇಷ್ಟವಾದವು. ತಮ್ಮ ಮನಸ್ಸಿಗೆ ಒಪ್ಪುವಂತಹ ದೈವಾರಾಧನೆ ಕೈಗೂಡಿತ್ತು. ಇದರ ಪರಿಣಾಮವಾಗಿ ಅನೇಕ ಸಣ್ಣ ಪುಟ್ಟ ಧರ್ಮಗಳ ಉಗಮಕ್ಕೆ ನಾಂದಿಯಾಯಿತು. ಇಷ್ಟೆಲ್ಲಾ ಬದಲಾವಣೆಗಳು ನಡೆದರೂ ಆ ಕಾಲದ ಶಾಸನಗಳು ಶಂಕರರು ಮತ್ತು ಅವರ ತತ್ವಗಳ ಬಗ್ಗೆ ಮೌನವಾಗಿವೆ. ಇದಕ್ಕೆ ಕಾರಣಗಳನ್ನು ಊಹಿಸುವುದು ಕಷ್ಟ. ಶಾಸನಗಳಲ್ಲಿ ಜೈನಧರ್ಮೀಯರ ಬಗ್ಗೆ ಹಾಗೂ ಬ್ರಾಹ್ಮಣರನ್ನು ಕುರಿತಂತೆ ಉಲ್ಲೇಖಗಳಿವೆ. ಶಂಕರರ ಹೆಸರು ಯಾವುದೇ ಧಾರ್ಮಿಕ ಮತ್ತು ಸಾಹಿತ್ಯ ಕೃತಿಗಳಲ್ಲಿ ಇಲ್ಲದಿರುವುದು ಹಲವು ಅನುಮಾನಗಳಿಗೆ ಎಡೆಮಾಡಿಕೊಟ್ಟಿದೆ. ಆದರೆ ರಾಷ್ಟ್ರಕೂಟರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳ ಸಂಖ್ಯೆ ಮತ್ತು ಅದರಲ್ಲಿರುವ ವೈದಿಕ, ಬೌದ್ಧ, ಜೈನ ದೇವಾಲಯಗಳ ಸಂಖ್ಯೆಯನ್ನು ಗಮನಿಸಿದರೆ ವೈದಿಕ ದೇವಾಲಯಗಳ ಮೇಲುಗೈಯನ್ನು ಕಾಣಬಹುದು. ಅದರಲ್ಲಿಯೂ ಶೈವಪರವಾದ ದೇವಾಲಯಗಳೇ ಹೆಚ್ಚು ಎಂಬುದು ಗಮನಿಸಬೇಕಾದ ವಿಚಾರವಾಗಿದೆ.

ಧಾರ್ಮಿಕ ಚಿಂತನೆಯ ಪ್ರಕ್ರಿಯೆಯನ್ನು ಶಂಕರಾಚಾರ್ಯರ ಸಮಕಾಲೀನರಾದ ಕುಮಾರಿಲರು ಪ್ರಾರಂಭ ಮಾಡಿದರು. ಪ್ರಾಚೀನ ಕಾಲದಿಂದ ನಡೆದು ಬಂದ ಸನ್ಯಾಸ

ವಾದದ ಕಟ್ಟಾ ವಿರೋಧಿಗಳಾಗಿದ್ದರು. ಇವರ ವಾದವಿವಾದಗಳ ನಂತರವೂ ಶ್ರೌತ ಧರ್ಮವು ಜನರಲ್ಲಿ ಮನ್ನಣೆ ಪಡೆಯಲಿಲ್ಲ. ಶಂಕರಾಚಾರ್ಯರ ಪ್ರಭಾವದಿಂದ ಜ್ಞಾನಾರ್ಜನೆಯ ಬಗ್ಗೆ, ಸತ್ಯವನ್ನು ತಿಳಿಯುವ ಬಗ್ಗೆ ಜನರಲ್ಲಿ ಆಸಕ್ತಿ ಮೂಡಿತು. ಶಂಕರಾಚಾರ್ಯರು ಭಾರತದ ಉದ್ದಗಲಕ್ಕೂ ಸಂಚರಿಸಿದರು.

## ಜೈನಧರ್ಮ

ರಾಷ್ಟ್ರಕೂಟರ ಕೊನೆಗಾಲದ ಹೊತ್ತಿಗಾಗಲೇ ಜೈನಧರ್ಮದ ಪಂಥಗಳು ಹರಡಿದ್ದವು. ದಿಗಂಬರ ಸಂಪ್ರದಾಯದವರು ಬಹಳ ಹೆಚ್ಚಾಗಿದ್ದರು ಎಂದು ತಿಳಿದು ಬರುತ್ತದೆ. ಶ್ವೇತಾಂಬರರೂ ಇದ್ದರು ಎನ್ನುವುದಕ್ಕೆ ಶಾಸನಾಧಾರವೂ, ಸಾಹಿತ್ಯಾಧಾರವೂ ಇವೆ. ಹರಿಭದ್ರನು ಹೇಳುವಂತೆ ಕ್ರಿ.ಶ. ಒಂದನೆಯ ಶತಮಾನದಲ್ಲಿ ಶ್ವೇತಾಂಬರರು ಮಾನ್ಯಖೇಟದ ಸುತ್ತಮುತ್ತ ಇದ್ದರೆಂದು ತಿಳಿದು ಬರುತ್ತದೆ (ಪಂಚಮುಖಿ, ಪು೧೩೩). ಮೃಗೇಶವರ್ಮನ ಹಲಸಿ ತಾಮ್ರಪಟದಿಂದ ಅಲ್ಲಿ ಶ್ವೇತಪಟ ಮಹಾಶ್ರಮಣ ಸಂಘ ಮತ್ತು ನಿರ್ಗ್ರಂಥ ಮಹಾಶ್ರಮಣ ಸಂಘಗಳು ಇದ್ದುದು ತಿಳಿದುಬರುತ್ತದೆ. ಯಾಪನೀಯ ಸಂಘವು ಕರ್ನಾಟಕದಲ್ಲಿ ಹುಟ್ಟಿದುದು ಎಂದು ವಿದ್ವಾಂಸರು ಊಹಿಸಿದ್ದಾರೆ (ಚಿದಾನಂದಮೂರ್ತಿ, ಪು೭೪).

ರಾಷ್ಟ್ರಕೂಟರ ಕಾಲದಲ್ಲಿ ಜೈನಧರ್ಮವು ಹೆಚ್ಚಿನ ಪ್ರಗತಿಯನ್ನು ಹೊಂದಿತ್ತೆಂದು ಹೇಳಬಹುದು. ರಾಷ್ಟ್ರಕೂಟರು ಅವರ ಸಾಮಂತರು, ಪ್ರಜೆಗಳು ಎಲ್ಲರೂ ಜೈನಧರ್ಮಕ್ಕೆ ಪ್ರೋತ್ಸಾಹವನ್ನಿತ್ತರು. ಬಸದಿಗಳ ನಿರ್ಮಾಣ, ಅನೇಕ ಬಗೆಯ ದಾನಗಳನ್ನು ನೀಡುವುದರ ಮೂಲಕ ಜೈನ್ಧರ್ಮವನ್ನು ಪೋಷಿಸಿದರು.

ರಾಷ್ಟ್ರಕೂಟ ಅರಸರಲ್ಲಿ ಜೈನಧರ್ಮಕ್ಕೆ ಪ್ರೋತ್ಸಾಹ ನೀಡಿದವರಲ್ಲಿ ಅಮೋಘವರ್ಷ ನೃಪತುಂಗನು ಅಗ್ರಗಣ್ಯನಾಗಿದ್ದಾನೆ. "ಗಣಿತಸಾರಸಂಗ್ರಹ"ದಲ್ಲಿ ಈತ ಸ್ಯಾದ್ವಾದಮತಾನುಯಾಯಿಯಾಗಿದ್ದ ಎನ್ನುವ ವಿಚಾರವು ಬರುತ್ತದೆ. ಅಕಿಂಚನತಾನೀತಿಯನ್ನು ಅನುಸರಿಸಿ ಕೆಲವು ಕಾಲ ಸಿಂಹಾಸನವನ್ನು ತ್ಯಜಿಸುತ್ತಾನೆ. ಇದು ಶಾಸನಗಳ ಮೂಲಕ ತಿಳಿಯುತ್ತದೆ. (Rashtrakutas And Their Times, p312. Altekar A.S.). ಜಿನಸೇನನ 'ಪಾರ್ಶ್ವಾಭ್ಯುದಯ'ದಿಂದ ಅಮೋಘವರ್ಷನು ಆತನ

ಶಿಷ್ಯನೆಂದು ತಿಳಿದು ಬರುತ್ತದೆ. ದೊರೆಯು ಗುರುವಿನ ಸ್ಮರಣಮಾತ್ರದಿಂದಲೇ ಶುದ್ಧನಾಗುತ್ತಿದ್ದನೆಂದು ತಿಳಿದುಬರುತ್ತದೆ(IA, Vol. XII, p216-218).

ಎರಡನೆಯ ಕೃಷ್ಣನಿಗೆ ಗುರುವಾಗಿದ್ದವನು ಗುಣಭದ್ರಾಚಾರ್ಯ. ಈತ 'ಉತ್ತರಪುರಾಣ'ದ ಕರ್ತೃವಾಗಿದ್ದಾನೆ. ಇನ್ನು ನಾಲ್ಕನೆಯ ಇಂದ್ರನು ಸಲ್ಲೇಖನ ವಿಧಿಯಿಂದ ಮರಣಹೊಂದಿದನೆಂದು ಶ್ರವಣಬೆಳಗೊಳದ ಶಾಸನದಿಂದ ತಿಳಿದುಬರುತ್ತದೆ.

ರಾಷ್ಟ್ರಕೂಟರ ಸಾಮಂತರಾಗಿದ್ದ ಗಂಗರು, ಚಲ್ಲಕೇತನರು ಮುಂತಾದವರೂ ಕೂಡ ಜೈನಧರ್ಮಕ್ಕೆ ಪ್ರೋತ್ಸಾಹ ನೀಡಿದರೆಂದು ತಿಳಿದುಬರುತ್ತದೆ. ಗಂಗ ರಾಚಮಲ್ಲನು, ಕೊಡಗಿನಲ್ಲಿ ಅನೇಕ ಜಿನಾಲಯಗಳನ್ನು ಕಟ್ಟಿಸಿದ್ದಾನೆ (IA. Vol. IV, p103). ತಾನು ವಿಜಯಹೊಂದಿದ ನೆನಪಿಗಾಗಿ ವಳ್ಳಿಮಲ್ಲೈಯಲ್ಲಿ ಜೈನ ದೇವಾಲಯವನ್ನು ಕಟ್ಟಿಸಿದ್ದಾನೆ (IA. Vol. IV, p140). ಅಮೋಘವರ್ಷನ ದಂಡನಾಯಕನಾಗಿದ್ದ ಚಲ್ಲಕೇತನ ವಂಶದ ಬಂಕೇಯನು ಜೈನಬಸದಿಯೊಂದಕ್ಕೆ ದಾನ ನೀಡಿದುದು ಶಾಸನದಿಂದ ತಿಳಿದುಬರುತ್ತದೆ (EI. Vol. VI, p29). ಬಂಕೇಯನ ಮಗ ಲೋಕಾದಿತ್ಯನು ಜೈನಧರ್ಮದ ಪೋಷಕನೆಂದು ತನ್ನ ಗುರು ಗುಣಭದ್ರರಿಂದಲೇ ಹೊಗಳಿಸಿಕೊಂಡಿದ್ದಾನೆ (OPCIT, p312. Altekar A.S.).

ಲಕ್ಷ್ಮೇಶ್ವರದಲ್ಲಿ ರಾಯರಾಚಮಲ್ಲ ಬಸದಿ, ಗಂಗಪೆರ್ಮಾಡಿ ಚೈತ್ಯಾಲಯ, ಗಂಗಕಂದರ್ಪ ಚೈತ್ಯಮಂದಿರ ಎಂಬ ಜಿನಭವನಗಳಿದ್ದವೆಂದು ಶಾಸನಗಳಿಂದ ತಿಳಿದುಬರುತ್ತದೆ (IA. Vol. VII, p105). ಮೂರನೆಯ ಗೋವಿಂದನ ಕ್ರಿ.ಶ. ೮೧೨ರ ಕಡಬಾ ತಾಮ್ರಶಾಸನದಲ್ಲಿ ಗಂಗಮಂಡಲದ ಚಾಕಿರಾಜನು ಕೇಳಿಕೊಂಡಿದ್ದರಿಂದ ದೊರೆಯು ಅರ್ಕಕೀರ್ತಿ ಎನ್ನುವ ಮುನಿಗೆ ಜಿನೇಂದ್ರ ಪೂಜೆಗಾಗಿ ಮತ್ತು ಕುಣಿಗಲ್ ವಿಷಯದ ಅಧಿಪತಿಯಾದ ವಿನಯಾದಿತ್ಯನ ಶನಿ ಪೀಡಾಪರಿಹಾರಾರ್ಥವಾಗಿ ದಾನಗಳನ್ನು ನೀಡಿದನೆಂದು ತಿಳಿದುಬರುತ್ತದೆ (ಪಂಚಮುಖಿ, ಪು೩೧೫). ಅನೇಕ ವಿಚಾರಗಳ ಮೇಲೆ ಕೃತಿರಚನೆಗಳಾಗಿವೆ.

ರಾಷ್ಟ್ರಕೂಟರ ಅವಧಿಯಲ್ಲಿ ಅನೇಕ ಜೈನ ಆಚಾರ್ಯರುಗಳಿದ್ದರು. ಇವರು ರಚಿಸಿದ ಅಮೂಲ್ಯ ಗ್ರಂಥಗಳು ಜೈನಧರ್ಮಕ್ಕೆ, ಜೈನಸಾಹಿತ್ಯಕ್ಕೆ ನೀಡಿದ ಅಪೂರ್ವ

ಕಾಣಿಕೆಗಳಾಗಿವೆ. ವೀರಸೇನಾಚಾರ್ಯರು, ಗುಣಭದ್ರಾಚಾರ್ಯರು, ಜಿನಸೇನಾಚಾರ್ಯರು, ಶಾಕಟಾಯನ, ಅಕಳಂಕ ಮುಂತಾದ ಅನೇಕ ಪ್ರಮುಖ ಆಚಾರ್ಯರುಗಳು ರಾಷ್ಟ್ರಕೂಟರ ಕಾಲದಲ್ಲಿ ಇದ್ದರು. ಕನ್ನಡ ಸಾಹಿತ್ಯ ರಚನೆಯೆಂದರೆ ಜೈನರು ರಚಿಸಿರುವ ಪ್ರಾಕೃತ, ಸಂಸ್ಕೃತ, ಕನ್ನಡ ಗ್ರಂಥಗಳೇ ಆಗಿವೆ.

ಅಮೋಘವರ್ಷನ ಕೊಣ್ಣೂರು ಶಾಸನದಿಂದ ಆತ ಜೈನಬಸದಿಗಳಿಗೆ ನೀಡಿದ ದತ್ತಿಯ ವಿವರಗಳು ತಿಳಿಯುತ್ತವೆ (EI. Vol. XX, p1). ಸೌಂದತ್ತಿಯ ಶಾಸನದಲ್ಲಿ ಅಲ್ಲಿಯ ಬಸದಿಯೊಂದನ್ನು 'ರಟ್ಟರಪಟ್ಟ ಜಿನಾಲಯ' ಎಂದು ಕರೆದಿರುವುದನ್ನು ಮತ್ತು ರಾಷ್ಟ್ರಕೂಟರು ಜೈನ ಧರ್ಮಕ್ಕೆ ನೀಡಿರುವ ಪ್ರೋತ್ಸಾಹವನ್ನು ತಿಳಿಸುತ್ತದೆ (JBBRAS. Vol. X, p204). ಕಂಬನು ಗಂಗವಾಡಿಯಲ್ಲಿ ಆಳುತ್ತಿದ್ದಾಗ ಮನಸಿಜನ ರಾಣಿಯು (ಇವಳು ಯಾರೆಂದು ತಿಳಿದುಬಂದಿಲ್ಲ) ಮೌನವ್ರತವನ್ನು ಕೈಗೊಂಡಿದ್ದಳು. ಅದು ಸಮಾಪ್ತಿಯಾದಾಗ ವ್ಯಕ್ತಿಯೊಬ್ಬನು ಜೈನಯತಿಗೆ ಭೂಮಿ ದಾನ ಮಾಡಿದನೆಂದು ತಿಳಿದುಬರುತ್ತದೆ (ಪಂಚಮುಖಿ, ಪು೩೦೨). ಇನ್ನೊಂದು (MAR. 1927, p114) ಶಾಸನದಲ್ಲಿ ಕಂಬನು ತಲಕಾಡಿನಲ್ಲಿ ಬೀಡುಬಿಟ್ಟಿದ್ದಾಗ, ಅವನ ಮಗ ಶಂಕರಗಂಡನ ಬೇಡಿಕೆಯ ಮೇರೆಗೆ ಅಲ್ಲಿನ ವಿಜಯಬಸದಿಗೆ ಪೂಜಾಕೈಂಕರ್ಯಗಳಿಗಾಗಿ ವರ್ಧಮಾನ ಗುರುವಿಗೆ ಭೂಮಿದಾನ ಮಾಡಿದ್ದನ್ನು ತಿಳಿಸುತ್ತದೆ. ಇದರ ಕಾಲ ಕ್ರಿ.ಶ. ೮೦೮.

## ಬೌದ್ಧಧರ್ಮ

ಬೌದ್ಧಧರ್ಮ ಇಳಿಮುಖವಾಗುತ್ತಿದ್ದರೂ ರಾಷ್ಟ್ರಕೂಟರ ಪೋಷಣೆ ಬೌದ್ಧಧರ್ಮಕ್ಕೆ ಇದ್ದೇ ಇತ್ತು. ಇದಕ್ಕೆ ಈ ಕಾಲದಲ್ಲಿ ನಿರ್ಮಾಣವಾದ ಗುಹಾಲಯಗಳೇ ಸಾಕ್ಷಿ. ಆದರೆ ಈ ಕಾಲಘಟ್ಟದಲ್ಲಿ ಬೌದ್ಧಮಹಾಸಭೆಗಳ ಯಾವುದೇ ರೀತಿಯಾದ ಚಟುವಟಿಕೆಗಳು ಕಂಡುಬರುವುದಿಲ್ಲ. ಬೌದ್ಧ ಸಾಹಿತ್ಯವು ಈ ಸಮಯದಲ್ಲಿ ಬೆಳೆದಂತೆ ಕಾಣುವುದಿಲ್ಲ. "ಯಶಸ್ತಿಲಕಚಂಪು" ಕೃತಿಯಲ್ಲಿ ಸೋಮದೇವಸೂರಿಯು ಮಾಂಸಹಾರಿಗಳಾದ ಬೌದ್ಧರನ್ನು ಹೆಸರಿಸುತ್ತಾನೆ (Yashsthilaka and Indian Culture, p249).

ಐದನೆಯ ಶತಮಾನದಲ್ಲಿ ಬೌದ್ಧಧರ್ಮಕ್ಕೂ ಜೈನಧರ್ಮಕ್ಕೂ ಘರ್ಷಣೆ ನಡೆಯಿತು. ಇದರ ಉಲ್ಲೇಖ ಕ್ರಿ.ಶ. ೪೩೦ ರ ತಲಕಾಡಿನ ಶಾಸನದಲ್ಲಿದೆ (ಕರ್ನಾಟಕ

ಪರಂಪರೆ ಭಾಗ ೧, ಪು೨೦೫). ಕ್ರಿ.ಶ. ೯ ನೇ ಶತಮಾನದ ಆರಂಭದ ಹೊತ್ತಿಗೆ ಬೌದ್ಧಧರ್ಮ ಅವನತಿಯ ದಾರಿ ಹಿಡಿದಿತ್ತು. ಇದಕ್ಕೆ ಅದ್ವೈತ ಸಿದ್ಧಾಂತದ ಆಗಮನ, ಭಕ್ತಿಪ್ರಧಾನ ಅಲ್ಪಸಂಖ್ಯಾತ ಧರ್ಮಗಳ ಉಗಮ ಹಾಗೂ ಜೈನ ಧರ್ಮದ ಪ್ರಾಬಲ್ಯವೂ ಕಾರಣವಾಗಿರಬಹುದು. ಆದರೂ ಶಾಕ್ಯಮತದವರು ಇನ್ನೂ ಉಳಿದುಕೊಂಡಿದ್ದರು. ಈ ವಿಚಾರವು ಒಂದನೆಯ ಅಮೋಘವರ್ಷನ ಕಾಲದಲ್ಲಿ ರಚಿತವಾದ "ಕವಿರಾಜಮಾರ್ಗದಿಂದ" ತಿಳಿದುಬರುತ್ತದೆ. ಶಾಸನಗಳಲ್ಲಿಯೂ ಕೂಡ ಬೌದ್ಧ ಮತ್ತು ಜೈನ ಮತಗಳ ಮಧ್ಯೆ ನಡೆಯುತ್ತಿದ್ದ ವಿವಾದಗಳ ಬಗ್ಗೆ ಉಲ್ಲೇಖವಿದೆ. ಗಂಗ ಇಮ್ಮಡಿ ಬೂತಗನು (ಕ್ರಿ.ಶ. ೯೨೦-೯೬೦) 'ಏಕಾಂತ ಮತವರ್ಗದ ಮಿಥ್ಯಾವಾದಗಳೆಂಬ ಮದ್ದಾನೆಗಳ ಕುಂಭಸ್ಥಲಗಳನ್ನು ಶಾಸ್ತ್ರಸಮ್ಮತವಾದ ಪ್ರತಿವಾದಗಳೆಂಬ ಸಿಡಿಲುಗಳಿಂದ ಬಿರಿವಂತೆ ಮಾಡಿದನು' ಎಂಬುದಾಗಿ ಶಾಸನವೊಂದು ಹೊಗಳಿದೆ (ಮೈಸೂರು ಗೆಝೆಟಿಯರ್, ಸಂ. ೨, ಪು. ೬೭೮). ಕ್ರಿ.ಶ. ಸುಮಾರು ೯೬೮ರ ಬೋಧಗಯ ರಾಷ್ಟ್ರಕೂಟರ ಶಾಸನವು (BuddhaGaya, p 195, R.L. Mishra, Bhandarkars List No. 1668) ಸಿಂಹಳದ್ವೀಪದಿಂದ ಬಂದ ಬೌದ್ಧ ಭಿಕ್ಷುವೊಬ್ಬನನ್ನು ಉಲ್ಲೇಖಿಸಿದೆ. ಅರಸನು ಬುದ್ಧನಿಗಾಗಿ ಒಂದು ಗಂಧಕುಟಿ (ಸ್ತೂಪ) ಯನ್ನು ಕಟ್ಟಿಸಿಕೊಟ್ಟಿದ್ದನ್ನು ಹೇಳುತ್ತದೆ. ಗುಜರಾತಿನ ರಾಷ್ಟ್ರಕೂಟ ಎರಡನೆಯ ಧ್ರುವನ ಶಾಸನವು ಭೌದ್ಧ ಸ್ತುತಿಯಿಂದ ಪ್ರಾರಂಭವಾಗುತ್ತದೆ (EI., vol XXII, No. 12, p 71, 884 AD).

ಕರ್ನಾಟಕದಲ್ಲಿ ಬೌದ್ಧಧರ್ಮ ಉಳಿಯಬೇಕಾದರೆ ಬೌದ್ಧತತ್ವಗಳನ್ನು ಸರಳಗೊಳಿಸಿ ಭಕ್ತಿಯ ಮೂಲಕ ಪ್ರಚಾರ ಮಾಡಬೇಕಾದ ಅನಿವಾರ್ಯ ಪರಿಸ್ಥಿತಿ ಬಂದಿತು. ಇದರ ಪರಿಣಾಮವಾಗಿ ಹನ್ನೊಂದನೆಯ ಶತಮಾನದವರೆಗೆ ಬೌದ್ಧಧರ್ಮವು ಮುಂದುವರೆದಿತ್ತು. ಬೌದ್ಧಧರ್ಮವು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೋರಾಟ ನಡೆಸಿದರೂ, ಪ್ರಚಲಿತವಾಗಿದ್ದ ಬೇರೆ ಮತಗಳಲ್ಲಿ ಕ್ರಮೇಣ ಸೇರಿಹೋಯಿತು. ವೈದಿಕಧರ್ಮದವರು ಬುದ್ಧನನ್ನು ಕೂಡ ವಿಷ್ಣುವಿನ ಒಂದು ಅವತಾರ ಎಂದು ಪರಿಗಣಿಸಿದ್ದರಿಂದ ಹೀಗಾಯಿತು.

## ತಾಂತ್ರಿಕ

ಪಾಶುಪತರಲ್ಲಿ ತಾಂತ್ರಿಕ ಆಚರಣೆ ಗೋಚರವಾಗುವುದಲ್ಲ. ಇವರು ಕಾಲಭೈರವನ ಅರ್ಚಕರಾಗಿದ್ದರು. ಕೆಲವು ಲಾಕುಳ ಶೈವರು ಮಂತ್ರ ತಂತ್ರವಿದ್ಯೆಯಲ್ಲಿ ಪರಿಣಿತರಾಗಿದ್ದರು. ಶೈವಧರ್ಮದಲ್ಲಿ ವಾಮಾಚರದ ಪದ್ಧತಿ ಕಾಪಾಲಿಕರದ್ದಾಗಿದೆ. ಗೋರಕ್ಷನನ್ನು ಅಲ್ಲಮಪ್ರಭುವು ವಾದದಲ್ಲಿ ಸೋಲಿಸಿದನೆಂದು ಪ್ರಭುಲಿಂಗಲೀಲೆಯಲ್ಲಿ ಉಲ್ಲೇಖಿಸಲಾಗಿದೆ. ಯಶಸ್ತಿಲಕಚಂಪು ಕೃತಿಯಲ್ಲಿ ತಮ್ಮ ದೇಹದ ಮಾಂಸವನ್ನು ಮಾರುತ್ತಿದ್ದ, ಮಹಾವ್ರತಿಗಳ ಉಲ್ಲೇಖವಿದೆ (Yasastilaka and Indian Culture, p358). ಶಂಕರಾಚಾರ್ಯರು ಕರ್ನಾಟಕಕ್ಕೆ ಹೋಗುವುದಾಗಿ ವಿದರ್ಭದ ದೊರೆಗೆ ಹೇಳಿದಾಗ ಆತ ಬೇಡವೆನ್ನುತ್ತಾನೆ. ಇದಕ್ಕೆ ಕಾರಣವೇನಂದರೆ ಅಲ್ಲಿ ಕಾಪಾಲಿಕರೇ ಹೆಚ್ಚು ಎಂದನಂತೆ. ಕ್ರಿ.ಶ. ಹದಿನಾಲ್ಕನೇ ಶತಮಾನದ ಮಾಧವ ವಿದ್ಯಾರಣ್ಯ ವಿರಚಿತ ಶಂಕರದಿಗ್ವಿಜಯದಲ್ಲಿ ಇದನ್ನು ಉಲ್ಲೇಖಿಸಿದೆ.

## ನಾಥಪಂಥ

ನಾಥ ಸಂಪ್ರದಾಯವು ಕರ್ನಾಟಕದಲ್ಲಿ ಇತ್ತೆಂದು ತಿಳಿದುಬರುತ್ತದೆ. ಹನ್ನೊಂದನೇ ಶತಮಾನದ ಒಂದು ಶಾಸನದಲ್ಲಿ ಸ್ತಂಭನಾಥ, ದ್ವೀಪನಾಥ ಶಿಷ್ಯ ಮಾನಿನಾಥ, ಅವನ ಶಿಷ್ಯ ರೂಪಶಿವ ಎಂದು ಉಲ್ಲೇಖಿಸಿದೆ. ಇದರಿಂದ ನಾಥ ಸಂಪ್ರದಾಯವು ಇತ್ತೆಂದು ಹೇಳಬಹುದು.

## ಕೌಳರು

ಕಾಪಾಲಿಕರನ್ನೇ ಹೋಲುವ ಕೌಳ ಅಥವಾ ಕೌಲರೆಂಬ ಪಂಥವೊಂದು ರಾಷ್ಟ್ರಕೂಟರ ಕಾಲದಲ್ಲೂ ಇತ್ತು. ಕರ್ನಾಟಕದಲ್ಲಿ ಕೂಡ ಇವರಿದ್ದರು. ಆದರೆ ಯಾವ ಪ್ರದೇಶದಲ್ಲಿದ್ದರು, ಅವರ ಚಟುವಟಿಕೆಗಳೇನು ಎನ್ನುವ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಿಲ್ಲ. ಶಾಸನಗಳಲ್ಲಿ ಮಾಹಿತಿಯಿಲ್ಲ ಅಥವಾ ಇದ್ದರೂ ಒಂದೋ ಎರಡೋ ಇರಬಹುದು. ರಾಜಶೇಖರನು ತನ್ನ ಕರ್ಪೂರ ಮಂಜರಿಯಲ್ಲಿ ಭೈರವಾನಂದನೆಂಬ ಕೌಲನ ಬಗ್ಗೆ ಹೇಳಿದ್ದಾನೆ. ಈತನೊಬ್ಬ ಮಂತ್ರವಾದಿಯಾಗಿದ್ದು ಮದ್ಯಪಾನ ಮತ್ತು ಸ್ತ್ರೀಸಂಗವನ್ನು ಮಾಡುತ್ತಿದ್ದನೆಂದು ಹೇಳಿಕೊಂಡಿದ್ದರ ಬಗ್ಗೆ ಸೋಮದೇವನು

(YAIC P 355) ತಿಳಿಸಿದ್ದಾನೆ. ಮುಂದೆ ವಚನಕಾರರು ತಮ್ಮ ವಚನಗಳಲ್ಲಿ ಕೌಳರನ್ನು ನಿಂದಿಸಿರುವುದನ್ನು ಕಂಡಾಗ ಇವರ ಆಚರಣೆಗಳು ಜನರಿಗೆ ಸಹ್ಯವಾಗಿತ್ತಿರಲಿಲ್ಲ ಎನಿಸುತ್ತದೆ. ಕೌಳರು ಶಕ್ತಿಯ ಅರಾಧಕರೆಂದು ಹೇಳಬಹುದು.

## ಗೊರವರು

ಮೂರನೆಯ ಗೋವಿಂದನ ರಾಮೇಶ್ವರದ ಶಾಸನದಲ್ಲಿ (IA, Vol XI, P 126, 803–04A.D.) ಗೋಯಿಂದ ಭಟಾರನು ರಾಜ್ಯವಾಳುತ್ತಿದ್ದಾಗ, ಅರಸಿ ಗಾಮುಂಡಬ್ಬೆಯು ಮಹಾರಾಣಿಯಾಗಿ ರಾಜ್ಯಭಾರ ಮಾಡುತ್ತಿದ್ದಳೆಂದು ಉಲ್ಲೇಖಿಸಿದೆ. ಈ ಸಮಯದಲ್ಲಿ ಕಂಚಿಯ ಮೇಲೆ ಯುದ್ಧ ಮಾಡಿ ಕಪ್ಪ ಪಡೆಯಲು ಬಂದಾಗ ತುಂಗಭದ್ರಾ ನದಿಯ ದಡದಲ್ಲಿ ಬೀಡುಬಿಟ್ಟಿದ್ದರು. ಆಗ ರಾಮೇಶ್ವರದ ತೀರ್ಥದಲ್ಲಿ ಮಿಂದು ಬಂದು "ಮೊದಲೊಳ್ಮೈಪ್ಪಿಕ್ಕಿ ಪೊರದ ಪನ್ದಿಗಳನಿಱಿಯಲ್ಬನ್ದಲ್ಲೀ(ಲ್ಲಿ) ತೀರ್ಥಮೊಳ್ಪನ್ಕಣ್ಡು ಶಿವಧಾರಿ ಎಂಬ ಗೊರವರ್ಗ್ಗೆ ಮು(ಮುಂ)ದು ಮ್ಬೆಯಮನುನ್ತಕೀತ್ಥಿ(ರ್ತಿ)ವಮ್ಮೋ(ಮ್ಮ) ರಾಜ ಪರಮೇಶ್ವರ ದತ್ತಮಾನಿಟ್ಟಾ[ರ್]" ಎಂಬ ಉಲ್ಲೆಖವಿದೆ. ಶಿವಧಾರಿ ಎನ್ನುವ ಗೊರವನ ಉಲ್ಲೇಖವು ಬರುವುದರಿಂದ ಇಲ್ಲಿನ ರಾಮೇಶ್ವರ ತೀರ್ಥಕ್ಕೆ ಶಿವಧಾರಿ ಎಂಬ ಗೊರವರು ಸ್ಥಾನಪತಿಗಳಾಗಿದ್ದರೆಂದು ಊಹಿಸಬಹುದಾಗಿದೆ. ಪ್ರಭೂತವರ್ಷ ಜಗತ್ತುಂಗ (ಮೂರನೆಯ ಗೋವಿಂದ) ನ ಮೇದೂರು ಶಾಸನದಲ್ಲಿ (ARIE, 1958-59 No.B 582) ಸಳುಕಿ (ಚಾಲುಕ್ಯ) ವಂಶದ ರಾಜಾದಿತ್ಯ ಬಸದಿಗೆ ದಾನ ನೀಡಿದ್ದನ್ನು ಉಲ್ಲೇಖಿಸುತ್ತ ದಾನ ಪಡೆದ ವ್ಯಕ್ತಿಯನ್ನು ಮೋನಿ ಗುರುವನ ಶಿಷ್ಯನೆಂದು ತಿಳಿಸುತ್ತದೆ.

ಒಂದನೆಯ ಅಮೋಘವರ್ಷನ ಅರಿಶಿಣಗುಪ್ಪಿ ಶಾಸನದಲ್ಲಿ (KRI Collections of 1950 –51, 859 A.D.) "ಕಿಱುಗುಪ್ಪದೂರ [ಮ]ಳಗ [ಗೊ]ರಳ" ದೇವರಿಗೆ ಪುರುಷುತ್ತಮ (ಪುರುಷೋತ್ತಮ) ಕೆರೆಯನ್ನು ಬಂಜ್ಕೆದೇವನು ನೀಡಿದನು. ಕಂಕಾಳ ಗೊರವರ ಕಾಲನ್ನು ತೊಳೆದು ಈ ದಾನವನ್ನು ನೀಡಲಾಗಿದೆ. ಇದೇ ಅರಸನ ಶಿಗ್ಗಾಂವ್ (ಮಂತ್ರವಾದಿ) ಶಾಸನದಲ್ಲಿ (EI., Vol VII, No. 28, P 201 865 AD) ಎಟ್ಬುಙುಸೆಯ ನಲವತ್ತೆರಡು ಮಹಾಜನರು ಮತ್ತು ಮೋನಿ ಗೊರವರು, ಮೂಲಸ್ಥಾನದ ಮಹಾದೇವರು ವೆಲಂವಳ್ಳಿಯ ಶಾಸನವನ್ನು ಮತ್ತು ಎಂಬತ್ತಕ್ಕೆ

ಐವತ್ತು ಭೂಮಿ, ಮೂರು ತೋಟದ ನೆಲವನ್ನು ಮಾಡಿ ಆದಿತ್ಯ ಭಟಾರರ ಸ್ಥಾನವನ್ನು ರಕ್ಷಿಸಲು, ಗೋಕರ್ಣ ಪಂಡಿತರ ಕಾಲ್ತೊಳೆದು ಸರ್ವಭಾಧಾ ಪರಿಹಾರ ಮಾಡಿ ದಾನ ಮಾಡಿದನು. ಆ ಸ್ಥಾನವನ್ನು ಆಳುತ್ತಿದ್ದ ಗೊರವರು, ಅಖಂಡ ಬ್ರಹ್ಮಚಾರಿಗಳಾಗಿರಬೇಕು. "ಬ್ರಹ್ಮಚರ್ಯ ಹೀನರನ್ನು ಈ ಸಮಯದ ಗೊರವರುಗಳೆ ಕಳೆಯುವರು ಈ ಪದ್ದತಿಯನ್ನು" ಎಂದು ಶಾಸನವನ್ನು ನಿಲ್ಲಿಸಲಾಯಿತು. ಮೂರನೆಯ ಕೃಷ್ಣನ ಆತಕೂರು ಶಾಸನದಲ್ಲಿ (EC, Vol VII, Mu 42, No. 42, III Mu 41., 950 AD) ಚಲ್ಲೇಶ್ವರದ ದೇವಾಲಯದ ಮುಂದೆ ಇರಿಸಿರುವ ಕಲ್ಲನ್ನು ಪೂಜಿಸದೆ ಗೊರವರು ಆಹಾರ ಸೇವನೆ ಮಾಡಿದರೆ ನಾಯಿ ಮಾಡಿದ ಪಾಪಕ್ಕೆ ಸಮ ಎಂದು ಶಾಪಾಷಯದಲ್ಲಿ ತಿಳಿಸಲಾಗಿದೆ. ಇದೇ ಅರಸನ ಪೊರಟೂರು ಶಾಸನದಲ್ಲಿ (IA Vol XII P 257 951 AD) ರುದ್ದಪಯ್ಯ ಪೆರ್ಗಡೆ ಆಚಪಯ್ಯ, ಸಾಮಿ ಕಟ್ಟಿಯಮ್ಮರು, ಭೀಮರಾಶಿ ಭಟಾರರ ಕಾಲ್ತೊಳೆದು ಸಾವಿರ ಬೆಳ್ಳಿಯ ತೋಟವನ್ನು ದಾನ ಮಾಡಿದರು. ಸಿದ್ಧಾಯವೆಲ್ಲಾ ದೇವರಿಗೆ, ವರ್ಷಕ್ಕೆ ಮೂವತ್ತು ಕರಿಯ ದ್ರಮ್ಮಗಳು ಗೊರವರು ಮತ್ತು ತಿರುಕರಿಗೆ ಎಂಬುದಾಗಿ ಉಲ್ಲೆಖಿಸಲಾಗಿದೆ. ಇದು ತಪ್ಪದಂತೆ ನಡೆಸಲು ವಿದ್ಯಾದಾನಕ್ಕೆಂದು ಮಠಕ್ಕೆ ಹನ್ನೆರಡು ಮತ್ತರು ಭೂಮಿಯನ್ನು ನೀಡಿದ್ದನ್ನು ಉಲ್ಲೇಖಿಸಿದೆ. ಕದರಮಂಡಲಗಿಯ ಶಾಸನದಲ್ಲಿ (SII, Vol XVIII No. 38) ಭೂದಾನ ಮತ್ತು ದೇವಿಗೆರೆಯ ಮೊದಲ ತೋಟವನ್ನು ವೃಷಭಣಂದಿ ಗೊರವರಿಗೆ ವಿದ್ಯಾದಾನಕ್ಕಾಗಿ ಬಿಟ್ಟಿದ್ದನ್ನು ಮತ್ತು ಕದಿಮ್ಮಿರ್ಡಿಯ ಕಳನೂರ್ಗಣದ ತಿರಳಣಂದಿ ಗೊರವರಿಗೆ ಕಾಲ್ತೊಳೆದು, ಭಾವಿ, ತೋಟ, ಮನೆಯ ನಿವೇಶನ ಮುಂತಾದವುಗಳನ್ನು ಮೂರು ಭಾಗವಾಗಿ ದಾನ ಮಾಡಿದ್ದನ್ನು ಉಲ್ಲೇಖಿಸಿದೆ.

ಶೈವಧರ್ಮದ ಒಂದು ಭಾಗವಾಗಿಯೇ ಗೊರವರೂ ಇರುತ್ತಿದ್ದರು. ಇವರು ಸಾಮಾನ್ಯವಾಗಿ ಸ್ಥಾನಪತಿಗಳಾಗಿರುತ್ತಿದ್ದರೆಂದು ತಿಳಿದುಬರುತ್ತದೆ. ಅಕಾಲವರ್ಷನ ಭೋಗಾವತಿ ಶಾಸನದಲ್ಲಿ (ARIE, 1961-62., No.B 55) ಮಹಾರಾಜನ ಕೈಕೆಳಗಿನ ಅಧಿಕಾರಿ ಜಗತ್ತುಂಗನು ಅಣುಗ ಜೀವಿತನಾಗಿ ಕೆಲವು ಗಾವುಂಡರಿಂದ ದಾನವಾಗಿ ಜಮೀನನ್ನು ಪಡೆದನು. ಈ ಸಂದರ್ಭದಲ್ಲಿ ಪಲವೇಶ್ವರದ ಸ್ಥಾನಪತಿಯಾಗಿದ್ದ ವಾಚಸ್ಪತಿ ಭಬಾನ ಹೆಸರನ್ನು ಉಲ್ಲೇಖಿಸಲಾಗಿದೆ.

## ಲಾಕುಳ

ಲಾಕುಳ, ಪಾಶುಪತ, ಕಾಳಾಮುಖ ಮೂರೂ ಒಂದೇ ಪಂಥವನ್ನು ಸೂಚಿಸುವ ಪದಗಳಾಗಿವೆ. ಶೈವಧರ್ಮಕ್ಕೆ ಈ ಹೆಸರುಗಳೆಲ್ಲಾ ಇವೆ. ರಾಷ್ಟ್ರಕೂಟರ ಕಾಲದಲ್ಲಿ ಲಾಕುಳ ಪಂಥವು ಪ್ರಚಾರದಲ್ಲಿತ್ತು. ಎಲ್ಲೋರದಲ್ಲಿರುವ ಬೃಹತ್ ಲಕುಲೀಶ ವಿಗ್ರಹವನ್ನು ಇಲ್ಲಿ ನೆನೆಯಬಹುದಾಗಿದೆ. ಲಕುಲೀಶ ವಿಗ್ರಹವು ಸಾಮಾನ್ಯವಾಗಿ ಎಡಗೈಯಲ್ಲಿ ದಂಡ ಬಲಗೈಯಲ್ಲಿ ಮಾದಲದ ಹಣ್ಣು ಇಟ್ಟುಕೊಂಡಿರುವಂತೆ ಕೆತ್ತಿರುತ್ತಾರೆ. ಎಲ್ಲೋರದಲ್ಲಿರುವ ಲಕುಲೀಶನ ವಿಗ್ರಹದ ಎಡಗೈಯಲ್ಲಿ ದಂಡವಿದೆ. ಬಲಗೈ ಮುದ್ರೆಯೊಂದರಲ್ಲಿದೆ. ಕಾಳಾಮುಖರು ತಾಂತ್ರಿಕ ಅಥವಾ ವಾಮಾಚಾರ ಪಂಥಕ್ಕೆ ಸೇರಿದವರಲ್ಲ. ಕಿಗ್ಗದ ಶಾಸನದಲ್ಲಿ (EC, Vol VI, Kp39, C700 AD) ಪಾಶುಪತದ ಬಗ್ಗೆ ಉಲ್ಲೇಖವಿದೆ. ಮುಖಕ್ಕೆ ಮಸಿ ಬಳಿದುಕೊಳ್ಳುತ್ತಿದ್ದುದ್ದರಿಂದ ಕಾಳಾಮುಖರೆಂಬ ಹೆಸರು ಬಂದಿದೆ. ಶಿರಾದ ಶಾಸನದಲ್ಲಿ (EC, Vol XII, Si 28, 943 AD) ಲಕುಲೀಶನು ಬಿಲ್ಲುಕಾರ್ಯ ಮುನಿಯಾಗಿ ಅವತರಿಸಿದನೆಂದು ಉಲ್ಲೇಖಿಸಿದೆ. ಕ್ರಿ. ಶ. ಹತ್ತನೆಯ ಶತಮಾನದ ಶಾಸನದಲ್ಲಿ (BKI I, i, 41, 969 AD) ಲಾಕುಳಿದೇವನೆಂಬ ಹೆಸರಿನ ಸನ್ಯಾಸಿಯ ಉಲ್ಲೇಖವಿದೆ. ಲಾಕುಳ ಕೇಂದ್ರಗಳು ಇದ್ದರೂ ನಿಖರವಾಗಿ ಗುರುತಿಸಲು ಸಾಕಷ್ಟು ಆಧಾರಗಳಿಲ್ಲ.

## ವೈಷ್ಣವ

ಭಾರತದ ಇತಿಹಾಸದಲ್ಲಿ ಅಥವಾ ಭಾರತೀಯರಲ್ಲಿ ವಿಷ್ಣುವಿನ ಸ್ಥಾನ ಪಾಲಕನದಾಗಿದೆ. ಸ್ಥಿತಿಕಾರಿಯಾದ ಈತನನ್ನು ತ್ರಿಮೂರ್ತಿಗಳಲ್ಲಿ ಒಬ್ಬನೆಂದು ಪರಿಗಣಿಸಲಾಗಿದೆ. ವೈದಿಕಧರ್ಮ ಉಚ್ಛ್ರಾಯವಾಗಿದ್ದ ಕಾಲದಲ್ಲಿ ವೈಷ್ಣವ ಮುಂತಾದ ಧರ್ಮಗಳು ಹೆಚ್ಚು ಕಡಿಮೆ ಅಸ್ತಿತ್ವದಲ್ಲಿಯೇ ಇರಲಿಲ್ಲ. ರಾಷ್ಟ್ರಕೂಟರ ಕಾಲದಲ್ಲಿ ಬೌದ್ಧಧರ್ಮ ಇಳಿಮುಖವಾಗುತ್ತಾ ಜೈನಧರ್ಮವು ಪ್ರಾಬಲ್ಯಕ್ಕೆ ಬರತೊಡಗಿತು. ಜೊತೆಜೊತೆಗೇ ಶೈವಧರ್ಮವೂ ಪ್ರಬಲವಾಗತೊಡಗಿತು. ವೈಷ್ಣವಧರ್ಮ ಶೈಶವಾವಸ್ಥೆಯಲ್ಲಿತ್ತೆಂದು ಭಾವಿಸಬಹುದು. ಭಗವಂತನ ಸಗುಣೋಪಾಸನೆಯೇ

ವೈಷ್ಣವ ಧರ್ಮದ ಮುಖ್ಯ ಲಕ್ಷಣವಾಗಿದೆ. ವಿಷ್ಣುವಿನ ಹತ್ತು ಅವತಾರಗಳನ್ನು ಹೇಳಿದರೂ ಏಕದೇವತಾ ಉಪಾಸನೆಯನ್ನು ಎತ್ತಿಹಿಡಿಯುತ್ತದೆ. ಪ್ರಪತ್ತಿ ಮಾರ್ಗವನ್ನು ಅನುಸರಿಸಬೇಕು. ಅಂದರೆ ತನ್ನ ಇಷ್ಟದೈವಕ್ಕೆ ತನ್ನನು ತಾನು ಅರ್ಪಿಸಿಕೊಳ್ಳುವುದು ಬಹಳ ಮುಖ್ಯ. ಬೌದ್ಧಿಕ ಜ್ಞಾನಕ್ಕಿಂತ ಭಾವರೂಪದ ಭಕ್ತಿಯೇ ಶ್ರೇಷ್ಠ. ಇಲ್ಲಿ ಕೆಳವರ್ಗ ಮೇಲ್ವರ್ಗದವರೆನ್ನದೇ ಎಲ್ಲರಿಗೂ ಭಕ್ತರಾಗಲು ಮುಕ್ತ ಅವಕಾಶವಿತ್ತು. ಶಾಸನಾಧಾರಿತವಾಗಿ ಹೇಳುವುದಾದರೆ ಕ್ರಿ.ಶ. ಸುಮಾರು ೪೫೦ ಹಲ್ಮಿಡಿ ಶಾಸನವು ವಿಷ್ಣುವಿನ ಪ್ರಾರ್ಥನೆಯೊಂದಿಗೆ ಆರಂಭವಾಗಿರುವುದು ಕಂಡುಬರುತ್ತದೆ. ಬಾದಾಮಿ ಚಲುಕ್ಯರು ವೈಷ್ಣವ ಗುಹಾದೇವಾಲಯವನ್ನು ಕೊರೆಸಿದರು. ರಾಷ್ಟ್ರಕೂಟರು ಕೂಡ ವೈಷ್ಣವ ದೇವಾಲಯಗಳನ್ನು ಕೊರೆಸಿದರು. ಸಾಹಿತ್ಯವು ಸಿಕ್ಕುವುದು ಬಹಳ ಕಡಿಮೆಯಾದರೂ, ಶಿಲ್ಪದಲ್ಲಿ ವೈವಿಧ್ಯತೆಗಳನ್ನು ಗುರುತಿಸಬಹುದಾಗಿದೆ. ಎಲ್ಲೋರದ ದಶಾವತಾರ ಗುಹೆಯೇ ಅಲ್ಲದೇ ಬಿಡಿ ಶಿಲ್ಪಗಳನ್ನು ಕಾಣಬಹುದು. ರಾಷ್ಟ್ರಕೂಟರ ಕಾಲದಲ್ಲಿ ಅನೇಕ ವೈಷ್ಣವ ದೇವಾಲಯಗಳು ನಿರ್ಮಾಣವಾಗಿವೆ. ಎರಡನೆಯ ಕೃಷ್ಣನ ಕಾಲದ ಕೋಯಿಣೇಶ್ವರ (SII., vol XI, Pt. I, No.22, 896 AD), ನಾಲ್ಕನೆಯ ಗೋವಿಂದನ ಕೌಜಗೇರಿಯ ದೇವಾಲಯ (SII., vol XI, Pt. I, No.35, 933 AD), ಕೃಷ್ಣರಾಜ ಕಾಲದಲ್ಲಿ ಕಟ್ಟಿಸಿದ ಕೇಶವ ದೇವಾಲಯ, ಮೂರನೆಯ ಇಂದ್ರನ ಕಾಲದ ಬೀರನಾರಾಯಣ ದೇವಾಲಯ (ARIE., 1945-48, No.203, 924 AD), ಮೂರನೆಯ ಕೃಷ್ಣನ ಕಾಲದಲ್ಲಿ ನಿರ್ಮಾಣವಾದ ವೀರನಾರಾಯಣ (EI., vol XXXV, p 105), ವಿಷ್ಣು, ಹರಿ, ಮಧುಸೂದನ ದೇವಾಲಯಗಳು ಮುಂತಾದವುಗಳನ್ನು ಹೆಸರಿಸಬಹುದಾಗಿದೆ. ಶೈವ ಕೇಂದ್ರಗಳಿದ್ದಂತೆ ವೈಷ್ಣವ ಕೇಂದ್ರಗಳಿದ್ದವೆಂದು ಹೇಳಲಾಗುವುದಿಲ್ಲ. ಆದರೆ ಮೂರನೆಯ ಕೃಷ್ಣನ ತಿರುವಡಿಯ ಶಾಸನವು (RITC., No.213, 955 AD) ೯೬ ಕುರಿಗಳ ದಾನವನ್ನು ನಂದಾದೀಪಕ್ಕಾಗಿ ನೀಡಿದ್ದನ್ನು ಉಲ್ಲೇಖಿಸಿದೆ. ಈ ದತ್ತಿಯನ್ನು ರಕ್ಷಿಸುವ ಅಧಿಕಾರವು ಅಲ್ಲಿನ ನಗರತ್ತಾರ, ವೀರಗಣತ್ತಾರ ಹಾಗೂ ಶ್ರೀವೈಷ್ಣವರಿಗಿದ್ದಿತ್ತು ಎಂದು ಉಲ್ಲೇಖಿಸುತ್ತದೆ. ಇದನ್ನು ಕಂಡಾಗ ಶ್ರೀವೈಷ್ಣವ ಆಚಾರ್ಯರು ವಾಸಿಸುತ್ತಿದ್ದ ಸ್ಥಳ ಅಥವಾ ದೇವಾಲಯವನ್ನು ವೈಷ್ಣವಸ್ಥಾನವೆಂದು

ಕರೆಯುತ್ತಿದ್ದರೆನ್ನಬಹುದು ಅಥವಾ ಅದೊಂದು ವಿದ್ಯಾಭಾಸ ಕೇಂದ್ರವೂ ಆಗಿತ್ತೆನ್ನಬಹುದು.

### ಶಾಕ್ತ

ಈ ಕಾಲದ ಹೊತ್ತಿಗೆ ಶಾಕ್ತಮತವು ಬಹಳ ಪ್ರಬಲವಾಗಿತ್ತು. ತಾಂತ್ರಿಕ ಪದ್ಧತಿಗಳೊಂದಿಗೆ ವಾಮಮಾರ್ಗದಲ್ಲಿ ಶಕ್ತಿಯನ್ನು ಉಪಾಸನೆ ಮಾಡುವ ಕಾಪಾಲಿಕರುಗಳಿದ್ದರು. ಹಲವು ಕ್ಷೇತ್ರಗಳು ಶಾಕ್ತ ಪ್ರಭಾವಕ್ಕೆ ಒಳಗಾಗಿದ್ದನ್ನು ಕಾಣಬಹುದು. ದೇವಿಯ ಹಲವು ಸ್ವರೂಪಗಳ ಉಪಾಸನೆಯು ನಡೆಯುತ್ತಿತ್ತು. ಇದಕ್ಕೆ ನಿದರ್ಶನವಾಗಿ ಕೆಲವು ಲಜ್ಜಾ ಗೌರಿಯ ಶಿಲ್ಪಗಳು ಸಿಕ್ಕಿರುವುದನ್ನು ಕಾಣುತ್ತೇವೆ. ಶಂಕರರು ತಮ್ಮ ಮತಪ್ರಚಾರದ ಸಂದರ್ಭಗಳಲ್ಲಿ ಹಲವು ಶಾಕ್ತ ಕೇಂದ್ರಗಳಲ್ಲಿ ವಾಮಮಾರ್ಗವನ್ನು ನಿಲ್ಲಿಸಿ, ಶ್ರೀಚಕ್ರ ಪ್ರತಿಷ್ಠಿಸಿದರೆಂಬ ಐತಿಹ್ಯಗಳು ಕೇಳಿಬರುವುದು. ಅವರು ತಮ್ಮ ಷಣ್ಮತಗಳಲ್ಲಿ ಶಕ್ತಿಯ ಉಪಾಸನೆಗೂ ಪ್ರಾಧಾನ್ಯ ಕೊಟ್ಟದ್ದೂ ಅದನ್ನು ದಕ್ಷಿಣಾಚಾರ ರೀತ್ಯ ಪ್ರತಿಪಾದಿಸಿದ್ದಾರೆ. ಪಂಚಮಕಾರಗಳ ಆಧಾರದಿಂದ ಶಾಕ್ತ ಉಪಾಸನೆಗಳು ನಡೆದುಬಂದಿರುವುದರ ಉಲ್ಲೇಖಗಳು ಸಿಗುವುದು. ಕೋಡಿ ಮಠದ ಶಾಸನದಲ್ಲಿ ಶಾಕ್ತ ಗುರು ವಾಮಶಕ್ತಿ ಪಂಡಿತನ ಉಲ್ಲೇಖವಿದೆ. ಈ ಶಾಸನವು ಕಲ್ಯಾಣಿ ಚಾಲುಕ್ಯರದಾಗಿದ್ದರೂ, ಕೋಡಿ ಮಠದ ನಿರ್ಮಾಣ ಯಾವ ಕಾಲದಲ್ಲಿಯೇ ಆದರೂ, ಅದಕ್ಕೂ ಹಿಂದಿನ ಕಾಲದಿಂದಲೂ ಶಕ್ತ್ಯೋಪಾಸನೆ ಇದ್ದಿತ್ತೆಂದು ಹೇಳಬಹುದು. ಇದಲ್ಲದೇ ಅಮೋಘವರ್ಷ ನೃಪತುಂಗನು ಜೈನನಾಗಿದ್ದರೂ ಕೊಲ್ಲಾಪುರದ ಮಹಾಲಕ್ಷ್ಮಿದೇವಿಯ ಪರಮ ಉಪಾಸಕನೆಂದು ತಿಳಿದು ಬರುವುದು.

### ವೈದಿಕ ಆರಾಧನೆಗಳು

ರಾಷ್ಟ್ರಕೂಟರ ಕಾಲದಲ್ಲಿ ವೈದಿಕ ಧರ್ಮವು ತನ್ನ ಉಚ್ಛ್ರಾಯದಲ್ಲಿತ್ತು. ಶಂಕರರ ಷಣ್ಮತಗಳು ಜನಸಾಮಾನ್ಯರಲ್ಲಿ ಮನ್ನಣೆಯನ್ನು ಹೊಂದಿತ್ತು. ಈ ಕಾಲದ ಇನ್ನೊಂದು ವಿಶೇಷವೆಂದರೆ ಶಂಕರರ ಜ್ಞಾನ ಮಾರ್ಗವನ್ನು ವಿರೋಧಿಸಿ ಭಾಗವಜ್ಜನರ ಭಕ್ತಿ ಪಂಥವು ಪ್ರಚಾರವಾಗುತ್ತಿತ್ತು. ಪೂರ್ವದಲ್ಲಿದ್ದಂತೆಯೇ ಅಗ್ನಿಸ್ತೋಮ, ವಾಜಪೇಯ, ಹಿರಣ್ಯಗರ್ಭ ಮೊದಲಾದ ಯಜ್ಞಗಳು, ಇಷ್ಟಿಗಳು ಮುಂದುವರೆದಿತ್ತು. ಹೀಗಿದ್ದರೂ ಭಕ್ತಿಯ ಪ್ರಾಧಾನ್ಯತೆ ಹೆಚ್ಚಾಗಿದ್ದು, ಭಾಗವತ ಎಂಬ ಕಲ್ಪನೆ

ಜನಜನಿತವಾಗಿತ್ತು. ಬಾದಾಮಿ ಚಲುಕ್ಯರ ಕಾಲದಲ್ಲಿಯೇ ಮಂಗಲೀಶನಿಗೆ ಪರಮಭಾಗವತ ಎಂಬ ಬಿರುದಿದ್ದದ್ದು ಗಮನಾರ್ಹ. ಅದ್ವೈತದ ನಿರ್ಗುಣೋಪಾಸನೆಯು ಸಾಮಾನ್ಯರಿಗೆ ಎಟುಕುವುದು ಕಷ್ಟವಾದ್ದರಿಂದ ಸಗುಣೋಪಾಸನೆಯು ಮೋಕ್ಷಕ್ಕೆ ಸುಲಭ ಮಾರ್ಗವಾಗಿತ್ತು ಎಂಬ ಕಲ್ಪನೆ ಬಲವಾಗಿತ್ತು. ಹೀಗಾಗಿ ಒಂದು ಕಡೆ ಅದ್ವೈತ ಸಿದ್ಧಾಂತದ ಬೆಳವಣಿಗೆಯು ಮತ್ತೊಂದು ಕಡೆ ಭಾಗವತ ಪಂಥದ ಬೆಳವಣಿಗೆಯು ಜೊತೆಜೊತೆಯಾಗಿದ್ದುದನ್ನು ಕಾಣಬಹುದು.

## ಸೂರ್ಯಾರಾಧನೆ – ನಾಗಾರಾಧನೆ

ರಾಷ್ಟ್ರಕೂಟರ ಕಾಲದಲ್ಲಿ ಸೂರ್ಯದೇವರ, ಆದಿತ್ಯದೇವರ ದೇವಾಲಯಗಳು ನಿರ್ಮಾಣವಾಗಿರುವ ಉಲ್ಲೇಖಗಳು ಕಂಡುಬರುತ್ತವೆ. ಮಾನಪುರದ ರಾಷ್ಟ್ರಕೂಟರ ರಾಜಧಾನಿಯಾದ ಮಾನಪುರದಲ್ಲಿ ಸೂರ್ಯದೇವಾಲಯವಿದ್ದ ಉಲ್ಲೇಖವಿದೆ. ಸೂರ್ಯಾರಾಧಕರ ಸಂಖ್ಯೆ ಹೆಚ್ಚಾಗಿ ಅಲ್ಲದ್ದಿದ್ದರೂ ಅಲ್ಪಸಂಖ್ಯೆಯಲ್ಲಿ ಸಿಗುತ್ತದೆ. ನಾಗಾರಾಧನೆಯು ಕರ್ನಾಟಕದಲ್ಲಿ ಇತ್ತು. ನಾಗರಖಂಡ – ೭೦ ರ ಪ್ರದೇಶದಲ್ಲಿ ಅಥವಾ ಉತ್ತರ ಕರ್ಣಾಟಕದ ಬಹುಭಾಗದಲ್ಲಿ ನಾಗಾರಾಧನೆಯಿತ್ತು. ಶಿರಗಂಬಿಯ ಶಾಸನದಲ್ಲಿ (ARIE., 1960-61, no. 479) ಗೆಣ್ಡವಣ ಮತ್ತು ಇನ್ನಿತರ ತೊಂಬತ್ತೈದು ಮಂದಿ ಪ್ರಜೆಗಳು ನಾಗಸ್ತಂಭವನ್ನು ಮಾಡಿದರು ಎಂಬ ಉಲ್ಲೇಖವಿದೆ.

## ದಾನಗಳು

ದಾನ ನೀಡುವುದು ಮನುಷ್ಯನ ಸ್ವಭಾವಗಳಲ್ಲಿ ಒಂದು. ತನ್ನಲ್ಲಿ ಇರುವ ಅಥವಾ ಹೆಚ್ಚಾಗಿ ಇರುವ ಪದಾರ್ಥಗಳನ್ನು ಇನ್ನೊಬ್ಬರಿಗೆ ಕೈಯೆತ್ತಿ ಕೊಡುವುದೇ ದಾನದ ಪ್ರಕ್ರಿಯೇಯುಳ್ಳವನನ್ನು ದಾನಿಯೆನ್ನಲಾಗುತ್ತದೆ. ದಾನ ನೀಡುವುದರಿಂದ ದಾನಿಗೆ ಯಾವುದೇ ರೀತಿಯ ನಷ್ಟವಿಲ್ಲ. ಇಹಪರಗಳಲ್ಲಿ ಪುಣ್ಯ ಸಿಗುವುದೆಂಬ ಸಾತ್ವಿಕ ನಂಬಿಕೆಯೇ ದಾನದ ಹಿಂದಿರುವ ನಂಬಿಕೆ, ಭಾವನೆ. ಎಲ್ಲ ರಾಜವಂಶಗಳ ಕಾಲದಲ್ಲೂ ದಾನ ನೀಡುವ ಪದ್ಧತಿಯಿತ್ತು. ಅರಸನೇ ದಾನ ನೀಡಬೇಕೆಂಬ ನಿಯಮವೇನೂ ಇರಲಿಲ್ಲ. ಯಾರು ಬೇಕಾದರೂ ದಾನ ನೀಡಬಹುದಾಗಿತ್ತು. ದಾನದ ವಸ್ತುವು ಕೂಡ ಇಂತಹುದೇ ಇರಬೇಕೆಂಬ ನಿಯಮವೇನೂ ಇಲ್ಲ. ಹಣ, ಭೂಮಿ, ವಸ್ತು, ಗೋವು,

ವಸ್ತ್ರ, ಮನೆಯ ನಿವೇಶನ, ಆಹಾರದಾನ, ವಿದ್ಯಾದಾನ, ದೇವಾಲಯದಲ್ಲಿ ದೇವರ ಅಂಗಭೋಗಾದಿಗಳಿಗೆ ಹೀಗೆ ಎಲ್ಲದಕ್ಕೂ ಅನ್ವಯವಾಗುವಂತೆ ದಾನಗಳನ್ನು ನೀಡಬಹುದಿತ್ತು. ದಾನ ನೀಡುವುದರಿಂದ ಇನ್ನೊಬ್ಬರಿಗೆ ಸಹಾಯ ಮಾಡಿದ ತೃಪ್ತಿ ಮನಸ್ಸಿಗೆ ಬರುವುದರಿಂದ ದಾನಿ ಸಂತೋಷಭರಿತನಾಗುತ್ತಾನೆ.

ಭಾರತೀಯ ಸಂಸ್ಕೃತಿಯಲ್ಲಿ ದಾನಗಳಿಗೆ ವಿಶಿಷ್ಟ ಸ್ಥಾನವಿದೆ. ಅನೇಕ ಬಗೆಯ ದಾನಗಳನ್ನು ಗಮನಿಸಬಹುದಾಗಿದೆ. ಸಾಮಾನ್ಯ ದಾನಗಳು, ಮಹಾದಾನಗಳು, ಷೋಡಶ ಮಹಾದಾನಗಳು ಮುಂತಾದವುಗಳನ್ನು ಇಲ್ಲಿ ಸ್ಮರಿಸಬಹುದು. ದಾನಿಯ ಉದಾರತೆಯೇ ಪ್ರಧಾನ್ಯ. ದಾನವು ಶಾಶ್ವತವಾಗಿ ನಿಲ್ಲಲು ಬೇಕಾದ ವ್ಯವಸ್ಥೆಯನ್ನು ಕೂಡ ಮಾಡುತ್ತಿದ್ದುದು ಇದೇ ಉದ್ದೇಶದಿಂದಲೇ ಆಗಿದೆ. ಶಾಸನದ ಶಾಪಾಶಯಗಳಲ್ಲಿ ದಾನವನ್ನು ರಕ್ಷಿಸಿದವರಿಗೆ ಕೂಡ ಬಹಳಷ್ಟು ಪುಣ್ಯ ಸಿಗುವ ಬಗ್ಗೆ ಹೇಳಿವೆ.

### ಮಹಾದಾನಗಳು

ಶ್ರೀ, ತುಲಾಭಾರ, ಹಿರಣ್ಯಗರ್ಭ, ತಿಲಶೈಲ, ಸ್ವರ್ಣಭೂಮಿ, ಕಲ್ಪವೃಕ್ಷ, ಸ್ವರ್ಣಗಣಪತಿ, ಸ್ವರ್ಣಧೇನು, ಶ್ರೀತಿಲಧೇನು, ಗೋಸಹಸ್ರ, ಹಿರಣ್ಯಾಕ್ಷ, ಕನ್ಯಾದಾನ, ಹಿರಣ್ಯವೃಷಭ, ಸ್ವರ್ಣಲೋಕಪಾಲಾಷ್ಟಕ, ಹಿರಣ್ಯಗಜ, ಮೂರ್ತಿತ್ರಯ, ಪ್ರತಿಮಾದಾನಗಳ ಬಗ್ಗೆ ಲಿಂಗಪುರಾಣದಲ್ಲಿ ಉಲ್ಲೇಖವಿದೆ. ರಾಷ್ಟ್ರಕೂಟರ ಕಾಲದಲ್ಲಿ ಎಲ್ಲ ಮಹಾದಾನಗಳ ಉಲ್ಲೇಖವಿಲ್ಲದಿದ್ದರೂ ಹಿರಣ್ಯಗರ್ಭ, ತುಲಾಭಾರ, ಸ್ವರ್ಣಧೇನು, ಗೋಸಹಸ್ರಗಳ ಉಲ್ಲೇಖವಿದೆ. ದಂತಿದುರ್ಗನು ತುಲಾಪುರುಷ, ಹಿರಣ್ಯಗರ್ಭ ದಾನವನ್ನು ಉಜ್ಜಯಿನಿಯಲ್ಲಿ ಮಾಡಿದ ಉಲ್ಲೇಖ ಸಂಜಾನ್ ಶಾಸನದಲ್ಲಿದೆ (EI., Vol XVIII, P 235, 871 A.D). ನಾಲ್ಕನೆಯ ಗೋವಿಂದನ ಅಂಡೂರ ಶಾಸನದಲ್ಲಿ (EI., vol XXXVI, p 257, 929 AD) ಹಿರಣ್ಯಗರ್ಭ, ಉಭಯಮುಖಿ ದಾನ, ಕಲ್ಪವೃಕ್ಷ ಮುಂತಾದವುಗಳ ಉಲ್ಲೇಖಗಳಿವೆ.

### ಗೋಸಹಸ್ರ

ಗೋಸಹಸ್ರ ದಾನವು ಹೆಸರೇ ಹೇಳುವಂತೆ ಸಹಸ್ರ ಗೋವುಗಳನ್ನು ದಾನಮಾಡಬಹುದಾಗಿದೆ. ಷೋಡಶ ಮಹಾದಾನಗಳಲ್ಲಿ ಗೋಸಹಸ್ರವೂ ಒಂದಾಗಿದೆ.

ರಾಷ್ಟ್ರಕೂಟರ ಕಾಲದಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಗೋಸಹಸ್ರ ದಾನಗಳು ನಡೆದಿವೆ. ರಾಷ್ಟ್ರಕೂಟರ ಕಾಲದಲ್ಲಿ ಇದ್ದಂತಹ ವಿಶೇಷವೆಂದು ಬೇಕಾದರೂ ಹೇಳಬಹುದು. ಏಕೆಂದರೆ ರಾಷ್ಟ್ರಕೂಟರ ಕಾಲದಲ್ಲಿ ಗೋಸಾಸಗಳು ಅರಳು ಸಿಡಿದಂತೆ ಹರದಿರುವುದು ಕಂಡುಬರುತ್ತದೆ. ಅದರಲ್ಲೂ ಇಂದಿನ ಧಾರಾವಾಡ ಪ್ರದೇಶದಲ್ಲಿ ಅತಿಹೆಚ್ಚಾಗಿ ಕಂಡುಬರುತ್ತದೆ. ಅಲ್ಲಿ ಗೋಸಂಪತ್ತು ಹೆಚ್ಚಾಗಿರುವುದರಿಂದ ಅದರ ದಾನವೂ ಹೆಚ್ಚಾಗಿಯೇ ನಡೆದಿದೆ ಎಂದು ಹೇಳಬಹುದು. ಹಿಂದಿನ ಧಾರವಾಡ ಜಿಲ್ಲೆಯ ಸುತ್ತಮುತ್ತಲೂ ಗೋಸಾಸ ಕಲ್ಲುಗಳು ಕಂಡೂಬಂದರೂ, ಇಂದಿನ ಧಾರವಾಡ, ಹಾವೇರಿ, ಗದಗ ಜಿಲ್ಲೆಗಳಲ್ಲಿಯೇ ಅತಿಹೆಚ್ಚಿನ ಸಂಖೆಯಲ್ಲಿ ಕಂಡುಬರುವುದು ಸೋಜಿಗದ ಸಂಗತಿಯಾಗಿದೆ.

## ಹಿರಣ್ಯಗರ್ಭ

ಹಿರಣ್ಯಗರ್ಭಂ ರಾಜನ್ಯೈರುಜ್ಜಯಿನ್ಯಾಂ ಯದಾಸಿತಂ।

ಪ್ರತಿಹಾರೀ ಕೃತಂ ಯೇನ ಗುರ್ಜ್ಜರೇಶಾದಿರಾಜಕಂ॥

(ಸಂಜಾನ್ ಶಾಸನ EI, Vol XVIII, P 235, 871 A.D.)

ಉಜ್ಜಯಿನಿಯಲ್ಲಿ ಹಿರಣ್ಯಗರ್ಭ ದಾನವನ್ನು ಮಾಡಿದಾಗ ದಂತಿದುರ್ಗನು ಗುರ್ಜ್ಜರ ಮುಂತಾದ ರಾಜ್ಯಗಳ ಅರಸರನ್ನು ತನ್ನ ದ್ವಾರಪಾಲಕರನಾಗಿ ಮಾಡಿಕೊಂಡಿದ್ದನೆಂದು ಸಂಜಾನ ಶಾಸನವು ಉಲ್ಲೇಖಿಸಿದೆ. ಶ್ಲೋಕವನ್ನು ಸರಿಯಾಗಿ ಗಮನಿಸಿದರೆ ಬೇರೆ ಬೇರೆ ರಾಜರುಗಳು ಎನ್ನುವ ಪದಪ್ರಯೋಗಕ್ಕಿಂತ ಅನೇಕ ರಾಜರು ಉಜ್ಜಯಿನಿಯಲ್ಲಿ ಹಿರಣ್ಯಗರ್ಭದಾನವನ್ನು ಮಾಡಿದಾಗ ಎನ್ನುವ ಅರ್ಥದಿಂದ ಈ ದಾನವನ್ನು ದಂತಿದುರ್ಗನೊಬ್ಬನೇ ಮಾಡಲಿಲ್ಲ. ದಂತಿದುರ್ಗನ ಸಮ್ಮುಖದಲ್ಲಿ ಮಾಡಿದ್ದು ಎಂದು ತಿಳಿದುಬರುತ್ತದೆ. ಹಿರಣ್ಯಗರ್ಭ ದಾನವು ಷೋಡಶ ಮಹಾದಾನಗಳಲ್ಲಿ ಒಂದಾಗಿದೆ. ತುಲಾಭಾರ, ಶ್ರೀದಾನಕ್ಕಿಂತಲೂ ಭಿನ್ನವಾದ ದಾನವಾಗಿದೆ.

ಧರ್ಮಗಳ ಸಂಖ್ಯೆಯನ್ನಾಗಲೀ, ಆರಾಧನೆಗಳನ್ನಾಗಲೀ ಗುರುತಿಸುವ ಪ್ರಯತ್ನ ಮಾಡಬಹುದು. ಆದರೆ ಇಷ್ಟೇ ಇತ್ತುಎಂದು ನಿರ್ದಿಷ್ಟವಾಗಿ ಹೇಳಲು ಯಾರಿಂದಲೂ ಸಾಧ್ಯವಿಲ್ಲ. ರಾಷ್ಟ್ರಕೂಟರ ಕಾಲಕ್ಕೆ ಬೌದ್ಧಧರ್ಮದಲ್ಲಿ ಹಿ ನಾಯಾನ, ಮಹಾಯಾನದ

ಜೊತೆಗೆ, ವಜ್ರಾಯಾನವೂ ಆಚರಣೆಯಲ್ಲಿತ್ತು. ಜೈನಧರ್ಮದಲ್ಲಿ ಕೂಡ ಶ್ವೇತಾಂಬರ, ದಿಗಂಬರ ಸಂಪ್ರದಾಯಗಳು ಅಸ್ತಿತ್ವದಲ್ಲಿತ್ತು. ಕರ್ನಾಟಕದಲ್ಲಿ ಶ್ವೇತಾಂಬರ ಪಂಥವು ಹೆಚ್ಚು ಪ್ರಚಲಿತವಾಗಿರಲಿಲ್ಲ. ಶೈವಧರ್ಮದ ಪಂಥಗಳಾದ ಲಾಕುಳ, ಗೊರವ, ನಾಥಪಂಥ, ತಾಂತ್ರಿಕ ಪಂಥಗಳು ಜನರ ಮೇಲೆ ಯಾವ ರೀತಿಯ ಪ್ರಭಾವ ಬೀರಿದ್ದವೆಂದು ತಿಳಿಯುವುದಿಲ್ಲ. ಆರಾಧನೆಗಳು ತೀರ ಸಣ್ಣಪುಟ್ಟ ಆಚರಣೆಗಳಾಗಿದ್ದು ಜನರು ತಮ್ಮ ಶಕ್ತ್ಯಾನುಸಾರ ಆಚರಿಸುತ್ತಿದ್ದರೆನ್ನಬಹುದು. ಇಸ್ಲಾಂ ಧರ್ಮದವರಿಗೂ ಮನೇದಿ ಕಟ್ಟಿಕೊಳ್ಳಲು ಅವಕಾಶವಿತ್ತು. ಅವರ ಧಾರ್ಮಿಕ ಆಚರಣೆಗಳಿಗೆ ಯಾವ ಅಡ್ಡಿಯೂ ಇರಲಿಲ್ಲ. ಇದು ರಾಷ್ಟ್ರಕೂಟರು ಸರ್ವಧರ್ಮ ಸಮನ್ವಯಕಾರರಾಗಿದ್ದನ್ನು ತೋರಿಸುತ್ತದೆ.

**ಸಾಹಿತ್ಯ ಮತ್ತು ಭಾಷೆ**

ಸಾಹಿತ್ಯ ಮಾನವನ ಅಭಿವ್ಯಕ್ತಿ ಸಾಮರ್ಥ್ಯದ ಅತ್ಯುತ್ತಮ ಮಾಧ್ಯಮ. ಎಲ್ಲರಿಂದಲೂ ಸಾಹಿತ್ಯ ಸೃಷ್ಟಿ ಸಾಧ್ಯವಿಲ್ಲ. ಅಪರೂಪಕ್ಕೊಮ್ಮೆ ಉತ್ತಮ ಸಾಹಿತ್ಯಕಾರರು ಹುಟ್ಟಿಕೊಳ್ಳುತ್ತಾರೆ. ತಮ್ಮ ಜೀವಿತಾವಧಿಯಲ್ಲಿ ತಮ್ಮ ಜೀವನದ ಧ್ಯೇಯವೋ ಎಂಬಂತೆ ರಚಿಸಿರುವ ಇವರೆಲ್ಲರ ಒಂದೆರಡು ಕಾವ್ಯಗಳ ಭಂಡಾರವೇ ನಮ್ಮ ಪ್ರಾಚೀನ ಸಾಹಿತ್ಯರಾಶಿ. ಇಲ್ಲಿ ಭಾಷಾ ವೈವಿಧ್ಯತೆ ವಸ್ತು ವೈವಿಧ್ಯತೆ, ಅಭಿವ್ಯಕ್ತಗೊಳಿಸುವ ತಂತ್ರದ ವೈವಿಧ್ಯತೆ, ತಮ್ಮ ಹಿರಿಮೆಗಳನ್ನು ಹೆಮ್ಮೆಯಿಂದ ಹೇಳಿಕೊಳ್ಳುವ ಬಗೆ ಮತ್ತು ಅಷ್ಟೇ ನಮ್ರತೆಯನ್ನೂ ಕಾಣಬಹುದು. ಕವಿ ಯಾರಾದರೇನು? ಕೃತಿ ಯಾವುದಾದರೇನು? ಭಾಷೆಯ ಪ್ರಯೋಗ, ಬಳಸುವಿಕೆಯ ಕೌಶಲ್ಯ, ಮಣ್ಣಿನ ಸೊಗಡು, ಕಾವ್ಯದ ವಸ್ತು, ಸಂಸ್ಕೃತಿಯ ಪರಾಕಾಷ್ಠೆಗಳ ಸಮ್ಮಿಲನವೇ ಸಾಹಿತ್ಯ. ಇವುಗಳ ಶ್ರೇಷ್ಠತೆಯನ್ನು ಗಮನಿಸಿದಾಗ ಪಂಡಿತ ಭಾಷೆ, ಪಾಮರ ಭಾಷೆ ಎನ್ನುವ ಭೇದ ಪಕ್ಕಕ್ಕೆ ಸರಿಯುತ್ತದೆ. ಸಹೃದಯ ಓದುಗರ ಸಂಖ್ಯೆ ಬೆರಳೆಣಿಕೆಯಷ್ಟಿದ್ದರೂ ಕವಿ ತಾನು ಕೃತಾರ್ಥನಾದಂತೆ ಭಾವಿಸುತ್ತಾನೆ. ಕೃತಿಯು ಒಳ್ಳೆಯದಾಗಿದ್ದರೆ ಎಲ್ಲರಿಗೂ ಪ್ರಿಯವಾಗುತ್ತದೆ. ಇಂತಹ ಸಂದರ್ಭದಲ್ಲಿ ಕವಿಯ ಮನಸ್ಥಿತಿ, ಅವನ ಕೌಶಲ, ಅಭಿರುಚಿ, ಅಭಿಮತಗಳೂ ಬಹು ಮುಖ್ಯವಾದ ಸ್ಥಾನವನ್ನು ಆಕ್ರಮಿಸುತ್ತದೆ. ಏಕತಾನತೆಯಿಲ್ಲದಂತೆ ಕಾವ್ಯವನ್ನು ಬೆಳೆಸಿಕೊಂಡು

ಹೋಗುವಾಗ ಅಥವಾ ವರ್ಣನೆಗಳ ಮಧ್ಯೆ ಕಳೆದುಹೋಗುವ ಭಯವಿಲ್ಲದೇ ತನ್ನ ಕರ್ತವ್ಯವನ್ನು ನಿರ್ವಹಿಸುವ ಕವಿಯೇ ನಿಜವಾದ ಸಾಹಿತಿ. ರಾಷ್ಟ್ರಕೂಟರ ಕಾಲದಲ್ಲಿ ನಿರ್ಮಾಣವಾದ ಸಾಹಿತ್ಯವೂ ಇಂತಹ ಸನ್ನಿವೇಶಗಳಿಗೆ ಹೊರತಾಗಿಲ್ಲ. ಜೈನ, ಬೌದ್ಧ, ಶೈವ, ವೈಷ್ಣವ, ಗಣಿತ, ವಾಸ್ತು, ಆಗಮ, ಪುರಾಣ ಹೀಗೆ ವೈವಿಧ್ಯಗಳ ಆಗರವೇ ಇಲ್ಲಿವೆ.

ಭಾಷೆಯ ವಿಷಯಕ್ಕೆ ಬಂದರೆ ಕನ್ನಡದಲ್ಲಿ ನಮಗೆ ಸಿಗುವ ಮೊಟ್ಟ ಮೊದಲ ಕೃತಿಯೇ ಒಂಬತ್ತನೆಯ ಶತಮಾನದಲ್ಲಿ ಬಂದಂತಹ "ಕವಿರಾಜಮಾರ್ಗ". ಇದೊಂದು ಕನ್ನಡ ಕೃತಿಯಾಗಿದ್ದು ಶ್ರೀವಿಜಯನಿಂದ ರಚಿತವಾಗಿದೆ. ಕವಿಯೇ ಹೇಳುವಂತೆ ತಿರುಳ್ಗನ್ನಡದ ಬಳಕೆಯಾಗಿದೆ. ಅದೇ ರೀತಿ ಭಾಷೆಯ ವಿಷಯದಲ್ಲಿ ಜನರಿಗಿದ್ದ ಜಾಣತನವನ್ನು ಕವಿಯು ವರ್ಣಿಸುತ್ತಾನೆ. ಇದು ಕೇವಲ ಒಂದೇ ಭಾಷೆಗೆ ಅನ್ವಯವಾಗುವುದಿಲ್ಲವೆಂದು ನೆನಪಿಟ್ಟುಕೊಳ್ಳಬೇಕು. ಆ ಕಾಲದಲ್ಲಿದ್ದ ಭಾಷಾವೈಶಿಷ್ಟ್ಯಕ್ಕೆ ಒಟ್ಟಾಗಿ ಅನ್ವಯವಾಗುತ್ತದೆ. ಆದರೆ ಕವಿಯು ಕನ್ನಡಿಗರ ಜಾಣ್ಮೆಯ ಬಗ್ಗೆ ಹೇಳುತ್ತಾ, ಸಂಸ್ಕೃತ, ಪ್ರಾಕೃತಗಳಲ್ಲಿ ಲಕ್ಷಣ ಗ್ರಂಥಗಳಿವೆ. ಆದರೆ ಕನ್ನಡದಲ್ಲಿ ಹಾಗಿಲ್ಲ. ಆದರೂ ಬರೆದವರ ಭಾವಗಳನ್ನು ಅರಿಯುವಷ್ಟು ಜಾಣರೆಂದು ಕೊಂಡಾಡಿದ್ದಾನೆ. ಆ ಕಾಲಕ್ಕೆ ಗದ್ಯ ಪದ್ಯಗಳೆಂಬ ಎರಡು ಬಗೆಯ ಕಾವ್ಯಗಳಿದ್ದವು. ಮೂರನೆಯದು ಸಮ್ಮಿಶ್ರ ಶೈಲಿಯಾಗಿದ್ದು ಇದನ್ನು ಚಂಪೂಶೈಲಿಯೆಂದು ಕರೆದಿದ್ದಾರೆ.

"ಕವಿರಾಜಮಾರ್ಗ" ಕ್ಕಿಂತ ಮುಂಚೆ ಇನ್ನೂ ಕೆಲವು ಕವಿಗಳಿದ್ದರು. ಆದರೆ ಅವರುಗಳ ಹೆಸರುಗಳು ಸಿಗುತ್ತವೆಯೇ ಹೊರತು ಅವರ ಕೃತಿಗಳು ಲಭ್ಯವಿಲ್ಲ. ಕವಿರಾಜಮಾರ್ಗಕಾರನು

ವಿಮಳೋದಯ ನಾಗರ್ಜುನ

ಸಮೇತ ಜಯಬಂಧು ದುರ್ವಿನೀತಾದಿಗಳೀ

ಕ್ರಮದೊಳ್ಗೆಗಜಿಗದ್ಯಾ

ಶ್ರಮಗುರುಪದತಾ ಪ್ರತೀತಿಯಂ ಕಯ್ಕೊಂಡರ್ (i - 29) ಎಂದಿದ್ದಾನೆ.

ಹೀಗೆ ಸಾಹಿತ್ಯ ಮತ್ತು ಭಾಷೆಯು ರಾಷ್ಟ್ರಕೂಟರ ಕಾಲದಲ್ಲಿ ಶ್ರೇಷ್ಠಮಟ್ಟದಲ್ಲಿತ್ತು. ಇನ್ನೊಂದು ವಿಶೇಷವೆಂದರೆ ಬಹಳಷ್ಟು ಕವಿಗಳಿಗೆ ರಾಜಾಶ್ರಯವು ಸಿಕ್ಕಿದ್ದರಿಂದ ಇವು ಅತ್ಯಂತ ತ್ವರಿತಗತಿಯಲ್ಲಿ ಪ್ರಚಾರ ಹೊಂದಿತು. ರಾಷ್ಟ್ರಕೂಟ ದೊರೆಗಳಾದ ಮೂರನೆಯ ಗೋವಿಂದ (ಕ್ರಿ.ಶ.೭೯೩ –೮೧೪), ಒಂದನೆಯ ಅಮೋಘವರ್ಷ (ಕ್ರಿ.ಶ.೮೧೪–೮೭೮), ಎರಡನೆಯ ಕೃಷ್ಣ (ಕ್ರಿ.ಶ.೮೭೮–೯೧೪) ಮೂರನೆಯ ಕೃಷ್ಣ (ಕ್ರಿ.ಶ.೯೩೯–೯೬೭) ನಾಲ್ಕನೆಯ ಇಂದ್ರ (ಕ್ರಿ.ಶ.೯೭೩–೯೮೮) ಮುಂತಾದ ಅರಸರುಗಳೇ ಅಲ್ಲದೇ ಗಂಗ, ಚಲ್ಲಕೇತನ ಮುಂತಾದ ಮಾಂಡಳೀಕರು ಕೂಡ ಜೈನಾಚಾರ್ಯರುಗಳಿಗೆ ಜೈನ ಅಥವಾ ಸಾಹಿತ್ಯಕ್ಕೆ ಪೋಷಣೆ ನೀಡಿರುವುದು ಕಂಡು ಬರುತ್ತದೆ.

**ಶಾಸನ ಸಾಹಿತ್ಯ**

ಸಾಹಿತ್ಯದಷ್ಟಲ್ಲದಿದ್ದರೂ ದಾಖಲೆಯೆನ್ನುವ ರೀತಿಯಲ್ಲಿ ಉಳಿದುಕೊಂಡು ಬಂದಿರುವ ಶಾಸನ ಸಾಹಿತ್ಯವೂ ಸಾಹಿತ್ಯವೇ ಆಗಿದೆ. ಏಕೆಂದರೆ ಕೆಲವು ಶಾಸನಗಳು ಪುಟ್ಟ ಪುಟ್ಟ ಪ್ರಶಸ್ತಿ ಶಾಸನಗಳೇ ಆಗಿರುತ್ತವೆ. ಇಡೀ ಶಾಸನವನ್ನು ಓದಿದಾಗ ಕಾವ್ಯದ ಭಾಗವೊಂದನ್ನು ಓದುತ್ತಿರುವ ಅನುಭವವಾಗುತ್ತದೆ. ಇದಕ್ಕೆ ಅನೇಕ ಉದಾಹರಣೆಗಳನ್ನು ನೀಡಬಹುದಾಗಿದೆ. ಹಸ್ತಿಕುಂಡಿ ರಾಷ್ಟ್ರಕೂಟರ ಶಾಸನ, ಭೋಧಗಯಾದ ರಾಷ್ಟ್ರಕೂಟರ ಶಾಸನ ಮುಂತಾದವುಗಳಲ್ಲಿ ಅನೇಕ ದೀರ್ಘ ಪ್ರಶಸ್ತಿಗಳ ಮೂಲಕ ಅರಸರ ಶೌರ್ಯವನ್ನು ವರ್ಣಿಸಲಾಗಿದೆ. ಮಳಖೇಡದ ರಾಷ್ಟ್ರಕೂಟರ ಹಲವಾರು ತಾಮ್ರಪಟಗಳು ದೀರ್ಘವಾಗಿದ್ದು ಪ್ರಶಸ್ತಿ ಶಾಸನಗಳಾಗಿವೆ. ಮೂರನೆಯ ಕೃಷ್ಣನ ಜೂರಾ ಪ್ರಶಸ್ತಿ ಶಾಸನವಂತೂ ಅವನ ಮಧುರ ಗುಣಗಳನ್ನು ವರ್ಣಿಸುವ ಹೊರನಾಡಿನ ಕನ್ನಡದ ಶಾಸನವಾಗಿದೆ. ಇಂತಹ ಹಲವಾರು ಶಾಸನಗಳನ್ನು ಗಮನಿಸಿದಾಗ ಶಾಸನಗಳನ್ನು ಬರೆಯುವಂತಹ ಸಾಮಾನ್ಯ ಲಿಪಿಕಾರರಲ್ಲಿ ಕೂಡ ಉನ್ನತ ಮಟ್ಟದ ಕಾವ್ಯಜ್ಞಾನವಿತ್ತೆಂದು ಅರಿಯಬಹುದಾಗಿದೆ. ಏಕೆಂದರೆ ಎಲ್ಲಾ ಶಾಸನಗಳನ್ನೂ ದೊಡ್ಡ ದೊಡ್ದ ಕವಿಗಳೇ ಬರೆಯಲು ಸಾಧ್ಯವಿಲ್ಲ. ಆದರೆ ಸೀಮಿತ ಚೌಕಟ್ಟಿನಲ್ಲಿ ಹೇಳಬೇಕಾದ್ದುದ್ದನ್ನು ಸುಂದರವಾದ ಭಾಷೆಯಲ್ಲಿ ಅಚ್ಚುಕಟ್ಟಾಗಿ ಹೇಳುವ ಕ್ರಮ ಮುಖ್ಯವಾಗುತ್ತದೆ.

ರಾಷ್ಟ್ರಕೂಟರ ಕಾಲದಲ್ಲಿ ವಿಪುಲವಾದ ಸಾಹಿತ್ಯ ಕೃತಿಗಳು, ಧಾರ್ಮಿಕ ಕೃತಿಗಳು ರಚನೆಯಾಗಿವೆ. ಇದರಿಂದ ರಾಷ್ಟ್ರಕೂಟರ ಕಾಲದಲ್ಲಿದ್ದ ಶಿಕ್ಷಣ ವ್ಯವಸ್ಥೆ ಸುವ್ಯವಸ್ಥಿತವಾಗಿತ್ತು ಎಂದು ತಿಳಿದುಬರುತ್ತದೆ. ಉನ್ನತ ವಿದ್ಯಾಭ್ಯಾಸ ಕೂಡ ಸಮರ್ಪಕವಾಗಿ ನಡೆಯುತ್ತಿತ್ತು ಎನ್ನುವುದಕ್ಕೆ ಸಾಕ್ಷಿಯಾಗಿ ವೇದ, ಸ್ಮೃತಿ, ವ್ಯಾಕರಣ, ಮೀಮಾಂಸೆ, ಜೋತಿಷ್ಯ, ನ್ಯಾಯ ಧರ್ಮಶಾಸ್ತ್ರ, ಪುರಾಣ ಸಾಹಿತ್ಯ ಕೃತಿಗಳು ಲಭ್ಯವಾಗಿವೆ. ಬಹಳ ಪ್ರಮುಖವಾಗಿ ವ್ಯಾಕರಣ ಮತ್ತು ತರ್ಕಶಾಸ್ತ್ರವನ್ನು ಅಭ್ಯಾಸ ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ನಯಸೇನ ಮತ್ತು ಸೋಮದೇವಸೂರಿಯಿರು ಕ್ರಮವಾಗಿ ವ್ಯಾಕರಣ ಮತ್ತು ತರ್ಕಶಾಸ್ತ್ರವನ್ನು ಅಧ್ಯಯನ ಮಾಡಿದ್ದು, ಕವಿಗಳೂ ಆಗಿದ್ದರೆಂದು ಹೇಳಲಾಗಿದೆ. ಗದ್ಯಪದ್ಯ ಶೈಲಿಯ ಬರಹಗಳಿರುವ ಶಾಸನಗಳು ರಾಷ್ಟ್ರಕೂಟರ ಕಾಲದಲ್ಲಿ ಸಿಗುತ್ತವೆ. ಇದರ ಶೈಲಿ ಶ್ರೇಷ್ಠವೂ ಶುದ್ಧವೂ ಆದಾಗ ಸಾಹಿತ್ಯಕ ಭಾಷೆಯಲ್ಲಿ ತನ್ನ ಸ್ಥಾನವನ್ನು ಪಡೆದುಕೊಂಡಿತು.

### ಸಂಸ್ಕೃತ

ರಾಷ್ಟ್ರಕೂಟರ ಕಾಲದಲ್ಲಿ ಸಂಸ್ಕೃತದಲ್ಲಿ ಸಾಹಿತ್ಯ ರಚನೆ ವಿಪುಲವಾಗಿಯೇ ನಡೆಯಿತೆಂದು ಹೇಳಬಹುದು. ನಯಸೇನ, ಸೋಮದೇವಸೂರಿಯಲ್ಲದೆ ಕಾತಂತ್ರಸೂತ್ರಕ್ಕೆ ವೃತ್ತಿಯನ್ನು ಬರೆದ ದುರ್ಗಸಿಂಹನು ಇದೇ ಕಾಲದಲ್ಲಿದ್ದನು. ಇವನು ಕೇವಲ ಅರ್ಥಗಳನ್ನು ಹೇಳದೆ ಅದರ ಪಾಠವನ್ನೇ ಉದ್ಧರಿಸುತ್ತಾನೆ. ತಾನು ಬರೆದ ವೃತ್ತಿಗೆ ತಾನೇ ಅರ್ಥವನ್ನೂ ಬರೆದಿದ್ದಾನೆ. ದಂತಿದುರ್ಗನ ಆಶ್ರಯದಲ್ಲಿದ್ದ ಅಕಲಂಕನು ತತ್ವಾರ್ಥವಾರ್ತಿಕ (ತತ್ವಾರ್ಥ ಸೂತ್ರದ ವಿಶ್ಲೇಷಣೆ), ಅಷ್ಟಸ್ತುತಿ (ಸಮಂತಭದ್ರನ ಆಪ್ತಮೀಮಾಂಸದ ವಿಶ್ಲೇಷಣೆ), 'ಲಘೀಯಾಸ್ತ್ರಯ' ಮುಂತಾದ ಕೃತಿಗಳನ್ನು ಬರೆದಿದ್ದಾನೆ.

ಸಂಸ್ಕೃತ ವ್ಯಾಕರಣದಲ್ಲಿ ಜೈನೇಂದ್ರ ಪಂಥದಂತೆ ಕರ್ನಾಟಕದಲ್ಲಿ ಇನ್ನೊಂದು ಸಂಸ್ಕೃತ ವ್ಯಾಕರಣ ಪಂಥ ಪ್ರಾರಂಭವಾಯಿತು. ಶಾಕಟಾಯನ ಪಂಥ ಎಂದು ಇದನ್ನು ಕರೆದಿದ್ದಾರೆ. ಪಾಣಿನಿ ಮತ್ತು ಜೈನೇಂದ್ರ ಇವರ ವ್ಯಾಕರಣವನ್ನು ಸುಲಭ ರೀತಿಯಲ್ಲಿ ಜೈನಕವಿ ಶಾಕಟಾಯನನು ಬರೆದಿದ್ದಾನೆ. ಒಂದನೆಯ ಅಮೋಘವರ್ಷನ ಆಸ್ಥಾನಕವಿಯಾಗಿದ್ದ ಶಾಕಟಾಯನನು 'ಕೌಮುದೀಪಠ್ಯ'ವನ್ನು ವಿಷಯಾನುಕ್ರಮವಾಗಿ

ಬರೆದಿದ್ದಾನೆ. ಈ ಸೂತ್ರಗಳನ್ನು 'ಶಬ್ದಾನುಶಾಸನ' ಎಂಬ ಕೃತಿಯಲ್ಲಿ ಕಾಣಬಹುದು. ಅವನೇ ಶಬ್ದಾನುಶಾಸನಕ್ಕೆ ವೃತ್ತಿಯನ್ನೂ ಬರೆದಿದ್ದಾನೆ. ಅದನ್ನು 'ಅಮೋಘವೃತ್ತಿ' ಎಂದು ಹೆಸರಿಸಿದ್ದಾನೆ. ಕಾಲದ ಉಲ್ಲೇಖವಿರುವ 'ನಳಚಂಪೂ' ಕ್ರಿ.ಶ.೯೧೫ರಲ್ಲಿ ತ್ರಿವಿಕ್ರಮಭಟ್ಟನಿಂದ ರಚಿತವಾಯಿತು. 'ನಳಚಂಪೂ'ವನ್ನು 'ದಮಯಂತಿ ಕಥಾ' ಎಂದೂ ಕರೆಯಲಾಗಿದೆ. ತ್ರಿವಿಕ್ರಮನು ನೇಮಾದಿತ್ಯನ ಮಗ, ಶ್ರೀಧರನ ಮೊಮ್ಮಗನಾಗಿದ್ದಾನೆ. ಈತ ಮೂರನೆಯ ಇಂದ್ರನ ಆಸ್ಥಾನಕವಿಯಾಗಿದ್ದವನು. ಕಾವ್ಯಗಳಲ್ಲದೆ ಬೇಗುಮ್ರಾ ಮತ್ತು ನವಸಾರಿ ಶಾಸನಗಳನ್ನು ಬರೆದಿದ್ದಾನೆ. 'ಮದಾಲಸ ಚಂಪೂ' ಈತನ ಇನ್ನೊಂದು ಕೃತಿ.

ಸ್ವತಃ ಒಂದನೆಯ ಅಮೋಘವರ್ಷನೇ 'ಪ್ರಶ್ನೋತ್ತರ ರತ್ನಮಾಲಿಕ' ಎಂಬ ಸಂಸ್ಕೃತ ಗ್ರಂಥವನ್ನು ಬರೆದಿದ್ದಾನೆ. ಇಂದ್ರನಂದಿಯು 'ಜ್ವಾಲಾಮಾಲಿನಿಕಲ್ಪ' ಎಂಬ ಕೃತಿಯ ಕರ್ತೃ. ಇದು 'ಅಗ್ನಿಪೂಜಕಪಂಥ'ದ ಬಗ್ಗೆ ತಿಳಿಸಿಕೊಡುತ್ತದೆ. ಕುಮುದೇಂದು ಕವಿಯು 'ಸಿರಿಭೂವಲಯ'ವೆಂಬ ಗ್ರಂಥವನ್ನು ಬರೆದಿದ್ದಾನೆ. ಈತ ವೀರಸೇನರ (ಕ್ರಿ.ಶ.೮೧೬) ಶಿಷ್ಯನಾಗಿದ್ದನೆಂದು ಊಹಿಸಲಾಗಿದೆ. ಈ ಕೃತಿಯಲ್ಲಿ ಐದು ಧವಳ ಕೃತಿಗಳ ಬಗ್ಗೆ ಉಲ್ಲೇಖವಿದೆ. ಅವುಗಳನ್ನು 'ಜಯಧವಳ, ವಿಜಯಧವಳ, ಅತಿಶಯಧವಳ, ಮಹಾಧವಳ ಮತ್ತು ಧವಳ' ಎಂದು ವಿದ್ವಾಂಸರು ಗುರುತಿಸಿದ್ದಾರೆ. ಈ ಗ್ರಂಥವು ಗಣಿತದಂತೆ , ಒಂದರಿಂದ ಅರವತ್ತನಾಲ್ಕು ಅಂಕಿಗಳನ್ನೂ ಅಕ್ಷರಗಳನ್ನೂ ಉಪಯೋಗಿಸಿ ೭೧೮ ಭಾಷೆಗಳಲ್ಲಿನ ಕೃತಿಗಳನ್ನು ಓದಬಹುದಾಗಿದೆಯೆಂದು ಹೇಳಲಾಗಿದೆ. ಈ ಗ್ರಂಥದಲ್ಲಿ ೩೬೩ ತಾತ್ವಿಕ ಪದ್ಧತಿಗಳನ್ನೂ, ಅರವತ್ತನಾಲ್ಕು ಕಲೆಗಳನ್ನೂ ಕಲೆ ಮತ್ತು ವಿಜ್ಞಾನ ಒಳಗೊಂಡಂತೆ ರಚಿಸಲಾಗಿದೆ. ಆರು ಲಕ್ಷ ಶ್ಲೋಕಗಳಲ್ಲಿ ಈ ಕೃತಿಯಿದೆಯೆಂದು ತಿಳಿದುಬಂದಿದೆ.

ಜಿನವಲ್ಲಭ (ಕ್ರಿ.ಶ.೯೫೦)ನು ಮೂರು ಭಾಷೆಗಳಲ್ಲಿ ಕೃತಿರಚನೆ ಮಾಡಿದ್ದಾನೆಂದು ತಿಳಿದುಬಂದರೂ ರಚನೆಗಳು ಉಪಲಬ್ಧವಿಲ್ಲ. ವರ್ಧಮಾನಪುರಾಣವನ್ನು ಬರೆದಿರುವ ಅಸಗ (ಕ್ರಿ.ಶ.ಸು. ೯ನೆಯ ಶತಮಾನ) ಒಂದನೆಯ ಅಮೋಘವರ್ಷನ ಕಾಲದಲ್ಲಿದ್ದ ಉಭಯಭಾಷಾಕವಿ. ಈತ ಮೂರು ಸಂಸ್ಕೃತ ಕೃತಿಗಳನ್ನು ಬರೆದಿದ್ದಾನೆ.

## ಪ್ರಾಕೃತ

ರಾಷ್ಟ್ರಕೂಟರ ಕಾಲದಲ್ಲಿ ಅನೇಕ ಪ್ರಾಕೃತ ಗ್ರಂಥಗಳು ರಚಿತವಾಗಿವೆ. ಹರಿಭದ್ರಸೂರಿಯು ಕ್ರಿ.ಶ. ಏಳು ಎಂಟನೆಯ ಶತಮಾದವನಾಗಿದ್ದು, ಸಮರಇಚ್ಛಕಹ, ಧೂರ್ತಾಖ್ಯಾನ, ಸಾವಯಪಣ್ಣತ್ತಿ, ಸಾಮಾಯುರಿ, ಪಂಚಾಸಗ, ವೀಸವೀಸಿಓ, ದಂಸಣಸತ್ತರಿ, ಸಾವಯಧಮ್ಮವರಹಿ ಮುಂತಾದ ಪ್ರಾಕೃತ ಕೃತಿಗಳನ್ನು ರಚಿಸಿದ್ದಾನೆ. ಕ್ರಿ.ಶ. ಎಂಟನೆಯ ಶತಮಾನದಲ್ಲಿದ್ದ 'ಕುವಲಯಮಾಲಾ' ಕೃತಿಯನ್ನು ಉದ್ಯೋತನಸೂರಿಯು ಬರೆದಿದ್ದಾನೆ. ಕೋವ್ರೂಹಲನೆಂಬ ಕವಿ ಕ್ರಿ.ಶ. ಎಂಟನೆಯ ಶತಮಾನ್ದಲ್ಲಿದ್ದು, 'ಲೀಲಾವಈ'ಯನ್ನು ಬರೆದಿದ್ದಾನೆ.

ವಿಮಲಸೂರಿಯು 'ಪಉಮಚರಯಂ' ಅನ್ನು ಬರೆದಿದ್ದಾನೆ. ಈತನ ಕಾಲದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಪುಷ್ಪದಂತನೆಂಬ ಕವಿ 'ಮಹಾಪುರಾಣವನ್ನು' ಬರೆದಿದ್ದಾನೆ. 'ಣಾಯಕುಮಾರ ಚರಿಉ' (ನಯಕುಮಾರ ಚರಿತೆ) ಮತ್ತು 'ಜಸಹರ ಚರಿಉ (ಯಶೋಧರ ಚರಿತ) ಗ್ರಂಥಗಳನ್ನು ರಾಷ್ಟ್ರಕೂಟ ಮೂರನೆಯ ಕೃಷ್ಣ ಮತ್ತು ನಂತರದ ದೊರೆಗಳ ಕಾಲದಲ್ಲಿ ರಚಿಸಿದ್ದಾನೆ. ಈ ಪುಷ್ಪದಂತನು ಅಪಭ್ರಂಶ ಭಾಷೆಯಲ್ಲಿಯೂ ಕೃತಿ ರಚನೆ ಮಾಡಿದ್ದಾನೆ. ಯಶೋಧರ ಚರಿತೆಯಲ್ಲಿ ಯಶೋಧರನ ಕಥೆಯ ಮೂಲಕ ಅಹಿಂಸೆಯನ್ನು ಸಾರುತ್ತಾನೆ. 'ಣಾಯಕುಮಾರ ಚರಿಉ'ನಲ್ಲಿ 'ನಾಗಕುಮಾರನ' ಕಥೆಯನ್ನು ಹೇಳುತ್ತಾ 'ಶೃತಪಂಚಮಿಯ ಮಹಾತ್ಮೆ'ಯನ್ನು ಸಾರುತ್ತಾನೆ. 'ತಿಸಟಿ ಮಹಾಪುರಿಸಗುಣಾಲಂಕಾರು' ಗ್ರಂಥವು ೬೩ ಶಲಾಕಾಪುರುಷರ ಜೀವನವನ್ನು ವರ್ಣಿಸುತ್ತದೆ. ಕ್ರಿ.ಶ.ಸುಮಾರು ೭೦೦ ರಲ್ಲಿ ರವಿಷೇಣನ 'ಪದ್ಮಚರಿತ'ದಿಂದ ಪ್ರಭಾವಿತನಾಗಿ 'ಪಉಮಚರಿಉ' ಎಂಬ ಗ್ರಂಥವನ್ನು ಕ್ರಿ.ಶ. ೮–೯ನೆಯ ಶತಮಾನದಲ್ಲಿದ್ದ ಕವಿ ಸ್ವಯಂಭೂ ರಚಿಸಿದ್ದಾನೆ. ಈ ಕಾವ್ಯದ ಕೊನೆಯ ಭಾಗವನ್ನು ತ್ರಿಭುವನ ಸ್ವಯಂಭೂ ಬರೆದಿದ್ದಾನೆ. ಈ ಕಾವ್ಯದಲ್ಲಿ ರಾಮನ ಕಥೆಯನ್ನು ನಿರೂಪಿಸಲಾಗಿದೆ. ಈತನ ಇನ್ನೊಂದು ಕಾವ್ಯ 'ರಿಟ್ಠನೇಮಿಚರಿಉ' ನೇಮಿ ತೀರ್ಥಂಕರ ಮತ್ತು ಕೃಷ್ಣನ ಕಥೆಯನ್ನು ಜೈನ ಪರಂಪರೆಗನುಗುಣವಾಗುವಂತೆ ಬರೆಯಲಾಗಿದೆ. ಕ್ರಿ.ಶ.ಸುಮಾರು ೧೦–೧೧ನೆಯ ಶತಮಾನದಲ್ಲಿ ನೇಮಿತೀರ್ಥಂಕರನನ್ನು ಕುರಿತು 'ಹರಿವಂಶಪುರಾಣವೆಂಬ' ಕೃತಿಯನ್ನು ಧವಲಕವಿ ಬರೆದಿದ್ದಾನೆ.ಈತನಿಗೆ ಕವಿಕುಲತಿಲಕ ಕಾವ್ಯರತ್ನಾಕರ, ಕಾವ್ಯಪಿಶಾಚ, ವರವಾಣೀವಿಲಾಸ ಮುಂತಾದ ಬಿರುದುಗಳಿವೆ. ಬಹುಶಃ

'ಕಥಾಮಕರಂದ' ಎಂಬ ಗ್ರಂಥದ ಕರ್ತೃವೂ ಇವನೇ ಆಗಿದ್ದಾನೆ. ಕನಕಾಮರನು 'ಕರಕಂಡಚೆರಿಉ' ಎಂಬ ಗ್ರಂಥವನ್ನು ಬರೆದಿದ್ದಾನೆ. ಪ್ರತ್ಯೇಕ ಬುದ್ಧರಲ್ಲಿ ಒಬ್ಬನೆಂದು ಪರಿಗಣಿಸಲ್ಪಡುವ ಕರಕಂಡುವಿನ ಜೀವನಚರಿತ್ರೆ ಈ ಗ್ರಂಥದ ವಸ್ತು.

ನೇಮಿಚಂದ್ರಾಚಾರ್ಯರು 'ಗೊಮ್ಮಟಸಾರ', 'ತ್ರಿಲೋಕಸಾರ', 'ಲಬ್ಧಿಸಾರ', 'ಕ್ಷಪಣಸಾರ' ಮತ್ತು 'ದ್ರವ್ಯಸಾರ' ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಇದರಲ್ಲಿ ಗೊಮ್ಮಟಸಾರವು 'ಜೀವಕಾಂಡ' ಮತ್ತು 'ಕರ್ಮಕಾಂಡ' ಎಂಬ ಎರಡು ಭಾಗಗಳಲ್ಲಿದ್ದು, ಜೀವತತ್ವ ಮತ್ತು ಕರ್ಮಸಿದ್ಧಾಂತವನ್ನು ಸಾರವತ್ತಾಗಿ ಸಂಗ್ರಹಿಸಲಾಗಿದೆ. ದ್ರವ್ಯ ಸಂಗ್ರಹದಲ್ಲಿ ಜೀವ ಅಜೀವ ಮುಂತಾದ ೬ ದ್ರವ್ಯಗಳನ್ನು ಕುರಿತು ಸಂಕ್ಷಿಪ್ತವಾಗಿ ನಿರೂಪಿಸಲಾಗಿದೆ. ಕ್ಷಪಣಸಾರದಲ್ಲಿ ಕರ್ಮಗಳನ್ನು ಕ್ಷಪಣ ಮಾಡುವ ಕ್ಷಾಯಿಕ ಚರಿತ್ರದ ವರ್ಣನೆ ಇದೆ. ಇದರೊಡನೆ ಲಬ್ಧಿಸಾರದಲ್ಲಿ ದರ್ಶನಲಬ್ಧಿ, ಚಾರಿತ್ರ್ಯಲಬ್ಧಿ, ಮತ್ತು ಕ್ಷಾಯಕ ಚಾರಿತ್ರ್ಯವೆಂಬ ೩ ಬಗೆಗಳಲ್ಲಿ ಕರ್ಮಗಳಿಂದ ಮುಕ್ತರಾಗುವ ಬಗೆಯನ್ನು ವಿವರಿಸಿದ್ದಾರೆ. ತನ್ಮೂಲಕ ಆತ್ಮಶುದ್ದಿ ಮತ್ತು ರೂಪಲಬ್ಧಿಗಳನ್ನು ಪಡೆಯುವ ಕ್ರಮವನ್ನು ವಿವರಿಸಿದೆ. ತ್ರಿಲೋಕಸಾರದಲ್ಲಿ ಕರ್ಣಾನುಯೋಗಕ್ಕೆ ಸಂಬಂಧಿಸಿದ ವಿವರಗಳಿವೆ.

### ಕನ್ನಡ ಸಾಹಿತ್ಯ

ರಾಷ್ಟ್ರಕೂಟರ ಕಾಲದಲ್ಲಿ ಕನ್ನಡ ಭಾಷೆಯಲ್ಲಿಯೂ ವಿಪುಲವಾದ ಸಾಹಿತ್ಯ ಸೃಷ್ಟಿಯಾಗಿದೆ. ಶಾಸನಗಳಲ್ಲಿ ಕೂಡಾ ಕನ್ನಡವನ್ನು ಹೆಚ್ಚಾಗಿ ಬಳಸಿರುವುದನ್ನು ಕಾಣಬಹುದು. ಸಂಸ್ಕೃತದ ಜೊತೆಜೊತೆಗೆ ಕನ್ನಡದ ಕೃತಿಗಳನ್ನೂ ಶಾಸ್ತ್ರ ಗ್ರಂಥಗಳನ್ನೂ ರಚಿಸಿದ್ದಾರೆ. ರಾಷ್ಟ್ರಕೂಟರ ಕಾಲವು ಕನ್ನಡ ಸಾಹಿತ್ಯದ ಸುವರ್ಣ ಯುಗ ಎಂದು ಹೇಳಬಹುದು. ಕವಿರಾಜಮಾರ್ಗವನ್ನು ಮೊಟ್ಟಮೊದಲನೆಯದಾಗಿ ಹೆಸರಿಸಬಹುದು. ಏಕೆಂದರೆ ಕನ್ನಡದಲ್ಲಿ ಸಿಕ್ಕುವ ಮೊದಲನೆಯ ಕೃತಿಯಿದು. ಇದನ್ನು ಬರೆದವನು ೯ನೆಯ ಶತಮಾನದಲ್ಲಿದ್ದ ಶ್ರೀ ವಿಜಯ ಎಂಬ ಕವಿ. ಇದರಲ್ಲಿ ತನಗಿಂತ ಮುಂಚೆ ಇದ್ದ ಕವಿಗಳ ಹೆಸರನ್ನು ಹೇಳುತ್ತಾನೆ. ಜುರಾ ಶಾಸನವು ಕನ್ನಡ ಸಾಹಿತ್ಯದ ಸೊಗಡನ್ನು ಪ್ರಶಸ್ತಿ ರೂಪದಲ್ಲಿ ಹೇಳಿದೆ. ಕನ್ನಡದ ಸಾಹಿತ್ಯದ ಪ್ರಕಾರವಾದ ಕಂದ ಪದ್ಯಗಳಲ್ಲಿದೆ. "ವಡ್ಡಾರಾಧನೆ" ಎಂಬ ಸಾಹಿತ್ಯ ಕೃತಿ ಶಿವಕೋಟ್ಯಾಚಾರ್ಯನಿಂದ

ರಚಿತವಾಗಿದೆ. ಶಿವಕೋಟ್ಯಾಚಾರ್ಯ ಜೈನಕವಿಯಾಗಿದ್ದು ಇತರ ಜೈನ ಕೃತಿಗಳಂತೆ ವಡ್ಡಾರಾಧನೆಯ ಕಥೆ ಬೆಳೆದುಕೊಂಡಿದೆ. ಹತ್ತೊಂಬತ್ತು ಜೈನ ಸನ್ಯಾಸಿಗಳ ಕಥೆಗಳು ಇರುವ ಈ ಕೃತಿಯ ಕಾಲ ೯ನೆಯ ಶತಮಾನ. ಮಳಖೇಡದಲ್ಲಿ ರಚಿತವಾದ ಕೃತಿಯಾಗಿದೆ.

ರಾಷ್ಟ್ರಕೂಟರ ಕಾಲದಲ್ಲಿ ಯಾವುದೇ ಮತ ಧರ್ಮಗಳೆನ್ನದೆ, ಸಾಹಿತ್ಯ ರಚನೆ ನಡೆದಿದೆ. ಒಂದನೆಯ ನಾಗವರ್ಮನು ಛಂದಸ್ಸಿಗೆ ಸಂಬಂಧಿಸಿದಂತೆ ಒಂದನೆಯ ನಾಗವರ್ಮನು ಬರೆದಿರುವ ಗ್ರಂಥವು ಕನ್ನಡದಲ್ಲಿದೆ. ಪಂಪನು ೧೦ನೆಯ ಶತಮಾನದಲ್ಲಿ 'ಆದಿಪುರಾಣ' ಮತ್ತು 'ವಿಕ್ರಮಾರ್ಜುನವಿಜಯ' ಅಥವಾ 'ಪಂಪಭಾರತ' ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಆದಿಪುರಾಣವು ಪ್ರಥಮ ತೀರ್ಥಂಕರ ವೃಷಭನಾಥನ ಚರಿತ್ರೆಯನ್ನು ಹೇಳುತ್ತದೆ. ವಿಕ್ರಮಾರ್ಜುನವಿಜಯವು ತನ್ನ ಆಶ್ರಯದಾತನಾದ ಅರಿಕೇಸರಿಯನ್ನು ಅರ್ಜುನನಿಗೆ ಹೋಲಿಸಿ ಬರೆದ ಮಹಾಕಾವ್ಯವಾಗಿದೆ. ಇದರಲ್ಲಿ ಪಂಪನು ತಾನು ಕವಿಮಾತ್ರವಲ್ಲ ಕಲಿಯೂ ಅಹುದು ಎಂದು ಹೇಳಿಕೊಂಡಿದ್ದಾನೆ. ೧೦ನೆಯ ಶತಮಾನದಲ್ಲಿದ್ದ ಕವಿಗಳಲ್ಲಿ ರನ್ನನು (ಕ್ರಿ.ಶ.೯೮೯) ಬರೆದ 'ಗದಾಯುದ್ಧ', (ಕ್ರಿ.ಶ.೯೮೨) ಮತ್ತು 'ಅಜಿತಪುರಾಣ'ವನ್ನು ಹೆಸರಿಸಬಹುದು. ಇವನು ಕಲ್ಯಾಣಿ ಚಾಲುಕ್ಯ ದೊರೆ ಇಮ್ಮಡಿ ತೈಲಪನ ಆಶ್ರಯದಲ್ಲೂ ಅವನ ಉತ್ತರಾಧಿಕಾರಿಯಾದ ಸತ್ಯಾಶ್ರಯನ ಆಸ್ಥಾನದಲ್ಲಿಯೂ ಇದ್ದವನು. ಗಂಗ ದೊರೆ ಮಾರಸಿಂಹ ಮತ್ತು ಇಮ್ಮಡಿ ರಾಚಮಲ್ಲನ ಮಂತ್ರಿಯಾಗಿದ್ದ ಚಾವುಂಡರಾಯನು, 'ಚಾವುಂಡರಾಯಪುರಾಣ' (ಕ್ರಿ.ಶ.೯೭೮) ದಲ್ಲಿ ೨೪ ತೀರ್ಥಂಕರರ ಕಥೆಯನ್ನು ಗದ್ಯದಲ್ಲಿ ಹೇಳಿದ್ದಾನೆ.

ಕ್ರಿ.ಶ.ಸು. ೯೦೦ ರಲ್ಲಿದ್ದ ಕವಿ ಒಂದನೆಯ ಗುಣವರ್ಮನು ಎರಡು ಮಹಾಕಾವ್ಯಗಳನ್ನು ಬರೆದಿದ್ದಾನೆ. ಈತ ರಾಷ್ಟ್ರಕೂಟರ ದೊರೆ ಎರಡನೆಯ ಕೃಷ್ಣನ ಆಸ್ಥಾನದಲ್ಲಿದ್ದವನು. ಶೂದ್ರಕ ಮತ್ತು ಹರಿವಂಶ ಎಂಬ ಕೃತಿಗಳು ಚಂಪೂ ಶೈಲಿಯಲ್ಲಿವೆ. ಈತನ ಸಮಕಾಲೀನನಾಗಿದ್ದ ಗುಣಣಂದಿಯು ವ್ಯಾಕರಣ ಪಂಡಿತ. ಗುಣಣಂದಿ, ದೇವಣಂದಿ, ಇಂದ್ರಣಂದಿ ಮುಂತಾದ ಕವಿಗಳನ್ನು ೧೩ನೆಯ ಶತಮಾನದ ವ್ಯಾಕರಣ ಕೃತಿಕಾರ ಕೇಶಿರಾಜನು ಹೆಸರಿಸಿದ್ದಾನೆ. ಅಸಗ (ಸುಮಾರು ೯ನೆ ಶತಮಾನ) ಒಂದನೆಯ ಅಮೋಘವರ್ಷನ ಕಾಲದಲ್ಲಿದ್ದ ಉಭಯಭಾಷಾಕವಿ. ಈತ

‘ವರ್ಧಮಾನಪುರಾಣ’, ‘ಕರ್ಣಾಟಕುಮಾರಸಂಭವ ಕಾವ್ಯ’ ಸೇರಿದಂತೆ ಒಟ್ಟು ೮ ಕೃತಿಗಳನ್ನು ಬರೆದಿದ್ದಾನೆ. ಇವುಗಳನ್ನು ಐದು ಕನ್ನಡ, ಮೂರು ಸಂಸ್ಕೃತ ಕೃತಿಗಳು. ಪೊನ್ನ ಕವಿಯು ‘ಶಾಂತಿಪುರಾಣ’ವನ್ನು ಕನ್ನಡದಲ್ಲಿ ರಚಿಸಿದ್ದಾನೆ. ಇವನ “ಭುವನೈಕರಾಮಾಭ್ಯುದಯ"ಎಂಬ ಕೃತಿಯು ಉಪಲಬ್ದವಿಲ್ಲ. ಇವನು ೩ನೆಯ ಕೃಷ್ಣನ ಆಶ್ರಯದಲ್ಲಿದ್ದು, “ಉಭಯಭಾಷಾಕವಿಚಕ್ರವರ್ತಿ" ಎಂಬ ಬಿರುದನ್ನು ಪಡೆದಿದ್ದನು.

ತೆಲುಗು ಭಾಷೆ

ಅನೇಕ ರಾಷ್ಟ್ರಕೂಟ ಅರಸರು ಕನ್ನಡ ಕವಿಗಳನ್ನು ಪೋಷಿಸಿದಂತೆ ತೆಲುಗು ಕವಿಗಳನ್ನೂ ಪೋಷಿಸಿದ್ದಾರೆ. ಕನ್ನಡ ಮತ್ತು ತೆಲುಗು ಭಾಷೆಗಳು ಹತ್ತಿರದ ಭಾಷೆಗಳಾಗಿವೆ. ಪೊನ್ನಕವಿಯು ಕರ್ನಾಟಕ ಮತ್ತು ಆಂಧ್ರದ ಗಡಿಯವನಾಗಿದ್ದು, ಎರಡು ಭಾಷೆಗಳಲ್ಲಿಯೂ ಸಾಹಿತ್ಯ ರಚನೆ ಮಾಡಿದ್ದಾನೆ. ಇವನು ಜೈನಕವಿಯಾಗಿದ್ದು ಶಾಂತಿಪುರಾಣವೆಂಬ ಗ್ರಂಥವನ್ನು ಸಂಸ್ಕೃತದಲ್ಲಿ ಬರೆದಿದ್ದಾನೆ. ಇದರಲ್ಲಿ ೧೬ನೆಯ ತೀರ್ಥಂಕರನ ಚರಿತ್ರೆಯಿದೆ. ತೆಲುಗಿನಲ್ಲಿ ‘ಆದಿಪುರಾಣ’ವನ್ನು ಸರ್ವದೇವ ಎಂಬ ಹೆಸರಿನಲ್ಲಿ ಬರೆದಿದ್ದಾನೆ. "ಭುವನೈಕರಾಮಾಭ್ಯುದಯ" ಎಂಬ ಕೃತಿಯನ್ನು ಬರೆದಿದ್ದು ಈ ಗ್ರಂಥವು ಉಪಲಬ್ಧವಿಲ್ಲ. ಕೃಷ್ಣನು ಇವನಿಗೆ ಉಭಯ ಕವಿ ಚಕ್ರವರ್ತಿ ಎಂಬ ಬಿರುದು ನೀಡಿ ಗೌರವಿಸಿದ್ದಾನೆ. ರಾಷ್ಟ್ರಕೂಟರ ಕಾಲವು ಸಾಹಿತ್ಯದ ಸುವರ್ಣಯುಗವಾಗಿತ್ತು. ಸಂಸ್ಕೃತ, ಪ್ರಾಕೃತ, ಕನ್ನಡ, ತೆಲುಗು ಹೀಗೆ ಅನೇಕ ಭಾಷೆಗಳಲ್ಲಿ ಬೆಳೆದುಬಂದ ಕಾವ್ಯಪರಂಪರೆ ಮುಂದಿನ ಪೀಳಿಗೆಯವರಿಗೆ ಸ್ಫೂರ್ತಿದಾಯಕವೂ, ಮಾರ್ಗದರ್ಶಕವೂ ಆಗಿತ್ತು. ಅದೇ ಹಾದಿಯಲ್ಲಿ ಅನೇಕ ಕವಿಗಳು ನಡೆದರು. ಇದಕ್ಕೆ ರಾಷ್ಟ್ರಕೂಟ ಅರಸರ ನಿರಂತರ ಪ್ರೋತ್ಸಾಹವಿತ್ತು. ಜ್ಞಾನದ ಅನ್ವೇಷಣೆಯಲ್ಲಿ ಸಾಗಿದ ಎಲ್ಲಾ ರೀತಿಯ ಧಾರ್ಮಿಕ, ಸಾಮಾಜಿಕ ಕವಿಗಳಿಗೂ ಹೆಚ್ಚಿನ ಪ್ರೋತ್ಸಾಹ ನೀಡಿ ಸರಸ್ವತಿಯ ಆರಾಧಕರಂತೆ ರಾಷ್ಟ್ರಕೂಟರು ನಡೆದುಕೊಂಡಿದ್ದಾರೆ.

ಸಾಂಸ್ಕೃತಿಕ ಅಧ್ಯಯನವನ್ನು ಮಾಡುವಾಗ ಸಣ್ಣ ಸಣ್ಣ ಮಾಹಿತಿಯೂ ಮುಖ್ಯವಾಗುತ್ತದೆ. ಸಂಸ್ಕೃತಿಯ ಮೂಲರಹಸ್ಯವನ್ನೇ ಅರಿಯದ ನಾವು ಯಾವ ರೀತಿಯಿಂದ ಅಧ್ಯಯನ ನಡೆಸಬೇಕೆಂಬ ಯೋಚನೆ ಸದಾಕಾಲವೂ ನಮ್ಮನ್ನು ಕೊರೆಯತೊಡಗುತ್ತದೆ.

# ಅಧ್ಯಾಯ ೬

# ವಾಸ್ತು ಮತ್ತು ಕಲೆ

## ವಾಸ್ತು

ಹಿಂದಿನ ರಾಜವಂಶದವರಂತೆ ರಾಷ್ಟ್ರಕೂಟರು ಸಹ ವಾಸ್ತು ಮತ್ತು ಶಿಲ್ಪಕಲೆಗೆ ಪೋಷಕರಾಗಿದ್ದರು. ಇವರ ಪೋಷಣೆಯಲ್ಲಿ ನಿರ್ಮಾಣವಾದ ದೇವಾಲಯಗಳ ಸಂಖ್ಯೆ ಸುಮಾರು ಮುನ್ನೂರರಷ್ಟು. ಕೆಲವು ದೇವಾಲಯಗಳಿಗೆ ಶಾಸನಗಳ ಆಧಾರವೂ ದೊರಕಿವೆ. ಈ ದೇವಾಲಯಗಳು ದ್ರಾವಿಡ ಶೈಲಿಯದಾಗಿವೆ. ಇತರರು ನಿರ್ಮಿಸಿದ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿಸಿದ್ದಾರೆ ಮತ್ತು ಅವುಗಳಿಗೆ ದಾನ ದತ್ತಿಗಳನ್ನು ನೀಡಿದ್ದಾರೆ. ತಾವೂ ಕೂಡ ಸ್ವತಃ ದೇವಾಲಯ ನಿರ್ಮಾಣ ಮಾಡಿದ್ದಾರೆ. ಇವರ ಕಾಲದಲ್ಲಿ ಎಲ್ಲೋರ, ಎಲಿಫೆಂಟಾ, ಮಂಡಪೇಶ್ವರ, ಜೋಗೇಶ್ವರಿ ಮುಂತಾದ ಗುಹಾಲಯಗಳಲ್ಲದೆ, ಬಾದಾಮಿ, ಐಹೊಳೆ, ಸಿರಿವಾಳ, ಕುಬಟೂರು, ಪಟ್ಟದಕಲ್ಲು ಮುಂತಾದ ಕಡೆಗಳಲ್ಲಿ ದೇವಾಲಯಗಳು ನಿರ್ಮಾಣವಾದವು. ಇವರು ಬಸದಿ, ಚೈತ್ಯ, ವಿಹಾರ, ದೇವಾಲಯಗಳನ್ನು ನಿರ್ಮಿಸಿದ್ದಾರೆ.

ಆಂಧ್ರದ ಆಲಂಪುರ, ಮಹಾನಂದಿ, ಪ್ರಾತಕೋಟಾ, ಪಂಚಲಿಂಗ, ಭವನಾಶಿ ಸಂಗಮ, ವೆಲ್ದುರ್ತಿ ಮತ್ತು ಬಂಡ್ರ ತಂಡ್ರಪಾಡುಗಳಲ್ಲಿ ರಾಷ್ಟ್ರಕೂಟರ ದೇವಾಲಯಗಳನ್ನು ಕಾಣಬಹುದು. ಕರ್ನಾಟಕದಲ್ಲಿ ಅದರಲ್ಲಿಯೂ ಉತ್ತರ ಕರ್ನಾಟಕದಲ್ಲಿ ರಾಷ್ಟ್ರಕೂಟರ ದೇವಾಲಯಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ಇದಲ್ಲದೆ ಮಹಾರಾಷ್ಟ್ರದ ಎಲಿಫೆಂಟಾ, ಮಂಡಪೇಶ್ವರ, ಜೋಗೇಶ್ವರಿ, ಕನ್ಹೇರಿ, ಔರಂಗಾಬಾದ್ ಮತ್ತು ಎಲ್ಲೋರಗಳಲ್ಲಿ ಕಾಣಬಹುದು. ಔರಂಗಾಬಾದಿನ ಗುಹಾಲಯಗಳನ್ನು ಅಧ್ಯಯನ ಮಾಡುವಾಗ ಅದರಲ್ಲಿ ರಾಷ್ಟ್ರಕೂಟರ ಪ್ರಭಾವ ಇರುವಂತೆ ಕಂಡುಬರುತ್ತದೆ. ಈ ದೇವಾಲಯಗಳನ್ನು ಶೈವ, ಜೈನ, ವೈಷ್ಣವ, ಶಾಕ್ತ, ತ್ರೈಪುರುಷ, ಆದಿತ್ಯ, ಕೇಶವಾದಿತ್ಯ, ಬಳರಿ, ವಿನಾಯಕ, ಬ್ರಹ್ಮ ಮುಂತಾದ ಬಗೆಗಳಾಗಿ ವಿಂಗಡಿಸಬಹುದು. ಈ ದೇವಾಲಯಗಳಲ್ಲಿ ಶೈವಪಂಥದ ದೇವಾಲಯಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತದೆ. ಕೆಲವು ದೇವಾಲಯಗಳಿಗೆ

ಕೆಂಪು ಮರಳುಕಲ್ಲನ್ನು ಬಳಸಿದ್ದಾರೆ. ರಾಷ್ಟ್ರಕೂಟರ ದೇವಾಲಯಗಳನ್ನು ನಾಲ್ಕು ಭಾಗಗಳಲ್ಲಿ ವಿಂಗಡಿಸಿಕೊಂಡು ಅಧ್ಯಯನ ಮಾಡಬಹುದು.

ಇವಗಳನ್ನು ೧. ಗುಹಾಲಯ ೨. ಏಕಶಿಲಾ ದೇವಾಲಯ ೩. ಬಿಡಿಶಿಲೆಯ ದೇವಾಲಯ ೪. ಇಟ್ಟಿಗೆ ದೇವಾಲಯಗಳೆಂದು ಗುರುತಿಸಬಹುದಾಗಿದೆ.

ಅ. ಸುಂದರರವರು ತಮ್ಮ "ಧಾರವಾಡ – ಬಿಜಾಪುರ ಪ್ರಾಂತ್ಯದಲ್ಲಿರುವ ರಾಷ್ಟ್ರಕೂಟರ ಕಾಲದ ಕಟ್ಟಡ ರಚನೆಯು – ದೇವಾಲಯಗಳು, ಒಂದು ಪ್ರಾಥಮಿಕ ಲೇಖನ" ದಲ್ಲಿ ಒಂಭತ್ತು ವಿಧಗಳಾಗಿ ದೇವಾಲಯಗಳನ್ನು ವಿಂಗಡಿಸಿದ್ದಾರೆ. ಇವುಗಳಲ್ಲಿ ತ್ರಿಕೂಟಾಚಲ ದೇವಾಲಯಗಳು, ಸಭಾಗಳು ಮುಂತಾದ ವಿಧಗಳನ್ನು ಹೆಸರಿಸಿದ್ದಾರೆ. ದೇವಾಲಯದ ನಿರ್ಮಾಣಕ್ಕೆ ಕೆಂಪು ಮರಳುಗಲ್ಲು, ಸ್ಥಳೀಯ ಬಳಪದಕಲ್ಲು, ಕರಿಯಕಲ್ಲು, ಕಗ್ಗಲ್ಲು ಮುಂತಾದುವುಗಳನ್ನು ಬಳಸಿದ್ದಾರೆ. ಭದ್ರತೆಯ ದೃಷ್ಟಿಯಿಂದ ಮಿಶ್ರಜಾತಿಯ ಶಿಲೆಗಳನ್ನು ಉಪಯೋಗಿಸಿರುವ ನಿದರ್ಶನಗಳಿವೆ. ಕೆಲವೊಂದು ದೇವಾಲಯಗಳು ಸಂಪೂರ್ಣ ಜೀರ್ಣವಾಗಿವೆ. ಕಲ್ಯಾಣಿ ಚಾಲುಕ್ಯರಿಂದ ಜೀರ್ಣೋದ್ಧಾರವಾದ ಹಲವು ರಾಷ್ಟ್ರಕೂಟ ದೇವಾಲಯಗಳನ್ನು ಕಲ್ಯಾಣಿ ಚಾಲುಕ್ಯರ ದೇವಾಲಯಗಳೆಂದೇ ಗುರುತಿಸಿದ್ದಾರೆ. ಆದರೆ ಶಾಸನಗಳ ಮತ್ತು ವಾಸ್ತುಶೈಲಿಗಳ ಅಧ್ಯಯನದಿಂದ ನಮಗೆ ಇವು ಮೂಲತಃ ರಾಷ್ಟ್ರಕೂಟರ ನಿರ್ಮಾಣವೆಂದು ತಿಳಿದುಬರುತ್ತದೆ. ಕೆಲವು ದೇವಾಲಯಗಳು ಆಧುನಿಕತೆಗೆ ಒಳಗಾಗಿ ತಮ್ಮ ನೈಜತೆಯನ್ನು ಕಳೆದುಕೊಂಡಿವೆ. ಮೂಲವಿಗ್ರಹಗಳು ಬದಲಾಗಿರುವ ನಿದರ್ಶನಗಳೂ ಉಂಟು.

## ಗುಹಾಲಯ

ಬಾದಾಮಿ ಗುಹೆಗಳಂತೆ ಬಾಜಾ, ಕಾರ್ಲಾ, ಕನ್ಹೇರಿ, ಬೇಡ್ಸಾ, ಉದಯಗಿರಿ ಗುಹೆಗಳನ್ನು ರಾಷ್ಟ್ರಕೂಟರ ಆರಂಭದ ಕಾಲಕ್ಕಾಗಲೇ ನಿರ್ಮಿಸಿದ್ದರು. ಆದಿಕಾಲದಿಂದ ಬಂದ ಗುಹಾಲಯ ನಿರ್ಮಾಣ ಪದ್ಧತಿಗೆ ರಾಷ್ಟ್ರಕೂಟರ ಕೊಡುಗೆ ಕೊನೆಯ ಹಂತವಾಗಿದೆ. ಇವರ ನಿರ್ಮಾಣವನ್ನು ಚೈತ್ಯ, ವಿಹಾರಗಳು, ಜೈನಗುಹೆಗಳು ಮತ್ತು ವೈದಿಕಗುಹೆಗಳೆಂದು ಗುರುತಿಸಬಹುದಾಗಿದೆ. ರಾಷ್ಟ್ರಕೂಟರ ಗುಹಾಲಯಗಳಲ್ಲಿ ಎಲಿಫೆಂಟಾ, ಎಲ್ಲೋರ, ಮಂಡಪೇಶ್ವರ, ಜೋಗೇಶ್ವರಿ, ಲೋಣಾದ್‌ಗಳು

ಪ್ರಮುಖವಾದವು. ದೇವಾಲಯಗಳನ್ನು ಕಟ್ಟಲು ಪ್ರಾರಂಭಿಸಿದ ಮೇಲೆ ಗುಹೆಗಳನ್ನು ಕೊರೆಸುವುದು ಕಡಿಮೆಯಾಯಿತು. ಕ್ರಿ.ಶ. ೯ ನೇ ಶತಮಾನದ ನಂತರ ಇಳಿಮುಖವಾಗುತ್ತಾ ಹೋಗಿದ್ದು ನಂತರ ನಿಂತೇ ಹೋಯಿತೆನ್ನಬಹುದು. ದೇವಾಲಯಗಳಿಗಿಂತ ಪ್ರಾಚೀನವಾದುದು ಗುಹಾಲಯಗಳು, ಇದಕ್ಕೆ ಉದಾಹರಣೆಯಾಗಿ ಎಲ್ಲೋರ, ಎಲಿಫೆಂಟಾ ಮಂಡಪೇಶ್ವರ, ಜೋಗೇಶ್ವರಿ, ಮುಂತಾದ ಕಡೆಗಳಲ್ಲಿರುವ ಗುಹೆಗಳನ್ನು ಹೆಸರಿಸಬಹುದು. ರಾಷ್ಟ್ರಕೂಟರು ಅನೇಕ ಗುಹಾದೇವಾಲಯಗಳನ್ನು ಕೊರೆಸಿದ್ದಾರೆ. ಎಲ್ಲೋರದ ಏಕಶಿಲೆಯ ದೇವಾಲಯ ಇವರ ವಿಶೇಷ. ರಾಷ್ಟ್ರಕೂಟರ ಕಾಲದಲ್ಲಿ ನಿರ್ಮಾಣವಾದ ಗುಹಾದೇವಾಲಯಗಳಲ್ಲಿ ಎಲ್ಲೋರದ ದಶಾವತಾರಗುಹೆ (ಗುಹಾಸಂಖ್ಯೆ-೧೫) ಅತ್ಯಂತ ಪ್ರಾಚೀನವಾದುದು. ದಶಾವತಾರ ಗುಹೆಯು ಎರಡು ಅಂತಸ್ತಿನದಾಗಿದ್ದು ಬಹಳ ವಿಶಾಲವಾಗಿದೆ. ಈ ಗುಹೆಯನ್ನು ಕೊರೆಸಿದವನು ದಂತಿದುರ್ಗನೆಂದು ಗುಹೆಯ ಮುಂದಿರುವ ಶಾಸನವು (ಕ್ರಿ. ಶ. ೭೫೩-೫೬) ಉಲ್ಲೇಖಿಸಿದೆ. ಎಲ್ಲೋರದಲ್ಲಿ ಗಮನಿಸಬೇಕಾದ ಇನ್ನೊಂದು ಮುಖ್ಯ ಗುಹೆಯೆಂದರೆ ಧೂಮರ್‌ಲೇಣಾ (ಗುಹಾಸಂಖ್ಯೆ-೨೯) ಗಾತ್ರ ಮತ್ತು ಕಲಾತ್ಮಕತೆಯಿಂದ ಆಕರ್ಷಿಸುವ ಇದು ೮ ನೆಯ ಶತಮಾನದಲ್ಲಿ ನಿರ್ಮಿತವಾಗಿದ್ದು ಎಲಿಫೆಂಟಾದ ನೆನಪನ್ನು ತರುತ್ತದೆ. ಐಹೊಳೆಯ ಜೈನ ಮತ್ತು ಬ್ರಾಹ್ಮಣ ಗುಹಾಲಯಗಳಲ್ಲಿ ಹಲವು ರಾಷ್ಟ್ರಕೂಟರ ಕಾಲದವು.

### ಬೌದ್ಧಗುಹಾಲಯ

ಸಾಮಾನ್ಯವಾಗಿ ಬೌದ್ಧಗುಹೆಗಳಲ್ಲಿ ಹಿಂಭಾಗದ ಗೋಡೆಗೆ ಬುದ್ಧನ ಶಿಲ್ಪವನ್ನು ಕೆತ್ತುತ್ತಿದ್ದರು. ಅದರ ಮುಂಭಾಗದಲ್ಲಿ ತೆರದ ಸಭಾಂಗಣವನ್ನು ನಿರ್ಮಿಸಲಾಗುತ್ತಿತ್ತು. ಇದರ ಮುಂಭಾಗದಲ್ಲಿ ಕೈಸಾಲೆಯನ್ನು ಕಟ್ಟುವ ಪದ್ಧತಿ ಇತ್ತು. ಪ್ರತಿಯೊಂದು ಚೈತ್ಯದ ಪಕ್ಕದಲ್ಲಿ ವಿಹಾರವನ್ನು ನಿರ್ಮಿಸುವ ಪದ್ಧತಿಯಿತ್ತು. ಆದರೆ ಕೆಲವೊಂದು ಬೌದ್ಧಗುಹೆಗಳು ಸಾಮಾನ್ಯ ಲಕ್ಷಣಗಳಿಗೆ ವ್ಯತಿರಿಕ್ತವಾಗಿದ್ದು ರಾಷ್ಟ್ರಕೂಟರ ವೈಶಿಷ್ಟ್ಯವನ್ನು ತೋರುವುದು. ಇದಕ್ಕೆ ತೀನ್‌ತಲ್ ಗುಹೆಯನ್ನು ಉದಾಹರಣೆಯಾಗಿ ನೀಡಬಹುದು. ಈ ಗುಹೆಯು ಚೈತ್ಯದ ಹಾಗೂ ವಿಹಾರದ ಸಮ್ಮಿಲಿತ ರೂಪವಾಗಿದೆ. ಸಭಾಂಗಣದ ಸುತ್ತಲೂ ವಿಶ್ರಾಂತಿ ಕೊಠಡಿಗಳಿದ್ದು ಪ್ರತಿಯೊಂದರಲ್ಲೂ ಕಲ್ಲಿನ ಮಂಚಗಳನ್ನು ಕೊರೆಯಲಾಗಿದೆ. ಇದರ ಹಿಂದಿನ ಗೋಡೆಯಲ್ಲಿ ಅಷ್ಟಬೋಧಿಸತ್ವ

ಮಂಡಲವನ್ನು ಕೆತ್ತಲಾಗಿದೆ. ಈ ಗುಹಾಲಯವು ಮೂರು ಅಂತಸ್ತುಗಳನ್ನು ಹೊಂದಿರುವುದರಿಂದ ತೀನ್‌ತಲ್ ಎಂಬ ಹೆಸರನ್ನು ಪಡೆದಿದೆ. ಈ ಗುಹಾಲಯವು ಎಲ್ಲೋರದ ಬೌದ್ಧ ಗುಹಾಲಯಗಳ ಸಾಲಿನಲ್ಲಿ ಕೊನೆಯದು. ಇದು ಗುಹಾಲಯದ ವಾಸ್ತುಶೈಲಿಯಲ್ಲಿ ಒಂದು ಪರಿವರ್ತನಾ ಘಟ್ಟವನ್ನು ಸೂಚಿಸುತ್ತದೆ. ಇದರಂತೆ ವಿಶ್ವಕರ್ಮಗುಹೆ (ಗುಹಾಸಂಖ್ಯೆ-೧೦) ದೋನ್‌ತಲ್ ಮತ್ತಿತರ ಗುಹೆಗಳು ಪ್ರಮುಖವಾಗಿವೆ. ಎಲ್ಲೋರದ ಆರನೆಯ ಗುಹೆ ಮತ್ತು ಔರಂಗಾಬಾದಿನ ಒಂಭತ್ತನೆಯ ಗುಹೆಯು ಶೈಲಿಯಲ್ಲಿ ಬಹಳ ನಿಕಟತೆಯನ್ನು ಹೊಂದಿದೆ (Ajanta, Ellora and Aurangabad Caves; An Appreciation, Pathy T.V. and Prasad V.R.N).

**ಜೈನ ಗುಹಾಲಯ**

ರಾಷ್ಟ್ರಕೂಟ ನಿರ್ಮಿತ ಜೈನ ಗುಹಾಲಯಗಳಿಗೆ ಉತ್ತಮ ನಿದರ್ಶನಗಳೆಂದರೆ ಎಲ್ಲೋರದ "ಇಂದ್ರಸಭಾ" ಮತ್ತು "ಜಗನ್ನಾಥಸಭಾ". ಇಂದ್ರಸಭೆಯು ಎರಡು ಅಂತಸ್ತುಗಳ ಗುಹೆಯಾಗಿದೆ. ಸಭೆಯನ್ನು ಹೋಲುತ್ತಾ ಇಕ್ಕೆಲಗಳಲ್ಲಿ ಸಣ್ಣಗುಹೆಗಳನ್ನು ಹೊಂದಿದ್ದು ಮಧ್ಯದಲ್ಲಿ ಒಂದು ಅಂಗಳವನ್ನು ಹೊಂದಿದೆ. ಇದಕ್ಕೆ ಪ್ರತ್ಯೇಕವಾಗಿ ನಿರ್ಮಿತವಾದ ದ್ರಾವಿಡ ಶೈಲಿಯ ಬಾಗಿಲುವಾಡವಿದೆ. ಇದು ದಿಗಂಬರ ಜೈನಪಂಥಕ್ಕೆ ಸೇರಿದ್ದು. ಇದರ ಗೋಡೆಯ ಮೇಲೆ ಸಿಂಹಾಸನದಲ್ಲಿ ಆಸೀನವಾಗಿರುವ ಮಹಾವೀರ ತೀರ್ಥಂಕರ, ಇಂದ್ರ, ಶಚಿ, ಮೊದಲಾದ ಶಿಲ್ಪಗಳನ್ನು ಕೆತ್ತಲಾಗಿದೆ. ಈ ಇಂದ್ರಸಭೆಗೆ ಸೇರಿದಂತೆಯೇ ಇರುವ ಗುಹೆಯೇ ಜಗನ್ನಾಥ ಸಭೆ. ಇದು ಗಾತ್ರದಲ್ಲಿ ಇಂದ್ರಸಭೆಗಿಂತ ಚಿಕ್ಕದಾಗಿದ್ದು ಎರಡು ಅಂತಸ್ತಿನದಾಗಿದೆ.

**ವೈದಿಕ ಗುಹಾಲಯ**

ರಾಷ್ಟ್ರಕೂಟರ ವೈದಿಕ ಗುಹಾಲಯಗಳು ಪ್ರಮುಖವಾಗಿ ಎಲಿಫೆಂಟಾ, ಜೋಗೇಶ್ವರಿ, ಮಂಡಪೇಶ್ವರ, ಲೋಣಾದ್ ಮತ್ತು ಎಲ್ಲೋರದಲ್ಲಿ ಕಾಣಬಹುದು. ಎಲಿಫೆಂಟಾದಲ್ಲಿ ಏಳು ಗುಹೆಗಳು ಇವೆ. ಇವಲ್ಲದೆ ಇನ್ನೆರಡು ಅಪೂರ್ಣ ಗುಹೆಗಳಿವೆ. ಇವುಗಳಲ್ಲಿ ಪ್ರಮುಖವಾದದ್ದು ದ್ವೀಪದ ಪಶ್ಚಿಮದಲ್ಲಿರುವ ಗುಹೆ. ಈ ಗುಹೆಯು ವಾಸ್ತವವಾಗಿ ಎಲ್ಲೋರದ ಧೂಮರ್‌ಲೇಣಾ ಗುಹೆಯನ್ನು ಹೋಲುತ್ತದೆ. ಇಲ್ಲಿಯ ದ್ವಾರಪಾಲಕರ ಶಿಲ್ಪ ಹಾಗೂ ಕಂಬದ ಶೈಲಿಯನ್ನು ಅಧ್ಯಯನ ಮಾಡಿದರೆ ದ್ರಾವಿಡ

ಶೈಲಿಯ ಬೆಳವಣಿಗೆಯನ್ನು ಗುರುತಿಸಬಹುದು. ಪಕ್ಕಾ ರಾಷ್ಟ್ರಕೂಟರ ಶೈಲಿಯಾದ ಈ ಗುಹೆಯ ಹಜಾರದ ಬಲಭಾಗಕ್ಕೆ ನಾಲ್ಕು ದ್ವಾರಗಳು ಉಳ್ಳ ಒಂದು ಗರ್ಭಗೃಹ, ಈ ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾ ಪಥವಿದೆ. ಈ ಗುಹೆಗೆ ಮೂರು ಪ್ರವೇಶ ದ್ವಾರಗಳಿದ್ದು ಇದರ ಸುತ್ತಲಿನ ಒಳ ಗೋಡೆಗಳಲ್ಲಿ ಶಿವನ ಹದಿನಾರು ಲೀಲಾಮೂರ್ತಿಗಳ ಶಿಲ್ಪಗಳಿವೆ. ನಟರಾಜ, ಅಂಧಕಾರಿ, ಪಾರ್ವತಿಕಲ್ಯಾಣ ಮುಂತಾದವುಗಳನ್ನು ಕೆತ್ತಲಾಗಿದೆ. ಇಲ್ಲಿಯ ಅತ್ಯಂತ ಆಕರ್ಷಕ ಶಿಲ್ಪವೆಂದರೆ "ತ್ರಿಮೂರ್ತಿಶಿಲ್ಪ" ವೆಂದು ಪ್ರಸಿದ್ಧವಾಗಿರುವ ಮಹೇಶ್ವರ ಮೂರ್ತಿಯಾಗಿದೆ.

ಈ ಗುಹೆಯನ್ನು ಹೋಲುವ ಇನ್ನೊಂದು ಗುಹಾಲಯವೆಂದರೆ ಜೋಗೇಶ್ವರೀ ಗುಹಾಲಯ. ಆದರೆ ಗುಹಾಲಯದ ಒಳಗೋಡೆಗಳಲ್ಲಿ ಶಿಲ್ಪಗಳು ಕಂಡುಬರುವುದಿಲ್ಲ. ಈ ಗುಹೆಯ ಕಂಬಗಳು ಎಲಿಫೆಂಟಾದ ಕಂಬಗಳನ್ನು ಹೋಲುತ್ತವೆ. ಪ್ರವೇಶದ್ವಾರದ ಬಲಭಾಗಕ್ಕೆ ಬಂದರೆ ಮೂರು ಗರ್ಭಗೃಹಗಳಿವೆ. ಇಲ್ಲಿ ಕೆಲವು ಅಪೂರ್ಣವಾದ ಕೊಠಡಿಗಳನ್ನು ಕಾಣಬಹುದು. ಈ ಗುಹಾಲಯವು ನಂತರದ ಕಾಲಕ್ಕೆ ಸೇರಿದ್ದು. ಕ್ರಿ. ಶ. ೮ ನೆಯ ಶತಮಾನದ ಕೊನೆಯಿರಬಹುದು ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಲೋಣಾದ್ ಗುಹಾಲಯವು ಬಹಳ ಸರಳವಾದ ಗುಹೆ. ಇದರಲ್ಲಿ ಯಾವುದೇ ರೀತಿಯ ಧರ್ಮದ ಸೂಚಕಗಳಾದ ಶಿಲ್ಪಗಳು ಕಾಣುವುದಿಲ್ಲ. ಇದನ್ನು ಸಾಮಾನ್ಯ ವರ್ಗಕ್ಕೆ ಸೇರಿಸಬಹುದಾಗಿದೆ. ಪ್ರಸ್ತರದಲ್ಲಿ ಒಂದು ಕೈಸಾಲೆಯಿದೆ. ಹಜಾರವನ್ನು ನೋಡಬಹುದು. ಇದರ ಗರ್ಭಗೃಹದಲ್ಲಿ ಯಾವುದೇ ಮೂರ್ತಿಯಿಲ್ಲ. ಇದು ಬಹಳ ಜೀರ್ಣವಾಗಿದ್ದು ಇದರ ಮಕರತೋರಣಗಳು ಆಕರ್ಷಕವಾಗಿವೆ. ಇದು ಪ್ರಾಯಶಃ ಅಪೂರ್ಣವಾದ ಗುಹೆಯಾಗಿದ್ದು ಇದನ್ನು ವೈದಿಕಗುಹೆಯೆಂದು ತೀರ್ಮಾನ ಮಾಡಬಹುದೇ ಹೊರತು ಶೈವ ವೈಷ್ಣವ ಪ್ರಭೇದವನ್ನು ಗುರುತಿಸಲು ಸಾದ್ಯವಿಲ್ಲ. ಇದು ಜೋಗೇಶ್ವರಿಗಿಂತ ನಂತರದ ಕಾಲದ್ದಾಗಿದೆ. ರಾಷ್ಟ್ರಕೂಟರ ವೈದಿಕ ಗುಹೆಗಳಲ್ಲಿ ಅತ್ಯಂತ ಪ್ರಮುಖ ಹಾಗೂ ವಿಶ್ವ ವಿಖ್ಯಾತವಾದ ಗುಹೆಗಳೆಂದರೆ ಎಲ್ಲೋರದ (ಗುಹೆ ಸಂಖ್ಯೆ ೧೫–೧೬) ದಶಾವತಾರ ಗುಹೆ ಮತ್ತು ಕೈಲಾಸ ಗುಹೆ. ದಶಾವತಾರ ಗುಹೆಯು ಎರಡು ಅಂತಸ್ತುಗಳುಳ್ಳದ್ದು. ಇದು ಇದರ ಶಿಲ್ಪಸೌಂದರ್ಯಕ್ಕೆ ಹೆಸರಾಗಿದ್ದು ಇದರ ನಂದಿ ಮಂಟಪದ ಬಳಿಯಲ್ಲಿರುವ ಗೋಡೆಯಲ್ಲಿ ದಂತಿದುರ್ಗನ ಶಾಸನವಿದೆ. ಕೆಳ

ಅಂತಸ್ತಿನಲ್ಲಿ ೧೪ ಕಂಬಗಳುಳ್ಳ ಚೌಕಾಕಾರದ ದೊಡ್ಡ ಹಜಾರವಿದೆ. ಮಹಡಿಯಲ್ಲಿ ೩೪ ಕಂಬಗಳ ಹಜಾರವಿದೆ. ಈ ಕಂಬಗಳು ಸರಳವಾಗಿದ್ದು ಕಂಬಗಳನ್ನು ೬ ಸಾಲುಗಳಾಗಿ ಕಟ್ಟಲಾಗಿದೆ. ಇದರ ಸುತ್ತಲಿನ ಒಳಗೋಡೆಯಲ್ಲಿ ಅರೆಗಂಬಗಳ ನಡುವೆ ಕೆತ್ತಿರುವ ಆಕರ್ಷಕ ಶಿಲ್ಪಗಳಿವೆ. ಈ ಶಿಲ್ಪಗಳು ಪ್ರತ್ಯೇಕವಾದ ಬೃಹತ್ಕೋಷ್ಟದಲ್ಲಿ ಕೆತ್ತಿರುವ ಶೈವ ಮತ್ತು ವೈಷ್ಣವ ಶಿಲ್ಪಗಳಾಗಿವೆ. ಇವುಗಳ ನಡುವೆ ಯಾವುದೇ ಸಂಬಂಧ ಇರುವಂತೆ ಕಂಡುಬರುವುದಿಲ್ಲ. ಇದರ ಹೆಬ್ಬಾಗಿಲಲ್ಲಿ ಎರಡು ಬೃಹತ್ ದ್ವಾರಪಾಲಕರ ಮೂರ್ತಿಗಳಿವೆ. ಕೈಲಾಸನಾಥ ದೇವಾಲಯವು ಗುಹಾಲಯವೇ ಆಗಿದ್ದರೂ ಇದನ್ನು ಏಕಶಿಲಾ ದೇವಾಲಯದಲ್ಲಿ ಚರ್ಚಿಸಲಾಗುವುದು. ಈ ಸಾಲಿನ ಗುಹೆಗಳಲ್ಲಿ ಪ್ರಾಯಶಃ ರಾಮೇಶ್ವರ ಗುಹೆ ಅತ್ಯಂತ ಪ್ರಾಚೀನದ್ದಾಗಿರಬಹುದು. ಈ ತೀರ್ಮಾನಕ್ಕೆ ಇದರ ಗಿಡ್ಡಾದ ಪೂರ್ಣಕಂಬಗಳಿಂದ ಅಲಂಕೃತವಾದ ಕಂಬಗಳನ್ನು ನೋಡಬಹುದು. ಈ ಗುಹಾಲಯಗಳೊಂದಿಗೆ ಹೆಸರಿಸಬಹುದಾದ ಗುಹೆಗಳೆಂದರೆ ರಾವಣ್–ಕಿ–ಖೈ, ಸೀತಾ–ಕಿ–ನಹಾನಿ ಅಥವಾ ಧೂಮರ್‌ಲೇಣ ಇತ್ಯಾದಿಗಳು.

## ಏಕಶಿಲಾ ದೇವಾಲಯ

"ರಾಷ್ಟ್ರಕೂಟರು ಎಲ್ಲೋರದಲ್ಲಿ ಗುಹಾದೇವಾಲಯಗಳನ್ನು ಕೊರೆಸುವ ಸಮಯಕ್ಕೆ ಭಾರತದಲ್ಲಿ ಪಲ್ಲವರು ಮಾಮಲ್ಲಪುರದಲ್ಲಿ ಕೊರೆಸಿದ ರಥಗಳು ಮಾತ್ರ ಇದ್ದವು. ಕ್ರಿ.ಶ. ಸುಮಾರು ೮೦೦ ರಲ್ಲಿ ಕಳಗುಮಲೈನ ವೆಟ್ಟುವನ್ ಕೋಯಿಲ್, ೯ ನೇ ಶತಮಾನದ ಮಧ್ಯಭಾಗದ ಹೊತ್ತಿಗೆ ಮಧ್ಯಪ್ರದೇಶದ ಧಮ್ನಾರ್‌ನಲ್ಲಿ (ಧರ್ಮರಾಜೇಶ್ವರ) ಅಷ್ಟಪರಿವಾರ ದೇವಾಲಯ ಸಂಕೀರ್ಣವಿದೆ. ಉತ್ತರ ಭಾರತದ ಬಾಗಿರುವ ಶೈಲಿ ಅಥವಾ ವಕ್ರಶೈಲಿಯಲ್ಲಿ ಇದರ ರಚನೆಯಿದೆ. ಗ್ವಾಲಿಯರ್ ಬೆಟ್ಟದ ಅಂಚಿನಲ್ಲಿರುವ ಚತುರ್ಭುಜ ವಿಷ್ಣುದೇವಾಲಯ, ಕಾಂಗ್ರಾ ಕಣಿವೆಯ ಮಸ್ರೂರಿನಲ್ಲಿ ಇದೇ ಕಾಲದಲ್ಲಿ ನಿರ್ಮಾಣವಾದ ಏಳು ಏಕ ಶಿಲಾ ದೇವಾಲಯಗಳಿವೆ. ಬಿಹಾರದ ಕಾಗ್‌ಲಾಂಗ್‌ನಲ್ಲಿ ಸಣ್ಣ ಆದರೆ ಆಯತಾಕಾರದ ಅಥವಾ ಬಂಡಿಯಾಕಾರದ ಶಾಲಾ ಶಿಖರವಿರುವ ದೇವಾಲಯಗಳಿವೆ. ಇದರ ಕಾಲವನ್ನು ಕೂಡ ೯ನೆಯ ಶತಮಾನದ ಕೊನೆ ಅಥವಾ ಸ್ವಲ್ಪ ಮುಂದಿನ ಕಾಲಕ್ಕೆ ಹಾಕಬಹುದಾಗಿದೆ (The Ellora Monoliths Rashtrakuta Architecture in the Dekan., Intro. P3, Soundar Rajan K.V. p381)

ಇಡೀ ಭಾರತದಲ್ಲಿ ಕಲ್ಲುಕೊರೆದು ನಿರ್ಮಿಸಿರುವ ಏಕಶಿಲಾ ದೇವಾಲಯಗಳಲ್ಲಿ ಬಹಳ ಉತ್ತಮ ಸಾಧನೆಯೆಂದರೆ ಕೈಲಾಸನಾಥ ದೇವಾಲಯ ಇದನ್ನು ಕುರಿತು ಪರ್ಸಿಬ್ರೌನರು ತಮ್ಮ ಅನಿಸಿಕೆಯನ್ನು ತೋರ್ಪಡಿಸುತ್ತಾ "It is something more than a record of artistic form; it is a great spiritual achievement, every portion being rich statement glowing with meaning. The Kailasa is an illustration of one of those rare occasions when men's minds hearts and hands work in unison towords the consumnation of supreme ideal." (Karnataka through the Ages, p262-381)

ಎಂದಿದ್ದಾರೆ. ದೇವಾಲಯದ ಯಾವ ಭಾಗವನ್ನೂ ಬಿಡದೆ ಕಡೆದು ರಚಿಸಿರುವ ದೇವಾಲಯವಾಗಿದೆ. ಗರ್ಭಗೃಹ, ಸಭಾಮಂಟಪ, ಧ್ವಜಸ್ತಂಭಗಳು ಮತ್ತು ನಂದಿಮಂಟಪವು ದಕ್ಷಿಣ ಭಾರತದ ಸ್ತಂಭಗಳ ಶೈಲಿಯ ವಿಕಾಸದ ಹಂತಗಳನ್ನು ತೋರಿಸುತ್ತದೆ. ದೇವಾಲಯದ ಪರಿವಾರ ಮಂಟಪಗಳು ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಮತ್ತು ಮಹಾಬಲಿಪುರಂನ ಕಲ್ಲಿನ ರಥಗಳನ್ನು ನೆನಪಿಸುತ್ತದೆ.

ಕೈಲಾಸನಾಥ ದೇವಾಲಯದ ರಚನೆಯು ರಾಷ್ಟ್ರಕೂಟ ಒಂದನೆಯ ಕೃಷ್ಣನ ಕಾಲದಲ್ಲಿ ಆರಂಭವಾಯಿತು. ಇಡೀ ದೇವಾಲಯ ಸಂಕೀರ್ಣವನ್ನು ಒಂದೇ ಕಲ್ಲಿನಲ್ಲಿ ಕೆತ್ತಲಾಗಿದೆ. ಬೆಟ್ಟದಿಂದ ಈ ಭಾಗವನ್ನು ಬಿಡಿಸಿಕೊಂಡಿದ್ದಾರೆ. ಬಿಡಿಸಿಕೊಂಡ ಭಾಗದಲ್ಲಿ ಒಂದು ಅಂತಸ್ತಿನ ದೇವಾಲಯವನ್ನು ಕೊರೆದಿದ್ದಾರೆ. ಈ ದೇವಾಲಯವನ್ನು ನಿರ್ಮಿಸಲು ಸ್ಫೂರ್ತಿ ಅಥವಾ ಮಾದರಿ ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯವೆಂದು ಕೆಲವು ವಿದ್ವಾಂಸರು ಹೇಳಿದ್ದರೆ ಇನ್ನು ಕೆಲವರು ಮಹಾಬಲಿಪುರಂನ ಏಕಶಿಲಾ ರಥಗಳನ್ನು ಅನುಕರಿಸಿದ್ದಾರೆಂದು ಹೇಳಿದ್ದಾರೆ.

ಕೆಲವು ದೇವಾಲಯ ಸಂಕೀರ್ಣದಲ್ಲಿ ನಂದಿಮಂಟಪ, ಪರಿವಾರ ದೇವತೆಗಳ ದೇವಾಲಯಗಳು, ಧ್ವಜಸ್ತಂಭಗಳಿವೆ. ಮುಖ್ಯ ದೇವಾಲಯಕ್ಕೆ ದ್ರಾವಿಡ ಶಿಖರವಿದೆ. ಶಿಖರದಲ್ಲಿ ಸುಖನಾಸವಿದೆ. ಕೈಲಾಸ ದೇವಾಲಯದಲ್ಲಿ ಶೈವಧರ್ಮಕ್ಕೆ ಸೇರಿದ ಮೂರ್ತಿಗಳೇ ಅಧಿಕ. ಇವುಗಳಲ್ಲಿ ಅತ್ಯಂತ ಪ್ರಮುಖವಾಗಿ ಮನಸೆಳೆಯುವ ಶಿಲ್ಪವೆಂದರೆ, ರಾವಣನು ಕೈಲಾಸವನ್ನು ಎತ್ತುತ್ತಿರುವುದು. ಬಹುಶಃ ಈ ದೇವಾಲಯಕ್ಕೆ ಕೈಲಾಸವೆಂದು ಹೆಸರು ಬರಲು ಈ ಶಿಲ್ಪವೇ ಕಾರಣವಿರಬಹುದು. ಇದಲ್ಲದೆ

ತ್ರಿವಿಕ್ರಮ, ವರಾಹ, ನರಸಿಂಹ, ನಟರಾಜ, ಮಹಿಷಮರ್ಧಿನಿ , ರತಿ–ಮನ್ಮಥ, ರಾವಣ, ಜಟಾಯು, ಮುಂತಾದವುಗಳು ಮುಖ್ಯವಾಗಿವೆ. ರಾವಣ–ಜಟಾಯು ಯುದ್ಧ ಮತ್ತು ರಾವಣ ಕೈಲಾಸ ಎತ್ತುತ್ತಿರುವ ಶಿಲ್ಪಗಳು ಬಾದಾಮಿ ಚಲುಕ್ಯರ ಪಟ್ಟದ ಕಲ್ಲಿನ ಶಿಲ್ಪಗಳಿಂದ ಪ್ರಭಾವಿತವಾಗಿದೆ ಎನ್ನಬಹುದು. ಕೈಲಾಸ ದೇವಾಲಯದ ಮೂಲಹೆಸರು "ಕನ್ನೇಶ್ವರ" ಅಥವಾ "ಕೃಷ್ಣೇಶ್ವರ" ಎಂದಿದೆ. ರಾಷ್ಟ್ರಕೂಟರ ಶಾಸನವೊಂದು "ದೇವತೆಗಳೂ ಕೂಡ ಈ ದೇವಾಲಯದ ಸೌಂದರ್ಯವನ್ನು ಕಂಡು ಬೆರಗಾದರು" ಎಂದು ವರ್ಣಿಸುತ್ತದೆ. ಗುಜರಾತಿನ ರಾಷ್ಟ್ರಕೂಟ ಕರ್ಕರಾಜ ಸುವರ್ಣವರ್ಷನ ಬಡೋದಾ ಶಾಸನವು (IA, Vol. XII, p159) ಒಂದನೆಯ ಕೃಷ್ಣನು ಏಲಾಪುರದಲ್ಲಿ ಅದ್ಭುತವಾಅದ ಶಿವದೇವಾಲಯವನ್ನು ನಿರ್ಮಾಣ ಮಾಡಿದನೆಂದು ಹೇಳಿದೆ.

"ಏಲಾಪುರಾಚಲ ಗತಾದ್ಭುತ ಸನ್ನಿವೇಶಂ ಯದ್ವೀಕ್ಷ್ಯ ವಿಸ್ಮಿತವಿಮಾನಚರಾಮರೇನ್ದ್ರಾಃ। ಏತತ್ಯಸ್ವಯಂಭು ಶಿವಧಾಮ ನಕೃತಿಮಂಶ್ರೀ। ದೃಷ್ಟೇದೃಶೀತಿ ಸತತಂ ಬಹು ಚರ್ಚಯನ್ತಿ ॥

ಭೂಯಸ್ತಥಾ ವಿಧಕೃತೌ ವ್ಯವಸಾಯ ಹಾನಿರೇತನ್ಮಯಾ ಕೃತಮಹೋ ಕೃತಮಿತ್ಯಕಸ್ಮಾತ್। ಕರ್ತಾಯ್ದೆಸ್ಯ ಕಲು ವಿಸ್ಮಯಮಾಪಶಿಲ್ಪೀ। ತನ್ನಾಮ ಕೀರ್ತನಮಕಾರ್ಯತ ಯೋನ ರಾಜ್ಞಾ ॥

ಬಾದಾಮಿಯ ಚಲುಕ್ಯ ದೊರೆಯು ಕಂಚಿಯ ಮೇಲೆ ದಾಳಿಮಾಡಿದ ಕಾಲ, ದೇವಾಲಯಗಳ ನಿರ್ಮಾಣ ಕಾಲ, ಮತ್ತು ಎಲ್ಲೋರದಲ್ಲಿ ರಾಷ್ಟ್ರಕೂಟರ ಗುಹಾಲಯಗಳು ನಿರ್ಮಾಣವಾಗಿರುವ ಕಾಲಗಳನ್ನು ಗಮನಿಸಿದಾಗ, ಇವೆಲ್ಲವುಗಳ ನಿರ್ಮಾಣ ಏಕ ಕಾಲದಲ್ಲಿ ನಡೆಯುತ್ತಿತ್ತೆಂದು ಊಹಿಸಬಹುದು. ಏಕೆಂದರೆ ಎಲ್ಲೋರದಲ್ಲಿರುವ ಬೌದ್ಧಗುಹೆಗಳ ಕಾಲವನ್ನು ಗಮನಿಸಿದಾಗ ಅಲ್ಲಿ ಮೊದಲಿನಿಂದಲೂ ನಿರ್ಮಾಣ ಕಾರ್ಯ ನಡೆಯುತ್ತಲೇ ಇತ್ತು. ಮಾಮಲ್ಲಪುರದ ರಥಗಳ ನಿರ್ಮಾಣ ಸಮಯದಲ್ಲಿ, ಪಟ್ಟದ ಕಲ್ಲು ವಿರೂಪಾಕ್ಷ ದೇವಾಲಯದ ನಿರ್ಮಾಣ ಸಮಯದಲ್ಲಿ, ಅಲ್ಲಿಯೂ ಬೇರೆ ಗುಹೆಗಳ ಕೊರೆಯುವಿಕೆ ನಡೆದಿತ್ತೆಂದು ಊಹಿಸಬಹುದಾಗಿದೆ. ಮಧ್ಯಪ್ರದೇಶದ ಧಮ್ನಾರ್‌ನಲ್ಲಿರುವ ಏಕಶಿಲಾ ದೇವಾಲಯಗಳು ಕೂಡ ಇದಕ್ಕೆ ಹೊರತಲ್ಲವೆಂದು ಹೇಳಬಹುದಾಗಿದೆ. ಧಮ್ನಾರಿನ ಎಂಬತ್ತು ಗುಹೆಗಳ ನಡುವೆ ಬೆಟ್ಟದ ಮಧ್ಯೆ ಸೋಮೇಶ್ವರನ ಏಕಶಿಲಾ ದೇವಾಲಯವು

ನಿರ್ಮಿತವಾಗಿದೆ. ಇದರ ಕಾಲ, ಪ್ರಮಾಣ, ಶಿಲ್ಪಗಳ ಶೈಲಿಯನ್ನು ಗಮನಿಸಿದರೆ ಇದು ರಾಷ್ಟ್ರಕೂಟರ ನಿರ್ಮಾಣವೆಂದೇ ತೀರ್ಮಾನಿಸಬಹುದು. ಈ ದೇವಾಲಯಕ್ಕೆ ಹೋಗಬೇಕಾದರೆ ಎರಡು ಅಂತಸ್ತುಗಳಷ್ಟು ಕೆಳಗೆ ಇಳಿಯಬೇಕು. ದೇವಾಲಯವು ಒಂದೇ ಹಂತದ್ದಾಗಿದೆ.

## ಬಿಡಿಶಿಲೆಯ ದೇವಾಲಯ

ರಾಷ್ಟ್ರಕೂಟರ ಕಾಲದ ದೇವಾಲಯಗಳಲ್ಲಿ ಮತ್ತೊಂದು ವಿಧ ಬಿಡಿಶಿಲೆಯ ದೇವಾಲಯಗಳು (Structural Temples). ಈ ದೇವಾಲಯಗಳು ದ್ರಾವಿಡ ಶೈಲಿಯದ್ದೆಂದು ಈಗಾಗಲೇ ಹೇಳಲಾಗಿದೆ. ಇವರು ಹಿಂದಿನವರ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿರುವಂತೆಯೇ, ಇವರಿಂದ ನಿರ್ಮಿತವಾದ ದೇವಾಲಯಗಳನ್ನು ನಂತರದ ದೊರೆಗಳು ಜೀರ್ಣೋದ್ಧಾರ ಮಾಡಿರುವುದನ್ನು ಕಾಣುತ್ತೇವೆ. ಬನವಾಸಿಯ ಮಧುಕೇಶ್ವರನ ದೇವಾಲಯದ ಗರ್ಭಗೃಹದ ಮುಂದಿರುವ ನವರಂಗದ ಕಂಬಗಳು ರಾಷ್ಟ್ರಕೂಟರ ಕಂಬಗಳನ್ನು ಹೋಲುತ್ತವೆ. ಪಟ್ಟದಕಲ್ಲಿನ ದೇವಸ್ಥಾನದ ಸಮೂಹದಲ್ಲಿ ರಾಷ್ಟ್ರಕೂಟರ ಕಾಲದಲ್ಲಿ ನಿರ್ಮಾಣವಾದ ಕೆಲವು ದೇವಾಲಯಗಳಿವೆ. ಹಾನಗಲ್ಲು ತಾಲ್ಲೂಕು ಅಡೂರಿನಲ್ಲಿರುವ ರಾಮಲಿಂಗೇಶ್ವರ ಗುಡಿಯಲ್ಲಿರುವ ಕಂಬಗಳು ರಾಷ್ಟ್ರಕೂಟರ ಪ್ರಭಾವದಿಂದ ಕೂಡಿದೆ. ಬ್ಯಾಡಗಿ ತಾಲ್ಲೂಕಿನ ಕಾಗಿನೆಲೆಯ ಕಾಳಹಸ್ತೀಶ್ವರ ದೇವಾಲಯವು ರಾಷ್ಟ್ರಕೂಟರ ಕಾಲಕ್ಕೆ ಸೇರಿದ್ದಾಗಿದೆ. ಹೊರಬಾಗಿಲುವಾಡ ಪಂಚ ಶಾಖೆಗಳು ಮತು ಕಪೋತವನ್ನು ಕಾಣಬಹುದು. ತೆರೆದ ಅಂತರಾಳ ದ್ವಿಕೂಟ ದೇವಾಲಯ ನವರಂಗವಿದೆ. ಕಂಬಗಳಲ್ಲಿ ಚಿಕಣಿ ಶಿಲ್ಪಗಳಿವೆ. ಐಹೊಳೆಯಲ್ಲಿರುವ ಹಳ್ಳಿ ಬಸಪ್ಪ ದೇವಸ್ಥಾನ ಮತ್ತು ಗಳಗನಾಥ ದೇವಸ್ಥಾನ ರಾಷ್ಟ್ರಕೂಟರ ನಿರ್ಮಾಣವೆಂದೇ ಹೇಳಬಹುದು. ಇದು ಸುಮಾರು ಒಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ನಿರ್ಮಾಣವಾದ ದೇವಾಲಯ. ರಾಷ್ಟ್ರಕೂಟರ ಕಟ್ಟಡಗಳನ್ನು ಹೊಂದಿರುವ ಅತಿ ವಿಶೇಷವಾದ ಮತ್ತು ಉಲ್ಲೇಖಾರ್ಹವಾದ ಸ್ಥಳವೆಂದರೆ ಗುಲಬರ್ಗ ಜಿಲ್ಲೆಯ ಶಹಾಪುರ ತಾಲ್ಲೂಕಿನಲ್ಲಿರುವ ಸಿರಿವಾಳ ಎಂಬ ಕುಗ್ರಾಮ. ಈ ಸ್ಥಳದಲ್ಲಿ ಇವರ ಕಾಲಕ್ಕೆ ಸೇರಿದ ಸುಮಾರು ನಲವತ್ತಾರು ಸ್ಮಾರಕಗಳಿವೆ. ಇವುಗಳಲ್ಲಿ ೫ ಭಾವಿಗಳು, ೩೩ ದೇವಾಲಯಗಳು, ೭ ಕೋಷ್ಠಗಾರ ಅಥವಾ ಮಠಗಳು ಮತ್ತು ಒಂದು ಬಸದಿ ಇದೆ. ಇಲ್ಲಿಯ ಭಾವಿಗಳು ಬಹಳ

ವಿಶೇಷವಾಗಿದ್ದು ಹಲವಾರು ಶಿಲ್ಪಪಟ್ಟಿಕೆಗಳನ್ನು ಹೊಂದಿದೆ. ರಾಮಾಯಣ, ಭಾಗವತ ಮತ್ತು ಪಂಚತಂತ್ರದ ಕಥೆಗಳನ್ನು ಕೆತ್ತಲಾಗಿದೆ. ಈ ದೇವಾಲಯಗಳಲ್ಲಿ ಸಿದ್ದೇಶ್ವರ ದೇವಾಲಯವು ವಿಶೇಷವಾಗಿದ್ದು ಐದು ಗರ್ಭಗೃಹಗಳನ್ನು ಹೊಂದಿದೆ. ತಲವಿನ್ಯಾಸದಲ್ಲಿ ಮಧ್ಯದಲ್ಲಿ ಒಂದು ಗರ್ಭಗೃಹವೂ ಮತ್ತು ನಾಲ್ಕು ದಿಕ್ಕುಗಳಲ್ಲೂ ನಾಲ್ಕು ಗರ್ಭಗೃಹಗಳಿವೆ. ಸುತ್ತಲಿರುವ ನಾಲ್ಕು ಗರ್ಭಗೃಹಗಳಿಗೂ ಪ್ರತ್ಯೇಕವಾದ ನಾಲ್ಕು ಅಂತರಾಳ ಮತ್ತು ನವರಂಗಗಳಿವೆ. ಇಲ್ಲಿ ಉಲ್ಲೇಖಿಸಬಹುದಾದ ಇತರ ದೇವಾಲಯಗಳೆಂದರೆ ಕದಂಬೇಶ್ವರ ದೇವಾಲಯ, ಕುಂಬಾರ ದೇವಾಲಯ, ನಾಡಯ್ಯ ದೇವಾಲಯ, ಸುಜ್ಞಾನೇಶ್ವರ ದೇವಾಲಯ ಮುಂತಾದವುಗಳು.

ಆಂಧ್ರಪ್ರದೇಶದಲ್ಲಿಯೂ ಇವರ ದೇವಾಲಯಗಳು ಹಲವಾರಿವೆ. ಅಲಂಪುರದ ದೇವಾಲಯ ಸಮೂಹದಲ್ಲಿ ಪ್ರತೋಳಿ ದೇವಾಲಯವು ಇವರ ನಿರ್ಮಾಣ. ಈ ದೇವಾಲಯವು ಇವರ ದೇವಾಲಯಗಳಲ್ಲಿ ಅತ್ಯಂತ ಪ್ರಾಚೀನ ದೇವಾಲಯಗಳಲ್ಲಿ ಒಂದೆಂದು ಹೇಳಬಹುದು. ಇದು ಆಯಾತಾಕಾರ ನಕ್ಷೆಯನ್ನು ಹೊಂದಿದೆ. ಭವನಾಸಿ ಸಂಗಮದಲ್ಲಿ ಇವರ ಕಾಲದ ರೂಪಾಲ ಸಂಗಮೇಶ್ವರ, ಭುಜಂಗೇಶ್ವರ ಮತ್ತು ಸಂಗಮೇಶ್ವರ ದೇವಾಲಯ ಸಮುಚ್ಛಯಗಳಿವೆ. ರೂಪಾಲ ಸಂಗಮೇಶ್ವರ ದೇವಾಲಯದಲ್ಲಿ ಅತ್ಯಧಿಕವಾದ ಕೆತ್ತನೆಗಳನ್ನು ಕಾಣಬಹುದು. ಭುಜಂಗೇಶ್ವರ ದೇವಾಲಯ ಮತ್ತು ಸಂಗಮೇಶ್ವರ ದೇವಾಲಯಗಳು ವಿಶೇಷಣ ಮತ್ತು ಸಿಂಗಾರದಲ್ಲಿ ಪರಸ್ಪರ ಒಂದನ್ನೊಂದು ಹೋಲುತ್ತದೆ. ಕರ್ನೂಲಿನ ಹತ್ತಿರವಿರುವ ಬಂಡ್ರತಂಡ್ರಪಾಡಿನಲ್ಲಿರುವ ಶಿವ ದೇಗುಲವು ವಿಶೇಷವಾದ ನಕ್ಷೆಯನ್ನು ಹೊಂದಿದೆ. ಐದು ಮುಖ ಮಂಟಪಗಳು, ಅಂತರಾಳ ಮತ್ತು ಗರ್ಭಗೃಹವನ್ನು ಹೊಂದಿದೆ. ಇದಕ್ಕೆ ಹೊಂದಿಕೊಂಡಂತೆಯೇ ಇನ್ನೊಂದು ಚಿಕ್ಕ ದೇವಾಲಯವಿದೆ. ಈ ದೇವಾಲಯವು ಆರು ಅಂತಸ್ತುಗಳನ್ನು ಹೊಂದಿದೆ. ಇದರ ಶಿಖರವು ಚಚ್ಚೌಕವಾಗಿದೆ. ಆಂಧ್ರಪ್ರದೇಶದ ಇತರ ಪ್ರಮುಖ ದೇವಾಲಯಗಳೆಂದರೆ ಮಹಾನಂದಿಯಲ್ಲಿರುವ ಮಹಾನಂದೀಶ್ವರ ದೇವಾಲಯ, ಪಂಚಲಿಂಗಾಳದಲ್ಲಿರುವ ಪಂಚಲಿಂಗೇಶ್ವರ ದೇವಾಲಯ, ಪ್ರಾತಾಕೋಟದಲ್ಲಿರುವ ನಾಗೇಶ್ವರ ದೇವಾಲಯ. ಪಾಪನಾಶಿಯಲ್ಲಿ ಈ ಕಾಲಕ್ಕೆ ಸೇರಿದ ಮೂರು ದೇವಾಲಯಗಳ ಸಮುಚ್ಛಯವಿದೆ. ಕರ್ನೂಲ್ ಜಿಲ್ಲೆಯ

ದ್ರೋಣಾಚಲದಲ್ಲಿರುವ ಮೇಲ್ದುರ್ತಿಯಲ್ಲಿರುವ ರಾಜರಾಜೇಶ್ವರ ದೇವಸ್ಥಾನವನ್ನು ಇಲ್ಲಿ ಉಲ್ಲೇಖಿಸಬಹುದು.

## ಇಟ್ಟಿಗೆ ದೇವಾಲಯ

ರಾಷ್ಟ್ರಕೂಟರ ಇಟ್ಟಿಗೆ ದೇವಾಲಯದ ಕುರುಹು ನಮಗೆ ಬ್ಯಾಡಗಿ ತಾಲ್ಲೂಕಿನ ಕಾಗಿನೆಲೆಯಲ್ಲಿ ಕಾಳಹಸ್ತೀಶ್ವರ ದೇವಾಲಯದ ಬಳಿ ದೊರಕುತ್ತದೆ. ರಾಣಿಬೆನ್ನೂರು ತಾಲ್ಲೂಕು ಇಟಗಿಯಲ್ಲಿರುವ ಕಲ್ಲೇಶ್ವರ ಗುಡಿಯ ಮುಂಬದಿಯನ್ನು ಗಮನಿಸಿದರೆ ಅದರ ಇಟ್ಟಿಗೆ ತಳಪಾಯವನ್ನು ಗುರುತಿಸಬಹುದಾಗಿದೆ. ಹಾವೇರಿ ತಾಲೊಕಿನ ಚಿಕ್ಕಲಿಂಗದ ಹಳ್ಳಿಯ ನಾರಾಯಣ ದೇವರ ಗುಡಿಯೂ ಸಹ ಇಟ್ಟಿಗೆಯ ಗುಡಿಯಾಗಿದೆ. ಶಿಗ್ಗಾಂವಿ ತಾಲ್ಲೂಕಿನಲ್ಲಿರುವ ಹಳೇ ಬಾಡದಲ್ಲಿ ರಾಷ್ಟ್ರಕೂಟ ಬಾಗಿಲುವಾಡವಿರುವ ಒಂದು ಶಿಥಿಲ ದೇವಾಲಯವಿದೆ. ಇದರ ಸುತ್ತಲೂ ರಾಷ್ಟ್ರಕೂಟರ ಕಾಲದ ಇಟ್ಟಿಗೆ ದೊರಕಿರುವುದನ್ನು ನೋಡಿದರೆ ಪ್ರಾಯಶಃ ಇದು ಇಟ್ಟಿಗೆ ದೇವಾಲಯವಾಗಿರಬಹುದು. ಹಿರೇಕೆರೂರಿನ ಬೆಟ್ಟಕೆರೂರಿನಲ್ಲಿರುವ ರಾಮಲಿಂಗೇಶ್ವರ ದೇವಾಲಯದ ಗರ್ಭಗುಡಿ ರಾಷ್ಟ್ರಕೂಟರ ಶೈಲಿಯ ಇಟ್ಟಿಗೆ ನಿರ್ಮಾಣವಾಗಿದೆ. ಶಿಗ್ಗಾಂವಿಯ ನಾಗನೂರಿನಲ್ಲಿ ಪಾಳು ಬಿದ್ದ ರಾಷ್ಟ್ರಕೂಟರ ಗುಡಿಯಿದೆ. ಇದರ ಗರ್ಭಗೃಹವು ಇಟ್ಟಿಗೆಯದಾಗಿದೆ. ಧಾರವಾಡದಲ್ಲಿನ ಬೇಚಿರಾಕ್ ಊರಾದ ಸಿದ್ಧಾಪುರದಲ್ಲಿ ಹಾಳುಸಿದ್ಧೇಶ್ವರನ ಗುಡಿಯು ರಾಷ್ಟ್ರಕೂಟರ ಕಾಲದ ಇಟ್ಟಿಗೆ ದೇವಾಲಯವಾಗಿದೆ. ಹಾನಗಲ್ ತಾಲೂಕಿನ ಹಾವಣಿಗಿಯಲ್ಲಿ ಇರುವ ಕಲ್ಲೇಶ್ವರ ದೇವಾಲಯವು ಇಟ್ಟಿಗೆ ರಚನೆಯಾಗಿದೆ. ಇದೇ ತಾಲೂಕಿನ ಹಿರೇ ಹುಲ್ಲಾಳದಲ್ಲಿರುವ ಕಲ್ಲೇಶ್ವರ ಗುಡಿಯು ಸಹ ಇಟ್ಟಿಗೆ ರಚನೆಯಾಗಿದೆ. ಬ್ಯಾಡಗಿ ತಾಲೂಕಿನ ಮೋಟೆಬೆನ್ನೂರಿನಲ್ಲಿ ಇಟ್ಟಿಗೆಯ ರಚನೆಯ ಗಳೇಶ್ವರ ಗುಡಿಯಲ್ಲಿ ಗರ್ಭಗೃಹ, ಅಂತರಾಳ, ಹಾಗೂ ಚಿಕ್ಕದಾದ ನವರಂಗವಿದೆ.

## ರಾಷ್ಟ್ರಕೂಟ ದೇವಾಲಯಗಳನ್ನು ಗುರುತಿಸುವ ಬಗೆ

### ದೇವಾಲಯದ ರಚನೆ

ಈ ಹಿಂದೆಯೇ ರಾಷ್ಟ್ರಕೂಟರ ದೇವಾಲಯಗಳ ಶೈಲಿಯು ದ್ರಾವಿಡ ಶೈಲಿಯೆಂದು ಹೇಳಲಾಗಿದೆ. ಈ ದೇವಾಲಯಗಳನ್ನು ಊರ್ಧ್ವಮುಖ ಮತ್ತು ಸಮಾನಾಂತರ ಎಂಬ ಎರಡು ರೀತಿಯ ರಚನಾಕ್ರಮದಲ್ಲಿ ಗುರುತಿಸಬಹುದು.

ಊರ್ದ್ವಮುಖವು ದೇವಾಲಯವನ್ನು ಹೊರಗಿನಿಂದ ಗುರುತಿಸಲು ಸಹಾಯಮಾಡಿದರೆ, ಸಮಾನಾಂತರವು ದೇವಾಲಯವನ್ನು ಒಳಗಿನಿಂದ ಗುರುತಿಸಲು ಸಹಾಯಮಾಡುತ್ತದೆ. ಊರ್ದ್ವಮುಖದಲ್ಲಿ ಅಧಿಷ್ಠಾನ, ಬಿತ್ತಿ, ಪ್ರಸ್ತರ, ಗ್ರೀವ, ಶಿಖರ, ಸ್ತೂಪಿಗಳು ಮುಖ್ಯವಾದವುಗಳಾಗಿವೆ. ಸಮಾನಾಂತರದಲ್ಲಿ ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪಗಳೂ ಮುಖ್ಯವಾಗಿವೆ. ಇವಲ್ಲದೆ ಇನ್ನೂ ಅನೇಕ ಭಾಗಗಳೂ ವಾಸ್ತುವನ್ನು ಗುರುತಿಸಲು ಸಹಕಾರಿಯಾಗಿವೆ. ಅವುಗಳಲ್ಲಿ ಸಾಂಧಾರ, ನಿರಾಂಧಾರ, ಏಕಕೂಟ, ದ್ವಿಕೂಟ, ತ್ರಿಕೂಟ, ಅರ್ಧಮಂಟಪ, ಕಂಬ ಮುಂತಾದವುಗಳನ್ನು ಹೆಸರಿಸಬಹುದು.

## ಅಧಿಷ್ಠಾನ

ರಾಷ್ಟ್ರಕೂಟ ದೇವಾಲಯಗಳಲ್ಲಿ ಸಾಮಾನ್ಯವಾಗಿ ಅಧಿಷ್ಠಾನ ಭಾಗ ಹೆಚ್ಚು ಎತ್ತರವಾಗಿರುವುದಿಲ್ಲ. ಬಾದಾಮಿ ಚಲುಕ್ಯರ ಕಾಲದ ವಾಸ್ತು ವೈಶಿಷ್ಟ್ಯವೇ ಇಡಿಯಾಗಿ ಮುಂದುವರಿಯದೆ ಕೆಲವು ಬದಲಾವಣೆಗಳನ್ನು ಗುರುತಿಸಬಹುದು. ಬಾದಾಮಿ ಚಲುಕ್ಯರಿಗಿಂತ ಭಿನ್ನವಾಗಿ ಅಧಿಷ್ಠಾನ ಭಾಗದಲ್ಲಿ ಬಾದಾಮಿ ಚಲುಕ್ಯರ ಕಪೋತಬಂಧ ರೀತಿಯ ಜೊತೆಗೆ ಪ್ರತಿಬಂಧ ರೀತಿಯನ್ನು ಮತ್ತು "ತ್ರಿಪಟ್ಟಕುಮುದ ಪಟ್ಟಿಕಾ" ಲಕ್ಷಣಗಳನ್ನು ವೃತ್ತ ಕುಮುದ ಮತ್ತು ಕಪೋತದ ಜಾಗದಲ್ಲಿ ಕಾಣಬಹುದು. ಇದರ ಜೊತೆಗೆ ಬಾದಾಮಿ ಚಲುಕ್ಯರ ಕಾಲದಲ್ಲಿ ರಚಿತವಾಗುತ್ತಿದ್ದ ಅಧಿಷ್ಠಾನವೂ ಬಳಕೆಯಲ್ಲಿತ್ತು. ಅಧಿಷ್ಠಾನದಲ್ಲಿ ಕುಮುದ ಚೌಕಗಳಿರುವ ಪಟ್ಟಿಕಾ ಭಾಗಗಳು ಮುಂದುವರೆದಿವೆ. ಅಧಿಷ್ಠಾನದ ಚೌಕಭಾಗಗಳು ಉಬ್ಬುಶಿಲ್ಪಗಳಿಂದ ಅಲಂಕೃತವಾಗಿರುವುದು ಕೆಲವು ಕಡೆಗಳಲ್ಲಿ ಕಂಡುಬರುತ್ತದೆ. "ಗಳ" ಭಾಗವನ್ನು ರಾಷ್ಟ್ರಕೂಟರು ಹೊಸದಾಗಿ ಬಳಸಿಕೊಂಡಿದ್ದಾರೆ.

ಮೂರನೆಯ ಕೃಷ್ಣನ ಬಾಹೂರು ಶಾಸನದಲ್ಲಿ (RITC, No. 77, 965AD) ನಮಿನಕ್ಕನ್ ಶಂಕರನ್ ಎನ್ನುವವನು ದೇವಾಲಯದ ಅಧಿಷ್ಠಾನ ಭಾಗವನ್ನು ಕಟ್ಟಲು ನಾಲ್ಕು ಕಲ್ಲುಗಳನ್ನು ದಾನವಾಗಿ ನೀಡಿದನೆಂದು ತಿಳಿದು ಬರುತ್ತದೆ. ಇದೇ ಅರಸನ ಉತ್ತ್ರೈರ್ ಮೇರೂರಿನ ಶಾಸನದಲ್ಲಿ (RITC. No. 75, 964AD) ಮಹಾಸಭಾ

ಮಂಟಪದ ಪಕ್ಕದಲ್ಲಿ ಎತ್ತರವಾದ ಜಗುಲಿಯನ್ನು ನಿರ್ಮಿಸಿದರೆಂಬ ಉಲ್ಲೇಖವಿದೆ. ಇದು ದೇವಾಲಯದ ಭಾಗವಾಗಿ ಸಭೆ ನಡೆಸಲು ಅನುಕೂಲವಾಗುವಂತೆ ಇತ್ತು.

### ಭಿತ್ತಿ

ಭಿತ್ತಿಗಳು ದೇವಾಲಯಗಳನ್ನು ರಕ್ಷಿಸುವ ಭಾಗಗಳಲ್ಲಿ ಒಂದು ಅಧಿಷ್ಠಾನ ರಚನೆಯ ಆಧಾರದ ಮೇಲೆ ಭಿತ್ತಿಯ ನಿರ್ಮಾಣವಾಗಿರುತ್ತದೆ. ಅದರ ಭಾಗಗಳನ್ನು ಬೇರೆ ಬೇರೆ ಹೆಸರುಗಳಿಂದ ಗುರುತಿಸಿದ್ದಾರೆ. ಭದ್ರ, ಕರ್ಣ, ಪ್ರತಿಭದ್ರ, ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಎಲ್ಲೋರದ ಕೈಲಾಸದೇವಾಲಯದಲ್ಲಿ ಇಂತಹ ಭಾಗಗಳನ್ನುಳ್ಳ ಭಿತ್ತಿಯನ್ನು ನೋಡಬಹುದು. ಭಿತ್ತಿಯ ಮಧ್ಯೆ ಅರ್ಧಸ್ತಂಭಗಳು ಇರುತ್ತವೆ. ಎರಡು ಅರ್ಧಸ್ತಂಭಗಳ ನಡುವೆ ಕೋಷ್ಠಗಳಿರುತ್ತವೆ. ಕೋಷ್ಠಗಳಲ್ಲಿ ಶಿಲ್ಪಗಳನ್ನು, ಕೆಲವುಬಾರಿ ಅಕ್ಕಪಕ್ಕಗಳಲ್ಲಿ ಕೂಡ ಶಿಲ್ಪಗಳಿರುವುದನ್ನು ಕಾಣಬಹುದಾಗಿದೆ. ಕೋಷ್ಠಗಳ ಮೇಲೆ ಶಿಖರ ಅಥವಾ ಮಕರ ತೋರಣವಿರುತ್ತದೆ. ಎಲ್ಲೋರದ ಕೈಲಾಸ ದೇವಾಲಯದಲ್ಲಿ ಮಯೂರ ತೋರಣವಿರುತ್ತದೆ. ಕೋಷ್ಠಗಳು ಪಕ್ಕದಲ್ಲಿದ್ದರೆ ಲತಾಸುರುಳಿ, ಕೀರ್ತಿಸುರುಳಿ ಮುಂತಾದವುಗಳಿಂದ ಅಲಂಕೃತಗೊಂಡಿರುವುದನ್ನು ಕಾಣಬಹುದು.

### ಪ್ರಸ್ತರ

ಭಿತ್ತಿಯ ಮೇಲಿನ ಭಾಗವನ್ನು ಪ್ರಸ್ತರವೆಂದು ಕರೆಯಲಾಗುತ್ತದೆ. ಇದರಲ್ಲಿ ಉತ್ತರ, ವಾಜನ, ವಲಭಿ, ಅಥವಾ ಹಂಸಮಾಲ, ಕಪೋತ,(ಬಾಗಿದಂತಿರುವುದು) ವ್ಯಾಲಾವಲಿ ಮೊದಲಾದ ಅಂಗಗಳುಂಟು. ಕೈಲಾಸ ಮತ್ತು ಛೋಟಾ ಕೈಲಾಸದ ವಾಜನ ಭಾಗದಲ್ಲಿ ನೃತ್ಯಗಾರರ ಶಿಲ್ಪಗಳನ್ನು ಬಿಡಿಸಲಾಗಿದೆ. ಕಪೋತ ಕೂಡುಗಳಿಂದ ಅಲಂಕೃತವಾಗಿರುತ್ತದೆ. ಈ ಕೂಡುಗಳ ಮಧ್ಯೆ ಹಲವಾರು ಉಬ್ಬುಶಿಲ್ಪಗಳನ್ನು ಕಾಣಬಹುದು ಸಿರಿವಾಳದ ಬಾವಿಯಲ್ಲಿನ ಕೂಡುಗಳಲ್ಲಿರುವ ಗಣಪತಿ, ಮಹಿಷಮರ್ದಿನಿ, ವಾದ್ಯಗಾರರು ಮೊದಲಾದವುಗಳನ್ನು ಇಲ್ಲಿ ಉದಾಹರಿಸಬಹುದು.

ಗ್ರೀವ

ಗ್ರೀವವು ಅಧಿಷ್ಠಾನದ ಭಾಗದಂತೆಯೇ ಇರುತ್ತದೆ. ಇದಕ್ಕೆ ಕಂಠವೆಂಬ ಇನ್ನೊಂದು ಹೆಸರೂ ಇದೆ. ಶಿಖರದ ಆಕಾರದ ಮೇಲೆ ಗ್ರೀವದ ಆಕಾರವು ನಿರ್ಧಾರವಾಗುತ್ತದೆ.

ಶಿಖರ

ಶಿಖರಭಾಗವು ಎಲ್ಲ ದೇವಾಲಯಗಳಲ್ಲೂ ಒಂದೇ ರೀತಿ ಇರದೆ ಬೇರೆ ಬೇರೆ ಆಕಾರಗಳಲ್ಲಿರುತ್ತದೆ. ಎಲ್ಲೋರದ ಕೈಲಾಸದಲ್ಲಿ ಎಂಟು ಮುಖದ ಶಿಖರವಿದೆ. ಈ ಶಿಖರಗಳಲ್ಲಿ ಏಕತಲ, ದ್ವಿತಲ, ತ್ರಿತಲ ಇತ್ಯಾದಿ ವಿಧಗಳಿವೆ. ಶಿಖರದ ಪ್ರತಿಹಂತವು ಶಾಲಾ ಕೂಟ ಮತ್ತು ಪಂಜಗಳೆಂದು ಉಪಾಂಗಗಳಿಂದ ಅಲಂಕೃತವಾಗಿದ್ದು ಗರ್ಭಗೃಹದ ಮೂಲ ಮೂರ್ತಿಯ ವಾಹನದ ಶಿಲ್ಪವನ್ನು ಕೆಲವೊಂದು ಕಡೆ ಕೆತ್ತಲಾಗಿದೆ. ಈ ಹಂತಗಳ ಮೇಲ್ಭಾಗದಲ್ಲಿ ಆಮಲಕ ಶಿಲೆಯಿರುವುದನ್ನು ಕಾಣುತ್ತೇವೆ. ಇದು ನಾನಾ ಆಕಾರದಲ್ಲಿ ಕೆತ್ತಲ್ಪಟ್ಟಿವೆ. ಇದರ ಮೇಲೆ ಸ್ತೂಪಿಯನ್ನು ಇಡಲಾಗಿದೆ. ಎರಡನೆಯ ಕೃಷ್ಣನ ಗೌಜ ಅಗ್ರಹಾರದ ಶಾಸನದಲ್ಲಿ (EC. Vol VII, No. Sk. 45) ದೇವಾಲಯದ ಗೋಪುರವನ್ನು ಕಟ್ಟಿಸಿದ ಉಲ್ಲೇಖವಿದೆ. ಮೂರನೆಯ ಕೃಷ್ಣನ ಪುದುಪ್ಪಾಳೈಯಮ್ (RITC. No. 78, 965AD) ಶಾಸನದಲ್ಲಿ ವಸುಗೂರಿನಲ್ಲಿ ತಿರುವಚ್ಚಿಋಪಾಕ್ಕತ್ತು ದೇವಾಲಯದ ಗೋಪುರವನ್ನು ಶ್ರೀ ವೀರಶೋಱರ (ಒಂದನೇ ಪರಾಂತಕ) ಅಧಿಕಾರಿಯಾಗಿದ್ದ ಪರಮೈಯನ್ ಕಟ್ಟಿಸಿದನು.

ತಲವಿನ್ಯಾಸ

ರಾಷ್ಟ್ರಕೂಟರ ದೇವಾಲಯಗಳಲ್ಲಿ ಬೇರೆಬೇರೆ ರೀತಿಯ ತಲವಿನ್ಯಾಸಗಳನ್ನು ನೋಡಬಹುದು. ಏಕಕೂಟ, ದ್ವಿಕೂಟ, ಮತ್ತು ತ್ರಿಕೂಟ ದೇವಾಲಯಗಳನ್ನು ಕಾಣಬಹುದು. ರಾಷ್ಟ್ರಕೂಟರ ಕಾಲದಲ್ಲಿ ಏಕಕೂಟ ದೇವಾಲಯಗಳು ಹೆಚ್ಚಾಗಿ ಸಿಗುತ್ತವೆ.

ಎಲ್ಲೋರದ ಕೈಲಾಸ ದೇವಾಲಯ, ಸೂಡಿಯ ಗಣೇಶ ದೇವಾಲಯ, ಪಟ್ಟದಕಲ್ಲಿನ ಚಂದ್ರಶೇಖರಗುಡಿ, ಜೈನನಾರಾಯಣಗುಡಿ, ಐಹೊಳೆಯ ಅಳ್ಳೆಬಸಪ್ಪನ ಗುಡಿ, ಕೊಣ್ಣೂರಿನ ಪರಮೇಶ್ವರ ದೇವಾಲಯ, ಸವಡಿಯ ತ್ರೈಪುರುಷ

ದೇವಾಲಯಗಳನ್ನು ಏಕಕೂಟ ದೇವಾಲಯಗಳಿಗೆ ಉದಾಹರಣೆಯಾಗಿ ನೀಡಬಹುದು. ರೋಣದ ಸೋಮಲಿಂಗನಗುಡಿ, ಐಹೊಳೆಯ ಗಳಗನಾಥ ದೇವಾಲಯ ಸಂಕೀರ್ಣದಲ್ಲಿರುವ ಗುಡಿ, ಸವಡಿಯ ನಾರಾಯಣ ಮತ್ತು ಸೂಡಿಯ ಜೋಡು ಕಲಶ ದೇವಾಲಯಗಳು ದ್ವಿಕೂಟ ದೇವಾಲಯಗಳಾಗಿವೆ. ಇವುಗಳಲ್ಲಿ ಎರಡು ಗರ್ಭಗೃಹ, ಸುಖನಾಸಿಗಳಿವೆ. ಸುಖನಾಸಿಗಳ ಮಧ್ಯೆ ನವರಂಗವಿದೆ. ರಾಷ್ಟ್ರಕೂಟರ ಕಾಲದಲ್ಲಿ ಹಲವಾರು ತ್ರಿಕೂಟ ದೇವಾಲಯಗಳು ಸಿಗುತ್ತವೆ. ಸೂಡಿಯ ಮಲ್ಲಿಕಾರ್ಜುನ , ಲಕ್ಕುಂಡಿಯ ಬೋಳಬಸವಣ್ಣ, ಕಳಸಾಪುರದ ಈಶ್ವರದೇವಾಲಯಗಳನ್ನು ಉದಾಹರಣೆಯನ್ನಾಗಿ ನೀಡಬಹುದು. ಇದರಲ್ಲಿ ಮೂರು ಗರ್ಭಗೃಹಗಳು, ಮೂರು ಅಂತರಾಳಗಳು, ನವರಂಗ ಮತ್ತು ಮುಖಮಂಟಪಗಳಿರುತ್ತವೆ. ಮಂಟಪದ ಆಕಾರದಲ್ಲಿರುವ ಇಂತಹ ದೇವಾಲಯಗಳು ಬಾದಾಮಿ ಚಲುಕ್ಯರ ಕಾಲದಲ್ಲಿ ಒಂದೆರಡು ಸಿಗುತ್ತವೆ. ಈ ರೀತಿ ದೇವಾಲಯಗಳು ರಾಷ್ಟ್ರಕೂಟರ ಕಾಲದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಐಹೊಳೆಯ ಕೊಂತಿಗುಡಿ ದೇವಾಲಯ ಸಂಕೀರ್ಣದಲ್ಲಿ ಒಂದು ಗಜಪೃಷ್ಠಾಕೃತಿಯ ದೇವಾಲಯವಲ್ಲದೆ, ರಾಷ್ಟ್ರಕೂಟರು ಐಹೊಳೆಯಲ್ಲಿ ಮಂಟಪದ ಆಕಾರದ ದೇವಾಲಯವನ್ನು ನಿರ್ಮಿಸಿದ್ದಾರೆ. ಈ ರೀತಿಯ ದೇವಾಲಯಗಳ ತಲವಿನ್ಯಾಸ ಒಂದೇ ಆಗಿರುತ್ತದೆ. ಹಿಂಭಾಗದಲ್ಲಿ ಚಿಕ್ಕ ಗರ್ಭಗುಡಿಯೊಂದು ಸೇರಿರುತ್ತದೆ. ನಕ್ಷತ್ರಾಕಾರದ ತಲವಿನ್ಯಾಸವಿರುವ ಅತ್ಯಂತ ಪ್ರಾಚೀನ ದೇವಾಲಯ ಕೋಣ್ಣೂರಿನಲ್ಲಿದೆ. ಮೂಲತಃ ಬಸದಿಯಾಗಿದ್ದ ಇದು ಇಂದು ಪರಮೇಶ್ವರ ಗುಡಿಯಾಗಿದೆ. ಒಂದನೇ ಅಮೋಘವರ್ಷನ ಸೇನಾನಿಯಾಗಿದ್ದ ಬಂಕೇಯನು ಕಟ್ಟಿಸಿದ ಪಾರ್ಶ್ವನಾಥ ಬಸದಿ, ಇದರಲ್ಲಿ ಗರ್ಭಗೃಹ ತೆರೆದ ಅಂತರಾಳ ಮತ್ತು ನವರಂಗವಿದೆ. ಕೋಷ್ಠದಲ್ಲಿ ಜೈನ ವಿಗ್ರಹವಿದೆ.

### ಗರ್ಭಗೃಹ

ಗರ್ಭಗೃಹವು ದೇವಾಲಯದಲ್ಲಿ ಪ್ರಮುಖವಾದ ಭಾಗವಾಗಿದ್ದು ದೇವರನ್ನು ಪ್ರತಿಷ್ಠಾಪಿಸುವ ಸ್ಥಳವಾಗಿದೆ. ಗರ್ಭಗೃಹಕ್ಕೆ ಒಂದು ಬಾಗಿಲಿರುತ್ತದೆ. ಕೆಲವೊಮ್ಮೆ ಗರ್ಭಗೃಹದ ಸುತ್ತ ಪ್ರದಕ್ಷಿಣಾ ಪಥವಿರುತ್ತದೆ. ಇದಕ್ಕೆ ಸಾಂಧಾರ ದೇವಾಲಯವೆಂದು ಹೆಸರು. ಪಟ್ಟದಕಲ್ಲಿನ ಜೈನ ನಾರಾಯಣ ಗುಡಿಯು ಸಾಂಧಾರ ದೇವಾಲಯವಾಗಿದೆ. ಪ್ರದಕ್ಷಿಣಾಪಥವಿಲ್ಲದಿದ್ದರೆ ನಿರಾಂಧಾರ ದೇವಾಲಯವೆಂದು ಕರೆಯಲಾಗುತ್ತದೆ.

ಮೊದಲೇ ತಿಳಿಸಿರುವಂತೆ ಒಂದರಿಂದ ಐದು ಗರ್ಭಗೃಹಗಳಿರುವ ದೇವಾಲಯವಿರುತ್ತದೆ. ಚೌಕಾಕಾರದ ಗರ್ಭಗೃಹ ಅಥವಾ ಆಯತಾಕಾರದ ಗರ್ಭಗೃಹಗಳಿರುತ್ತವೆ. ಪಟ್ಟದಕಲ್ಲಿನ ಜೈನನಾರಾಯಣ ಗುಡಿಯು ಸಾಂಧರ ದೇವಾಲಯವಾಗಿದೆ.

## ಅಂತರಾಳ

ಗರ್ಭಗೃಹದ ಮುಂದಿನ ಭಾಗವೇ ಅಂತರಾಳ ಅಥವಾ ಶುಕನಾಸಿ. ಇದರಲ್ಲಿ ತೆರೆದ ಅಂತರಾಳ ಮುಚ್ಚಿದ ಅಂತರಾಳವೆಂಬ ಎರಡು ವಿಧಗಳಿರುತ್ತವೆ. ಗರ್ಭಗೃಹದ ಮುಂದಿನ ಭಾಗದಲ್ಲಿರುವ ಅಂತರಾಳ ಆಯತಾಕಾರದಲ್ಲಿರುವ ಇವು ನವರಂಗಕ್ಕೂ ಗರ್ಭಗೃಹಕ್ಕೂ ಮಧ್ಯೆ ಇರುತ್ತದೆ. ಸಾಮಾನ್ಯವಾಗಿ ಪ್ರದಕ್ಷಿಣಾ ಪಥವಿದ್ದಾಗ ಅಂತರಾಳವಿರುವುದಿಲ್ಲ. ಅಂತರಾಳಕ್ಕೆ ದ್ವಾರವಿಲ್ಲದಿದ್ದರೆ ತೆರೆದ ಅಂತರಾಳವೆಂದೂ ದ್ವಾರವಿದ್ದರೆ ಮುಚ್ಚಿದ ಅಂತರಾಳವೆಂದೂ ಕರೆಯುತ್ತಾರೆ. ಹಾವಗಲ್ಲು ತಾಲ್ಲೂಕು ಅಡೂರು ರಾಮಲಿಂಗೇಶ್ವರ ಗುಡಿ ತೆರೆದ ಅಂತರಾಳವಾಗಿದೆ.

## ನವರಂಗ

ನವರಂಗ ವಿಶಾಲವಾದ ಮಂಟಪವಾಗಿದೆ. ಸಾಮಾನ್ಯವಾಗಿ ಇದರ ಮಧ್ಯದಲ್ಲಿ ವೇದಿಕೆಯಂತಹ ಭಾಗವನ್ನು ನಿರ್ಮಿಸಿರುತ್ತಾರೆ. ಅದರಿಂದಾಗಿ ನವರಂಗವೆಂದು ಕರೆದಿದ್ದಾರೆ. ನವರಂಗದಲ್ಲಿ ಸಂಗೀತ, ನೃತ್ಯ, ವಾದ್ಯ, ಮುಂತಾದ ಕಲೆಗಳನ್ನು ಭಗವಂತನ ಮುಂದೆ ಸೇವೆಯಂತೆ ಪ್ರದರ್ಶಿಸಲಾಗುತ್ತಿತ್ತು. ಒಂಬತ್ತು ಅಂಕಣಗಳಿಂದ ರಚಿತವಾಗಿರುವ ಮಂಟಪವಾದ್ದರಿಂದ ನವರಂಗ ಎನ್ನುವ ಹೆಸರು ಬಂದಿದೆ. ವೇದಿಕೆಯ ಭಾಗವು ಇದ್ದರೆ ಅದು ಗುಂಡಾಗಿ ಇರುತ್ತದೆ. ನವರಂಗದ ಮಧ್ಯದಲ್ಲಿ ನಾಲ್ಕು ಪ್ರಧಾನ ಸ್ತಂಭಗಳಿರುತ್ತವೆ. ನಂತರದ ಕಾಲದ ಕೆಲವು ದೇವಾಲಯಗಳಲ್ಲಿ ನವರಂಗದ ಮೇಲುಭಾಗದಲ್ಲಿ ಭುವನೇಶ್ವರಿಯಿರುತ್ತದೆ. ಭುವನೇಶ್ವರಿಯು ಕಲಾತ್ಮಕವಾಗಿರುತ್ತದೆ. ಇಲ್ಲಿನ ಕಂಬಗಳು ವಿವಿಧ ಕೆತ್ತನೆಗಳಿಂದ ಅಲಂಕೃತವಾಗಿರುತ್ತದೆ. ಅದರಲ್ಲೂ ನವರಂಗದ ವೇದಿಕೆಯ ನಾಲ್ಕು ಮೂಲೆಗಳಲ್ಲಿರುವ ಕಂಬಗಳ ಮೇಲೆ ಕೆತ್ತನೆಗಳು ವಿಶೇಷವಾಗಿ ಕಂಡುಬರುತ್ತವೆ. ದೇವಾಲಯದಲ್ಲಿ ನಡೆಯುವ ಅಂಗಭೋಗ

ರಂಗಭೋಗದ ಸೇವೆಗಳನ್ನು ವೀಕ್ಷಿಸಲು ಬರುವ ಭಕ್ತರಿಗೆ ಕುಳಿತು ಕೊಳ್ಳಲು ವಿಶಾಲವಾದ ಸ್ಥಳವು ನವರಂಗದ ಸುತ್ತಲೂ ಇರುತ್ತದೆ.

## ಮುಖಮಂಟಪ

ಮಂದಿರದ ಮುಂದಿನ ಭಾಗವೇ ಮುಖಮಂಟಪ. ಈ ಮುಖಮಂಟಪವು ಎಲ್ಲ ದೇವಾಲಯಗಳಲ್ಲಿ ಇರಬೇಕೆಂಬ ನಿಯಮವಿಲ್ಲ. ಕೆಲವು ದೇವಾಲಯಗಳಲ್ಲಿ ಇದನ್ನು ಕಾಣುತ್ತೇವೆ. ಇದು ಕಂಬಗಳುಳ್ಳ ಕೈಸಾಲೆಯನ್ನು ಹೋಲುತ್ತದೆ. ಇದಕ್ಕೆ ಪ್ರವೇಶಿಸಲು ಮೆಟ್ಟಿಲುಗಳನ್ನು ನಿರ್ಮಿಸಲಾಗುವುದು. ಈ ಮುಖಮಂಟಪವೇ ಅಲ್ಲದೆ ಇತರ ಮಂಟಪಗಳನ್ನು ದೇವಾಲಯದ ಪ್ರಾಂಗಣದಲ್ಲಿ ಕಾಣುತ್ತೇವೆ. ಕೆಲವೆಡೆ ಯಾಗಮಂಟಪ ಅಥವಾ ಯಾಗಶಾಲೆಯೂ ಇರುತ್ತದೆ. ಎಲ್ಲೋರದ ಕೈಲಾಸ ದೇವಾಲಯದಲ್ಲಿ ಯಾಗಶಾಲೆಯಿದೆ.

ಮೂರನೆಯ ಕೃಷ್ಣನ ತಿರುಕ್ಕುಟಿಕುನ್ರಮ್ ಶಾಸನದಲ್ಲಿ(RITC, NO. 24. 958 A.D.) ಕಳತ್ತೂರು ಕೋಟ್ಟಂ ಪ್ರದೇಶದಲ್ಲಿರುವ ತಿರುಕ್ಕುಟಿಕುನ್ರಮ್ ಊರಲ್ಲಿರುವ ಮೂಲಸ್ಥಾನದ ಪೆರುಮಾನಡಿ ದೇವಾಲಯದಲ್ಲಿ ಮಂಟಪ ಕಟ್ಟಿಸಿದಾಗ ಬೇಕಾಗುವ ಸವಲತ್ತುಗಳಿಗಾಗಿ ನಕ್ಕಡಿಭಟ್ಟನ್ ಎಂಬುವವನು ದತ್ತಿ ಬಿಟ್ಟನು. ಖೊಟ್ಟಿಗನ ಕಾಲದ ಸವಡಿಯ ಶಾಸನದಲ್ಲಿ (SII, Vol-XI, NO.42, 970A.D) ಗಂಗರ ವತ್ಸಯ್ಯನು ಸ್ವಯಂಭುಲಿಂಗ ಪ್ರತಿಷ್ಠೆಮಾಡಿಸಿ ದೇವಾಲಯ ಮತ್ತು ಮಂಟಪವನ್ನು ಕಟ್ಟಿಸಿದನು. ಯೇಚಿನಾಯಕನು ಭಗವತಿ ಪ್ರತಿಷ್ಠೆಯನ್ನು ಮಾಡಿಸಿ ಮತ್ತು ಮಠವನ್ನು ಮಾಡಿಸಿದನು. ಮೂರನೆಯ ಇಂದ್ರನ ಕಾಮಲಾಪುರ ಶಾಸನದಲ್ಲಿ (ಹಂ.ಕ.ವಿ.ವಿ. ಶಾ.ಸಂ. ಆ.ಪ್ರ. ೩೭೦ ಕ್ರಿ.ಶ. ೯೨೫) ಪಲ್ಲವಧೀರನು ಮುಲ್ಕಿ-೩೦೦ ರನ್ನು ಆಳುತ್ತಿದ್ದಾಗ, ಮುಳ್ಳುಂಟೇಶ್ವರ ದೇವಾಲಯಕ್ಕೆ ದ್ವಾರಬಂಧ, ಕೋಷ್ಠ, ಮಂಟಪ ಮತ್ತು ಪರಿವಾರ ದೇವಾಲಯಗಳನ್ನು ಕಟ್ಟಿಸಿಕೊಟ್ಟಿದ್ದಾನೆ. ಈತನಿಗೆ ವಿಕ್ರಾಂತರಾಮ, ವಿಕ್ರಾಂತಭೀಮ ಮುಂತಾದ ಬಿರುದುಗಳಿದ್ದವು.

## ದ್ವಾರಬಂಧ

ರಾಷ್ಟ್ರಕೂಟರ ದೇವಾಲಯಗಳ ಗರ್ಭಗೃಹದ ದ್ವಾರಬಂಧಗಳು ಸರಳವಾಗಿರುತ್ತವೆ. ದ್ವಾರದ ಮೇಲೆ ಎರಡೂ ಕಡೆಗಳಲ್ಲಿ ಮಕರಗಳಿರುತ್ತವೆ. ದ್ವಾರದ

ಕೆಳಭಾಗದಲ್ಲಿ ಪೂರ್ಣಕುಂಭಗಳು, ಅಥವಾ ಗರುಡನ ಮೂರ್ತಿಗಳಿರುವುದೂ ಉಂಟು. ದ್ವಾರಬಂಧದಲ್ಲಿ ಗಜಲಕ್ಷ್ಮಿಯನ್ನು, ಕೆಲವೆಡೆ ಬೇರೆಯ ಶಿಲ್ಪಗಳನ್ನು ಕೆತ್ತಲಾಗುತ್ತಿತ್ತು. ಇವರ ಮಾಂಡಲೀಕರಾದ ನೊಳಂಬರ ಕಾಲದ ದೇವಾಲಯಗಳ ದ್ವಾರಬಂಧಗಳು ಸರಳವಾಗಿಲ್ಲ, ವಿಶೇಷವಾಗಿ ಅಲಂಕೃತಗೊಂಡಿವೆ. ಬಾಗಿಲುವಾಡಗಳು ಅನೇಕ ಶಾಖೆಗಳಿಂದ ಕೂಡಿರುತ್ತವೆ. ಮೂರು, ನಾಲ್ಕು, ಐದು, ಆರು ಶಾಖೆಗಳಿರುವ ಉದಾಹರಣೆಗಳು ಹಲವಾರಿವೆ. ಮೂರನೆಯ ಇಂದ್ರನ ಕಾಮಲಾಪುರದ ಶಾಸನದಲ್ಲಿ (ಹಂ.ಕ.ವಿ.ವಿ. ಶಾ.ಸಂ. ಆಂ.ಪ್ರ. ಸಂಖ್ಯೆ ೩೭೦) ಮುಲ್ಕಿ–೫೦೦ ಆಳುತ್ತಿದ್ದ ಪಲ್ಲವಧೀರನು ಮುಳ್ಳುಂಟೇಶ್ವರ ದೇವಾಲಯಕ್ಕೆ ಚತುಶ್ಪಥ ದ್ವಾರಬಂಧವನ್ನು ಮಾಡಿಸಿಕೊಟ್ಟನೆಂದು ಉಲ್ಲೇಖಿಸಿದೆ. ಒಂದನೆಯ ಅಮೋಘವರ್ಷನ ಸೊರಟೂರು ಶಾಸನವು (EI. Vol. XXX, NO.15, 869 AD) ಕುಪ್ಪೆಯರಸನು ಪುರಿಗೆಱೆನಾಡನ್ನು ಆಳುತ್ತಿರುವಾಗ ವಿಳಿಕ್ಕರದ ನಾಗಿಯಮ್ಮ ಮತ್ತು ಚಂದ್ರಾದಿತ್ಯರು ಶ್ರೀವಾಗಿಲು ನಿಲ್ಲಿಸಿದುದನ್ನು ಉಲ್ಲೇಖಿಸಿದೆ. ಧ್ರುವನ ಆಲಂಪುರ ಶಾಸನದಲ್ಲಿ (ಹಂ.ಕ.ವಿ.ವಿ. ಶಾ.ಸಂ.V ಸಂ. ೯೯ ಕ್ರಿ.ಶ. ಸುಮಾರು ೭೮೦) ದುಣಭಟರಕಿಯ ಪರಿಯಾಳಾ ಮೂನುಱುಬುವತ್ತು ಪತ್ತರ್ಪನಾಸಿನ ಮೇಲೆ ಶ್ರೀವಾಗಿಲು ನಿರ್ಮಾಣ ಮಾಡಿದರೆಂದು ದಾಖಲಿಸಿದೆ.

## ಕಂಬಗಳು

ದೇವಾಲಯಕ್ಕೆ ಕಂಬಗಳೇ ಆಧಾರವಾಗಿರುತ್ತವೆ. ದೇವಾಲಯದ ಮುಖಮಂಟಪ, ನವರಂಗ, ಅರ್ಧಮಂಟಪ, ಎಲ್ಲ ಭಾಗಗಳಲ್ಲೂ ಕಂಬಗಳಿರುತ್ತವೆ. ಕಂಬಗಳಿಗೆ ನಾಲ್ಕು ಭಾಗಗಳುಂಟು. ಅವುಗಳನ್ನು ಪಾದ, ದಂಡ, ದಂಡಾಗ್ರ ಮತ್ತು ಶಿರ ಎಂದು ಗುರುತಿಸಬಹುದು. ಕಂಬಗಳು ಚೌಕಾಕಾರ, ಕೊಳವೆಯಾಕಾರ, ಮಿಶ್ರಶೈಲಿಯಲ್ಲಿ ಇರುತ್ತವೆ. ಪಾದದಿಂದ ಕೆಳಗೆ ಪೀಠಭಾಗವೊಂದಿರುತ್ತದೆ. ಪೀಠಭಾಗವಿಲ್ಲದೆ ಪಾದ ಭಾಗದಿಂದಲೇ ಆರಂಭವಾಗುವ ಕಂಬಗಳೂ ಹಲವಾರಿವೆ. ಪಾದದಿಂದ ಮೇಲಿರುವ ಭಾಗವು ದಂಡಭಾಗವಾಗಿರುತ್ತದೆ. ಈ ಭಾಗದಲ್ಲಿ ಘಟಪಲ್ಲವ ಪಾಲಿಕಾಸ್ಥಂಭ ಮುಂತಾದ ಹೆಸರುಗಳಿಂದ ಗುರುತಿಸುವ ಕೆತ್ತನೆಗಳಿವೆ. ಕಂಬಗಳ ಆಕಾರ, ಮುಖಗಳ ನೆರವಿನಿಂದ, ಅನೇಕ ಹೆಸರುಗಳಿಂದ ಗುರುತಿಸುತ್ತಾರೆ. ದೇವಾಲಯದ ಗಾತ್ರ ಮತ್ತು ಬಳಸಿರುವ ಮಾಧ್ಯಮದ ಆಧಾರದ ಮೇಲೆ ಕಂಬದ ಗಾತ್ರವೂ ನಿರ್ಣಯವಾಗುತ್ತದೆ. ರಾಷ್ಟ್ರಕೂಟರ ಕಾಲದಲ್ಲಿ ಸಾಮಾನ್ಯವಾಗಿ ಘಟಪಲ್ಲವ

ಕೆತ್ತನೆಗಳನ್ನು ಕಾಣಬಹುದು ದಂಡ ಭಾಗದ ಕೊನೆಯಲ್ಲಿ ಕಲಶ ಅಥವಾ ಕುಂಭಗಳಿದ್ದು ಅದರಿಂದ ಹೂಬಳ್ಳಿಯು ಹೊರಟಿರುತ್ತದೆ. ಪಾಲಿಕಾಸ್ಥಂಭಗಳು ಹರಿತವಾದ ಕೊನೆಗಳಿಂದ ಕೂಡಿದ ಪಾಲಿಕೆಗಳಾಗಿರುತ್ತವೆ. ಕೆಲವು ಬಾರಿ ತ್ರಿಕೋನಾಕಾರಗಳಿಂದ ಅಲಂಕೃತವಾಗಿ ಕೆತ್ತಿರುವುದನ್ನು ಕಾಣಬಹುದು. ಪಾಲಿಕಾಸ್ಥಂಭಗಳನ್ನು ಕಂಬದ ಮೇಲುಭಾಗದಲ್ಲಿರುವ ಬೋದಿಗೆಯ ಸಹಾಯದಿಂದ ದೇವಾಲಯದ ಮೇಲುಭಾಗವನ್ನು ತಡೆಯುವ ಕಲ್ಲಿನ ದೂಲಗಳೊಂದಿಗೆ ಸಂಪರ್ಕ ಕಲ್ಪಿಸಲಾಗುತ್ತದೆ. ಬೋದಿಗೆಗಳೂ ಕೂಡ ವೈವಿಧ್ಯಮಯವಾಗಿವೆ. ರಾಷ್ಟ್ರಕೂಟರು ತರಂಗ ಬೋದಿಗೆಯನ್ನು ಹೆಚ್ಚಾಗಿ ಬಳಸಿರುವುದು ಕಂಡುಬರುತ್ತದೆ. ಕದರಮಂಡಲಗಿ (ಬ್ಯಾಡಗಿ ತಾ||) ಯಲ್ಲಿ ಜೀರ್ಣೋದ್ಧಾರವಾಗಿರುವ ಗವಿಸಿದ್ಧೇಶ್ವರ ದೇವಾಲಯದಲ್ಲಿ ರಾಷ್ಟ್ರಕೂಟರ ಕಾಲದ ಕಂಬ ಹಾಗೂ ಬೋದಿಗೆಗಳನ್ನು ಗಮನಿಸಬಹುದಾಗಿದೆ. ಬಹುಶಃ ರಾಷ್ಟ್ರಕೂಟರ ದೇವಾಲಯವು ನಾಶವಾಗಿರಬಹುದು.

ಹಿರೇಕೆರೂರಿನ ಶಾಸನದಲ್ಲಿ (ARIE, 1958-59, No. B.557, 959 AD) ಕಹರಿ ಮಾರಸಿಂಗಯ್ಯನು ಗೋಸಾಸವನ್ನು ಮಾಡಿದಾಗ, ಕಂಬವೊಂದನ್ನು ಸ್ಥಾಪಿಸಿದನು. ಕಂಬದ ಮುಖಭಾಗದ ಮೇಲೆ ನೇಗಿಲಿನ ಚಿತ್ರ ಕೊರೆದಿದೆ. ಶಿರಗಂಬಿಯಲ್ಲಿ ಮಾರನು ಆಳುತ್ತಿದ್ದಾಗ ಮೇಟಿಯನ್ನು (ARIE, 1960- 61, NO.479, c. 9th century) ಸ್ಥಾಪಿಸಿದನು. ಗೆಂಡೆವಣ ಮತ್ತು ಇತರ ತೊಂಭತ್ತೈದು ಮಂದಿ ಪ್ರಜೆಗಳು ನಾಗಸ್ಥಂಭವನ್ನು ಮಾಡಿದರು. ಸುಮಾರು ೯ನೇ ಶತಮಾನದ ಪಟ್ಟಿಕೊಂಡ ಶಾಸನದಲ್ಲಿ (ಹಂ.ಕ.ವಿ.ವಿ. ಶಾ.ಸಂ V; ARIE. 1963-64, NO.B-36-40) ನಾಲ್ಕುಕಂಬಗಳನ್ನು ನಾಲ್ಕುಜನ ದಾನವಾಗಿ ನೀಡಿದರೆಂದು ತಿಳಿದುಬರುತ್ತದೆ. ಕೊಂಡಕುಂದದ ಕೊಯ್ಸಗಾವುಂಡನ ಮಗ ಕೊಂಡಲಯ್ಯನು ಒಂದು ಕಂಬವನ್ನು, ದಂತಿಗರ ಪೊಲ್ಲಮ್ಮ ಗಾವುಂಡನ ಮಗ ಅತ್ತಿಗಾವುಂಡನು ಒಂದು ಕಂಬವನ್ನು ನೀಡಿದರು. ನಾಲ್ಕನೆಯ ಕಂಬವು ಹಾಳಾಗಿದ್ದು ಭಿಲ್ಲರ ಕೇಸಿ ಗಾವುಂಡನ ಮಗನನ್ನು ಉಲ್ಲೇಖಿಸುತ್ತದೆ. ಬಹುಶಃ ಆತನೇ ಕಂಬವನ್ನು ನೀಡಿದ್ದಾನೆಂದು ತಿಳಿಯಬಹುದಾಗಿದೆ. ಬ್ಯಾಡಗಿ ತಾಲ್ಲೂಕಿನ ಚಿಕ್ಕ ಬಾಸೂರು, ಹಿರೇಕೆರೂರು ತಾಲ್ಲೂಕಿನ ಚಿಕ್ಕೆರೂರು, ಹಾವೇರಿ ತಾಲ್ಲೂಕಿನ ಗಳಗನಾಥ, ಸವಣೂರು ತಾಲ್ಲೂಕಿನ ಚಿಲ್ಲೂರು ಮುಂತಾದ ಕಡೆ ನಾವು ರಾಷ್ಟ್ರಕೂಟರ ಕಂಬಗಳನ್ನು ನೋಡಬಹುದು.

## ನಂದಿಯು ಕಂಬ

ಇಂದ್ರವಲ್ಲಭನ ಬೋಗನೂರು (SII Vol XV. NO. 585, c. 12th century) ಶಾಸನದಲ್ಲಿ "ಬಂಕಾಪುರ ನಗರೇಶ್ವರದೇವರ ಸ್ಥಾನಾಚಾರ್ಯರು, ರಾಜಗುರು ಚಂದ್ರಭೂಷಣ ಸ್ಥಳ ನವಿಲುಗುಂದದ ಗಡಿಯರ ಮಠದ ಶ್ರೀರಾಮನಾಥ ದೇವರಾದ ತೈಲನ ಸಳವಾಡಿಗೆ ನೆಟ್ಟ ನಂದಿ" ಯ ಕಂಬವನ್ನು ಉಲ್ಲೇಖಿಸಲಾಗುತ್ತದೆ.

## ಪ್ರಾಕಾರ

ಎರಡನೆಯ ಕೃಷ್ಣನ ಗೌಜ ಅಗ್ರಹಾರದ ಶಾಸನದಲ್ಲಿ (EC, Vol VII, NO.SK.45) ಗೌತುಮೇಶ್ವರ ದೇವಾಲಯಕ್ಕೆ ಪ್ರಾಕಾರವನ್ನು ಕಟ್ಟಿಸಿಕೊಟ್ಟಿದ್ದನ್ನು ಉಲ್ಲೇಖಿಸಿದೆ.

## ಅಲಂಕಾರ

ಅಲಂಕಾರದ ವಿಷಯವಾಗಿ ಹೇಳುವುದಾದರೆ ರಾಷ್ಟ್ರಕೂಟರ ಕಾಲದ ದೇವಾಲಯಗಳಲ್ಲಿ ಅಲಂಕೃತ ಮಕರತೋರಣಗಳನ್ನು ಕಾಣಬಹುದು. ಇದನ್ನು ಗರ್ಭಗೃಹದ ದ್ವಾರಾಲಂಕಾರಕ್ಕಾಗಿ, ಮತ್ತು ಕೋಷ್ಠಗಳ ಅಲಂಕಾರಕ್ಕೆ ಹೆಚ್ಚಾಗಿ ಬಳಸಿರುವುದನ್ನು ಕಾಣಬಹುದಾಗಿದೆ. ಮಕರ ತೋರಣಗಳನ್ನು ದೇವಾಲಯದ ಮುಂಭಾಗದಲ್ಲಿ ನಿಲ್ಲಿಸುವ ಸಂಪ್ರದಾಯ ರಾಷ್ಟ್ರಕೂಟರ ಕಾಲದಿಂದಲೇ ಪ್ರಾರಂಭವಾಯಿತೆನ್ನಬಹುದು. ಉದಾಹರಣೆಗೆ ಐಹೊಳೆಯ ಮಲ್ಲಿಕಾರ್ಜುನ ಗುಡಿಯ ಮುಂದೆ, ಗಳಗನಾಥ ದೇವಾಲಯಗಳ ಗುಂಪಿನಲ್ಲಿ ಒಂದು ದೇವಾಲಯವಿರುವುದನ್ನು ನೆನೆಯಬಹುದು. ಅರ್ಧಮಂಟಪದ ಮುಂದೆ ಕೂಡ ಈ ರೀತಿ ಮಕರತೋರಣವನ್ನು ನಿಲ್ಲಿಸಿರುವುದನ್ನು ಸೊಗಲದ ಸೋಮೇಶ್ವರ ದೇವಾಲಯದಲ್ಲಿಯೂ ಕಾಣಬಹುದು. ಇದರ ಮೇಲೆ ವಿವಿಧ ಮೂರ್ತಿಗಳನ್ನು ಕೆತ್ತಿರುವುದು ಕಂಡುಬರುತ್ತದೆ.

ರಾಷ್ಟ್ರಕೂಟರ ಆರಂಭದ ದೇವಾಲಯಗಳಲ್ಲಿ ಮಂಜೂರಿನ ಕೆಳಗೆ ಪ್ರಸ್ತರ ಭಾಗದಲ್ಲಿ ಗೋಡೆಯಲ್ಲಿ ಹಂಸಮಾಲವನ್ನು ಕೊರೆಯುತ್ತಿದ್ದರು. ಹತ್ತನೆಯ ಶತಮಾನದ ಹೊತ್ತಿಗೆ ಇದನ್ನು ನಿಲ್ಲಿಸಿದರೆಂದು ತೋರುತ್ತದೆ. ಜಾಲಂದ್ರಗಳು ಸರಳವಾಗಿದ್ದು ಅಲಂಕಾರಗಳು ಕಡಿಮೆಯಿರುತ್ತವೆ. ಕೆಲವು ಬಾರಿ

ಅಲಂಕಾರಗಳಿರುವುದಿಲ್ಲ. ರಾಷ್ಟ್ರಕೂಟರ ಸಾಮಂತರಾದ ನೊಳಂಬರು ಕಟ್ಟಿಸಿರುವ ದೇವಾಲಯಗಳ ಜಾಲಂದ್ರಗಳು ಕಲಾಪೂರ್ಣವಾಗಿವೆ. ರಾಷ್ಟ್ರಕೂಟರ ಕಾಲದಲ್ಲಿ ಬಿಡಿ ಶಿಲ್ಪಗಳು ಹೆಚ್ಚು.

ನಾಲ್ಕನೆಯ ಗೋವಿಂದನ ಕವಜೇರಿ ಶಾಸನದಲ್ಲಿ (SII., vol XI, Pt. I, No.35, 933 AD) ಕವುಜಗೆರೆಯ ಗಾವುಂಡ ಬಳ್ಳಜ್ಜನು ತಾನು ಮಾಡಿಸಿದ ಐದು ದೇವಾಲಯಗಳಿಗೆ ವಿವಿಧ ದಾನಗಳನ್ನು ನೀಡಿದನು. ಅದರಲ್ಲಿ ಒಂದು ದೇಗುಲಕ್ಕೆ ನಂದಿ, ಮಕರ ಪ್ರತಿಮೆಗಳ ನರಪಟ್ಟಿಕೆ (ಸರಪಟ್ಟಿಕೆ) ಯನ್ನು ನೀಡಿದುದನ್ನು ದಾಖಲಿಸುತ್ತದೆ.

ಮೂರನೆಯ ಇಂದ್ರನ ಕಾಮಲಾಂಪುರಂ ಶಾಸನದಲ್ಲಿ (ಹಂ.ಕ.ವಿ.ವಿ. ಶಾ.ಸ. V, ಸಂ.೩೦ ಕ್ರಿ.ಶ.೯೨೫) ವಿಕ್ರಾಂತರಾಮ, ವಿಕ್ರಾಂತಭೀಮ ಎನ್ನುವ ಬಿರುದುಗಳಿದ್ದ ಪಲ್ಲವಧೀರನು ಮುಲ್ಕಿ ೫೦೦ ಅನ್ನು ಆಳುತ್ತಿದ್ದಾಗ ಮುಳ್ಕುಂಟೇಶ್ವರ ದೇವಾಲಯಕ್ಕೆ ದ್ವಾರಬಂಧ, ಮಂಟಪ (ಪೋಷ್ಟ) ಪರಿವಾರ ದೇವಾಲಯಗಳನ್ನು ಕಟ್ಟಿಸಿ ಕೊಟ್ಟಿದ್ದಾನೆ.

## ಜೀರ್ಣೋದ್ಧಾರ

ಬ್ಯಾಡಗಿ ತಾಲೂಕಿನ ಮೋಟೆಬೆನ್ನೂರಿನ ಗಳೇಶ್ವರ ಗುಡಿ ಮೂಲತಃ ರಾಷ್ಟ್ರಕೂಟರದಾಗಿದ್ದು ನಂತರ ಜೀರ್ಣೋದ್ಧಾರವಾಗಿದೆ. ನವರಂಗ ಮತ್ತು ಕಂಬಗಳು ಕಲ್ಯಾಣಿ ಚಾಲುಕ್ಯರ ಶೈಲಿಯದಾಗಿವೆ. ಗರ್ಭಗೃಹದಲ್ಲಿ ತೀರ್ಥಂಕರ ಪೀಠದಮೇಲೆ ನಂತರದ ಕಾಲದ ವೀರಭದ್ರನ ಮೂರ್ತಿಯನ್ನು ಸ್ಥಾಪಿಸಲಾಗಿದೆ. ಪ್ರವೇಶದ್ವಾರದ ದ್ವಾರಬಂಧದ ಲಲಾಟದಲ್ಲಿ ಜಿನಬಿಂಬವಿದ್ದು ಇದು ಮೂಲತಃ ಜಿನಾಲಯವೆಂದು ತೀರ್ಮಾನ ಮಾಡಲು ಸಹಕಾರಿಯಾಗಿದೆ. ಹಾನಗಲ್ಲು ತಾಲ್ಲೂಕಿನ ಎಳವಟ್ಟಿಯಲ್ಲಿ ರಾಮಲಿಂಗೇಶ್ವರ ದೇವಸ್ಥಾನವು ರಾಷ್ಟ್ರಕೂಟರಿಂದ ನಿರ್ಮಾಣ ಮಾಡಲ್ಪಟ್ಟದ್ದು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ವಿಸ್ತಾರವಾಗಿದೆ. ಲಕ್ಕುಂಡಿಯ ಮಲ್ಲಿಕಾರ್ಜುನ ದೇವಾಲಯದ ಹಿಂದೆ ಶಿವದೇವಾಲಯವೊಂದಿದ್ದು ಇದನ್ನು ಸ್ಥಳೀಯವಾಗಿ ವಿರೂಪಾಕ್ಷ ದೇವಾಲಯವೆಂದು ಕರೆಯಲಾಗುತ್ತಿದೆ. ಈ ದೇವಾಲಯ ರಾಷ್ಟ್ರಕೂಟರ ನಿರ್ಮಾಣವಾಗಿದೆ. ಇದನ್ನು ನಂತರದ ಕಾಲಗಳಲ್ಲಿ ಕಲ್ಯಾಣಿಯ ಚಾಲುಕ್ಯರು ಮತ್ತು ಹೊಯ್ಸಳರು ದುರಸ್ತಿ ಪಡಿಸಿರುವಂತೆ ತೋರುತ್ತದೆ. ರೋಣ ತಾಲೂಕಿನ

ಸವಡಿಯಲ್ಲಿರುವ ಬ್ರಹ್ಮೇಶ್ವರ ದೇವಾಲಯವು ರಾಷ್ಟ್ರಕೂಟರ ಕಾಲದ ರಚನೆಯಾಗಿದ್ದು ವಿಜಯನಗರದ ಅರಸರ ಕಾಲದಲ್ಲಿ ಜೀರ್ಣೋದ್ಧಾರಗೊಂಡಿದೆ.

### ಬಸದಿಗಳು

ರಾಷ್ಟ್ರಕೂಟರ ಕಾಲದಲ್ಲಿ ಜೈನ ಧರ್ಮಕ್ಕೆ ಬಹಳ ಪ್ರೋತ್ಸಾಹ ನೀಡಿದ್ದು, ಅನೇಕ ಬಸದಿಗಳ ನಿರ್ಮಾಣವಾಗಿದೆ. ಹಳ್ಳೂರಿನ ಬಸದಿಯಲ್ಲಿ ಗರ್ಭಗೃಹ, ಪ್ರದಕ್ಷಿಣಾಪಥ ಮತ್ತು ಸಭಾಮಂಟಪಗಳಿವೆ. ಕೆಳಗಿನ ಗರ್ಭಗೃಹವು ಬಿದ್ದುಹೋಗಿದೆ. ಸಭಾಮಂಟಪದಲ್ಲಿರುವ ಕಲ್ಲಿನ ಏಣಿಯಿಂದ ಮೇಲಿನ ಗರ್ಭಗೃಹಕ್ಕೆ ಹೋಗಬಹುದು. ಪಟ್ಟದ ಕಲ್ಲಿನಲ್ಲಿರುವ ಬಸದಿಯ ಗರ್ಭಗೃಹವು ಒಂದರ ಮೇಲೊಂದಿದೆ. ಎರಡನೆಯ ಗರ್ಭಗೃಹವು ಶಿಖರದ ಭಾಗದಲ್ಲಿದೆ. ಇದು ದ್ರಾವಿಡ ಶೈಲಿಯ ಶಿಖರವಾಗಿದ್ದು ಗರ್ಭಗೃಹದ ಮೇಲೆ ಮಕರ ತೋರಣವಿದೆ.

## ಕಲೆ

### ಕಲೆ ಎಂದರೇನು?

ಕಲೆ ಸಂಸ್ಕೃತಿಯ ವಿಕಾಸವೆನ್ನಬಹುದು. ವಿಕಾಸಕ್ಕೆ ಕಾಲದ ಮಿತಿಯಾಗಲಿ, ವಿಷಯದ ಮಿತಿಯಾಗಲಿ ಇಲ್ಲ. ಇಲ್ಲಿ ವ್ಯಷ್ಟಿಯ ಪ್ರಶ್ನೆಯಿಲ್ಲ. ಸಮಷ್ಟಿಯೇ ಎಲ್ಲ. ಸಮೂಹದಲ್ಲಿ ಮೂಡುವ ಒಂದೊಂದು ಕಲೆಯೂ ಧಾರ್ಮಿಕ, ಆಧ್ಯಾತ್ಮಿಕ ಭಾವನೆಗಳ ಸಂಮಿಶ್ರಣವಾಗಿದೆ. ಸೃಜನಶೀಲತೆಯ ಜೊತೆಗೆ ಶೈಲಿ, ವಿಧಾನಗಳು ಮಿಳಿತವಾಗುತ್ತದೆ. ಸಮಕಾಲೀನ ಸಮಾಜದ ಸಂಸ್ಕೃತಿಯ ಬೆಳವಣಿಗೆಯ ಪ್ರಭಾವ ಸಹಜವಾಗಿಯೇ ತನ್ನ ಕೊಡುಗೆಯನ್ನು ನೀಡುತ್ತದೆ. ಇದಕ್ಕೆ ತಕ್ಕ ಪ್ರೋತ್ಸಾಹವೂ ಸಿಕ್ಕಿದರೆ ಕಲೆಯ ಅರಳುವಿಕೆ ನಿರಂತರವಾಗುತ್ತದೆ. ಕಲೆ ಚಾಲನಾತ್ಮಕವಾದದ್ದು. ವಿವಿಧ ಕಲೆಗಳನ್ನು ಗಮನಿಸುವ ಕಲಾವಿದನ ಅಂತರಂಗ, ಬುದ್ಧಿಗಳು ಅನೇಕ ಹೊಸ ಹೊಸ ಆವಿಷ್ಕಾರಗಳನ್ನು ಮೂಡಿಸಲು ಪ್ರಯತ್ನಿಸುತ್ತದೆ. ಅವನ ಭಾವನೆ, ಕಲ್ಪನೆಗಳಿಗೊಂದು ಚಾಲನೆ ಸಿಗಲು ಸಹಕರಿಸುತ್ತದೆ. ಅದರ ಪರಿಣಾಮವಾಗಿ ಹೊಸ ಶೈಲಿಯ ಉಗಮವಾಗುತ್ತದೆ. ಹೀಗೆಯೇ ಹುಟ್ಟಿ ಬೆಳೆದದ್ದು "ಕರ್ನಾಟಕ ಕಲೆ". ಭಾರತೀಯ ಕಲಾ ಪರಂಪರೆಯ ಇತಿಹಾಸಕ್ಕೆ ತನ್ನದೇ ಆದ ವಿಶಿಷ್ಟ ಕೊಡುಗೆಯನ್ನು

ನೀಡಿರುವುದು ಇದರ ಹೆಗ್ಗಳಿಕೆ. ಬಳಸಿರುವ ಮಾಧ್ಯಮಗಳೂ ವೈವಿಧ್ಯ, ಕಲಾ ನೈಪುಣ್ಯತೆಯೂ ವಿಶಿಷ್ಟವಾಗಿದೆ.

### ಸಂಗೀತ

ಸಂಗೀತವು ಮನಸ್ಸಿಗೆ ಸಂತೋಷ ನೀಡುವಂಥದ್ದು. ಮನಸ್ಸನ್ನು ಶಾಂತಗೊಳಿಸುತ್ತದೆ, ಉಲ್ಲಾಸಗೊಳಿಸುತ್ತದೆ. ಸಂಗೀತದ ಪ್ರಾಚೀನತೆಯನ್ನು ವೇದಗಳಷ್ಟು ಹಿಂದಕ್ಕೆ ತೆಗೆದುಕೊಂಡು ಹೋಗಬಹುದು. ಸಾಮವೇದವನ್ನು ಉದಾಹರಣೆಯಾಗಿ ಕೊಡಬಹುದು. ಇದರಲ್ಲಿ ಎಲ್ಲ ಋಕ್ಕುಗಳನ್ನು ರಾಗಬದ್ಧವಾಗಿ ಹಾಡುತ್ತಿದ್ದರು. ಅದೇ ರೀತಿ ತೈತ್ತಿರೀಯ ಉಪನಿಷತ್ತಿನಲ್ಲಿಯೂ ಬರುತ್ತದೆ. ತುರೀಯಾನಂದ ಸ್ಥಿತಿಗೇರಿದ ಬ್ರಹ್ಮಜ್ಞಾನಿಗಳು, ಅಥವಾ ಬ್ರಹ್ಮಾನಂದವನ್ನು ಅನುಭವಿಸಿದ ರಸಋಷಿಗಳು ಸಂತೋಷದಿಂದ "ಹಾಹೂ ಹಾಹೂ ಹಾಹೂ" ಎಂದು ಹಾಡುವ ಮೂಲಕ ತಮ್ಮ ಆನಂದವನ್ನು ವ್ಯಕ್ತಪಡಿಸುವುದನ್ನು ಕಾಣಬಹುದು. ಭಾರತದಲ್ಲಿ ಸಂಗೀತವು ಕಾಲಕ್ರಮದಲ್ಲಿ ಒಡೆದು ಎರಡಾಯಿತು. ಇದನ್ನು ಉತ್ತರಾದಿ ಮತ್ತು ದಕ್ಷಿಣಾದಿ ಎಂಬುದಾಗಿ ಗುರುತಿಸುತ್ತಾರೆ. ಪ್ರಸ್ತುತ ರಾಷ್ಟ್ರಕೂಟರ ಕಾಲಕ್ಕೆ ಈ ಬದಲಾವಣೆಗಳು ಆಗಿರಲಿಲ್ಲವೆಂದು ಭಾವಿಸಬಹುದು.

ಸಂಗೀತದ ಬಗ್ಗೆ ಹಿಂದಿನಿಂದ ನಮಗೆ ಲಭ್ಯವಿರುವ ಆಧಾರಗಳೆಂದರೆ ಚಿತ್ರಗಳು, ಶಿಲ್ಪಗಳು ಮತ್ತು ಶಾಸನಗಳು ಮಾತ್ರ. ಅತ್ಯಂತ ಪ್ರಾಚೀನ ಎಂದು ಹೇಳಲಾಗದಿದ್ದರೂ ಅಜಂತದ ಚಿತ್ರಗಳಲ್ಲಿ ವಾದ್ಯಗಾರರನ್ನು ನೋಡಬಹುದಾಗಿದೆ. ಯಕ್ಷರು, ಗಂಧರ್ವರು ತಮ್ಮ ಕೈಗಳಲ್ಲಿ ವಾದ್ಯಗಳನ್ನು ಹಿಡಿದಿರುವುದನ್ನು ಗಮನಿಸಬಹುದು. ಅಜಂತದಲ್ಲಿ ಒಂದನೆಯ ಮತ್ತು ಹತ್ತನೆಯ ಗುಹೆಗಳಲ್ಲಿ ಇಂತಹ ಚಿತ್ರಗಳಿವೆ. ವಿಶೇಷವೇನೆಂದರೆ ವಾದ್ಯ ನುಡಿಸುತ್ತಿರುವವರೆಲ್ಲ ಸ್ತ್ರೀಯರೇ ಆಗಿದ್ದಾರೆ. ಇಲ್ಲಿ ಕಂಡು ಬರುವ ವಾದ್ಯಗಳೆಂದರೆ ತಾಳ, ಕೊಳಲು, ವೀಣೆಯಂತಿರುವ ವಾದ್ಯ, ತಬಲ ಮತ್ತು ಮೃದಂಗ. ಕರ್ನಾಟಕದಲ್ಲಿ ಹಳೇ ಆಲೂರಿನ ದೇವಾಲಯದಲ್ಲಿರುವ ಶಿಲ್ಪವೊಂದು ಬಾಗಿರುವ ತಂತಿ ವಾದ್ಯವನ್ನು ಮೀಟುತ್ತಿರುವುದು ಕಂಡುಬರುತ್ತದೆ. ಇದು ಬಾದಾಮಿ ಚಲುಕ್ಯರಿಗಿಂತ ಹಿಂದಿನದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ವಾದ್ಯಗಳಲ್ಲಿ ಬಂದಿರುವ ವೈವಿಧ್ಯತೆಯ ಆಧಾರದಿಂದ

ಸಂಗೀತ ಕಲೆ ಬೆಳೆದಿತ್ತು ಎಂದೇ ಹೇಳಬಹುದಾಗಿದೆ. ಇಲ್ಲದಿದ್ದರೆ ವೈವಿಧ್ಯಗಳು ಕಾಣಿಸಿಕೊಳ್ಳುವುದಕ್ಕೆ ಅವಕಾಶವಿಲ್ಲ.

ಕ್ರಿ.ಶ. ೭-೮ ನೆಯ ಶತಮಾನದ ಹೊತ್ತಿಗಂತೂ ಇದು ಪೂರ್ಣಪ್ರಮಾಣದಲ್ಲಿ ಬೆಳೆದಿತ್ತೆಂದೇ ಹೇಳಬಹದು. ಅದರಲ್ಲೂ ಬಹುಶಃ ದೇವದಾಸಿ ಪದ್ಧತಿಯು ಬಂದಮೇಲೆ ಇದು ಬಹಳಷ್ಟು ಬೆಳೆದಿದೆಯೆನ್ನಬಹುದು. ಬಾದಾಮಿ ಚಲುಕ್ಯರ ಕಾಲದಲ್ಲಿದ್ದ ವೈವಿಧ್ಯತೆಗಳನ್ನು ಗಮನಿಸಿಕೊಂಡೇ ಮುಂದುವರಿದರೆ ಉತ್ತಮವೆನಿಸುತ್ತದೆ. ಬಾದಾಮಿ, ಐಹೊಳೆ, ಪಟ್ಟದಕಲ್ಲು ಮುಂತಾದ ಕಡೆಗಳಲ್ಲಿರುವ ಚಿತ್ರಪಟ್ಟಿಕೆಗಳಲ್ಲಿ ನರ್ತಕರು, ವಾದಕರು ಮತ್ತು ಗಾಯಕರಿಗೆ ಸಂಬಂಧಿಸಿದ ಶಿಲ್ಪಗಳು ದೊರೆಯುತ್ತವೆ. ಕುಬ್ಜ ಶಿಲ್ಪಗಳಲ್ಲಿ ಕೂಡ ಇವುಗಳನ್ನು ಕಾಣಬಹುದಾಗಿದೆ. ಅನೇಕ ತಂತೀ ವಾದ್ಯಗಳನ್ನು ಇಲ್ಲಿ ಗಮನಿಸಬಹುದಾಗಿದೆ. ಬಾದಾಮಿಯ ಒಂದನೆಯ ಗುಹೆಯಲ್ಲಿ ರುದ್ರವೀಣೆಯನ್ನು ಹಿಡಿದು ಕುಳಿತಿರುವ ಶಿವನ ಚಿತ್ರವಿದೆ. ಇನ್ನೊಂದು ಗುಹೆಯಲ್ಲಿರುವ ಚಿತ್ರಪಟ್ಟಿಕೆಯಲ್ಲಿ ಕೊಂಬು, ಝಲ್ಲರಿ ಮುಂತಾದವುಗಳನ್ನು ಬಾರಿಸುತ್ತಿರುವ ಸಂಗೀತಗಾರರ ಚಿತ್ರಗಳಿವೆ.

ರಾಷ್ಟ್ರಕೂಟರ ಕಾಲದಲ್ಲಿ ಎಲ್ಲೋರದ "ಇಂದ್ರಸಭಾ" ಗುಹಾಲಯದಲ್ಲಿ ಗೊಮ್ಮಟೇಶ್ವರ ಶಿಲ್ಪದ ಮೇಲುಭಾಗದಲ್ಲಿ ಝಲ್ಲರಿ, ಪಟಹ ಮುಂತಾದವುಗಳನ್ನು ನುಡಿಸುತ್ತಿರುವವರ ಶಿಲ್ಪಗಳಿವೆ. ಕೆಲವು ಸಂಗೀತಗಾರರ ಶಿಲ್ಪಗಳೂ ಇವೆ. ಕ್ರಿ.ಶ.ಸುಮಾರು ೮೦೦ ರ ಕಾಲಕ್ಕೇ ಬರುವ ಇನ್ನೊಂದು ಶಿಲ್ಪವು ಚಾಮರಾಜನಗರ ತಾಲೂಕಿನ ನರಸಮಂಗಲ ಗ್ರಾಮದ ರಾಮೇಶ್ವರ ದೇವಾಲಯದಲ್ಲಿದೆ. ನವರಂಗದ ಒಳಮಾಳಿಗೆಯ ಮೇಲೆ ಶಿವನು ನೃತ್ಯ ಮಾಡುತ್ತಿರುವ ಶಿಲ್ಪವಿದೆ. ಇದರ ಅಕ್ಕಪಕ್ಕಗಳಲ್ಲಿ ಝಲ್ಲರಿ, ಪಟಹಗಳನ್ನು ನುಡಿಸುತ್ತಿರುವ ವಾದ್ಯಗಾರರಿದ್ದಾರೆ.

ನಾಲ್ಕನೆಯ ಗೋವಿಂದನ ದೊಡ್ಡಿಮಕಳ ಶಾಸನದಲ್ಲಿ (SII., vol. IX, pt.I. No.60, Ar No.512 of 1915) ವೈಶ್ಯಕುಲ ತಿಲಕನಾದ, ಬಳಗಾರ ಮಹೋದಧಿ ಕರುಳ ಕಾಮಸೆಟ್ಟಿಯು ಕಾಮೇಸ್ವರದ ಧರ್ಮಶಾಸನ ದತ್ತಿಯನ್ನು ನೀಡಿದನೆಂದು ಉಲ್ಲೇಖಿಸಿದೆ. ಎರೆಯ ಕೆಯ್ಯ (ಎರೆಭೂಮಿ) ಇಪ್ಪತ್ತೈದು, ಕಿಸುಕಾಡು ಇಪ್ಪತ್ತೈದು ಮತ್ತು ರಾಜಮಾನ್ಯ ಐವತ್ತು ಮತ್ತರಿನಲ್ಲಿ ಹಲವಾರು ಜನರಿಗೆ ಪಾಲು ಮಾಡಿದ್ದನ್ನು

ಉಲ್ಲೇಖಿಸುತ್ತದೆ. ಹಾಗೆ ಪಾಲು ಮಾಡಿದಾಗ ಹಾಡುವವನಿಗೆ ಎರೆ ಹನ್ನೊಂದು ಮತ್ತರು ಭಾಗ ನೀಡಿರುವುದನ್ನು ಗಮನಿಸಬಹುದು. ಪೆರಂಗಿಯಾರ್ ಶಾಸನದಲ್ಲಿ (SII., vol XXII, No. 199, p 161) ಮುನ್ನೈಪ್ಪಾಡಿ ಪ್ಪೇರಿಜ್ಞೂರ ಮೂಲಸ್ಥಾನದ ಪೆರುಮಾನಡಿಗಳಿಗೆ ತ್ರಿಕಾಲ ಪೂಜೆಯ ಸಮಯದಲ್ಲಿ ಸಂಗೀತ ಮತ್ತು ವಾದ್ಯಗೋಷ್ಠಿ ಸೇವೆ ನಡೆಸಲು ದತ್ತಿಯನ್ನು ನೀಡಿರುವುದನ್ನು ದಾಖಲಿಸುತ್ತದೆ.

## ನೃತ್ಯ

ಭಾರತದಲ್ಲಿ ನೃತ್ಯಕಲೆಯು ಆದಿಕಾಲದಿಂದಲೂ ಇದೆ. ಕಲೆಗಳಲ್ಲಿ ಇದೊಂದು ಪ್ರಮುಖ ಕಲೆಯಾಗಿದೆ. ಭಾರತದ ಶಿಲ್ಪಿಗಳಿಗೆ ಅನೇಕ ಬಗೆಯಲ್ಲಿ ಸ್ಫೂರ್ತಿಯನ್ನೊದಗಿಸಿರುವುದೇ ನೃತ್ಯಕಲೆ. ನೃತ್ಯದ ಒಂದೊಂದು ಭಂಗಿಯೂ ಶಿಲ್ಪದ ಸೃಷ್ಟಿಗೆ ಹೊಸ ವಸ್ತುವನ್ನು ನೀಡುತ್ತಿತ್ತು. ಶಿಲ್ಪಿಯ ಕಲ್ಪನೆ, ಚಾತುರ್ಯ, ಸೃಜನಶೀಲತೆಯೂ ಸೇರಿ ಮೂಡುತ್ತಿದ್ದ ಶಿಲ್ಪಗಳು ಕಲಾರಾಧಕನ ಮನಸ್ಸಿಗೆ ಮುದ ತರುತ್ತದೆ. ಕಲೆಯಲ್ಲಿ ಸೌಂದರ್ಯಪ್ರಜ್ಞೆಯನ್ನು ನೋಡುವುದ ಕಲಾವಿದ ಮತ್ತು ಕಲಾವೀಕ್ಷಕ ಇಬ್ಬರಲ್ಲೂ ಇರುವುದರಿಂದ ರಸಾಸ್ವಾದನೆ ಸಾಧ್ಯವಾಗುತ್ತದೆ.

ನೃತ್ಯದ ಬಗ್ಗೆ ಸಿಗುವ ಪ್ರಾಚೀನ ಆಧಾರಗಳು ಬಹಳ ಕಡಿಮೆ. ವೇದಗಳಲ್ಲಿ ಇವುಗಳಿಗೆ ಆಧಾರವಿದೆ. ಶಿವನು ಹದಿನೆಂಟು ಬಗೆಯ ನೃತ್ಯಗಳನ್ನು ಮಾಡುತ್ತಾನೆ. ಅದರಲ್ಲಿ ಆತನ ತಾಂಡವ ನೃತ್ಯ ಪ್ರಸಿದ್ಧವಾದುದು. ಮೊಹೆಂಜೊದಾರೋದಲ್ಲಿ ದೊರಕಿರುವ ವಿಗ್ರಹವೊಂದು ನೃತ್ಯಭಂಗಿಯಲ್ಲಿದೆ. ಕ್ರಿ.ಪೂ. ೩೦೦೦ – ೨೫೦೦ ರ ಕಾಲದಲ್ಲಿಯೂ ನೃತ್ಯಕಲೆಯು ಇತ್ತೆಂಬುದಕ್ಕೆ ಇದನ್ನು ಆಧಾರವೆನ್ನಬಹುದು. ಬಾದಾಮಿ ಚಾಲುಕ್ಯರು ಮತ್ತು ರಾಷ್ಟ್ರಕೂಟರ ಕಾಲದಲ್ಲಿ ನಟರಾಜನ ಶಿಲ್ಪಗಳನ್ನು ವಿಶೇಷವಾಗಿ ಗಮನಿಸಬಹುದು. ಚಿತ್ರಕಲೆ, ಶಿಲ್ಪ, ಶಾಸನ, ಸಾಹಿತ್ಯಗಳ ಆಧಾರಗಳಿಂದ ನೃತ್ಯಕಲೆಯು ಇತ್ತೆಂಬುದು ತಿಳಿದುಬರುತ್ತದೆ.

ಅಜಂತದ ಗುಹೆಗಳಲ್ಲಿ, ಕರ್ನಾಟಕದ ಅಥವಾ ಕನ್ನಡದ ಅರಸರ ಕಾಲದಲ್ಲಿ ನಿರ್ಮಿಸಿರುವ ಆರು ಗುಹೆಗಳಿವೆ. ಅವುಗಳಲ್ಲಿ ಒಂದು ಮತ್ತು ಹತ್ತನೆಯ ಗುಹೆಯಲ್ಲಿ ಮೂವರು ನೃತ್ಯಕಾರರಿರುವ ಚಿತ್ರವೊಂದಿದೆ. ಇದರ ಕಾಲವನ್ನು ಕ್ರಿ.ಶ. ಎರಡನೆಯ ಶತಮಾನವೆಂದು ಊಹಿಸಿದ್ದಾರೆ. ಅದೇ ರೀತಿ ಒಂದನೆಯ ಗುಹೆಯಲ್ಲಿ ಒಬ್ಬಳು

ನೃತ್ಯಗಾತಿಯನ್ನು ಗುರುತಿಸಬಹುದು. ಗುಹೆಯ ಮುಂಭಾಗದ ಕೈಸಾಲೆಯಲ್ಲೊಂದು ಚಿತ್ರವಿದೆ. ಬಹಳ ಅಸ್ಪಷ್ಟವಾಗಿರುವ ಈ ಚಿತ್ರವು ನಾಗರಾಜನ ಚಿತ್ರದೆದುರು ಇದೆ. ರಾಷ್ಟ್ರಕೂಟರ ಕಾಲದ ಎಲ್ಲೋರದ ಹದಿನಾರನೆಯ ಗುಹೆಯ ಒಂದನೆಯ ಅಂತಸ್ತಿನಲ್ಲಿ, ಬಾಗಿಲ ಹಿಂಭಾಗದಲ್ಲೊಂದು ನಟರಾಜನ ಚಿತ್ರವಿದೆ. ಇದು ನೇರವಾಗಿ ರಾಷ್ಟ್ರಕೂಟರ ಕಾಲಕ್ಕೆ ಸಂಬಂಧಿಸಿದ್ದೋ ಅಥವಾ ಅಹಲ್ಯಬಾಯಿ ಹೋಳ್ಕರರ ಕಾಲದಲ್ಲಿ ರಚಿತವಾದುದೋ ತಿಳಿದಿಲ್ಲ. ಶಿಲ್ಪದ ವಿಷಯಕ್ಕೆ ಬಂದರೆ ರಾಷ್ಟ್ರಕೂಟರ ಕಾಲದಲ್ಲಿ ಅನೇಕ ನಟರಾಜನ ವಿಗ್ರಹಗಳು ಕಂಡುಬರುತ್ತವೆ. ಎಲ್ಲೋರ, ನರಸಮಂಗಲದ ರಾಮೇಶ್ವರ ಗುಡಿ, ಅರಳಗುಪ್ಪೆಯ ಕಲ್ಲೇಶ್ವರ ಗುಡಿ ಮುಂತಾದ ಕಡೆ ನಟರಾಜನ ಶಿಲ್ಪಗಳು, ಚಿತ್ರಗಳು ಕಂಡುಬರುತ್ತವೆ. ಸಾಹಿತ್ಯದಲ್ಲಿ ಕೂಡ ಇದಕ್ಕೆ ಆಧಾರವಿದೆ.

ಸಾಹಿತ್ಯದಲ್ಲಿ ಸಿಗುವ ಆಧಾರಗಳನ್ನು ಗಮನಿಸಿದರೆ, ಕ್ರಿ.ಶ.ಒಂಬತ್ತನೆಯ ಶತಮಾನದಲ್ಲಿ ಜಿನಸೇನಾಚಾರ್ಯರು ರಚಿಸಿದ ಪೂರ್ವಪುರಾಣವನ್ನು ಗಮನಿಸಬಹುದು. ಇದರಲ್ಲಿ ಬರುವ ನೀಲಾಂಜನೆಯ ನೃತ್ಯ ಸಾಹಿತ್ಯಾಸಕ್ತರಿಗೆ ರಸಾಸ್ವಾದನೆಗೆ ವಸ್ತುವಾದರೆ, ವಿರಾಗಿಗಳಿಗೆ ನಶ್ವರವಾದ ಬದುಕಿನ ಪರಿಚಯ ಮಾಡಿಕೊಡುತ್ತದೆ. ನೀಲಾಂಜನೆಯ ನೃತ್ಯಕ್ಕೆ ಮೊದಲು ಇನ್ನೂ ಅನೇಕ ಅಪ್ಸರ ಸ್ತ್ರೀಯರು ನರ್ತನ ಮಾಡಿದ ಉಲ್ಲೇಖವಿದೆ.

ನಂತರ,

"ರಾಜ್ಯಭೋಗಾತ್ಕಥಂ ನಾಮ ವಿರಜ್ಯೇದ್ಭಗವಾನಿತಿ ।

ಪ್ರಕ್ಷೀಣಾಯುರ್ದಶಂ ಪಾತ್ರಂ ತದಾ ಪ್ರಾಯುಂಕ್ತ ದೇವರಾಟ್ ॥"

"ಭಗವಂತನು ರಾಜ್ಯಭೋಗದಿಂದ ಹೇಗೆ ವಿರಕ್ತನಾಗುವನು" ಎಂದು ದೇವೇಂದ್ರನು ಯೋಚಿಸಿ, ಆಗ ಆಯುಷ್ಯಾವಸ್ಥೆಯು ನಷ್ಟವಾದ ಒಂದು ಪಾತ್ರವನ್ನು ಪ್ರಯೋಗಿಸಿದನು. ಸ್ವಾಮಿಗೆ ವೈರಾಗ್ಯವನ್ನುಂಟು ಮಾಡುವುದಕ್ಕೋಸ್ಕರ ಸ್ವಲ್ಪಾಯುಷ್ಯವುಳ್ಳ ಸ್ತ್ರೀ ಪಾತ್ರವನ್ನು ನರ್ತನಕ್ಕೆ ಪ್ರಯೋಗಿಸಿದನೆಂದು ಭಾವವು. (ಮಹಾಪುರಾಣ. ಭಾಗ-೧, ೧೭-೭, ಪು.೨೬೮).

ಮೇಲಿನ ಸನ್ನಿವೇಶವನ್ನು ಗಮನಿಸಿದಾಗ ಲೋಕ ಕಲ್ಯಾಣಕ್ಕಾಗಿ ಅವತರಿಸಿದ ವೃಷಭದೇವನನ್ನು ವಿರಕ್ತನಾಗಲು ಸಹಾಯವಾಗುವಂತೆ ಸಹಕರಿಸಲು ದೇವೇಂದ್ರನು ನೀಲಾಂಜನೆಯೆಂಬ ಅಲ್ಪಾಯುಷೀ ನರ್ತಕಿಯನ್ನು ನಿಯೋಜಿಸುತ್ತಾನೆ ಎಂಬ ವಿಚಾರವು ತಿಳಿದುಬರುತ್ತದೆ. ಅಪಾರವಾದ ಕಲ್ಪನಾ ಸಾಮರ್ಥ್ಯವಿರುವ ವ್ಯಕ್ತಿಯೇ ಆದರೂ ಒಮ್ಮೆಯಾದರೂ ನೃತ್ಯವನ್ನು ನೋಡಿದ್ದರೆ ಮಾತ್ರ ಅದರ ಬಗ್ಗೆ ವಿವರಿಸಲು ಸಾಧ್ಯ. ಆದ್ದರಿಂದ ಶಾಸನಗಳ ಉಲ್ಲೇಖ ಕಡಿಮೆಯಿದ್ದರೂ ನೃತ್ಯಕಲೆ ಇರಲಿಲ್ಲವೆಂದು ಹೇಳುವುದು ಸಾಧ್ಯವಿಲ್ಲ.

ದೇವಾಲಯಗಳಲ್ಲಿ "ನವರಂಗ"ಗಳಿರುತ್ತಿದ್ದವು. ನವರಂಗ ಮಂಟಪದಲ್ಲಿ ಮುಖ್ಯವಾಗಿ ದೇವರ ರಂಗಭೋಗ ಸೇವೆಗಳು ನಡೆಯುತ್ತಿದ್ದವು. ಸಂಗೀತ, ನರ್ತನ ಸೇವೆಗಳನ್ನು ನಡೆಸುವುದಕ್ಕಾಗಿಯೇ ಇದನ್ನು ನಿರ್ಮಿಸುತ್ತಿದ್ದರು.

ಕ್ರಿ.ಶ.೯೫೭ ರ ಸಿದ್ಧಲಿಂಗಮಢಮ್ ಶಾಸನದಲ್ಲಿ (SII, vol.XXVI, No.391, p-254) ಚೆಙ್ಙಿಙ್ಗೂರ ಸಭೆಯು ಊರಿನ ಸಮೀಪದ ಕಾಲುವಳಿ ಗ್ರಾಮವಾದ ಕೊಲಿಯೂರಲ್ಲಿ ¼ ಶೆಯ್ ಭೂಮಿಯನ್ನು ತಿರುಪ್ಪುಲಿ ಭಗವರ ದೇವರ ನೃತ್ಯಗಾತಿಗೆ ಮತ್ತು ಈ ದಾನವು ವಂಶಪಾರಂಪರ್ಯವಾಗಿ ಇರುವಂತೆ ಭೂದತ್ತಿಯನ್ನು ನೀಡಿದಂತೆ ದಾಖಲಿಸುತ್ತದೆ. ನೃತ್ಯಭೋಗವನ್ನು ವಂಶಪಾರಂಪರ್ಯವಾಗಿ ಮುಂದುವರಿಸಿಕೊಂಡು ಬರಲು ಈ ದಾನವನ್ನು ನೀಡಲಾಗಿದೆ. ತಿರುಪ್ಪುಲಿ ಭಗವರರ ಮೆರವಣಿಗೆಯಲ್ಲಿ ದೇವರ ಮುಂದೆ ನೃತ್ಯ ಮಾಡಲು ಮಾಹೇಶ್ವರ ರಕ್ಷೆಯಿರುವ ಈ ದಾನವನ್ನು ನೀಡಲಾಗಿದೆಯೆಂದು ಶಾಸನವು ಉಲ್ಲೇಖಿಸುತ್ತದೆ. ನೃತ್ಯಗಾತಿಗೆ "ನೃತ್ಯವೆಡಂಗಿ" ಎಂಬ ಬಿರುದಿದ್ದುದು ಈ ಶಾಸನದಿಂದ ತಿಳಿಯುತ್ತದೆ. ದೇವಾಲಯಗಳಲ್ಲಿ ದೇವರಿಗೆ ನೃತ್ಯಸೇವೆಯನ್ನು ಸಲ್ಲಿಸುತ್ತಿದ್ದರೆಂದು ತಿಳಿದಿದೆ. ಆದರೆ, ದೇವರ ಮೆರವಣಿಗೆಯ ಸಂದರ್ಭದಲ್ಲೂ ದೇವರ ಮುಂದೆ ನೃತ್ಯ ಮಾಡುತ್ತಿದ್ದರೆಂಬುದು ಈ ಶಾಸನದಿಂದ ತಿಳಿದುಬರುತ್ತದೆ.

ರಾಷ್ಟ್ರಕೂಟರ ಕಾಲದಲ್ಲಿ ನೃತ್ಯಕಲೆಯು ಮುಂದುವರಿದಿತ್ತು ಎಂಬ ವಿಚಾರವು ಮೇಲಿನ ದಾಖಲೆಗಳಿಂದ ಸ್ಪಷ್ಟವಾಗುತ್ತದೆ. ಕಲೆ ಎಂದಿಗೂ ನಿಲ್ಲುವುದಿಲ್ಲ. ಊಹೆ

ಮತ್ತು ಅಭಿವ್ಯಕ್ತಿ ಸಾಮರ್ಥ್ಯವನ್ನು ಅನುಸರಿಸಿ ಕಲೆಯ ಬೆಳವಣಿಗೆಯು ಮುಂದುವರಿಯುತ್ತದೆ.

## ಚಿತ್ರಕಲೆ

ಅಜಂತದಲ್ಲಿ ಹಲವಾರು ಚಿತ್ರಗಳು ಬಾದಾಮಿ ಚಲುಕ್ಯರ ಕಾಲದಲ್ಲಿ ರಚಿತವಾದವುಗಳಾಗಿವೆ. ಕ್ರಿ.ಶ. ೭ನೆಯ ಶತಮಾನದಲ್ಲಿ ಚಿತ್ರಕಲೆ ಪ್ರೌಢಾವಸ್ಥೆಯಲ್ಲಿತ್ತು. ಎರಡನೆಯ ಪುಲಿಕೇಶಿಯು ತನ್ನ ಆಸ್ಥಾನದಲ್ಲಿ ವಿದೇಶೀ ರಾಯಭಾರಿಯನ್ನು ಸ್ವಾಗತಿಸುತ್ತಿರುವ ಚಿತ್ರ ಪ್ರಸಿದ್ಧವಾದುದು. ಅಜಂತದಲ್ಲಿ ಇಪ್ಪತ್ತೊಂಬತ್ತು ಗುಹೆಗಳಿವೆ. ಅದರಲ್ಲಿ ಹದಿಮೂರಕ್ಕಿಂತ ಹೆಚ್ಚು ಗುಹೆಗಳು ಕರ್ನಾಟಕದ ಅರಸರ ಕಾಲದಲ್ಲಿ ನಿರ್ಮಾಣವಾದಂತಹವುಗಳಾಗಿದೆ. ಇಲ್ಲಿ ಮುಖ್ಯವಾಗಿ ಕಂಡುಬರುವ ಚಿತ್ರಗಳೆಂದರೆ ಬುದ್ಧನ ಜೀವನದ ವಿವಿಧ ಘಟನೆಗಳು. ಚರಿತ್ರೆಯನ್ನು ಅರಿಯಲು ನೆರವಾಗುವಂತಹ ಕೆಲವು ಚಾರಿತ್ರಿಕ ಚಿತ್ರಗಳಿವೆ. ಇನ್ನುಳಿದವು ಪ್ರಕೃತಿ ಮತ್ತು ಅಲಂಕಾರಗಳಿಗೆ ಸಂಬಂಧಿಸಿದ್ದಾಗಿವೆ.

ಅಜಂತದ ನಂತರ ಎಲ್ಲೋರಾದಲ್ಲಿ ಕೂಡ ಚಿತ್ರಗಳಿವೆ. ಇಂದ್ರಸಭಾ ಗುಹೆ, ಕೈಲಾಸನಾಥ ದೇವಾಲಯಗಳಲ್ಲಿ ಭಿತ್ತಿಚಿತ್ರಗಳಿವೆ. ಇವು ಬಹುತೇಕ ಅಜಂತದಲ್ಲಿರುವ ಚಿತ್ರಕಲೆಯನ್ನೇ ಹೋಲುತ್ತವೆ. ಇವು ಬಹಳಷ್ಟು ಹಾಳಾಗಿವೆ. ಕೈಲಾಸ ದೇವಾಲಯದಲ್ಲಿ ಮಾತ್ರ ಅಸಂಖ್ಯಾತ ಚಿತ್ರಗಳಿದ್ದು, ಇದನ್ನು ರಂಗಮಹಲು ಎಂದೇ ಕರೆದಿದ್ದಾರೆ. ಕ್ರಿ.ಶ.೮ನೆಯ ಶತಮಾನದಲ್ಲಿ ರಚಿತವಾದಂತಹ ಚಿತ್ರಗಳಿವು. ಶಾರ್ದೂಲವನ್ನೇರಿರುವ ವೈದಿಕ ದೇವತೆ, ಮಹಿಷನ ಮೇಲೆ ಕುಳಿತಿರುವ ಯಮನ ಚಿತ್ರಗಳಲ್ಲದೆ ಇನ್ನೂ ಹಲವಾರು ಚಿತ್ರಗಳಿವೆ. ಇಲ್ಲಿನ ಚಿತ್ರಗಳು ವಿವಿಧ ಕಾಲಗಳಲ್ಲಿಯೂ ರಚಿತವಾಗಿರಬೇಕೆಂದು ವಿದ್ವಾಂಸರು ಊಹಿಸುತ್ತಾರೆ. ಇಂದ್ರಸಭಾದ ಒಳಮಾಳಿಗೆಯಲ್ಲಿರುವ ಚಿತ್ರಗಳು ಅಜಂತದ ಚಿತ್ರಗಳನ್ನೇ ಹೋಲುತ್ತವೆ. ಜೈನ ಕಲಾಕಾರರು ಬಹಳ ಉತ್ತಮ ಪ್ರತಿಕಾರರು ಎನ್ನುತ್ತಾರೆ ಶ್ರೀಯುತ ಯಾಜ್ದಾನಿಯವರು. ಅಜಂತ, ಬಾದಾಮಿ, ಎಲ್ಲೋರ ಈ ಮೂರನ್ನೂ ಏಳುಬೀಳುಗಳ ಘಟ್ಟವೆನ್ನುತ್ತಾರೆ. (Yazdani (ed) op-cit (ed) P773-74) ಇವರ ಪ್ರಕಾರ, ಇಂದ್ರಸಭಾ, ಜಗನ್ನಾಥಸಭಾಗಳ ಚಿತ್ರಗಳೇ ದಕ್ಷಿಣ ಚಿತ್ರಕಲೆಯ ಕೊನೆಯ ಹಂತವೆನ್ನುತ್ತಾರೆ.

ಒಟ್ಟಾರೆಯಾಗಿ ಹೇಳುವುದಾದರೆ, ರಾಷ್ಟ್ರಕೂಟರ ಕಾಲದಲ್ಲಿ, ಚಿತ್ರಕಲೆಯಲ್ಲಿ ವಿಶಿಷ್ಟವೆನ್ನಬಹುದಾದಂತಹ ವೈವಿಧ್ಯತೆಯಾಗಲಿ, ಸೃಜನಶೀಲತೆಯಾಗಲಿ ಕಂಡುಬರುವುದಿಲ್ಲ. ಆದರೆ ಹಿಂದೆ ಇದ್ದಂತಹ ಕಲೆಯನ್ನೇ ಬಳಕೆಯಲ್ಲಿಟ್ಟುಕೊಂಡಿದ್ದು ಇವರ ಕಲಾಭಿಮಾನವನ್ನು ತೋರಿಸುತ್ತದೆ. ಇನ್ನೂ ಒಂದು ಕಾರಣವನ್ನು ಊಹಿಸಬಹುದಾದರೆ, ಶಿಲ್ಪಕಲೆಗೆ ನೀಡಿದ ಪ್ರಾಧಾನ್ಯತೆಯಿಂದಾಗಿ ಚಿತ್ರಕಲೆ ನಿರ್ಲಕ್ಷ್ಯಕ್ಕೊಳಗಾಗಿರಬಹುದು. ಇದನ್ನು ಅಲ್ಲಗೆಳೆಯಲು ಸಾಧ್ಯವಿಲ್ಲ. ಅಜಂತೆಯಲ್ಲಿ ದೊರೆತಂತೆ ನಿಚ್ಚಳವಾದ ಚಿತ್ರಗಳು ಇವರ ಕಾಲದಲ್ಲಿ ದೊರೆತಿಲ್ಲ. ಎಲ್ಲೋರ ಮುಂತಾದೆಡೆ ದೊರೆತಿರುವ ಚಿತ್ರಗಳು ಸ್ಪಷ್ಟವಾಗಿಲ್ಲ. ಅಸ್ಪಷ್ಟವಾಗಿರುವ ಚಿತ್ರಗಳ ಸಹಾಯದಿಂದ ರಾಷ್ಟ್ರಕೂಟರ ಕಾಲದ ಚಿತ್ರಕಲೆಯ ಲಕ್ಷಣಗಳನ್ನು ಹೇಳಲು ಸಾಧ್ಯವಿಲ್ಲ. ಜೊತೆಗೆ ಅಹಲ್ಯಬಾಯಿ ಹೋಳ್ಕರರ ಕಾಲದಲ್ಲಿ ಪುನರ್ರಚನೆಯಾಗಿವೆ. ಹೀಗಾಗಿ ರಾಷ್ಟ್ರಕೂಟರ ಕಾಲದ ಚಿತ್ರಕಲೆಯ ಬಗ್ಗೆ ತೀರ್ಮಾನಕ್ಕೆ ಬರಲು ಕಷ್ಟಸಾಧ್ಯ. ರಾಷ್ಟ್ರಕೂಟರು ಚಿತ್ರಕಲೆಯಲ್ಲಿ ಬಾದಾಮಿ ಚಲುಕ್ಯರನ್ನೇ ಅನುಸರಿಸಿದರು. ತಮ್ಮದೇ ಆದ ಶೈಲಿ ವೈಶಿಷ್ಟ್ಯಗಳನ್ನು ಬೆಳೆಸಿಕೊಂಡರೋ ಇಲ್ಲವೋ ಗುರುತಿಸಲಾಗುವುದಿಲ್ಲ.

## ಶಿಲ್ಪಕಲೆ

### ಶೈವಶಿಲ್ಪಗಳು

ರಾಷ್ಟ್ರಕೂಟರ ಶಿಲ್ಪಗಳು ಸಾಮಾನ್ಯವಾಗಿ ಬೃಹದಾಕಾರವಾಗಿದ್ದು ನೈಜತೆಯನ್ನು, ಗಾಂಭೀರ್ಯವನ್ನು ಹೊಂದಿರುತ್ತವೆ. ಇವರ ಶಿಲ್ಪಗಳಲ್ಲಿ ಅವರ್ಣನೀಯವಾದ ಜೀವಕಳೆಯನ್ನು ಕಾಣಬಹುದು. ಎಲ್ಲೋರಾದ ಹದಿನೈದನೆಯ ಗುಹೆಯಲ್ಲಿರುವ ಗಿರಿಜಾಕಲ್ಯಾಣದ ಶಿಲ್ಪ, ಹದಿನಾರನೆಯ ಗುಹೆಯಲ್ಲಿ ರಾವಣನು ಕೈಲಾಸವನ್ನು ಎತ್ತುತ್ತಿರುವ ಶಿಲ್ಪ, ಗಜಲಕ್ಷ್ಮಿಯ ಶಿಲ್ಪ, ಅಷ್ಟಭುಜ ನಟರಾಜನ ಶಿಲ್ಪ, ಎಲಿಫೆಂಟಾದ ಮಹೇಶಮೂರ್ತಿ, ದ್ವಾರಪಾಲಕರು, ಅಂಧಕಾರಿ, ತಾಂಡವ ಶಿವ, ಗಂಗಾಧರ ಶಿವ, ಗಿರಿಜಾಕಲ್ಯಾಣಗಳನ್ನು ಕಾಣಬಹುದು.

ದಶಾವತಾರ ಗುಹೆಯಲ್ಲಿ ಗಂಗೆಯ ಶಿಲ್ಪವನ್ನು ಹೆಸರಿಸಬಹುದಾಗಿದೆ. ಅತಿಯಾದ ಅಲಂಕರಣವು ಆಭರಣಗಳ ಆಡಂಬರವು ಇಲ್ಲದಿದ್ದರೂ ಈ ಶಿಲ್ಪವು ಬಹಳ ಆಕರ್ಷಕವಾಗಿದೆ. ಗಂಗೆಯು ತನ್ನ ಮಕರವಾಹನದ ಮೇಲೆ ನಿಂತಿರುವಳು. ಇವಳ ಎಡ

ಪಾರ್ಶ್ವದಲ್ಲಿ ಕುಬ್ಜನ ಶಿಲ್ಪವಿದ್ದು ಅದರ ತಲೆಯ ಮೇಲೆ ಕೈಯೂರಿದ್ದಾಳೆ. ಇದರಿಂದಾಗಿ ಮೂರ್ತಿ ಸ್ವಲ್ಪ ಬಾಗಿದ ಭಂಗಿಯಲ್ಲಿದೆ. ಇದೇ ಗುಹೆಯಲ್ಲಿ ಗಿರಿಜಕಲ್ಯಾಣದ ಶಿಲ್ಪವು ಇದೆ. ಈ ಗಿರಿಜಕಲ್ಯಾಣದ ಪ್ರಸಂಗವು ಪ್ರಾಯಶಃ ಆ ಕಾಲದ ಶಿಲ್ಪಗಳಿಗೆ ಅತ್ಯಂತ ಪ್ರಿಯವಾಗಿದ್ದಂತೆ ತೋರುವುದು. ಎಲ್ಲೋರ ಗುಹೆಗಳ ಸಾಲಿನಲ್ಲಿ ಇದನ್ನು ಪದೇ ಪದೇ ಕಾಣುತ್ತೇವೆ. ಎಲಿಫೆಂಟಾದ ಗುಹೆಯಲ್ಲಿಯೂ ಈ ಶಿಲ್ಪವನ್ನು ಕೆತ್ತಲಾಗಿದೆ. ಆದರೆ ಬೇರೆಲ್ಲಾ ಗಿರಿಜಾಕಲ್ಯಾಣದ ಶಿಲ್ಪಗಳಿಗಿಂತ ದಶಾವತಾರ ಗುಹೆಯಲ್ಲಿರುವ ಶಿಲ್ಪ ಅತ್ಯುತ್ತಮವಾಗಿದೆ. ಈ ಶಿಲ್ಪದಲ್ಲಿ ಚಿತ್ರಿಸಿರುವ ಶಿವನ ಮುಖದಲ್ಲಿನ ಕಿರುನಗೆ, ಗಿರಿಜೆಯು ನಾಚಿಕೊಳ್ಳುತ್ತಿರುವುದು ಇತ್ಯಾದಿ ಭಾವಗಳನ್ನು ಶಿಲ್ಪಿಯು ಬಹಳ ನೈಜತೆಯಿಂದ ಕೆತ್ತಿದ್ದಾನೆ.

ಎಲ್ಲೋರದಲ್ಲಿರುವ ಶಿವನ ಗಜಾಸುರಸಂಹಾರದ ಮೂರ್ತಿಯು ಉಲ್ಲೇಖನಾರ್ಹ. ಇಲ್ಲಿ ಶಿವನನ್ನು ದಶಭುಜಗಳೊಂದಿಗೆ ಉಗ್ರರೂಪದಲ್ಲಿ ಚಿತ್ರಿಸಿದ್ದಾರೆ. ಸಂಹರಿಸಿದ ಗಜದ ಚರ್ಮವನ್ನು ಹಿಂದಿನಿಂದ ಮೇಲಿನ ಕೈಗಳಿಂದ ಎತ್ತಿಹಿಡಿದಂತಿದೆ. ಹರಡಿರುವ ಜಟೆಗಳೊಂದಿಗೆ ಅವನು ತನ್ನ ಕೈಗಳಲ್ಲಿ ಭಿಕ್ಷಾಪಾತ್ರೆಯನ್ನು ಶೂಲವನ್ನು ಹಿಡಿದಿದ್ದಾನೆ. ಅವನ ವಿಜಯವನ್ನು ಕೊಂಡಾಡುತ್ತ ಭೂತಗಣಗಳು ನರ್ತಿಸುತ್ತಿರುವಂತೆ ಕೆತ್ತಲಾಗಿದೆ. ಎಲ್ಲೋರದಲ್ಲಿ ಲಕುಲೀಶ ಶಿವನ ಶಿಲ್ಪವಿದೆ. ಈ ಶಿಲ್ಪದಲ್ಲಿ ಶಿವನು ದ್ವಿಭುಜನಾಗಿದ್ದು ತನ್ನ ಎಡಗೈಯಲ್ಲಿ ಲಾಕುಳ (ದಂಡ) ವನ್ನು ಹಿಡುದು ಬಲಗೈಯಲ್ಲಿ ಬಹುಶಃ ಉಪದೇಶ ಮುದ್ರೆಯಲ್ಲಿ ಹಿಡಿದಂತಿದೆ. ಇವನು ಸಹಸ್ರಕಮಲ ಪದ್ಮದಲ್ಲಿ ಪದ್ಮಾಸನದಲ್ಲಿ ಕುಳಿತ್ತಿದ್ದಾನೆ. ಕಮಲದ ನಾಳವನ್ನು ನಾಗದೇವತೆಗಳು ಹಿಡಿದಂತೆ ಕೆತ್ತಲಾಗಿದೆ. ಎಲ್ಲೊರದಲ್ಲಿ ಶಿವನ ಮಹಾಯೋಗಿ ಶಿಲ್ಪದಲ್ಲಿ ಶಿವನು ಅಷ್ಟಭುಜಧಾರಿಯಾಗಿದ್ದಾನೆ ಈ ಶಿಲ್ಪವು ಬಹಳ ಭಗ್ನವಾದ್ದರಿಂದ ಎಡಭಾಗದ ಮೇಲಿನ ಕೈಯಲ್ಲಿ ಹಿಡಿದಿರುವ ಕಮಲದ ಹೂವು ಹಾಗೂ ಬಲಗೈಯಲ್ಲಿರುವ ಹಾವನ್ನು ಬಿಟ್ಟರೆ ಮಿಕ್ಕಿದ್ದು ಬಹಳ ಅಸ್ಪಷ್ಟವಾಗಿದೆ. ಶಿವನ ಸುತ್ತಲೂ ಭೂತಗಣಗಳು ವಾದ್ಯಗಳನ್ನು ನುಡಿಸುತ್ತಿದ್ದಾರೆ. ಇಲ್ಲಿ ಶಿವನು ಸಿಂಹಾಸನದ ಮೇಲೆ ಸಹಸ್ರದಲ ಪದ್ಮದಲ್ಲಿ ಕುಳಿತ್ತಿದ್ದಾನೆ.

ಎಲ್ಲೋರದಲ್ಲಿರುವ ಶಿಲ್ಪಗಳಲ್ಲಿ ಪ್ರಮುಖವಾಗಿ ಹೆಸರಿಸಲಾಗುವ ಶಿಲ್ಪವೆಂದರೆ ಹದಿನೇಳನೆಯ ಗುಹೆಯಲ್ಲಿರುವ, ರಾವಣನು ಕೈಲಾಸಪರ್ವತವನ್ನು ಎತ್ತಿ ಹಿಡಿದಿರುವ

ಶಿಲ್ಪ. ರಾವಣನು ಮೊಣಕಾಲನ್ನು ನೆಲದ ಮೇಲೆ ಊರಿ, ಪರ್ವತವನ್ನು ಹೋರಲು ಪಡುತ್ತಿರುವ ಶ್ರಮವನ್ನು ಸೊಗಸಾಗಿ ಚಿತ್ರಿಸಲಾಗಿದೆ. ಅವನ ತಲೆಗಳನ್ನು ನಾಲ್ಕು ದಿಕ್ಕಿಗೆ ಚಿತ್ರಿಸಿದಂತಿದೆ. ಈ ದೃಶ್ಯವನ್ನು ಶಿವಗಣಗಳು ಮತ್ತು ಆಕಾಶದಲ್ಲಿ ದೇವತೆಗಳು ವಿಸ್ಮಯರಾಗಿ ನೋಡುತ್ತಿದ್ದಾರೆ. ಶಿವನ ಮುಖದಲ್ಲಿ ಶಾಂತತೆಯು ಕಾಣುವುದು. ಪರ್ವತವು ಕದಲುವುದರಿಂದಾದ ಭೀತಿ, ಪ್ರಾಣಿಗಳು ಓಡುವ ಹಾಗೆ ಇತ್ಯಾದಿ ಭಾವನೆಗಳನ್ನು ಬಹಳ ಶ್ರದ್ಧೆಯಿಂದ ಕೆತ್ತಲಾಗಿದೆ. ರಾಷ್ಟ್ರಕೂಟರ ಶಿಲ್ಪ ಚಾತುರ್ಯಕ್ಕೆ ಇದು ಸಾಕ್ಷಿಯಾಗಿದೆ.

ಮೇಲೆ ಉಲ್ಲೇಖಿಸಿದ ಶಿಲ್ಪದಂತೆ ಇವರ ಇನ್ನೊಂದು ಅತ್ಯುತ್ತಮ ಕಲಾಕೃತಿಯೆಂದರೆ ಎಲಿಫೆಂಟಾದ ಮಹೇಶಮೂರ್ತಿ. ಇದು ಬೃಹದಾಕಾರದ ಶಿಲ್ಪವಾಗಿದ್ದು ಎದೆಮಟ್ಟದವರಗೆ ಕೆತ್ತಿದ್ದಾರೆ. ಈ ಶಿಲ್ಪದಲ್ಲಿ ಶಿವನ ಸದ್ಯೋಜಾತ, ಮಂದಹಾಸ ಹಾಗೂ ಅಘೋರ ಮುಖಗಳನ್ನು ನೋಡಬಹುದು. ಸದ್ಯೋಜಾತನ ಮುಖದಲ್ಲಿರುವ ಮಂದಹಾಸವು, ಶಾಂತಮುಖದಲ್ಲಿ ಶಾಂತತೆಯು, ಅಘೋರ ಮುಖದಲ್ಲಿ ಶೂದ್ರವು ಸ್ಪಷ್ಟವಾಗಿ ಕಾಣುವುದು. ಶಿವನು ಊರ್ಧ್ವಜಟಧಾರಿಯಾಗಿದ್ದಾನೆ. ಈ ಶಿಲ್ಪದಲ್ಲಿ ಶಿವನ ಹಾವನ್ನು ಹಿಡಿದಿರುವ ಕೈ ಸ್ಪಷ್ಟವಾಗಿದ್ದು, ಫಲವನ್ನು ಹಿಡಿದಿರುವ ಎಡಗೈ ಭಗ್ನವಾಗಿದೆ. ಈ ಶಿಲ್ಪವು ಕೇವಲ ರಾಷ್ಟ್ರಕೂಟರದಷ್ಟೇ ಅಲ್ಲ, ಇಡೀ ಭಾರತದ ಶಿಲ್ಪಶಾಸ್ತ್ರದಲ್ಲಿ ವಿಭಿನ್ನ ಸ್ಥಾನವನ್ನು ಪಡೆದ ಅತ್ಯದ್ಭುತ ಮೂರ್ತಿಯಾಗಿದೆ. ಅತಿ ಬೃಹದಾಕಾರದ ಮೂರ್ತಿಯಾದರೂ, ಶಿಲ್ಪಿಯು ಮುಖದ ಭಾವನೆಗಳನ್ನು ಮನಮುಟ್ಟುವ ಹಾಗೆ ಕೆತ್ತಿದ್ದಾನೆ.

ಎಲಿಫೆಂಟದ ಇತರ ಶಿಲ್ಪಗಳಲ್ಲಿ ಶಿವನ ತಾಂಡವ ಶಿಲ್ಪ ಬಹಳ ಭಿನ್ನವಾಗಿದೆ. ಇಲ್ಲಿಯೂ ಸಹ ಗಿರಿಜಾಕಲ್ಯಾಣದ ಶಿಲ್ಪವನ್ನು ಕಾಣಬಹುದು. ಇದಲ್ಲದೇ ಶಿವಪಾರ್ವತಿ ಕೈಲಾಸದಲ್ಲಿ ಕುಳಿತಿರುವ ಶಿಲ್ಪವೂ ಸೊಗಸಾಗಿದೆ. ಈ ಗುಹೆಯಲ್ಲಿರುವ ದ್ವಾರಪಾಲಕರ ಶಿಲ್ಪಗಳು ಬಹಳ ಗಾಂಭೀರ್ಯದಿಂದ ಅಚ್ಚುಕಟ್ಟಾಗಿ ಮೂಡಿಬಂದಿದೆ.

**ವೈಷ್ಣವ ಶಿಲ್ಪಕಲೆ**

ಎಲ್ಲೋರಾದ ಕೈಲಾಸ ದೇವಸ್ಥಾನದಲ್ಲಿ ಪ್ರವೇಶ ದ್ವಾರದ ಬಳಿ ಸುಂದರವಾದ ನರಸಿಂಹ ಶಿಲ್ಪವಿದೆ. ಮೂರ್ತಿಯು ಸ್ವಲ್ಪ ಭಗ್ನವಾಗಿದೆ, ಈ ಶಿಲ್ಪದ ಮುಖದಲ್ಲಿ

ಅಷ್ಟೊಂದು ಉಗ್ರತೆಯನ್ನು ತೋರಿಲ್ಲ. ಈ ನರಸಿಂಹ ಶಿಲ್ಪವು ಚತುರ್ಭುಜವಾದದ್ದು. ಮೇಲಿನ ಕೈಗಳಲ್ಲಿ ಆಯುಧಗಳನ್ನು ಕೆತ್ತುವ ಜಾಗದಲ್ಲಿ ಪಂಚಾಯುಧ ಪುರುಷರ ಶಿಲ್ಪಗಳನ್ನು ಕೆತ್ತಲಾಗಿದೆ. ವಿಷ್ಣುವಿನ ಪಂಚಾಯುಧಗಳನ್ನು ಮಾನುಷ ರೂಪದಲ್ಲಿ ಕೆತ್ತುವ ಪದ್ಧತಿ ಸುಮಾರು ಎಂಟನೆಯ ಶತಮಾನದ ಕೊನೆಯವರೆಗೂ ಇದ್ದಿತು ಎನ್ನಬಹುದು. ಗುಪ್ತರ, ಪಲ್ಲವರ ಮತ್ತು ಬಾದಾಮಿ ಚಲುಕ್ಯರ ಶಿಲ್ಪಗಳಲ್ಲಿ ಪಂಚಾಯುಧ ಪುರುಷರನ್ನು ಬಹಳವಾಗಿ ಕಾಣುತ್ತೇವೆ. ಇದಲ್ಲದೆ ನರಸಿಂಹನ ಎರಡೂ ಪಾರ್ಶ್ವಗಳಲ್ಲಿ ಎರಡುಮೂರ್ತಿಗಳಿವೆ. ಒಂದು ಮೂರ್ತಿಯು ಕುಬ್ಜನಂತಿದ್ದು ಇನ್ನೊಂದು ಮೂರ್ತಿಯು ದೇವತಾಪುರುಷನಂತಿದೆ. ಇದನ್ನು ಗಮನಿಸಿದರೆ ಶಿಲ್ಪಿಯು ಪ್ರಾಯಶಃ ಪಂಚಾಯುಧ ಪುರುಷರನ್ನು ಕೆತ್ತಿದ್ದಾನೆ ಎನಿಸುತ್ತದೆ. ನರಸಿಂಹನ ಉತ್ತರೀಯದ ನಿರಿಗೆಗಳನ್ನು ಮೊದಲುಗೊಂಡು ಎಲ್ಲ ಸೂಕ್ಷ್ಮವಾದ ವಿವರಗಳನ್ನು ಸೊಗಸಾಗಿ ಚಿತ್ರಿಸಲಾಗಿದೆ. ಈ ಮೂರ್ತಿಯು ಅಭಂಗ ಭಂಗಿಯಲ್ಲಿ ಇದೆ. ಇಲ್ಲಿಯ ಭೂವರಾಹಮೂರ್ತಿಯು ಬಹಳ ನೈಜತೆಯನ್ನು ಹೊಂದಿದೆ. ವರಾಹನು ಚತುರ್ಭುಜನಾಗಿದ್ದು ಬಲಗೈಯಲ್ಲಿ ಚಕ್ರವನ್ನು ಧರಿಸಿದ್ದಾನೆ. ಇದರ ಎಡಗೈಮೇಲೆ ಭೂದೇವಿಯು ವರಾಹನ ಕೋರೆಹಲ್ಲನ್ನು ಹಿಡಿದು ಮೂಗಿನ ಮೇಲೆ ವಾಲಿಕೊಂಡು ನಿಂತಿರುವ ಭಂಗಿ ಬಹಳ ಸೊಗಸಾಗಿದೆ. ವೀರ ಭಂಗಿಯಲ್ಲಿರುವ ವರಾಹನು ತನ್ನ ಎಡಗಾಲನ್ನು ಸುರುಳಿ ಸುತ್ತಿರುವ ಹಾವಿನ ಮೇಲೆ ಊರಿದ್ದಾನೆ. ಈ ಶಿಲ್ಪದ ಕೆಳಭಾಗದಲ್ಲಿ ಸಮುದ್ರವನ್ನು ಸೂಚಿಸುವ ನಾಗಗಳ ಸಮೂಹವನ್ನೇ ಕೆತ್ತಲಾಗಿದೆ. ಎಲ್ಲೋರದಲ್ಲಿ ಶೇಷಶಾಯಿಯ ಶಿಲ್ಪವು ಉಲ್ಲೇಖಾರ್ಹವಾಗಿದೆ. ಮಹಾವಿಷ್ಣುವು ಅನಂತನ ಮೇಲೆ ಒರಗಿ ವಿಶ್ರಾಂತಿ ಪಡೆಯುವಂತೆ ತೋರಿಸಲಾಗಿದೆ. ಇವನ ನಾಭಿಯಿಂದ ಕಮಲವು ಉದಿಸಿದಂತೆ ಕೆತ್ತಲಾಗಿದೆ. ಆದರೆ ಕಮಲದ ನಾಳವನ್ನು ಮಾತ್ರ ಕಾಣಬಹುದಾಗಿದ್ದು ಕಮಲವು ಭಗ್ನವಾಗಿದೆ. ಈ ಮಲಗಿರುವ ನಾರಾಯಣನ ಮುಂಭಾಗದಲ್ಲೂ ಸಹ ಐದು ಪುರುಷ ವಿಗ್ರಹಗಳನ್ನು ಕೆತ್ತಲಾಗಿದೆ. ಈ ಶಿಲ್ಪಗಳು ಪಂಚಾಯುಧ ಪುರುಷರನ್ನು ಸೂಚಿಸುತ್ತದೆ.

### ಜೈನ ಶಿಲ್ಪಕಲೆ

ಈ ಕಾಲದ ಜೈನ ಶಿಲ್ಪಗಳಲ್ಲಿ ಪ್ರಮುಖವಾದುದು ಎಲ್ಲೋರದ ಇಂದ್ರಸಭೆಯಲ್ಲಿರುವ ಶಿಲ್ಪಗಳು. ಈ ಗುಹೆಯ ಕೈಸಾಲೆಯಲ್ಲೇ, ಕುಳಿತಿರುವ

ಇಂದ್ರನ ಶಿಲ್ಪವಿದೆ. ಇಂದ್ರನು ದ್ವಿಭುಜನಾಗಿ ತನ್ನ ಬಲಗೈಯಲ್ಲಿ ಫಲವನ್ನೂ ಎಡಗೈಯಲ್ಲಿ ವಜ್ರಾಯುಧವನ್ನೂ ಹಿಡಿದಿದ್ದಾನೆ. ಇವನು ಕಲ್ಪವೃಕ್ಷದ ಕೆಳಗೆ ಆನೆಯ ಮೇಲೆ ಕುಳಿತಿದ್ದಾನೆ. ಇವನು ಕುಳಿತಿರುವ ಭಂಗಿ ಬಹಳ ಗಂಭೀರವಾಗಿದೆ. ಇಲ್ಲಿರುವ ಬಾಹುಬಲಿಯ ಶಿಲ್ಪವು ಬಹಳ ಆಕರ್ಷಕವಾಗಿದೆ. ಬಾಹುಬಲಿಯು ಪದ್ಮಪೀಠದ ಮೇಲೆ ಕಾಯೋತ್ಸರ್ಗ ಭಂಗಿಯಲ್ಲಿ ನಿಂತಿದ್ದಾನೆ. ಇವನನ್ನು ಮಾಧವೀಲತೆ ಆವರಿಸಿರುವುದನ್ನು ಕಾಣಬಹುದು. ಈ ಪಟ್ಟಿಕೆಯ ಮೇಲ್ಭಾಗದಲ್ಲೂ ದೇವತೆಗಳ ಸಮೂಹ ಬಾಹುಬಲಿಯನ್ನು ಸೇವಿಸುತ್ತಿರುವುದು ಕಂಡುಬರುತ್ತದೆ. ಎರಡು ಪಾರ್ಶ್ವಗಳಲ್ಲೂ ಸ್ತ್ರೀಮೂರ್ತಿಗಳನ್ನು ಕೆತ್ತಿದ್ದಾರೆ. ಇಲ್ಲಿಯ ಇನ್ನೊಂದು ಜೈನಗುಹೆಯಲ್ಲಿ ಪಾರ್ಶ್ವನಾಥನೂ ಸಹ ಕಾಯೋತ್ಸರ್ಗ ಭಂಗಿಯಲ್ಲಿದ್ದಾನೆ. ಇವನ ತಲೆಯ ಮೇಲೆ ಏಳು ಹೆಡೆಯ ಸರ್ಪ ಕೆತ್ತಲಾಗಿದೆ. ಒಬ್ಬ ಸೇವಕಿಯು ಛತ್ರವನ್ನು ಹಿಡಿದಿರುವುದು ಕಾಣಬಹುದು.

### ಬೌದ್ಧ ಶಿಲ್ಪಕಲೆ

ಎಲ್ಲೋರಾದ ೫ನೇ ಗುಹೆಯಾದ ಮಹಾನ್‌ವಾಡಾದಲ್ಲಿ ಉಪದೇಶ ಭಂಗಿಯಲ್ಲಿರುವ ಬುದ್ಧನ ಶಿಲ್ಪವಿದೆ. ಬುದ್ಧನು ಪದ್ಮಾಸನದಲ್ಲಿ ಕುಳಿತಂತೆ ಚಿತ್ರಿಸಲಾಗಿದೆ. " ಧರ್ಮಚಕ್ರ ಪ್ರವರ್ತನ ಮುದ್ರೆ" ಯನ್ನು ಪ್ರದರ್ಶಿಸುತ್ತಿದ್ದಾನೆ. ಕೂದಲಿನ ಗುಂಗುರು ಅರ್ಧನಿಮೀಲಿತವಾದ ಕಣ್ಣುಗಳು, ಶಾಂತತೆಯಿಂದ ಕೂಡಿದ ಮುಖಭಾವ ಬಹಳ ಅಕರ್ಷಕವಾಗಿದೆ. ಬುದ್ಧನ ಎರಡು ಪಾರ್ಶ್ವಗಳಲ್ಲೂ ಎರಡು ಪುರುಷ ವಿಗ್ರಹಗಳಿವೆ. ಮೇಲ್ಭಾಗದಲ್ಲಿ ಮಾಲಾಧರ ದೇವತೆಗಳನ್ನು ಮಾಲೆಗಳೊಂದಿಗೆ ಕೆತ್ತಲಾಗಿದೆ. ಒಟ್ಟಾರೆ ರಾಷ್ಟ್ರಕೂಟರ ಶಿಲ್ಪಗಳನ್ನು ಗಮನಿಸಿದಾಗ ಅದು ನಾಲ್ಕನೆಯ ಶತಮಾನದ ಗುಪ್ತರ ಶಿಲ್ಪಗಳಿಂದಲೂ, ೬–೭ ಶತಮಾನದ ಬಾದಾಮಿ ಚಲುಕ್ಯರ ಪ್ರಭಾವಿತವಾಗಿದೆಯೆಂದು ತೋರುತ್ತದೆ. ಇವರ ಶಿಲ್ಪಗಳ ವಸ್ತು, ಅದನ್ನು ಕೆತ್ತುತ್ತಿದ್ದ ವೈಖರಿ, ಇವುಗಳನ್ನು ಗಮನಿಸಿದರೆ ಇವರದು ಗುಪ್ತರ ಹಾಗೂ ಚಲುಕ್ಯರ ಶಿಲ್ಪಕಲೆಯ ಮುಂದುವರೆದ ಭಾಗ ಎನಿಸುತ್ತದೆ. ಪ್ರಾಯಶಃ ನೈಜತೆಯೊಂದಿಗೆ ಶಿಲ್ಪಗಳನ್ನು ಕೆತ್ತುವುದರಲ್ಲಿ ರಾಷ್ಟ್ರಕೂಟರೇ ಕೊನೆಯವರೆನ್ನಬಹುದು.

ಈ ಎಲ್ಲ ಪಂಥಗಳಿಗೂ ಸೇರಿದಂತೆ ಕೆಲವು ಸಾಮಾನ್ಯ ಶಿಲ್ಪಗಳನ್ನು ಉಲ್ಲೇಖಿಸಬಹುದು. ಅವುಗಳೆಂದರೆ ಕುಬ್ಜ, ಯಕ್ಷ ಮುಂತಾದ ಶಿಲ್ಪಗಳು. ಕೈಲಾಸ

ಗುಹಾಲಯದ ರಾವಣೇಶ್ವರನು ಕೈಲಾಸವನ್ನು ಹೊರುತ್ತಿರುವ ಶಿಲ್ಪದಲ್ಲಿ ಕೆಲವು ಆಕರ್ಷಕವಾದ ಕುಬ್ಜಶಿಲ್ಪಗಳನ್ನು ಕಾಣುತ್ತೇವೆ. ಅದೇರೀತಿ ಇಂದ್ರಸಭ ಜೈನ ಗುಹಾಲಯದ ಯಕ್ಷ ಶಿಲ್ಪಗಳು ಗಮನಾರ್ಹ. ಇಲ್ಲಿ ಉಲ್ಲೇಖಿಸಬೇಕಾದ ಯಕ್ಷಶಿಲ್ಪಗಳೆಂದರೆ ಗೋವಾದಲ್ಲಿರುವ ಬೇತಾಳ ದೇವಾಲಯದ್ದು (Some Jaina Sculptures of Rashtrakuta time in Goa, Dr. (Mrs.) Gritli V. Mittervallner, p328-345).

## ವೀರಗಲ್ಲು

ವೀರನ ನೆನಪಿನಲ್ಲಿ ಹಾಕಿಸಿದ ಕಲ್ಲು ವೀರಗಲ್ಲು. ವೀರಗಲ್ಲನ್ನು ಹಾಕಿಸುವ ಉದ್ದೇಶವೇನು? ಎಂಬುದು ತಿಳಿದಿದ್ದರೂ ಎಂದಿನಿಂದ ಹಾಕಿಸಲು ಪ್ರಾರಂಭಿಸಿದರೆಂದು ತಿಳಿದಿಲ್ಲ. ಅತ್ಯಂತ ಪ್ರಾಚೀನ ವೀರಗಲ್ಲು ಯಾವುದೆಂದೂ, ಅದು ಭಾರತದ ಯಾವ ಭಾಗದಲ್ಲಿ ಸಿಗುತ್ತದೆಯೆಂದೂ ತಿಳಿದಿಲ್ಲ. ವೀರಗಲ್ಲು ಮತ್ತು ಮಾಸ್ತಿಕಲ್ಲುಗಳನ್ನು ನೆಡಿಸುವುದು ಕರ್ನಾಟಕದ ವಿಶೇಷತೆ. ವೀರಗಲ್ಲನ್ನು ನೆಡಿಸುವುದರಿಂದ ಅದರ ಪ್ರಭಾವ ಇತರರ ಮೇಲಾಗುತ್ತದೆ. ಅದೇ ವೀರನಂತೆ ತಮ್ಮ ಪರಾಕ್ರಮವೂ ಶಾಶ್ವತವಾಗಲಿ ಎಂಬ ಭಾವನೆ ಪ್ರಚೋದಿತವಾಗುತ್ತದೆ.

ವೀರಗಲ್ಲುಗಳ ಬೆಳವಣಿಗೆ ಹಾಗೂ ಅವುಗಳಲ್ಲಿರುವ ವೈಶಿಷ್ಟ್ಯತೆಗಳನ್ನು ಗುರುತಿಸಲು ಪ್ರಯತ್ನಿಸಿದಾಗ ಹುಟ್ಟು ಅನಿರೀಕ್ಷಿತವಾದರೂ ಸಾವು ನಿರೀಕ್ಷಿತವೇ. ಪ್ರಕೃತಿ ನಿಯಮದಲ್ಲಿ ನಿರಾಕರಣೆಗೆ ಅವಕಾಶವಿಲ್ಲ. ನಮ್ಮೊಡನೆಯೇ ಇದ್ದ ವ್ಯಕ್ತಿ ಇಲ್ಲವಾದಾಗ ನಾವು ಅವನನ್ನು ಸಂಪೂರ್ಣವಾಗಿ ಮರೆಯಲು ಇಚ್ಛಿಸುವುದಿಲ್ಲ. ಅವನ ನೆನಪನ್ನು ಉಳಿಸಿಕೊಳ್ಳಲು ಕಲ್ಲು ನೆಡುವುದು, ಗೋರಿ ಕಟ್ಟುವುದು, ದಾನ ಮಾಡುವುದು ಮುಂತಾದವುಗಳನ್ನು ಮಾಡುತ್ತೇವೆ. ಇದು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿರುವ ಪದ್ಧತಿ. ಪಿರಮಿಡ್ಡುಗಳು, ಸಮಾಧಿ, ಗದ್ದುಗೆಗಳು ಇದಕ್ಕೆ ಉದಾಹರಣೆಗಳೆನ್ನಬಹುದು.

ವೀರಗಲ್ಲಿನ ವಿಚಾರಕ್ಕೆ ಬಂದರೆ ಕಲ್ಲು ನೆಟ್ಟ ಮಾತ್ರಕ್ಕೆ ವೀರನ ಬಗ್ಗೆ ತಿಳಿಯುವುದಿಲ್ಲ. ನಡೆದ ಘಟನೆಯನ್ನು ತಿಳಿಸಲು ಸಂದರ್ಭವನ್ನು ವಿವರಿಸಬೇಕಾಗುತ್ತದೆ. ಅದರ ಶ್ರೇಷ್ಠತೆಯನ್ನು ಎತ್ತಿಹಿಡಿಯಲು ಶಿಲ್ಪವನ್ನು ಕೆತ್ತುವ

ಪರಿಪಾಠ ಪ್ರಾರಂಭವಾಯಿತು. ನಂತರ ಬರಹಗಳೂ ಪ್ರಾರಂಭವಾದವು. ಹೀಗಾಗಿ ಶಿಲ್ಪವಿರುವ, ಶಿಲ್ಪ ಮತ್ತು ಬರಹವಿರುವ ವೀರಗಲ್ಲುಗಳು ಕಂಡುಬರುತ್ತವೆ. ಇಲ್ಲಿ ಗಂಗರು, ಚಲುಕ್ಯರು ಮತ್ತು ರಾಷ್ಟ್ರಕೂಟರ ವೀರಗಲ್ಲುಗಳನ್ನು ಮಾತ್ರ ಶಿಲ್ಪದ ಬೆಳವಣಿಗೆಯ ಹಿನ್ನಲೆಯಲ್ಲಿ ಅವಲೋಕಿಸಲಾಗಿದೆ.

ಭಾರತೀಯ ಮೂರ್ತಿಶಿಲ್ಪದಲ್ಲಿ ಕೂಡ ಕರ್ನಾಟಕದ ವೀರಗಲ್ಲುಗಳಿಗೆ ವಿಶೇಷ ಸ್ಥಾನವಿದೆ. ಕಾರನ ಸಣ್ಣ ಚೌಕಟ್ಟನೊಳಗೆ ಪ್ರಮುಖ ವಿಷಯವನ್ನು ಅಭಿವ್ಯಕ್ತಗೊಳಿಸಿರುವ ರೀತಿ. ಭಾರತದ ಬೇರೆ ಭಾಗಗಳಲ್ಲೂ ಈ ಸಂಪ್ರದಾಯವಿದ್ದರೂ ಕರ್ನಾಟಕದಲ್ಲಿರುವ ವೈವಿಧ್ಯತೆ, ಪರಿಪೂರ್ಣತೆ ಬೇರೆಡೆ ಕಂಡುಬರುವುದಿಲ್ಲ. ಘಟನೆ ನಡೆದ ಬಗೆ, ಅದರ ಪರಿಣಾಮ, ಮಡಿದ ವೀರನಿಗೆ ಸಿಗುವ ಫಲ ಇವಿಷ್ಟನ್ನೂ ಕಲ್ಲಿನಲ್ಲಿ ಸಮರ್ಥವಾಗಿ ಕೆತ್ತುವುದೂ ಒಂದು ಕಲೆಯಾಗಿದೆ. ಘಟನೆಗೆ ಜೀವತುಂಬುವಂತೆ ಮಾಡಲು ಶಿಲ್ಪಿಯ ಅಭಿವ್ಯಕ್ತಿ ಸಾಮರ್ಥ್ಯವನ್ನು ಗಮನದಲ್ಲಿಟ್ಟುಕೊಳ್ಳಬೇಕು.

ಈ ಸಂಪ್ರದಾಯದ ಪ್ರಾರಂಭದಲ್ಲಿ ಸಿಗುವ ವೀರಗಲ್ಲುಗಳಿಗೆ ನಿರ್ದಿಷ್ಟ ಆಕಾರವಿರಲಿಲ್ಲ. ಆಯ್ಕೆ ಮಾಡಿದ ಕಲ್ಲಿನ ಮೇಲೆ ಸಾಧ್ಯವಾದಂತೆ ಬಿಡಿಸಿರುತ್ತಿದ್ದರು. ಇದನ್ನು ಗಂಗ, ಬಾಣ, ನೊಳಂಬ, ಬಾದಾಮಿ ಚಲುಕ್ಯ, ರಾಷ್ಟ್ರಕೂಟರ ವೀರಗಲ್ಲುಗಳಲ್ಲಿ ಕಾಣಬಹುದು. ವೀರಗಲ್ಲುಗಳಲ್ಲಿ ಕೂಡ ಎರಡು ಮೂರು ಬಗೆಯನ್ನು ಕಾಣಬಹುದು. ವೀರನ ಶಿಲ್ಪವನ್ನು ದೊಡ್ಡದಾಗಿ ಬಿಡಿಸಿರುವುದು, ವೀರಗಲ್ಲಿನ ಗಾತ್ರ ಇವುಗಳನ್ನು ಇಲ್ಲಿ ಗಮನಿಸಬಹುದಾಗಿದೆ. ಹಂತಗಳಲ್ಲಿರುವ ವೀರಗಲ್ಲುಗಳು ರಾಷ್ಟ್ರಕೂಟರ ಕಾಲದಲ್ಲಿ ಹೆಚ್ಚಾಗಿ ಕಂಡುಬಂದಿದ್ದು, ಪರಿಪೂರ್ಣತೆಯ ಹಂತವನ್ನು ಮುಟ್ಟಿತೆಂದು ನಿಸ್ಸಂದೇಹವಾಗಿ ಹೇಳಬಹುದು. ದೊಡ್ಡ ಉಳ್ಳರ್ತಿಯ ಮೂರು ವೀರಗಲ್ಲುಗಳಲ್ಲಿ ಎರಡನ್ನು ಬೆಳವಣಿಗೆಯ ದೃಷ್ಟಿಯಿಂದ ಗಮನಿಸಬಹುದು. ಮೂರನೆಯ ವೀರಗಲ್ಲಿನಲ್ಲಿ ಬೆಳವಣಿಗೆಯನ್ನು ಗುರುತಿಸಲು ಸಾಧ್ಯವಾಗುತ್ತದೆ. ಈ ವೀರಗಲ್ಲಿನ ಮೇಲೆ ರಾಷ್ಟ್ರಕೂಟರ ಶಿಲ್ಪದ ಪ್ರಭಾವವಾಗಿರುವುದನ್ನು ಕಾಣಬಹುದು. ಮೂರನೆಯ ಹಂತದಲ್ಲಿ ವೀರಸ್ವರ್ಗದ ಕಲ್ಪನೆ ಸ್ಪಷ್ಟವಾಗಿದ್ದರೂ ವಿವರಗಳು ಅಸ್ತವ್ಯಸ್ತವಾಗಿವೆ. ಇದಕ್ಕೆ ಅಭಿವ್ಯಕ್ತಿ ದೋಷವೂ ಕಾರಣವಾಗಿರಬಹುದು. ಆದರೆ ವಿವರಗಳು ಸ್ಪಷ್ಟವಾಗಿವೆ.

ಬಾದಾಮಿ ಚಲುಕ್ಯರ ವೀರಗಲ್ಲುಗಳು ಸಿಕ್ಕಿರುವುದೇ ಕಡಿಮೆ. ಸಾಮಾನ್ಯವಾಗಿ ಎರಡು ಅಥವಾ ಮೂರು ಹಂತಗಳಲ್ಲಿರುತ್ತವೆ. ವೀರನು ಅಪ್ಸರೆಯರ ಭುಜದ ಮೇಲೆ ಕೈ ಹಾಕಿಕೊಂಡಿರುವಂತೆ ಬಿಡಿಸಿರುವುದನ್ನು ಕಾಣಬಹುದು. ಬಾದಾಮಿಯ ಮ್ಯೂಸಿಯಂನಲ್ಲಿರುವ ವೀರಗಲ್ಲಿನ ಮೇಲ್ಭಾಗದಲ್ಲಿ ವಿಮಾನವನ್ನು ಬಿಡಿಸಿರುವುದು ಗಮನಾರ್ಹ. ಆದರೂ ಬಾದಾಮಿ ಚಲುಕ್ಯರ ಕಾಲದ ವೀರಗಲ್ಲುಗಳ ಸ್ವರೂಪ, ಬೆಳವಣಿಗೆಗಳನ್ನು ಗುರುತಿಸಲು ಇರುವ ಆಧಾರ ಏನೇನೂ ಸಾಲದು.

ರಾಷ್ಟ್ರಕೂಟರ ಕಾಲದ ವೀರಗಲ್ಲುಗಳಲ್ಲಿ ಬೆಳವಣಿಗೆಯನ್ನು ಸ್ಪಷ್ಟವಾಗಿ ಗುರುತಿಸಬಹುದು. ಆಕಾರ, ಶಿಲ್ಪ, ಚಲನೆ ಮುಂತಾದವುಗಳನ್ನು ಸುಲಭವಾಗಿ ಗುರುತಿಸಬಹುದು. ಇವರ ವೀರಗಲ್ಲು ಶಿಲ್ಪದ ಕ್ರಿಯಾಶೀಲತೆಯ ಕಡೆಗೆ ಡಾ|| ಆರ್. ಶೇಷಶಾಸ್ತ್ರಿಯವರು ವಿಶೇಷವಾಗಿ ಗಮನ ಸೆಳೆಯುತ್ತಾರೆ (ಕರ್ನಾಟಕದ ವೀರಗಲ್ಲುಗಳು). ವೀರಗಲ್ಲಿನ ಮೇಲು ಭಾಗದಲ್ಲಿನ ಆಕಾರವನ್ನು ಮೂಡಿಸುವ ಬಾದಾಮಿ ಚಲುಕ್ಯರ ಪ್ರಯತ್ನ ಮುಂದುವರೆದು ಯಶಸ್ವಿಯಾಗಿರುವುದು ರಾಷ್ಟ್ರಕೂಟರ ಕಾಲದಲ್ಲಿ ಕಂಡುಬರುತ್ತದೆ.

ರೋಣದ ವೀರಗಲ್ಲಿನಲ್ಲಿ ದೇವಾಲಯದ ವಿವಿಧ ಭಾಗಗಳನ್ನು ಸುಂದರವಾಗಿ ಕಡೆದಿದ್ದಾರೆ. ಮುಖ್ಯವಾಗಿ ಅಧಿಷ್ಠಾನ, ಬೋಧಿಗೆ, ಛಾವಣಿ, ಸಜ್ಜ, ವ್ಯಾಳಿ, ಶಿಖರ, ವಿಗ್ರಹಗಳು ಇತ್ಯಾದಿಗಳನ್ನು ಬಿಡಿಸುವುದರಲ್ಲಿ ಯಶಸ್ವಿಯಾಗಿದ್ದಾರೆ. ಒಳಗಿನ ಮತ್ತು ಹೊರಗಿನ ಕಂಬಗಳಲ್ಲಿ ಕೂಡ ವ್ಯತ್ಯಾಸವನ್ನು ಸುಲಭವಾಗಿ ಗುರುತಿಸಬಹುದು. ಇದೇ ವೀರಗಲ್ಲಿನಲ್ಲಿ ಸ್ವರ್ಗಲೋಕದಲ್ಲಿರುವ ವೀರ ಪಂಪಯ್ಯನ ಶಿಲ್ಪವಿದೆ. ಈತನ ಬಲಭಾಗಕ್ಕೆ ನಿಂತಿರುವ ಬ್ರಹ್ಮನ ಮೂರು ಮುಖಗಳು ಚಿಕ್ಕದಾಗಿದ್ದರೂ ಸುಂದರವಾಗಿದೆ. ಈ ಶಿಲ್ಪವು ಬಳ್ಳಿಗಾವೆಯ ಮತ್ತು ಎಲಿಫೆಂಟಾದ ತ್ರಿಮೂರ್ತಿ ಶಿಲ್ಪದ ನೆನಪನ್ನು ತರುವಲ್ಲಿ ಯಶಸ್ವಿಯಾಗಿದೆ. ಇವುಗಳನ್ನು ಕಂಡಾಗ ಬೃಹತ್ ಕಟ್ಟಡವನ್ನು ಕಟ್ಟುವ ಮೊದಲು ಅದೇ ರೀತಿಯ ಪುಟ್ಟ ಮಾದರಿಯನ್ನು ತಯಾರಿಸಿ ನೋಡುವ ಆಧುನಿಕ ವಿಧಾನದ ನೆನಪು ಸಹಜವಾಗಿಯೇ ಮೂಡುತ್ತದೆ.

ಬೆಟಗೇರಿಯಲ್ಲಿ ಒಂದೇ ಕಡೆ ಹತ್ತಾರು ವೀರಗಲ್ಲುಗಳಿವೆ. ಇವುಗಳ ಶಿಲ್ಪವನ್ನು ಗಮನಿಸಿದಾಗ ಶಿಲ್ಪವನ್ನು ವೈವಿಧ್ಯತೆಗಳ ಜೊತೆಗೆ ಪುಟ್ಟ ಪುಟ್ಟ ದೇವಾಲಯಗಳನ್ನು ನೋಡಿದಂತಾಗುತ್ತದೆ. ರಾಷ್ಟ್ರಕೂಟರು ತಮ್ಮ ವಿಶಿಷ್ಟ ಶೈಲಿಯಲ್ಲಿ ಶಿಲ್ಪವಿರಲಿ,

ದೇವಾಲಯವಿರಲಿ ಗಾತ್ರಕ್ಕೆ ಪ್ರಾಧಾನ್ಯತೆ ಕೊಟ್ಟಿರುವುದು ಕಂಡುಬರುತ್ತದೆ. ಇದಕ್ಕೆ ವೀರಗಲ್ಲುಗಳೂ ಹೊರತಾಗಿಲ್ಲ. ಇವರ ಕೆಲವು ವೀರಗಲ್ಲುಗಳು ಬೃಹತ್ತಾಗಿದ್ದು ದಿಟ್ಟ ನಿಲುವಿನಿಂದ ಕೂಡಿವೆ. ಶೂರನಿಗೆ ಪ್ರಾಧಾನ್ಯತೆ, ಪ್ರಾಶಸ್ತ್ಯವನ್ನು ನೀಡಿರುವ ಇವರು ತಮ್ಮ ರಾಜಚಿಹ್ನೆಯಾದ 'ನೇಗಿಲನ್ನು' ಅನೇಕ ವೀರಗಲ್ಲುಗಳ ತಳಭಾಗದಲ್ಲಿ ಕೆತ್ತಿರುವುದು ಕಂಡುಬರುತ್ತದೆ. ಶಿಲ್ಪಗಳಲ್ಲಿ ಗಾಂಭೀರ್ಯವಿದ್ದರೂ ಕುಸುರಿ ಕೆಲಸ ಕಡಿಮೆಯೆಂದೇ ಹೇಳಬಹುದು. ಆದರೂ ರೋಣದ ವೀರಗಲ್ಲು ಶಿಲ್ಪದಲ್ಲಿ ಸ್ತೂಪದ ಮೇಲ್ಭಾಗದಲ್ಲಿರುವ ಬಳ್ಳಿಯ ಅಲಂಕಾರ ಅಜಂತದ ಕಮಾನನ್ನು ಹೋಲುತ್ತದೆ ಎಂದಿದ್ದಾರೆ. ಆದರೆ ಅದು ಸ್ತೂಪದ ಭಾಗವಾಗಿರುವ ಮಹಾನಾಸಿ. ವೀರಗಲ್ಲುಗಳ ಸಂಖ್ಯೆ ಹೆಚ್ಚುತ್ತಾ ಹೋದಂತೆ, ಶೈಲಿಯೂ ಬದಲಾಗಿದೆ. ಈ ಬೆಳವಣಿಗೆಯನ್ನು ಸ್ಪಷ್ಟವಾಗಿ ಗುರುತಿಸಬಹುದು. ಗಂಗರ ಆರಂಭದ ವೀರಗಲ್ಲುಗಳು, ಬಾದಾಮಿ ಚಲುಕ್ಯರ ಕಾಲದ ವೀರಗಲ್ಲುಗಳು ಮತ್ತು ರಾಷ್ಟ್ರಕೂಟರ ವೀರಗಲ್ಲುಗಳನ್ನು ನೋಡಿದಾಗ ಇದರ ಅರಿವಾಗುತ್ತದೆ. ರಾಷ್ಟ್ರಕೂಟರ ಕಾಲದಲ್ಲಿ ಬೆಳವಣಿಗೆಯ ಗತಿ ತೀವ್ರವಾಗಿ ಹೊಸ ಕಲ್ಪನೆಗಳತ್ತ ಸಾಗಿತು ಎನ್ನಬಹುದು. ತನ್ಮೂಲಕ ರಾಷ್ಟ್ರಕೂಟರು ವೀರಗಲ್ಲುಗಳಿಗೆ ನಿರ್ಧಿಷ್ಟ ರೂಪವೊಂದನ್ನು ನೀಡುವಲ್ಲಿ ಯಶಸ್ವಿಯಾಗಿದ್ದಾರೆ. ನೈಜತೆಗೆ ಪ್ರಾಮುಖ್ಯತೆ, ನೇರ, ಸ್ಪಷ್ಟ ವಿವರಗಳನ್ನು ಕಾಣಬಹುದು. ಕಲಾವಿದನ ಕಲ್ಪನೆಗೆ ಕಾಲ, ದೇಶ, ಭಾಷೆಗಳ ಬಂಧನವಿಲ್ಲ. ಆತನ ಮನಸ್ಸು ಸಂಸ್ಕೃತಿ, ಸುತ್ತಲಿನ ಪರಿಸರ, ಅರಸರ ಅಭಿರುಚಿ, ಪ್ರೋತ್ಸಾಹ ಇವೆಲ್ಲದರ ಸಮ್ಮಿಲನದಿಂದ ಕಲೆಯ ಬೆಳವಣಿಗೆ ಸಾಧ್ಯಾವಾಗುತ್ತದೆ. ಇದು ರಾಷ್ಟ್ರಕೂಟರ ಕಾಲದಲ್ಲಿ ಸಿದ್ಧಿಸಿತ್ತು.

ರಾಷ್ಟ್ರಕೂಟರು ಬಾದಾಮಿಯ ಚಲುಕ್ಯರನ್ನು ಅನುಸರಿಸಿದ್ದೇ ಹೆಚ್ಚಾದರೂ, ಗಂಗರ ಪ್ರಭಾವಕ್ಕೂ ಒಳಗಾಗಿದ್ದಾರೆ. ಹಳೆಯದನ್ನು ಬಳಸಿ, ಬೆಳಸಿ ವೀರಗಲ್ಲಿಗೆ ತಮ್ಮದೆ ಆದ ಮಹತ್ವದ ಕೊಡುಗೆಗಳನ್ನು ನೀಡಿದ್ದಾರೆ. ಯುದ್ಧಗಳಲ್ಲಿ ಚಲನೆ ಮತ್ತು ಕ್ರಿಯೆಗಳಿಗೆ ಪ್ರಾಧನ್ಯತೆ ನೀಡಿರುವುದು. ಸ್ವರ್ಗಲೋಕಕ್ಕೆ ಹೋಗುತ್ತಿರುವ ಶಿಲ್ಪದಲ್ಲಿ ಆಕಾಶದ ಚಿತ್ರಣ (ರೋಣ, ಬೆಟಗೇರಿ) ಮತ್ತು ಸಾಂಕೇತಿಕವಾಗಿ ಮೋಡಗಳನ್ನು ಬಿಡಿಸಿರುವುದು ರಾಷ್ಟ್ರಕೂಟರ ವೀರಗಲ್ಲುಗಳ ವಿಶೇಷವಾಗಿದೆ.

ವೀರಗಲ್ಲು ನೆಡುವುದರ ಉದ್ದೇಶ ಶೂರನಿಗೆ, ಶೌರ್ಯಕ್ಕೆ ಪ್ರೋತ್ಸಾಹ ಕೊಡುವುದಾಗಿದೆ. ಇದು ಇತರರನ್ನು ಪರೋಕ್ಷವಾಗಿ ಆಕರ್ಷಿಸುವುದಲ್ಲದೆ, ಧೈರ್ಯ,

ಆತ್ಮವಿಶ್ವಾಸಗಳನ್ನು ಹೆಚ್ಚಿಸುತ್ತದೆ. ಅರಸರೂ ಕೂಡ ಜನಸಾಮಾನ್ಯರನ್ನು ಮರೆಯುತ್ತಿರಲಿಲ್ಲ. ಪ್ರೋತ್ಸಾಹ ಕೊಡುತ್ತಿದ್ದರೆಂಬ ಅಂಶ ಇತರರಿಗೆ ಹುರಿದುಂಬಿಸಿದಂತೆ ಆಗುತ್ತಿತ್ತು. ಇದರಿಂದ ಸ್ಫೂರ್ತಿಗೊಂಡು ವೀರ ಪರಂಪರೆಯೊಂದು ತಾನಾಗಿಯೇ ಸಿದ್ಧವಾಗುತ್ತಿತ್ತು ಎಂದರೂ ಸರಿಯಾಗುತ್ತದೆ. ಇನ್ನೂ ಹೆಚ್ಚು ಕೀರ್ತಿಗಳಿಸಬೇಕು, ದೊಡ್ಡ ವೀರನಾಗಬೇಕೆಂಬ ಮಾನವ ಸಹಜ ಆಸೆ ಉತ್ಸಾಹಿಗಳನ್ನು ಪ್ರೇರೇಪಿಸುತ್ತದೆ. ಇಂತಹ ಧೈರ್ಯ, ಸ್ಥೈರ್ಯ, ಕೆಚ್ಚದೆಗಳಿಂದ ತುಂಬಿದ ಬಲಿಷ್ಟ ಸೈನ್ಯದೆದರು ನಿಲ್ಲುವುದು ಶತ್ರುಗಳಿಗೆ ಸುಲಭ ಸಾಧ್ಯವಲ್ಲ. ಆದ್ದರಿಂದ ಹಿಂದಿನ ಅರಸರು ತಮ್ಮ ಸೈನ್ಯವನ್ನು ಅಜೇಯವಾಗಿಟ್ಟುಕೊಳ್ಳಲು, ಬಲಿಷ್ಠವಾಗಿಟ್ಟುಕೊಳ್ಳಲು ಈ ಪದ್ಧತಿಯನ್ನು ಬೆಳಸಿಕೊಂಡರು ಎನ್ನಬಹುದು. ದಂತಿದುರ್ಗನ ಸಾಮನಗಢ ಶಾಸನದಲ್ಲಿ (IA., vol Xi, p 110), 'ಕರ್ಣಾಟಕಂ ಬಲಮಚಿನ್ತ್ಯಮಜೇಯಂ' ಎನ್ನುವ ಉಲ್ಲೇಖವಿದೆ. ಕರ್ನಾಟಕ ಸೈನ್ಯದ ಬಲವು ಚಿಂತನೆಗೆ ನಿಲುಕದ್ದು ಮತ್ತು ಸೈನ್ಯವನ್ನು ಯಾರಿಂದಲೂ ಸೋಲಿಸಲು ಸಾಧ್ಯವಿಲ್ಲ ಎನ್ನುವ ಮಾತು ಕರ್ನಾಟಕದ ಸೈನ್ಯದಲ್ಲಿದ್ದ ವೀರರ ಶಕ್ತಿ ಸಾಮರ್ಥ್ಯಗಳ ಪರಿಚಯವನ್ನು ಸೂಚ್ಯವಾಗಿ ಮಾಡಿಕೊಡುತ್ತದೆ. ಕಾಲಕಳೆದಂತೆ ವೀರಗಲ್ಲಿನ ಅರ್ಥವೈಶಾಲ್ಯ ಹೆಚ್ಚಾಗಿದ್ದರಿಂದ ಸಾಮಾನ್ಯ ಜನರೂ ಹಾಕಿಸುವ ರೂಢಿ ಬೆಳೆದು ಬಂದಿತು.

## ಮಾಸ್ತಿಕಲ್ಲು

ರಾಷ್ಟ್ರಕೂಟರ ಕಾಲದಲ್ಲಿ ಸಿಗುವ ಮಾಸ್ತಿಕಲ್ಲುಗಳು ಬೆರಳೆಣಿಕೆಯಷ್ಟು ಮಾತ್ರ. ಅದನ್ನು ಬಿಟ್ಟರೆ ಮಾಸ್ತಿಕಲ್ಲುಗಳು ಇಲ್ಲವೆಂದೇ ಹೇಳಬೇಕು. ವೀರಗಲ್ಲುಗಳು ಮಾತ್ರ ನೂರಾರು ಸಿಗುತ್ತವೆ. ವೀರಗಲ್ಲುಗಳ ಸಂಖ್ಯೆಯನ್ನು ಗಮನಿಸಿದರೆ ಸಿಕ್ಕಿರುವ ಮಾಸ್ತಿಕಲ್ಲುಗಳು ಒಂದು ರೀತಿಯಲ್ಲಿ ನಿರಾಶೆಯನ್ನುಂಟು ಮಾಡುತ್ತವೆ. ನಿಜವಾಗಿಯೂ ಆಶ್ಚರ್ಯಕರವಾಗಿ ವಿಚಾರವೆನ್ನಬಹುದು. ಏಕೆಂದರೆ ಆ ಕಾಲಕ್ಕೆ ಮಹಾಸತಿಯಾಗುವುದು ಕೂಡ ಭಾಗ್ಯದಾಯಕವೆಂದು ಭಾವಿಸಿದ್ದರು. ಆದರೆ ರಾಷ್ಟ್ರಕೂಟರ ಕಾಲದಲ್ಲಿ ಗಮನಿಸಿದಾಗ ಸಹಗಮನಕ್ಕೆ ಹೆಚ್ಚಿನ ಪ್ರೋತ್ಸಾಹವಿರಲಿಲ್ಲವೆಂದು ಭಾವಿಸಬಹುದು. ಇದಕ್ಕೆ ಬದಲಾಗಿ ವೀರನ ಪತ್ನಿಯರೇ ಕಲ್ಲನ್ನು ಹಾಕಿಸಿ ಶಾಸನಗಳನ್ನು ಹಾಕಿಸಿರುವುದನ್ನು ಕಾಣಬಹುದು.

ಕ್ರಿ.ಶ. ೯೩೫ರ ಸೊರಟೂರು ಶಾಸನದಲ್ಲಿ (EC., vol III, no. HL-23) ರಟ್ಟಿಪಳ್ಳಿಯ ಪೊಲಗನು ಕುಂದಗಾವುಂಡನ ಮುಂದೆ ನಿಂತು ಹೋರಾಡಿ ಸತ್ತಾಗ ಆತನ ತಾಯಿ ಪಿರಿಯಕ್ಕಳು ಕಲ್ಲನ್ನು ನೆಡಿಸಿದ ವಿಚಾರ ತಿಳಿದುಬರುತ್ತದೆ.

ಕ್ರಿ.ಶ. ೮೩೭ರ ಕೆಸರಭಾವಿ ಶಾಸನವು (SII., vol XI, Pt. I, No.7) ಅಮೋಘವರ್ಷನದಾಗಿದೆ. ಅಮೋಘವರ್ಷನ ಮಗಳು ಮತ್ತು ಎಱೆಗಂಗನ ಪ್ರೀತಿಯ ಮಡದಿಯಾಗಿದ್ದ ರೇವಕ್ಕಿ (ರೇವಕನಿರ್ಮಡಿ) ಯು ಎಡದೊಱೆ [ತುಬ್ಬಿನಾಳ್ದು] ಯನ್ನು ಆಳುತ್ತಿದ್ದಳೆಂಬ ಉಲ್ಲೇಖವಿದೆ. ನಂತರ ಕೆಲವು ವಿವರಗಳು ಹೋಗಿದ್ದು ಸತಿಯನ್ನು ನಿಲಿಸೆಂದು ದೋಸಿಯು ಹೇಳಿದಾಗ, ಕೋಟಗಾಮುಂಡ ಮತ್ತು ಮಾದಿಗಾವುಂಡನ ಸಹಿತ ಇರ್ಬಲ್ಲು ಮಾದರನು, ಮಾದರಸದೇವನು ಬಂದು ಸತಿಯನ್ನಿರಿಸಿದನೆಂಬ ಉಲ್ಲೇಖವಿದೆ.

ಕ್ರಿ.ಶ. ೯೩೩ರ ಕವಚೇರಿ ಶಾಸನವು ನಾಲ್ಕನೆಯ ಗೋವಿಂದನದಾಗಿದ್ದು (SII., vol XI, Pt. I, No.35) ಕೊವುಜಗೆಱೆಯ ಗಾವುಂಡ ಬಳ್ಳಜ್ಜನು ತಾನು ಮಾಡಿಸಿದ ದೇಗುಲಕ್ಕೆ ಭೂದಾನ ಮಾಡಿದನು. ಹಲವಾರು ದೇಗುಲಗಳಲ್ಲದೆ ಮುತ್ತಮ್ಮನ ಕಲ್ಲನ್ನು ತನ್ನ ಮಕ್ಕಳಿಬ್ಬರ ಕಲ್ಲು ಮತ್ತು ತನಗೆ ಗವಿಗಲ್ಲು ಮಾಡಿಸಿದನೆಂಬ ಉಲ್ಲೇಖವಿದೆ. ಮುತ್ತಮ್ಮನ ಕಲ್ಲು ಬಹುಶಃ ಮಾಸ್ತ್ಯಮ್ಮನ ಕಲ್ಲಾಗಿರಬಹುದು.

ಕ್ರಿ.ಶ.೯೨೭ ರಲ್ಲಿ ಬೆನ್ನೂರಿನ ಶಾಸನವು (EC., vol VIII, S6 457) ಕಕ್ಕಲದೇವನ ಆಳ್ವಿಕೆಯಲ್ಲಿ ಬಿದಿಯಣ್ಣನೆಂಬುವನು ಸತ್ತಾಗ ಅವನ ಪತ್ನಿ ಜಾಕಬ್ಬೆಯು ಸಹಗಮನ ಮಾಡಿದಳೆಂದು ತಿಳಿದುಬರುತ್ತದೆ. (ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ: ಡಾ|| ಚೆನ್ನಕ್ಕ ಎಲಿಗಾರ, ಪು. ೨೩೭) ಸುಮಾರು ೯ನೆಯ ಶತಮಾನದ ಶಾಸನದಲ್ಲಿ ಕಲಾಯಿಯು ತನ್ನ ಸಹಗಮನ ಮಾಡಿದ್ದರ (ಧಾರವಾಡ ಜಿಲ್ಲಾ ಶಾಸನ ಸೂಚಿ, ಪು. ೨೭) ಎರಡು ಶಾಸನಗಳಿವೆ. ಇದರಲ್ಲಿ ಒಂದು ಭೂದಾನ, ಇನ್ನೊಂದು ಮರಣದ ಬಗ್ಗೆ ಹೇಳುವುದರಿಂದ, ಶಿಲ್ಪದ ದೃಷ್ಟಿಯಿಂದ ಇವು ಮಾಸ್ತಿ ಕಲ್ಲುಗಳು. ಕ್ರಿ.ಶ. ೯೦೮-೦೯ ರ ಶಾಸನವು ಬಳ್ಳಕ್ಕನು ಮಾಸ್ತಿಯಾದುದನ್ನು ಹೇಳುವಂತೆ ಭಾಸವಾಗುತ್ತದೆ. (SII., vol IX, Pt. I, p 56) ಒಟ್ಟಾರೆಯಾಗಿ ಹೇಳುವುದಾದರೆ ರಾಷ್ಟ್ರಕೂಟರ ಕಾಲದಲ್ಲಿ ೩-೪ ಮಾಸ್ತಿ ಕಲ್ಲುಗಳಿಗಿಂತ ಹೆಚ್ಚಿಗೆ ಸಿಗುವುದಿಲ್ಲ.

## ಗೋಸಾಸ

ಗೋಸಾಸವು ಮಹಾದಾನಗಳಲ್ಲಿ ಒಂದಾಗಿದೆ. ಹೆಸರೇ ಸೂಚಿಸುವಂತೆ ಗೋವುಗಳಿಗೆ ಸಂಬಂಧಿಸಿದ್ದು. ಸಾಮಾನ್ಯ ಗೋದಾನಗಳಿಗಿಂತ ಗೋಸಾಸದಾನವು ವಿಶೇಷವಾಗಿದೆ. ಗೋಸಾಸ ದಾನಗಳನ್ನು ನೀಡುವುದಷ್ಟೇ ಅಲ್ಲದೇ ಇದರ ನೆನಪಿಗಾಗಿ ಕಲ್ಲು ನೆಡುವ ಪದ್ಧತಿಯಿರುವುದರಿಂದ ಇದು ವಿಶೇಷವಾಗಿ ಕಂಡುಬರುತ್ತದೆ. ರಾಷ್ಟ್ರಕೂಟರ ಕಾಲದಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಗೋಸಾಸ ಶಿಲ್ಪಗಳು ಕಂಡುಬರುತ್ತವೆ. ಬಾದಾಮಿ ಚಾಲುಕ್ಯರ ಅಂತ್ಯದ ವೇಳೆಗೆ ಬೆರಳೆಣಿಕೆಯಷ್ಟು ಕಂಡು ಬಂದ ಇವು ಮತ್ತೆ ಕಲ್ಯಾಣಿ ಚಾಲುಕ್ಯರ ಕಾಲಕ್ಕೆ ಬೆರಳೆಣಿಕೆಯಷ್ಟಾಗಿ ಕೊನೆಗೆ ನಿಂತೇ ಹೋಗುತ್ತವೆ. ಗೋಸಾಸವನ್ನು ದುಬಾರಿಯಾದ ದಾನವೆಂದು ಹೇಳುವ ವಿದ್ವಾಂಸರೂ ಇದ್ದಾರೆ. ಷೋಡಶ ದಾನಗಳಲ್ಲಿ ಗೋಸಾಸವೂ ಒಂದು. ಶ್ರೀ ಪಿ.ವಿ.ಕಾಣೆಯವರು ತಮ್ಮ ಗ್ರಂಥದಲ್ಲಿ (History of Dharmashaastra) ಇದರ ಬಗ್ಗೆ ವಿವರಣೆ ನೀಡಿದ್ದಾರೆ.

ಗೋಸಹಸ್ರ ದಾನ ಪ್ರಕ್ರಿಯೆಯು ದಾನಿಯು ಹಾಲು ಸೇವಿಸುವುದರಿಂದ ಪ್ರಾರಂಭವಾಗಿ ದಾನಕ್ರಿಯೆಗಳೆಲ್ಲ ಮುಗಿದ ನಂತರ ಪುನಃ ಹಾಲು ಸೇವಿಸುವುದರಿಂದಲೆ ಮುಕ್ತಾಯವಾಗುತ್ತದೆ. ಪಿ.ವಿ.ಕಾಣೆಯವರು ಗೋಸಾಸದ ದಾನದ ವಿವರಣೆಯನ್ನು ಹೀಗೆ ಹೇಳಿದ್ದಾರೆ. "ಒಂದೇ ಒಂದು ಕರಿಯ ಚುಕ್ಕೆಯೂ ಇಲ್ಲದಂತಹ ಒಂದು ಸಾವಿರ ಹಸುಗಳನ್ನು ಒಂದೆಡೆ ಸೇರಿಸುವುದು. ಒಂಬೈನೂರ ತೊಂಬತ್ತೊಂಬತ್ತು ಗೋವುಗಳನ್ನು ಗುಂಡಗೆ ನಿಲ್ಲಿಸಿ, ಮಧ್ಯೆ ಒಂದು ಚಿನ್ನದಲ್ಲಿ ಮಾಡಿದ ಗೋವನ್ನು ನಿಲ್ಲಿಸಿ ಅದನ್ನು ದಾನ ಮಾಡುವುದು. ಈ ದಾನವನ್ನು ಬ್ರಾಹ್ಮಣರೇ ನೀಡಬೇಕೆಂದಾಗಲೀ, ಸ್ವೀಕರಿಸಬೇಕೆಂದಾಗಲೀ ನಿಯಮವೇನಿಲ್ಲ."

ಶಾಸನಗಳಲ್ಲಿ ಸಿಗುವ ಮಾಹಿತಿಯನ್ನು ಗಮನಿಸಿದಾಗ ಇದು ಅರಿವಿಗೆ ಬರುತ್ತದೆ. "ಗೋಸಾಸಮಿಱ್ದು" ಎನ್ನುವ ಪದಪ್ರಯೋಗವೂ ಇದೆ. ಇಂತಹ ಸಂದರ್ಭದಲ್ಲಿ ಗೋಸಾಸದ ಅರ್ಥ ಸ್ಪಷ್ಟವಾಗುವುದಿಲ್ಲ. ಕೆಲವರನ್ನು ಗೋಸಾಸಿ ಎಂದು ಕರೆದಿರುವ ಉಲ್ಲೇಖವೂ ಇದೆ. ಶೀಲಮಹಾದೇವಿಯ ಪಟ್ಟದಕಲ್ಲು ಶಾಸನದಲ್ಲಿ (IA., Vol XI, P 124, 778-779 AD) ಲೋಕಮಹಾದೇವಿಯರ

ದೇಗುಲದ ಸೂಳೆ ಗೋಯಿನ್ದಪೊಡ್ಡಿಯ ಮಗಳು ಬಾಡಿ(ಳಿ)ಪೊಡ್ಡಿಯೆನ್ನುವವಳು ಉತ್ತಮ ಗೋಸಾಸವಿಟ್ಟೊಳ್, ಭೂದಾನ ಮತ್ತು ಉದಯಮುಖಿ ದಾನವನ್ನು ಕೊಟ್ಟಳೆಂದು ಉಲ್ಲೇಖಿಸಿದೆ. ಮೂರನೆಯ ಗೋವಿಂದನ ಬೆಳ್ವೊಡ್ ಶಾಸನದಲ್ಲಿ (SII., vol I, Pt. I, No. 6) ಪ್ರಭೂತವರ್ಷನ ಜಗತ್ತುಂಗನ ಆಳ್ವಿಕೆಯಲ್ಲಿ ಬೆಳ್ವೊಡೆ ವೆಸೆಕ ಏಚಮ್ಮನೂ ಏರೆವಾಸನೂ ಸೇರಿ ಗೋಸಹಸ್ರವನ್ನು ಕೊಟ್ಟಿದ್ದನ್ನು ಉಲ್ಲೇಖಿಸಿದೆ. ಒಂದನೆಯ ಅಮೋಘವರ್ಷನ ಚಿಂಚಳಿ ಶಾಸನದಲ್ಲಿ (SII., vol XI, Pt. I, No. 15, 871 AD) ಚಿಂಚಲದ ಐಯ್ವತ್ತು ಮಹಾಜನರ ಕಾಲ್ತೊಳೆದು ಗೋಸಾಸವನ್ನು ನೀಡಿದ್ದನ್ನು ಉಲ್ಲೇಖಿಸಿದೆ. ಅಮೋಘವರ್ಷನ ದೇವಗಿರಿ ಶಾಸನದಲ್ಲಿ (SII., vol XVIII, No. 14, C. 9th Century) ಅರಸಿ ಗೋಯಿನ್ದಬ್ಬೆಯು ಊರನ್ನು ಆಳುತ್ತಿರುವಾಗ, ತಿವುಟಿರಾ ಮಾರಮ್ಮನೆಂಬ ಗೋಸಾಸಿಯನ್ನಿಱಿಸಿದನೆಂಬ ಮತ್ತು ಮೇಂಟಿ ಎಂಬ ಉಲ್ಲೇಖವಿದೆ.

ಎರಡನೆಯ ಕೃಷ್ಣನ ಸೊರಟೂರು ಶಾಸನದಲ್ಲಿ (SII., vol XI, Pt. I, No. 20, 883 AD) ಮಾಸಿಗರ ಚಿದಾಣ್ಣನು ಸರಟಪುರದ ಐಯ್ಯಂದಿಬರಿಗೆ ಗೋಸಾಸವಿಳ್ದನೆಂದು ಉಲ್ಲೇಖಿಸಿದೆ. ಸ್ಥಾನಾಭಿವೃದ್ಧಿಗಾಗಿ ಎಂಬ ಉಲ್ಲೇಖವೂ ಇದೆ. ಇದೇ ಅರಸನ ಕವಚೇರಿ ಶಾಸನದಲ್ಲಿ (SII., vol XI, Pt. I, No. 29, 912 AD) ಗೋಸಾಸ ದಾನ ನೀಡಿದ್ದನ್ನು ದಾಖಲಿಸಿದೆ. ಇದೇ ಅರಸನ ಗೌಜ ಅಗ್ರಹಾರದ ಶಾಸನದಲ್ಲಿ (EC., vol VII, No. Sk 45) ದಿಗಟಿರ ಬೆಸುಗಿಯು ನೀಡಿದ ನಾಲ್ಕು ಗೋಸಾಸವನ್ನು ಉಲ್ಲೇಖಿಸಿದೆ. ಪೃಥಿವೀ ಗೋಸಾಸಿಯನ್ನು ಹೆಸರಿಸುತ್ತದೆ. ಮೂರನೆಯ ಇಂದ್ರನ ಹಿರೇಮಾಗನೂರು ಶಾಸನದಲ್ಲಿ (SII., vol XVIII, No. 20, 916 AD) ಇಟ್ಟಗೆ – ೩೦ ಕ್ಕೆ, ಅಯ್ಚಣ್ಣನು ನಾಟ್ಗಾವುಂಡನಾಗಿದ್ದಾಗ, ಕೆಱೆವೂರಿನ ತಾಣಗುಂದೂರಿನ ಮಹಾಜನ ಪರಕೆಯಲ್ಲಿ (ಹರಕೆಯಲ್ಲಿ?) ಚಿತ್ರಗೋಸಾಸವನ್ನು ನೀಡಿ ಎರಡು ಕೆರೆಯನ್ನು ಕಟ್ಟಿಸಿ, ಲಿಂಗಪ್ರತಿಷ್ಠೆಯನ್ನು ಮಾಡಿದ್ದನ್ನು ಉಲ್ಲೇಖಿಸುತ್ತದೆ. ಇದೇ ಅರಸನ ಅಸೂಟಿ ಶಾಸನದಲ್ಲಿ (SII., vol XX, No. 16, 920-21 AD) ಸಡಗರರ ತಿಪ್ಪಿಮ್ಮನು ಗೋಸಾಸವನ್ನು ನೀಡಿ ಪೂದಾರು ಮತ್ತು ಬೆಳೆ ಮತ್ತರನ್ನು ಕೊಟ್ಟನೆಂದಿದೆ.

ನಾಲ್ಕನೆಯ ಗೋವಿಂದನ ಹಳೇರಿತ್ತಿ ಶಾಸನದಲ್ಲಿ (ARSIE., 1930-34, No. B 47, 928 AD) ನೆರೆಯಂಗಲ್ಲು ಗ್ರಾಮದ ಮಹಾಜನರ ಸಮ್ಮುಖದಲ್ಲಿ ಗೋಸಾಸವನ್ನು ದಾನವಾಗಿ ನೀಡಿದ್ದನ್ನು ಉಲ್ಲೇಖಿಸಿದೆ. ಶಾಸನದ ಮೇಲೆ ಕಲಶವನ್ನು ಕೆತ್ತಲಾಗಿದೆ. ಮೂರನೆಯ ಕೃಷ್ಣನ ಓಟೂರು ಶಾಸನದಲ್ಲಿ (EC., Vol. VIII, Sb 75, 926 AD) ಗೋಸಾಸ ನೀಡಿದ ಉಲ್ಲೇಖವಿದೆ. ಇದೇ ಅರಸನ ಓಟೂರು ಶಾಸನದಲ್ಲಿ (EC., Vol VIII, Pt. II, No. 77, 939 AD) ಸರ್ವಮ್ಮನ ಮಗ ಅಕ್ಕತಿ ಅಗ್ಗಸನು ಗೋಸಾಸಿಯಾದನೆಂದು ಉಲ್ಲೇಖಿಸಿದೆ. ಇದೇ ಅರಸನ ಹಿರೇಕೆರೂರು ಶಾಸನದಲ್ಲಿ (ARIE., 1958-59, No. B557, 959 AD) ಕಹರಿ ಮಾರಸಿಂಗಯ್ಯನು ಗೋಸಾಸ ಕಂಬವನ್ನು ಮಾಡಿ ನಿಲ್ಲಿಸಿದ ಉಲ್ಲೇಖವಿದೆ. ಕಂಬದ ಮೇಲೆ ನೇಗಿಲಿನ ಚಿತ್ರವನ್ನು ಕೊರೆಯಲಾಗಿದೆ. ಇದೇ ಅರಸನ ಮಂತಗಿ ಶಾಸನದಲ್ಲಿ (ARIE., 1947-48, No.13. 213) ಶ್ರಮಸೆವಳ್ಳಿಯ ಗೋಸಾಸಿ ಜಕ್ಕಯ್ಯನು ಮರಣ ಹೊಂದಿದ್ದನ್ನು ದಾಖಲಿಸಿದೆ. ಇದೇ ಅರಸನ ಜಾಜೂರು ಶಾಸನದಲ್ಲಿ (EC., vol XI, No. Hk 60, 967 AD) ಜಾತಿಲೂರಲ್ಲಿ (ಎ)ಳೆಯರ ದೇವಯ್ಯ ಗೋಸಾಸಿಯಾದನು ಎಂದಿದೆ.

ಖೊಟ್ಟಿಗದೇವನ ಐಹೊಳೆ ಶಾಸನದಲ್ಲಿ (SII., vol XI, Pt. I, No. 44, 971 AD) ಶಾಂತಗಾವುಂಡನು ದೇವಾಲಯವನ್ನು ಮಾಡಿಸಿ ಗೋಸಾಸವನ್ನು ನೀಡಿದ್ದನ್ನು ಉಲ್ಲೇಖಿಸಿದೆ. ಇದೇ ಅರಸನ ಸೋಮನಳ್ಳಿ ಶಾಸನದಲ್ಲಿ (ARSIE., 1940, No. B 68, 977 AD) ಅಯ್ಯವೆಣ್ಣ ದೊರೆಯ ಮತ್ತು ಹರಿಯಬೆಯರ ಮಗನು ಗೋಸಾಸವನ್ನು ನಡೆಸಿದ ಬಗ್ಗೆ ಹೇಳಿದೆ.

ಒಂದನೆಯ ಕೃಷ್ಣನ ಮುತ್ತಳ್ಳೀ ಶಾಸನದಲ್ಲಿ (ನೇಗಿನಹಾಳ ಪ್ರಬಂಧಗಳು, ಪು ೪೮೪, ಕ್ರಿ.ಶ.ಸುಮಾರು ೭೭೦) ಸಯಾಯ್ಬ ಗಾಮುಂಡನು ಗೋಸಾಸ ನೀಡಿದ್ದನ್ನು ಉಲ್ಲೇಖಿಸಿದೆ.

**ವೇಂಟಿ**

ಜಗತ್ತುಂಗನ ಗುಂಡಗಟ್ಟಿ ಶಾಸನದಲ್ಲಿ (ARIE., 1957-58, No. B 267) ದಾಲೀ ಅಮ್ಮನ್ ಎಂಬುವವನು ಊರನ್ನು ಆಳುತ್ತಿದ್ದಾಗ ಊರ್ಗಾವುಂಡನೊಬ್ಬ

ಮೇಂಟಿ ಸ್ಥಾಪಿಸಿದ ಉಲ್ಲೇಖವಿದೆ. ಮೂರನೆಯ ಗೋವಿಂದನ ಗುಂಡಗಟ್ಟೆ ಶಾಸನದಲ್ಲಿ (ARIE., 1957-58, No. B 268) ಕೆರೆಯೂರಿನ ಮಹಾಜನರು ನೀಡಿದ ಮೇಂಟಿಯನ್ನು ಉಲ್ಲೇಖಿಸಿದೆ. ಎರಡನೆಯ ಕೃಷ್ಣನ ಮೇವುಂಡಿ ಶಾಸನದಲ್ಲಿ (SII., vol XI, Pt. I, No. 22, 896 AD) ಮೇಂಟಿ ಖಂಡುಗ ದೇವರಿಗೆ ಎಂಬ ಉಲ್ಲೇಖವಿದೆ.

ಇದೇ ಅರಸನ ಸಿಡಿಯನೂರು ಶಾಸನದಲ್ಲಿ (SII., vol XX, No. 15, 904-05 AD) ಮೇಂಟಿಯನ್ನು ಪಡೆದುದನ್ನು ಉಲ್ಲೇಖಿಸಿದೆ. ಜಗತ್ತುಂಗನ ನಿಲೋಗಲ್ ಶಾಸನದಲ್ಲಿ (SII., vol XVIII, No. B 35, C 910 AD) ಮೇಂಟಿ ಕಡಿತಲೆಗಳ ಉಲ್ಲೇಖವಿದೆ. ಮಾರಕರಸನು ಹೊಲಬಿಕೊಂಡವನ್ನು ಆಳುತ್ತಿದ್ದಾಗ (ARIE., 1959-60, No. B, 408-09) ಮೇಂಟಿಕಲ್ಲನ್ನು ನಡೆಸಿದ್ದನ್ನು ಉಲ್ಲೇಖಿಸುತ್ತದೆ. ಶಿರಗಂಬಿ ಶಾಸನದಲ್ಲಿ (ARIE., 1960-61, No. 479) ಮೇಂಟಿಯನ್ನು ಸ್ಥಾಪಿಸಿದ ಉಲ್ಲೇಖವಿದೆ. ಒಂದನೆಯ ಕೃಷ್ಣ ಮತ್ತು ಇಮ್ಮಡಿ ಗೋವಿಂದರ ಮುತ್ತಳ್ಳಿ ಶಾಸನದಲ್ಲಿ (ನೇಗಿನಹಾಳ ಪ್ರಬಂಧಗಳು, ಪು – ೪೮೪, ಕ್ರಿ.ಶ. ಸುಮಾರು ೭೭೫) ಸಿರಿದೇವನ ಮಗ ಸಿರಿಕಂದರ್ಪನು ಬದಲು ದಾನವನ್ನು ಕೊಟ್ಟು ಮೇಂಟಿ ಇರಿಸಿದ್ದನ್ನು ಉಲ್ಲೇಖಿಸಿದೆ. ಇಮ್ಮಡಿ ಗೋವಿಂದನ ಮುತ್ತಳ್ಳಿ ಶಾಸನದಲ್ಲಿ (ನೇಗಿನಹಾಳ ಪ್ರಬಂಧಗಳು, ಪು – ೪೮೪, ಕ್ರಿ.ಶ. ಸುಮಾರು ೭೮೦) ಕೊಣ್ಡೆಸರಾ ಮಗ ಸಿರಿದೇವನು ಪೊಡೊ ರೂಪದಲ್ಲಿ ದಾನವನ್ನು ಮಣ್ಣುಕೊಟ್ಟು ಇರಿಸಿದ ಮೇಂಟಿಯನ್ನು ಉಲ್ಲೇಖಿಸಿದೆ.

ಒಂದನೆಯ ಕೃಷ್ಣನ ಮಲ್ಲೇನಹಳ್ಳಿ ಶಾಸನವು (ನೇಗಿನಹಾಳ ಪ್ರಬಂಧಗಳು, ಪು – ೪೭೭, ಕ್ರಿ.ಶ. ಸುಮಾರು ೭೬೦) ಬಿಚ್ಚರಾ ಬುದ್ಧನು ಗೋಸಾಸವನ್ನು ನೀಡಿದನು ಎಂದಿದೆ. ಧ್ರುವನ ಮುತ್ತಳ್ಳಿ ಶಾಸನದಲ್ಲಿ (ನೇಗಿನಹಾಳ ಪ್ರಬಂಧಗಳು, ಪು – ೪೭೮, ಕ್ರಿ.ಶ. ಸುಮಾರು ೭೭೦)ಬಿಣ್ಡೆ ಗೋಸಾಸಿಯನ್ನು ಉಲ್ಲೇಖಿಸಿದೆ. ಇದೇ ಅರಸನ ಇನ್ನೊಂದು ಶಾಸನದಲ್ಲಿ (ನೇಗಿನಹಾಳ ಪ್ರಬಂಧಗಳು, ಪು – ೪೭೮, ಕ್ರಿ.ಶ. ಸುಮಾರು ೭೬೦–೭೯೦) ಗುಡ್ಡಸೇಗರನು ಗೋಸಾಸ ವಿಳ್ದುದನ್ನು ದಾಖಲಿಸಿದೆ. ಶಾಸನದ

ಪಾಠದಲ್ಲಿ "ಗೋಸಹಸ್ರಮಿಬ್ದು ಪದಾ[ದ]ಲ್ದಾನ[ಂ]ಗೊಟ್ಟು ನಿಱಿಸಿದ ಮೇಣ್ಣಿ ಕರಗೆಯ ಮಾ ಚೋವನ ಮಾಡಿದ ಮೇಣ್ಣಿ" ಎಂದಿದೆ.

ಮೂರನೆಯ ಗೋವಿಂದನ ಕಿರವಾಡಿ ಶಾಸನದಲ್ಲಿ (ನೇಗಿನಹಾಳ ಪ್ರಬಂಧಗಳು, ಪು – ೪೭೯) ಸಾಸಿರ ಮೇಂಟಿಯ ಉಲ್ಲೇಖವಿದೆ. ದೋರನ (ಇತಿಹಾಸದರ್ಶನ ಸಂ. ೯, ರು. ಮ..ಷಡಕ್ಷರಯ್ಯ) ದೇವಿಹೊಸೂರು ಶಾಸನದಲ್ಲಿ "ಶ್ರೀಮನ್ನಸಂವರ ಕನ್ದಮ್ಮಂಸುಳಿಣ್ಣಿ ಗೋಸಾಸಿಯ ಮೇಣ್ಟಿಯಂಗೆಱವ......" ಎನ್ನುವ ಉಲ್ಲೇಖವಿದೆ. ಇದೇ ಊರಿನ ಅಕಾಲವರ್ಷನ ಶಾಸನದಲ್ಲಿ (ಇತಿಹಾಸದರ್ಶನ ಸಂ. ೯, ರು. ಮ..ಷಡಕ್ಷರಯ್ಯ., ಕ್ರಿ.ಶ ೯೧೪) "ಸುವರ್ಣ್ನ ಗೋಸಾಸ ಮೇಣ್ಟಿ ಪೆಸರು ಸೌಮ್ಯ ಮು ... ಲ್ಲಕೆಲ್ಲ ರಾಂ ಥಂಗಮವುಣಿ ಸಾಸಿ ಮಾಡಿದೊ" ಎಂದು ಉಲ್ಲೇಖಿಸಿದೆ. ಇದೇ ಊರಿನ ಅಮೋಘವರ್ಷನ ಶಾಸನದಲ್ಲಿ (Ibid) ಸ್ವರ್ಣ ಮೇಣ್ಟಿಯನ್ನು ಉಲ್ಲೇಖಿಸಿದೆ. ಚಿಕ್ಕೊಣತಿಯ ಶಾಸನವೊಂದು ಮೂರು ಪಾದಗಳಿದ್ದು ಅದರಲ್ಲಿ "ಗೋಸಾಸ" ಎಂಬ ಪದ ಮಾತ್ರ ಸ್ಪಷ್ಟವಾಗಿದೆ ಎನ್ನಲಾಗಿದೆ. (ನೇಗಿನಹಾಳ ಪ್ರಬಂಧಗಳು, ಪು ೪೮೦)

ಮೇಲೆ ಹೇಳಿದ ಗೋಸಾಸಗಳಲ್ಲದೇ ಇನ್ನೂ ಅನೇಕ ಗೋಸಾಸಗಳಿವೆ. ಮಾವಳಿಯ ಶಾಸನ ಮುಂತಾದವುಗಳನ್ನು ಇಲ್ಲಿ ಹೆಸರಿಸಬಹುದು. ಗೋಸಾಸ ಮತ್ತು ಮೇಂಟಿ ಎರಡೂ ಒಂದೇ ಎಂದು ವಿದ್ವಾಂಸರು ಗುರುತಿಸಿದ್ದರೂ ಶಾಸನದಲ್ಲಿ ಇವೆರಡೂ ಪದಗಳು ಬೇರೆ ಬೇರೆ ರೀತಿಯಲ್ಲಿಯೇ ಬಳಕೆಯಾಗಿದೆ. ಕೆಲವು ಶಾಸನಗಳು ಗೋಸಾಸಗಳೆಂದೂ, ಕೆಲವು ಮೇಂಟಿಯೆಂದೂ, ಕೆಲವು ಎರಡೂ ಶಬ್ದಗಳ ಪ್ರಯೋಗವನ್ನೂ ಮಾಡಿರುವುದು ಕಂಡುಬರುತ್ತದೆ. ಗೋಸಾಸಿಯಿಳಿಸಿದ್ದು ಮೇಂಟಿ ನೀಡಿದ್ದು, ಸ್ವರ್ಣ ಗೋಸಾಸ ಇವೆಲ್ಲ ಏನು ಅರ್ಥ ಕೊಡುತ್ತವೆಂದು ಹೆಚ್ಚು ಸ್ಪಷ್ಟವಾಗುವುದಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ ಇದೊಂದು ದಾನವಾಗಿದೆ ಎಂದಷ್ಟೇ ಹೇಳಿ ನಿಲ್ಲಿಸಿದರೆ ಅಪೂರ್ಣವಾಗುತ್ತದೆ. ಏಕೆಂದರೆ ವ್ಯಕ್ತಿಯನ್ನೂ ಗೋಸಾಸಿ ಎಂದೂ ಕರೆದಿರುವುದರಿಂದ ಒಮ್ಮೆ ಗೋಸಾಸ ದಾನ ಮಾಡಿದವನು ಎಂದಷ್ಟೇ ಹೇಳಿರಬಹುದು ಎಂದುಕೊಳ್ಳಲು ಸಾಧ್ಯವಿಲ್ಲ. ಇಳ್ದವನು ಎಂಬುದು ಬೇರೆಯೇ ಅರ್ಥವನ್ನು ಕೊಡುತ್ತದೆ. ಈ ಬಗ್ಗೆ ಹೆಚ್ಚಿನ ಅಧ್ಯಯನವಾಗಬೇಕಾದ ಅಗತ್ಯವಿದೆ.

ಗೋಸಾಸವು ನೋಡಲು ಸಮಾನ್ಯವಾಗಿ ಮೂರರಿಂದ ನಾಲ್ಕು ಅಡಿಯವರಗೆ ಇರುತ್ತದೆ. ಅಪರೂಪಕ್ಕೊಮ್ಮೆ ಎತ್ತರದ ಗೋಸಾಸಗಳೂ ಕಂಡುಬರುತ್ತದೆ. ಗೋಸಾಸಗಳಿಗೆ ಬಳಸುವ ಕಲ್ಲು ಕೂಡ ವಿಷೇಶವಾಗಿರುತ್ತದೆ. ಸಾಮಾನ್ಯವಾಗಿ ಒಂದೇ ರೀತಿಯ ಕರಿಯ ಕಲ್ಲಿನ ಮೇಲಿದ್ದು ಮೇಲುಭಾಗವು ಗುಂಡಾಕಾರವಾಗಿರುತ್ತದೆ. ಸಾಮಾನ್ಯವಾಗಿ ಕಲಶದ ಚಿತ್ರ ಮತ್ತು ಕಲಶದಿಂದ ಹೊರಬೀಳುತ್ತಿರುವ ಹೂವಿನ ಚಿತ್ರವೂ ಇರುತ್ತದೆ. ಕೆಲವೊಮ್ಮೆ ನೇಗಲಿನ ಚಿತ್ರ, ಪಕ್ಕದಲ್ಲಿ ಆನೆಯ ಶಿಲ್ಪವಿರುವ ಉದಾಹರಣೆಗಳೂ ಇವೆ. ರಂಟೆಯ ಚಿತ್ರವಿರುವ ಗೋಸಾಸವೂ ಒಂದೆರಡು ಕಡೆಯಲ್ಲಿ ಕಂಡುಬರುತ್ತದೆ. ಶಾಸನಸಹಿತ ಮತ್ತು ಶಾಸನರಹಿತ ಗೋಸಾಸಗಳೂ ಇವೆ. ಗೋಸಾಸದ ಮೇಲಿರುವ ಶಾಸನದ ಪಾಠವು ಬಹಳ ಚಿಕ್ಕದಾಗಿದ್ದು ಅಗತ್ಯವಿದ್ದಷ್ಟೇ ವಿಚಾರದ ಬಗ್ಗೆ ತಿಳಿಸುತ್ತದೆ. ಯಾವುದೇ ಶಿಲ್ಪಗಳಿಲ್ಲದೆ ಕೇವಲ ಗೋಸಾಸ ಕಲ್ಲಿನ ಆಕಾರವಿರುವುದೂ ಕಂಡುಬರುತ್ತದೆ.

ಸಾಮಾನ್ಯವಾಗಿ ಗೋಸಾಸಗಳು ಗುಂಪುಗುಂಪುಗಳಾಗಿಯೇ ಕಂಡುಬರುತ್ತದೆ. ಒಂಬತ್ತು, ಹನ್ನೆರಡು, ಮೂವತ್ತು, ಮೂವತ್ತೆರಡು ಈ ರೀತಿಯ ಸಂಖ್ಯೆಯಲ್ಲಿಯೇ ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಒಂದು. ಎರಡು ಗೋಸಾಸಗಳು ಸಿಕ್ಕಿದರೂ ಅದೇ ಊರಿನಲ್ಲಿಯೇ ಬೇರೆ ಬೇರೆ ಕಡೆಗಳಲ್ಲಿ ಕಂಡುಬರುತ್ತದೆ. ಹಾಗೂ ಇಲ್ಲದೇ ಒಂದೋ ಎರಡೋ ಕೂಡ ಸಿಕ್ಕಿವೆ.

ಅಧ್ಯಾಯ ೭

# ಸಮಾರೋಪ

"ರಾಷ್ಟ್ರಕೂಟರ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಎನ್ನುವ ಶೀರ್ಷಿಕೆಯಲ್ಲಿ ಸಂಶೋಧನೆಯನ್ನು ಪ್ರಾರಂಭ ಮಾಡಿದಾಗ ಹಲವಾರು ಯೋಜನೆಗಳನ್ನು ಹಾಕಿಕೊಳ್ಳಲಾಗಿತ್ತು. ಅಧ್ಯಯನದ ಪ್ರಾರಂಭದಿಂದ ಅನೇಕ ಅಡೆತಡೆಗಳುಂಟಾದರೂ, ಮಾಡಲೇ ಬೇಕೆನ್ನುವ ಛಲವೇ ಅಧಿಕವಾಗಿದ್ದುದರಿಂದ ಮುಂದುವರಿಯುವುದು ಕಷ್ಟವಾಗಲಿಲ್ಲ. ಅದರಲ್ಲಿ ಎಲ್ಲವೂ ಸರಿಯಾಗಿ ನಡೆಯದಿದ್ದರೂ, ಕೆಲವಾದರೂ ಗುರಿ ಮುಟ್ಟಿದ್ದು ಸ್ವಲ್ಪ ಸಮಾಧಾನವನ್ನು ತಂದುಕೊಟ್ಟಿದೆ. ಮಾಹಿತಿ ಸಂಗ್ರಹಣೆಯು ಸಮಗ್ರ ಅಧ್ಯಯನಕ್ಕೆ ಸರಿಹೊಂದುವಂತೆ ಸಂಗ್ರಹಿಸಲು ನಿರ್ಧರಿಸಿದ್ದು, ರಾಷ್ಟ್ರಕೂಟರ ಬಗ್ಗೆ ಅಪಾರವಾದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಪ್ರಸ್ತುತ ಅಧ್ಯಯನದ ದೃಷ್ಟಿಯಿಂದಲೂ ಕೂಡ ಸಾಕಷ್ಟು ದೊಡ್ಡ ಪ್ರಮಾಣದಲ್ಲಿಯೇ ಮಾಹಿತಿಗಳ ಸಂಗ್ರಹವಾಗಿದೆ. ನಿರೀಕ್ಷೆಗಿಂತ ಹೆಚ್ಚು ಸಂಶೋಧನೆಗಳು, ಭಾರತದಲ್ಲಿ ಮಾತ್ರವಲ್ಲದೇ, ವಿಶ್ವದ ವಿವಿಧ ವಿಶ್ವವಿದ್ಯಾಲಯಗಳಲ್ಲಿ ಕೂಡ ನಡೆದಿರುವುದು ರಾಷ್ಟ್ರಕೂಟರ ಶ್ರೇಷ್ಠತೆಯನ್ನು ಎತ್ತಿ ತೋರಿಸುತ್ತದೆ. ಅನೇಕ ಸಂಶೋಧನಾ ಪ್ರಬಂಧಗಳೂ ಹೊರಬಂದಿವೆ. ದೊರಕಿದ ಮಾಹಿತಿಗಳಿಂದ ಗಾಬರಿಯಾಯಿತು. ಈವರೆಗೆ ಬಳಸಿಲ್ಲದೇ ಇರುವ ಸಂಗ್ರಹವೇ ಅಧಿಕವಾಗಿದ್ದು ಅದನ್ನು ಯಾವ ರೀತಿ ಬಳಸಿಕೊಳ್ಳುವುದೆನ್ನುವುದು ತಿಳಿಯದಂತಾಯಿತು. ಶಾಸನಗಳನ್ನು ಮೂಲ ಆಕರಗಳನ್ನಾಗಿ ಬಳಸಿಕೊಂಡಿರುವುದರಿಂದ ಕೆಲವು ವಿವರಗಳನ್ನು ಕೈಬಿಡಬೇಕಾಯಿತು.

ವಿಚಾರಗಳ ಮಂಡನೆಯ ಬಗ್ಗೆ ಹೇಳುವುದಾದರೆ, ಆರಂಭದಲ್ಲಿ ಹೇಳಿದಂತೆ ಈಗಾಗಲೇ ಹೇಳಿರುವ ಬಹಳಷ್ಟು ವಿಚಾರಗಳ ಪುನರಾವರ್ತನೆಯನ್ನು ಸಾಧ್ಯವಾದಷ್ಟೂ ಮಾಡಿಲ್ಲ. ಒಂದೆರಡು ಕಡೆ ಅನಿವಾರ್ಯವಾಗಿ ಮಾಡಲಾಗಿದೆ. ಸಾಂಸ್ಕೃತಿಕ ಮಾಹಿತಿಗಳನ್ನು ಒಂದೆಡೆ ಕಲೆಹಾಕುವುದನ್ನು ಮೂಲ ಉದ್ದೇಶವಾಗಿ ಮಾಡಿಕೊಳ್ಳಲಾಗಿದ್ದು, ಆ ಉದ್ದೇಶ ಪೂರ್ಣವಾಗಿ ಈಡೇರಿದೆ. ಪ್ರಬಂಧವನ್ನು

ನೀಡುವಾಗ ಅಷ್ಟೂ ಮಾಹಿತಿಯನ್ನು ಬಳಸಿಕೊಳ್ಳಲು ಸಾಧ್ಯವಾಗಿಲ್ಲ. ನಿರ್ಧಾರವಾಗದೆ ಚರ್ಚಿತವಾಗುತ್ತಿರುವ ವಿಚಾರಗಳಿಗೆ ಸಾಧ್ಯವಾದಷ್ಟೂ ಪರಿಹಾರ ನೀಡಲು ಪ್ರಯತ್ನಿಸಿ, ಒಂದೆರಡು ಕಡೆ ಯಶಸ್ವಿಯಾಗಿರುವುದು ಈ ಪ್ರಬಂಧದ ಫಲಿತಾಂಶವಾಗಿದೆ.

ರಾಷ್ಟ್ರಕೂಟರ ಇತಿಹಾಸವನ್ನು ಗಮನಿಸಿದಾಗ, ಅನೇಕ ಮಾಹಿತಿಗಳು ಲಭ್ಯವಿದ್ದರೂ ಬಳಸಿಕೊಳ್ಳಲು ಸಾಧ್ಯವಾಗಿಲ್ಲ. ಎಷ್ಟೋ ವಿಷಯಗಳ ಬಗ್ಗೆ ಇಲ್ಲಿ ಉಲ್ಲೇಖವನ್ನೇ ಮಾಡಿಲ್ಲ.

ಸಮಕಾಲೀನ ಅರಸರ ದಾಖಲೆಗಳನ್ನು ಅಗತ್ಯಬಿದ್ದಾಗ ಬಳಸಿಕೊಳ್ಳಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಸಮಕಾಲೀನರರನ್ನು ಕುರಿತು ಚರ್ಚಿಸಲಾಗಿದ್ದು, ವಿಷಯ ನಿರೂಪಣೆಗೆ ಅಗತ್ಯವಾದ ಎಲ್ಲ ರೀತಿಯ ಮಾಹಿತಿಗಳನ್ನೂ ಅಗತ್ಯಕ್ಕೆ ತಕ್ಕಷ್ಟು ಬಳಸಿಕೊಳ್ಳಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ವಿದ್ವಾಂಸರ ಚರ್ಚೆಯನ್ನು ಗುಡ್ಡೆಹಾಕುವ ಪ್ರಯತ್ನವನ್ನು ಮಾಡಲಾಗಿದೆ. ಇದು ಪೂರ್ಣವಾಗದಿದ್ದರೂ ಶೇಕಡ ಎಪ್ಪತ್ತರಷ್ಟು ಸಂಗ್ರಹವಾಗಿದೆ. ಉಳಿದ ಮಾಹಿತಿಗಳು ಇದ್ದರೂ ಸೇರಿಸಲು ಸಾಧ್ಯವಾಗಲಿಲ್ಲ. ವಂಶಾವಳಿಗಳನ್ನು ಸಾಧ್ಯವಾದಷ್ಟೂ ಕೊಡಲಾಗಿದೆ. ಹದಿನೇಳು ಶಾಖೆಗಳಲ್ಲದೇ ಇನ್ನೂ ಹಲವಾರು ಶಾಖೆಗಳು ದೊರಕುತ್ತವೆ. ಶಾಖೆಗಳನ್ನೇ ಕುರಿತು ಪ್ರತ್ಯೇಕವಾಗಿ ಅಧ್ಯಯನ ಮಾಡುವಷ್ಟು ಮಾಹಿತಿಗಳು ಸಿಗುತ್ತಲಿದ್ದು, ಇವು ಸಾಹಿತ್ಯಗಳಲ್ಲಿ ಹೆಚ್ಚಾಗಿ ಸಿಗುವುದರಿಂದ ಪ್ರಸ್ತುತ ಅಧ್ಯಯನದಲ್ಲಿ ಅಷ್ಟೊಂದು ಬಳಸಿಕೊಳ್ಳಲು ಸಾಧ್ಯವಾಗಿಲ್ಲ. ರಾಜಾಸ್ತಾನದ ಪ್ರದೇಶಗಳಲ್ಲಿ ಸಮರ್ಪಕವಾದ ಕ್ಷೇತ್ರಕಾರ್ಯ ನಡೆಸಿ ಇನ್ನಷ್ಟು ಮಾಹಿತಿಗಳನ್ನು ಸಂಗ್ರಹಿಸಲು ಸಾಧ್ಯವಿದೆ. ಅದೇ ರೀತಿ, ಓಢ್ರ, ಮಾನಪುರ, ಸೌಂದತ್ತಿ, ಬೋಧಗಯಾ ಮತ್ತು ಮಳಖೇಡದ ರಾಷ್ಟ್ರಕೂಟರ ಇನ್ನಷ್ಟು ಮಾಹಿತಿಗಳನ್ನು ಸೇರಿಸಬಹುದು. ಶಾಸನ ಮತ್ತು ಸಾಹಿತ್ಯ ಎರಡೂ ಸಿಗುತ್ತವೆ.

ನಾಲ್ಕನೆಯ ಅಧ್ಯಾಯದಲ್ಲಿ ರಾಜಕೀಯವಾಗಿ ಕೆಲವು ಬದಲಾವಣೆಗಳನ್ನು ಗುರುತಿಸಲಾಗಿದೆ. ಒಂದನೆಯ ಕರ್ಕನ ಮಗ ನನ್ನಗುಣಾವಲೋಕನಿಗೆ ಒಬ್ಬ ಶಂಕರಗಣನೆಂಬ ಮಗನಿದ್ದನೆಂದು ಗುರುತಿಸಲಾಗಿದೆ. ಎರಡನೆಯ ಜಗತ್ತುಂಗನ ಆಳ್ವಿಕೆಯ ಕಾಲವನ್ನು ಗುರುತಿಸಲಾಗಿದೆ. ಇದುವರೆವಿಗೆ ಕರ್ಕ II ಎಂದು

ಗುರುತಿಸಿದ್ದವನನ್ನು ಕರ್ಕ III ಎಂದು ಗುರುತಿಸಲಾಗಿದೆ. ಆರಂಭದಲ್ಲಿ ಬರುವ ಕರ್ಕ ಸುವರ್ಣವರ್ಷನನ್ನು ಇಮ್ಮಡಿ ಕರ್ಕನೆಂದು ಗುರುತಿಸಲಾಗಿದ್ದು ಕ್ರಿ.ಶ. ೯೭೨ ರ ಸುಮಾರಿಗೆ ಬರುವ ನಿರುಪಮನ ಕರ್ಕನನ್ನು ಮೂರನೆಯ ಕರ್ಕ ಎಂದು ಗುರುತಿಸಲಾಗಿದೆ. ಉಳಿದ ಶಾಖೆಗಳಿಗೂ, ಮಳಖೇಡದ ರಾಷ್ಟ್ರಕೂಟರಿಗೂ ಇದ್ದಿರಬಹುದಾದ ಪರಸ್ಪರ ಸಂಬಂಧಗಳನ್ನು ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ. ಕೆಲವು ಶಾಖೆಗಳಿಗೆ ಸಂಬಂಧವನ್ನು ಗುರುತಿಸಲಾಗಿದೆ. ರಾಜಕೀಯ ಬದಲಾವಣೆಗಳನ್ನು ಗುರುತಿಸುವುದಕ್ಕೆ ಅನೇಕ ಶಾಖೆಗಳ ಅಧ್ಯಯನ ಬಹಳ ಸಹಾಯಕವಾಗಿದೆ. ಅರಸರ ಆಳ್ವಿಕೆಯನ್ನು ಗುರುತಿಸಿರುವ ಕಾಲದಲ್ಲಿ ಕೆಲವು ಬದಲಾವಣೆಗಳನ್ನು ಗಮನಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಸಾಂಸ್ಕೃತಿಕ ಬೆಳವಣಿಗೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಮೇಲ್ನೋಟಕ್ಕೆ ಅನೇಕ ವಿಚಾರಗಳನ್ನು ಉಲ್ಲೇಖಿಸದೇ ಇರುವಂತೆ ಕಂಡರೂ, ಅದು ಉದ್ದೇಶಪೂರ್ವಕವಾಗಿಯೆ ಇದೆ. ಏಕೆಂದರೆ ಈಗಾಗಲೆ ತಿಳಿದಿರುವ ವಿವರಗಳನ್ನೇ ಮತ್ತೆ ಹೇಳುವುದನ್ನು ತಪ್ಪಿಸಿರುವುದಾಗಿ ಮೊದಲೇ ಹೇಳಿರುವುದರಿಂದ ಅನೇಕ ವಿವರಗಳನ್ನು ಕೈಬಿಡಲಾಗಿದೆ. ಆದರೆ ಮಾಹಿತಿ ಸಂಗ್ರಹಿಸುವಾಗ ಯಾವುದನ್ನೂ ಬಿಡದೇ ಸಂಗ್ರಹಿಸಲಾಗಿದೆ. ಸಾಂಸ್ಕೃತಿಕ ವಿಚಾರಗಳ ಬಗ್ಗೆ ಹೇಳುವಾಗ ಮುಖ್ಯವಾಗಿ ಗಮನಕ್ಕೆ ಬಂದ ಅಂಶವೆಂದರೆ ರಾಷ್ಟ್ರಕೂಟರ ತಮಿಳು ಶಾಸನಗಳಲ್ಲಿ ಸಿಗುವಷ್ಟು ವಿವರವಾದ ಮಾಹಿತಿಗಳು ಬೇರೆ ಶಾಸನಗಳಲ್ಲಿ ಸಿಗುವುದಿಲ್ಲ. ಇದನ್ನು ಕಂಡಾಗ ನಮ್ಮ ಸಂಸ್ಕೃತಿಯ ಬಗ್ಗೆ ಹೇಳಿಕೊಳ್ಳುವಾಗಲೂ ಹಿಂಜರಿಕೆಯೇ ಎನ್ನುವ ಸಂಶಯ ಕಾಡುತ್ತದೆ. ಈಗಾಗಲೇ ಬೇರೆಡೆಗಳಲ್ಲಿ ಚರ್ಚಿತವಾಗಿರುವ ಸಾಂಸ್ಕೃತಿಕ ಅಂಶಗಳನ್ನು ಸೇರಿಸಿದರೂ ಈ ಕೊರತೆ ಎದ್ದು ಕಾಣುತ್ತದೆ. ಧರ್ಮಶಾಸ್ತ್ರದ ಅರಿವಿರುವವರಿಗೆ ಕೂಲಂಕಷವಾಗಿ ಅಧ್ಯಯನ ಮಾಡುವಷ್ಟು ವಿಷಯಗಳಿವೆ ಎನ್ನುವ ಆಲ್ಟೇಕರರ ಮಾತು ಅಕ್ಷರಶಃ ಸತ್ಯ. ಒಂದೊಂದು ಧರ್ಮವನ್ನೂ ಪ್ರತ್ಯೇಕವಾಗಿ ಅಧ್ಯಯನ ಮಾಡುವಷ್ಟು ಮಾಹಿತಿಗಳಿವೆ. ಓಲೆಗರಿಗಳಲ್ಲಿರುವ ಮೂರು ಕೃತಿಗಳು ಇನ್ನೂ ಸಂಪಾದಿತವಾಗಬೇಕಾಗಿದೆ. ಸಾಹಿತ್ಯ ಮತ್ತು ಧರ್ಮವನ್ನು ಆಧರಿಸಿ ಸಂಸ್ಕೃತಿಯನ್ನು ಗುರುತಿಸುವ ಪ್ರಯತ್ನವನ್ನು ಮಾಡಲು ಉತ್ತಮ ಅವಕಾಶಗಳಿವೆ. ಬಹಳಷ್ಟು ಆಕರಗಳು ಲಭ್ಯವಿವೆ.

ಆರನೆಯ ಅಧ್ಯಾಯವು ವಾಸ್ತು ಮತ್ತು ಕಲೆಯನ್ನು ಕುರಿತದ್ದಾಗಿದೆ. ರಾಷ್ಟ್ರಕೂಟರ ದೇವಾಲಯಗಳನ್ನು ಗುರುತಿಸಲು ಮತ್ತು ವಾಸ್ತುವಿನ ವಿಶೇಷತೆಗಳನ್ನು ತಿಳಿಯಲು ಸುಲಭವಾಗುವಂತೆ ಲಕ್ಷಣಗಳನ್ನು ಹೇಳಲಾಗಿದೆ. ಕಲೆಯನ್ನು ಕುರಿತು ಹೇಳುವಾಗ ಕೆಲವು ಉದಾಹರಣೆಗಳನ್ನು ನೀಡಲಾಗಿದೆ. ಶಿಲ್ಪದ ದೃಷ್ಟಿಯಿಂದ, ಚಿತ್ರಕಲೆಯ ದೃಷ್ಟಿಯಿಂದ, ಸಂಸ್ಕೃತಿಯ ಅಧ್ಯಯನ ಮಾಡುವವರಿಗೆ ಬಹಳಷ್ಟು ಮಾಹಿತಿ ಲಭ್ಯವಿದೆ. ಚಿತ್ರಕಲೆಯ ಬಗ್ಗೆ ಸಾಹಿತ್ಯದಲ್ಲಿ ಬಹಳಷ್ಟು ಮಾಹಿತಿಗಳು ದೊರೆಯುತ್ತವೆ. ಸಮಕಾಲೀನ ಚಿತ್ರಕಲೆಯೊಂದಿಗೆ ಅಭ್ಯಾಸಮಾಡಲು ಅಥವಾ ಸಾಹಿತ್ಯ ಮತ್ತು ಚಿತ್ರಕಲೆಯನ್ನು ತೌಲನಿಕವಾಗಿ ಅಭ್ಯಾಸಮಾಡಲು ಸಾಕಷ್ಟು ಮಾಹಿತಿಗಳಿವೆ. ವೀರಗಲ್ಲುಗಳು, ಗೋಸಾಸಗಳು ಬಹಳಷ್ಟು ಸಂಖ್ಯೆಯಲ್ಲಿ ಸಿಗುತ್ತವೆ. ಇವುಗಳ ಬಗ್ಗೆ ಕೂಡ ಪ್ರತ್ಯೇಕವಾಗಿ ಅಧ್ಯಯನ ಮಾಡುವವರಿಗೆ ಬಹಳಷ್ಟು ವಿವರಗಳು ದೊರಕುತ್ತವೆ.

ವೈಯಕ್ತಿಕವಾಗಿ ಹೇಳುವುದಾದರೆ ಸಂಶೋಧನಾ ಪ್ರಬಂಧವು ನಿರೀಕ್ಷಿತ ಮಟ್ಟವನ್ನು ಮುಟ್ಟದೇ ಹೋದರೂ, ಹಲವಾರು ಹೊಸ ಬದಲಾವಣೆಗಳನ್ನಾದರೂ ಗುರುತಿಸಲು ಸಾಧ್ಯವಾಗಿರುವುದು ಸಮಾಧಾನದ ಸಂಗತಿ. ಸಂಗ್ರಹವಾಗಿರುವ ಮಾಹಿತಿಗಳ ಸಂಪೂರ್ಣ ಬಳಕೆಯಿಂದ ಇನ್ನಷ್ಟು ಹೊಸ ಬದಲಾವಣೆಗಳು ಸೇರ್ಪಡೆಯಾಗುವ ಅವಕಾಶಗಳಿವೆ. ಪ್ರಬಂಧದ ಚೌಕಟ್ಟಿಗೆ, ಗಾತ್ರಕ್ಕೆ ಬದ್ಧವಾಗಿರಬೇಕಾದ ಅನಿವಾರ್ಯದಿಂದಾಗಿ ಬಹಳಷ್ಟು ವಿವರಣೆಗಳನ್ನು ಮಾಡಿಲ್ಲ. ಮುಂದೆ ಬರುವ ಹೊಸ ಸಂಶೋಧಕರಿಗೆ ಅಧ್ಯಯನ ಮಾಡಲು ಧರ್ಮ, ಸಾಹಿತ್ಯ, ವಾಸ್ತು, ಕಲೆ, ಸಾಮಾಜಿಕ ಹಾಗೂ ರಾಜಕೀಯ, ಎಲ್ಲಾ ಕ್ಷೇತ್ರಗಳಲ್ಲಿಯೂ ಮುಕ್ತ ಅವಕಾಶವಿದೆ. ಅಧ್ಯಯನದಲ್ಲಿ ತೊಡಗಿಸಿಕೊಳ್ಳಬೇಕಾದ ಅಗತ್ಯವಿದೆ ಅಷ್ಟೆ. ಪ್ರಸ್ತುತ ಅಧ್ಯಯನವು ಸಾಂಪ್ರದಾಯಿಕವಾಗಿ ಮುಕ್ತಾಯವಾಗಿದ್ದು, ಅಪೂರ್ಣವಾದ ಕೆಲಸಗಳನ್ನು ಪ್ರಾರಂಭಿಸಲು ಅಪಾರವಾದ ಸ್ಫೂರ್ತಿಯನ್ನೊದಗಿಸಿದೆ.

# ಗ್ರಂಥಋಣ

ಕನ್ನಡ ಪುಸ್ತಕಗಳು

೧. ಭೋಜರಾಜ, ಬ., ಪಾಟೀಲ, *ನಾಗರಖಂಡ – ೭೦, ಒಂದು ಅಧ್ಯಯನ*, ಆನಂದಪುರ, ೧೯೯೫.

೨. ನೇಗಿನಹಾಳ, ಎಂ.ಬಿ., *ನೇಗಿನಹಾಳ ಪ್ರಬಂಧಗಳು*, ಹಂಪಿ ವಿಶ್ವವಿದ್ಯಾಲಯ, ೧೯೯೯.

೩. ಡಾ॥ ಶಿವಾನಂದ, ವಿ., (ಸಂ.) *ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು*, ವಾರಣಾಸಿ, ೧೯೯೨.

೪. ಪಂಚಮುಖಿ, ಆರ್.ಎಸ್., *ಕರ್ನಾಟಕ ಇತಿಹಾಸ*.

೫. ನೆಲಮಂಗಲ ಲಕ್ಷ್ಮೀನಾರಾಯಣ ರಾವ್ ಮತ್ತು ಪಂಚಮುಖಿ, ಆರ್.ಎಸ್., *ಕರ್ನಾಟಕದ ಅರಸು ಮನೆತನಗಳು*.

೬. ಡಾ॥ ಚಿದಾನಂದಮೂರ್ತಿ ಎಂ., *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಮೈಸೂರು, ೧೯೬೬.

೭. ಡಾ॥ ಶೇಷಶಾಸ್ತ್ರಿ., *ಕರ್ನಾಟಕದ ವೀರಗಲ್ಲುಗಳು*, ಬೆಂಗಳೂರು, ೧೯೮೨.

೮. ಚೆನ್ನಕ್ಕ ಪಾವಟೆ, *ರಾಷ್ಟ್ರಕೂಟ ಸಾಮಂತ ಚಲ್ಲಕೇತನರು*.

೯. ಕೊಪ್ಪ ಎಸ್.ಕೆ., *ತರ್ದವಾಡಿ ನಾಡು – ಒಂದು ಅಧ್ಯಯನ*.

೧೦. ಜೋಶಿ, ಶಂ.ಬಾ., *ಮಹಾರಾಷ್ಟ್ರದ ಮೂಲ*, ಧಾರವಾಡ, ೧೯೫೪.

೧೧. ಡಾ॥ ರಾಜಶೇಖರ ಸಿಂಧಗಿ, *ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ*, ಧಾರವಾಡ, ೧೯೮೮.

೧೨. ದೇಶಪಾಂಡೆ ರಾ.ಹ., *ಕರ್ನಾಟಕ ಸಾಮ್ರಾಜ್ಯ*, ಭಾಗ ೧, ೨.

೧೩. ನಂಜಮ್ಮಣ್ಣಿ, ಎಂ., *ಪ್ರಾಚೀನ ಭಾರತದ ಸಾಮಾಜಿಕ ಇತಿಹಾಸ*, ಮೈಸೂರು, ೧೯೮೦.

೧೪. ಮಿರ್ಜಿ ಅಣ್ಣಾರಾಯ, *ಜೈನಧರ್ಮ*, ಸೇಡಬಾಳ, ೧೯೫೨.

೧೫. ಮಿರ್ಜಿ ಅಣ್ಣಾರಾಯ (ಅನು), ಮೂಲ: ಡಾ॥ ಹೀರಾಲಾಲ ಜೈನ್, *ಭಾರತೀಯ ಸಂಸ್ಕೃತಿಗೆ ಜೈನಧರ್ಮದ ಕೊಡುಗೆ*, ಸೊಲ್ಲಾಪುರ, ೧೯೭೧.

೧೬. ಡಾ॥ ಗೋಪಾಲ್, ಬಾ.ರ., *ಕರ್ನಾಟಕದ ಇತಿಹಾಸ*, ಮೈಸೂರು, ೧೯೮೬.

೧೭. ಪಂಡಿತ ಕೈಲಾಸ ಚಂದ್ರಶಾಸ್ತ್ರಿ (ಮೂಲ), ಅನು: ಕೆ. ಭುಜಬಲಶಾಸ್ತ್ರಿ, ಜೈನಧರ್ಮ, ಸೊಲ್ಲಾಪುರ, ೧೯೬೯.

೧೮. ಡಾ॥ ನೇಗಿನಹಾಳ, ಎಂ.ಬಿ., ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ, ಧಾರವಾಡ, ೧೯೮೨.

೧೯. ಮುಳಿಯ ತಿಮ್ಮಪ್ಪಯ್ಯ, ಕವಿರಾಜಮಾರ್ಗ ವಿವೇಕ – ಭಾಗ ೧, ಮಂಗಳೂರು, ೧೯೪೮.

೨೦. ಮುಳಿಯ ತಿಮ್ಮಪ್ಪಯ್ಯ, ಸಂ. ಕೇಶವಭಟ್ಟ ಎಂ., ಕವಿರಾಜಮಾರ್ಗ ವಿವೇಕ, ಮೈಸೂರು, ೧೯೭೩.

೨೧. ಜೋಶಿ, ಶಂ.ಬಾ., ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ – ಭಾಗ ೧, ಧಾರವಾಡ, ೧೯೬೭.

೨೨. ಪ್ರೊ. ರಾಮಚಂದ್ರರಾವ್ ಎಸ್.ಕೆ., ಕರ್ನಾಟಕದ ಕಲೆಗಳು – ಸಂ. ೧ ಭೂಮಿಕೆ, ಬೆಂಗಳೂರು.

೨೩. ಡಾ॥ ಗೋಪಾಲ್ ಬಾ.ರ., ಕರ್ನಾಟಕದ ಕಲೆಗಳು ಸಂ. ೪ – ವಾಸ್ತು, ಬೆಂಗಳೂರು, ೧೯೯೩.

**ಪಿಎಚ್., ಡಿ. ಮಹಾಪ್ರಬಂಧಗಳು**

1. Rashtrakutas and Their Times — 1932
   Altekar A.S.
   Banares Hindu University.

2. The Brahmanical Rashtrakuta Monuments of Ellora — 1968
   Czuma, Stanisaiw Jerzy
   Michigan University, U.S.A.

3. Cultural History of Marathawada — 1971
   Deglurkar G.B.
   Marathawada University.

4. Social and Economic History of Karnataka — 1972
   M. Liceriya
   Patna University.

5. ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ 1973
ಕಲ್ಬುರ್ಗಿ ಎಂ.ಎಂ.
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

6. Kailasa: A Cultural Study 1973
Pathankar
Nagpur University.

7. Stylistic Sources & Relationships of the
Kailasa Temple at Ellora 1977
Chatam, Dories Clark
California University, U.S.A.

8. Elura: A Cultural Study 1980
Pathy T.V.
Marathwada University.

9. The Buddist Caves at Ellora 1983
Malandra, Geri Hockfield
Minnesota University, U.S.A.

10. A History of Rashtrakutas 1990
Madan A.P.
Kurukshetra University.

11. Social and Economic Conditions
under Imperial Rashtrakutas 1992
Jayashree Mishra
Patna University.

12. State in Medieval Deccan 1994
($7^{th}$ to $10^{th}$ Century)
Elizebeth
Mangalore University.

13. Rashtrakuta Rajya 1994
Shyamala Rathnakumari
Bangalore University.

14. Studies in the Rashtrakuta Inscriptions 1994
Brahmananda Deshpande
Nagpur University.

15. Rashtrakuta Relations with Gangas of Talkad 1997
Shivanna
University of Mysore.

16. ರಾಷ್ಟ್ರಕೂಟರ ಶಾಸನಗಳ ಸಾಂಸ್ಕೃತಿಕ ಅಧ್ಯಯನ 2001
ಕುಲಕರ್ಣಿ ಜಿ.ಬಿ.
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಇಂಗ್ಲೀಷ್ ಪುಸ್ತಕಗಳು

1. Aiyangar, S. Krishnasvamy, *Ancient India and South Indian History & Culture,* Poona, 1941.
2. Aiyar, K.V. Subramanya, *Historical Sketches of Anciant Dekkan,* Coimbatore, 1969.
3. Altekar, A..S., *State and Government in Ancient India.*
4. Altekar, A.S., *A Guide to the Pattadakal Temples,* Dharwar, 1961.
5. Altekar, A.S., *A History of the Important Ancient Towns and Cities in Gujarat,* Bombay, 1925.
6. Altekar, A.S., *A History of the Village Communities in India,* Bombay, 1927.
7. Altekar, A.S., *Education in Ancient India,* Varanasi, 1943.
8. Altekar, A.S., *The Rashtrakuta Empire and its people, The Age of Imperial Kanauj,* Bombay, 1995.
9. Altekar, A.S., *The Rashtrakutas, The Early History of the Deccan,* Vol I, Part I – IV, Bombay, 1960.
10. Amit Ray., *Aurangabad Sculpture,* 1964.
11. Bajpai, K.D., *Indian Numismatic Studies,* New Delhi, 1976.
12. Bajpai, K.D., *Prachina Bharatiya Vyapara ka Itihasa* (in Hindi).
13. Banerji, R.D., *The Palas of Bengal*, Calcutta, 1915.
14. Barnett, L.D., *Antiquities of India,* London, 1930.
15. Basavaraj, K.R., *History and culture of Karnataka,* Dharwar, 1984.
16. Basham, A.L., *Early History of the Deccan and Miscellaneous Historical Essays,* Poona, 1983.
17. Basham, A.L., *Studies In Indian History and Culture,* Calcutta, 1964.
18. Basham, A.L., *The Wonder that was India,* London, 1954.

19. Bhagwanlal Indraji, *Bombay Gazetteer,* Vol I, Part I, Bombay, 1896.
20. Bhandarkar Commemoration Volume, Poona, 1917.
21. Bhandarkar, R.G., *Bombay Gazetteer,* Vol I, Part I, Bombay, 1896.
22. Bhandarkar, R.G., *Early History of the Dekkan,* (1895) 1979.
23. Bhuvanendra Kumar, S.A., *Ratta Dynasty: Feudatory kings of Deccan India.*
24. Bose, Nemai Sadhan., *History of the Chandellas of Jejakabhukti,* Calcutta, 1956.
25. Brown, Persi, *Indian Architecture (Buddist and Hindu Period),* 6th Reprint, Bombay, 1971.
26. BuddhaPrakash., *Aspects of Indian History and Civilization,* Agra, 1965.
27. Burgess, J., *Inscription from the Cave Temples of Western India.*
28. Burgess, J., *Report of the Buddist Cave Temple and their Inscriptions* (1876-79), Varanasi, 1964.
29. Burgess, J., *Report on Antiquities in the Bidar and Aurangabad Districts,* London, 1878.
30. Burgess, J., *Report on the Elura Cave Temples and the Brahmanical and Jaina Caves in Western India,* London, 1883.
31. Carmel Berkson, *Elephanta - The cave of Shiva,* Bombay, 1924.
32. Chakladar, Heji, *Social Life in Ancient India,* Calcutta, 1954.
33. Chatterjee, A.K., *A Comprehensive History of Jainism,* Calcutta, 1978.
34. Cordier, *Yule's Travels of Marco Polo,* London, 1926.
35. Deglurkar, G.B., *Cultural History of Marathwada,* Poona, 1971.
36. Deo, Prabhakar R., *Temples of Marathwada,* Ph.D Thesis, Marathawada University, 1972.
37. Deo, S.B., *Excavations at Bhokardan,* Nagpur, 1974.
38. Desai, P.B., (ed), *A History of Karnataka , (From pre-History to Unification),* Dharwar, 2nd Ed., 1981.

39. Desai, P.B., *Jainism in South India and some Epigraphs,* Sholapur, 1957.

40. Desai, P.B., Srinivas Ritti, Gopal, B.R., (eds) *A History of Karnataka,* Dharwar, 1970.

41. Dhaky, M.A., Michael W. Meister, (eds) *Encyclopedia of Indian Temple Architecture,* South India, Vol I, (1986) 1996.

42. Dhaky, Soundar Rajan., *Encyclopedia of Indian Temple Architecture Upper Dravida,* Vol II.

43. Dhavalikar, M.K., *Ajanata: A Cultural Study,* Poona, 1973.

44. Dhavalikar, M.K., *Master Piece of Rastrakuta Art,* Bombay.

45. Diwakar, R.R., (ed) *Karnataka Through The Ages.*

46. Dr. Narasimha Murthy, A.V., *Studies in Karnataka Numismatics.*

47. Dr. Veerathappa., (ed) *Studies in Karnataka History and Culture.*

48. Dubreuil, J., *Ancient History of the Deccan,* Pandicherry, 1920.

49. Ekamba Ranathan, A., Sivaprakasam, C.K., *Jaina Inscriptions in Tamilnadu: A topographical list,* Madras, 1987.

50. Elliot and Dowson., *History of India as told by its own historians – I,* London, 1970.

51. Fleet, J.F., *The Dynasties of the Canarese Districts of the Bombay Presidency,* Bombay, 1896.

52. Furgusson, James and Burgess, James, *The Cave Temples of India,* (1880) 1988

53. Gangoli, O.C., Goswami, A., *The Art of the Rashtrakutas,* Calcutta, 1951.

54. Ganguly, D.C., *Eastern Chalukyas.*

55. Ghatapanadi, S.G., *Taxation in Ancient and Medieval Karnataka,* Ph.D. Thesis, Karnataka University, 1977.

56. Ghosal, *Hindu Revenue System,* Calcutta, 1929.

57. Ghosh, A., (ed) *Ajanta Murals,* Calcutta, 1967.

58. Ghoshal, U.N., *Studies in Indian History and Culture,* Calcutta, 1957.

59. Gibb., IBN Batuta, London, 1929.
60. Gode, P.K., *Studies in Indian Cultural History,* Vol III, Puna, 1969.
61. Gopal, B.R.,(ed) *The Rashtrakutas of Malkhed,* Seminar, Bangalore, 1994.
62. Goswami, A., *The Art of the Rashtrakutas*
63. Goyal, S.R., *Pracheen Bharat ka Rajanitika Itihasa,* Allahabad, 1969.
64. Gupte, R.S., *Ajanta, Ellore and Aurangabad Caves,* Bombay, 1962.
65. Gupthe, R.S., *The Iconography of the Buddist Sculptures (caves) at Elllora,* Aurangad, 1964.
66. Gururaja Rao, B.K.L., *Gouravam, (Felicitation).*
67. Gururajachar, S., *Studies in Indian Place Names,* Vol I, Mysore, 1980.
68. Handiqui, K.K., *Yasastilaka and Indian Culture,* Sholapur, 1949
69. Henry Cousens., *The Chalukyan Architecture of the Canarese Districts,* Calcutta, 1926.
70. Henry Cousens., *The Chalukyan Architecture of the Kanarese Districts,* (Vol. XLII) Calcutta, 1926.
71. Hourani, G.F., *Arab Seafaring in the Indian Ocean in Ancient and Early Medieval Times,* Princeton, 1951.
72. Jain, C., *Life in Ancient India.*
73. Jain, P.C., *Socio-economic Exploration of Medieval India, from 800-1200 AD,* Delhi, 1976.
74. Jain, Prem Suman, *Kuvalayamalakaha ka Samskritika Adhyayana,* (in Hindi) Vaishali, 1975.
75. James Burgess., *Report on the Elura cave temple and the Brahmanical and jaina caves in Western India,* Reprint, New Delhi, 1970.

76. Jawaharlal G., *Jainism in Andhra During the Rashtrakuta Period,* Gopal, B.R., (ed).

77. Jayaswal., *Hindu Polity,* Calcutta, 1924.

78. Jose Pereira., *Monolithic Jinas, The Iconography of the Jain Temples of Ellora,* Varanasi, 1977.

79. Joshi, S.K., *Defence Architecture: Early North Karnataka,* Ph.D. Thesis, Karnataka University, 1981.

80. Kalghatgi, T.G., (ed) *Jainism and Karnataka Culture,* Dharwar, 1977.

81. Kamalapur, J.N., *The Deccan Forts,* Bombay, 1961.

82. Kamath Suryanath U., *A Concise History of Karnataka,* Bangalore, 1997. (Revised ed)

83. Kamath, Jyotsna, *Studies in Social Life in Karnataka, ($10^{th}$ to $14^{th}$ Centuries AD)*, Ph.D. Thesis, Karnataka University, 1972.

84. Kane, P.V., *History of Dharmasastra,* 5 Volumes, Poona, 1930.

85. Kapre, K.R., *Archaeology of the Ancient Place Names in the Deccan,* Ph.D. Thesis, Poona University, 1961.

86. Karmakar, A.P., *Cultural Heritage of Karnataka,* Dharwar, 1947.

87. Khare, G.H., *List of Inscriptions.*

88. Klaus Fisher., *Caves and Temples of the Jains,* Aligang (etah), 1956

89. Krishna Rao M.V., Goverdhan Rao M., Jeevanna Rao., (eds) *Glimpses of Karnataka,* Bangalore, 1960.

90. Krishna Rao, M.V., *The Gangas of Talkad*, Madars, 1936.

91. Kulkarni, B.S., (ed), *Indian Chronological Tables,* Dharwar, 1977.

92. Kuppuswamy, G.R., *Economic Conditions in Karnataka,* (AD 973-1336), Dharwar, 1975.

93. Majumdar R.C., Altekar A.S., (eds) *A New History of the Indian People,* Vol IV, Bharathi Ithihasa Parishad, 1946.

94. Majumdar, R.C. and Pusalkar, A.D., (eds) *The Classical Age,* Bombay, 1970.

95. Majumdar, R.C., *History of Bengal,* Vol I, Oxford University Press, 1943.
96. Majumdar, R.C., Pusalker, A.D., (eds), *The History and Culture of the Indian People,* Vol I-IV, Bombay, 1957.
97. Majumdar, R.C., *The Struggle For Empire,* Bombay, 1966.
98. Majumdar, S.N., (ed) *Cunningham's: The Ancient Geography of India,* Calcutta, 1924.
99. Majumdar., *Corporate Life in Ancient India,* Calcutta, 1918.
100. Malathi Mahajan, *Cultural history of Maharastra And Goa,* Delhi, 1989.
101. Manjumdar, R.C.,(ed) *The Age of Imperial Kanauj.*
102. Mate, M.S., *Temples and Legends of Maharashtra,* Bombay, 1970.
103. Mathur, Vijayendra Kumar, *Aitihasika Sthanavali* (in Hindi), New Delhi, 1969.
104. Maulvi Mahesh Prasad Sadhu, *Sulaiman Saudagar,* Benares, 1922.
105. Mirashi, V.V., *Studies in Indology,* Vol I, Nagpur, 1960.
106. Mirashi, V.V., *Studies in Indology,* Vol II, Sholapur, 1961.
107. Mirashi, V.V., *Studies in Indology,* Vol III and IV, Varanasi, 1966.
108. Mishra, Sudarshan, *Mahakavi Pushpadanta aur unka Mahapuarana* (in Hindi), Vaishali, 1987.
109. Mishra, Vibhutibhushan, *The Gurjara Prathiharas and Their Times,* Delhi, 1966.
110. Mookergi., *Ancient India.*
111. Mugali, R.S., *Heritage of Karnataka,* Mysore, 1953.
112. Munshi, K.M., *Glory that was Gurjaradesa,* Bombay, 1969.
113. Murthy, Srinivas, H.V., Ramakrishan, R., *A History of Karnataka,* Delhi, 1977.
114. Muthana, I.M., *History Of Karnataka.*
115. Nadvi Saiyad Suleman, *Arab aur Bharat ke Samband* (in Hindi), Allahabad, 1930.

116. Nagarajaiah Hampa., *A History of the Rashtrakutas of Malkhed and Jainism,* Bangalore, 2000.
117. Narasimha Murthy, *Studies in Karnataka Numismatics,* Mysore, 1996.
118. Narasimha Murthy, *The Coins and Currency System in Karnataka,* Mysore, 1997.
119. Nilakanta Sastry, K.A., *A History of South India,* Oxford University Press, 1966.
120. Owen, C., Kail, *Elephanta - The Island of Mystery,* Bombay, 1984.
121. Pandey, Ayodhya Prasad, *Chandelakaline Bundelakhanda ka Itihasa,* Prayag, 1968.
122. Pandey, V.C., *Pracheen Bharat ka Itihasa,* Mirat, 1979.
123. Pathak., *Kavirajamarga of Nrpatunga.*
124. Pathy, T.V., *Elura Art and Culture,* New Delhi, 1980.
125. Pathy, T.V., Prasad, V.R.N., *Ajanta, Ellore and Aurangabad Caves: An Appreciation,* Bombay, 1972.
126. Phadke, H.A., *The Tripartite Struggle,* B.H.U., 1966.
127. Prabhakar Deo., *The Temples of Marathawada,* Jaipur, 1993.
128. Pran Nath., *A Study into the Economic conditions of the Ancient India,* London, 1929.
129. Premi, Nathuram, *Jain Sahithya ka Itihasa,* Bombay, 1956.
130. Puri, B.N., *The History of the Gurjara Prathiharas,* Lucknow, 1957.
131. Rajasekhara, S., *Rashtrakuta Art in Karnataka,* Dharwad, 1991.
132. Rajashekara, S., *Study of Aihole Temples, Ph.D. Thesis,* Karnataka University, 1975.
133. Ramakrishna Gopal Bhandarkar., *Early History of the Deccan,* New Delhi, 1979.
134. Ramesh K.V., *A History of South Karnataka,* Dharwar, 1970.
135. Ramesh, K.V., *History of South Kanara from the Earliest Times to the Fall of Vijayanagar.*

136. Ray, H.C., *Dynastic History of Northern India,* 2 Volumes, Calcutta, 1963.

137. Ray, N.R., *Sources of the History of India,* Calcutta, 1989.

138. Raychaudhuri, Hemachandra., *Political History of Ancient India,* Calcutta, 1953.

139. Raychaudhuri, Hemachandra., *The Geography of the deccan in early history of the deccan,* Oxford, 1960.

140. Reu, Pandit Bisheshwar Nath, *Glories of Marwar and the Glorious Rathors,* Jodhpur, 1943.

141. Reu, Pandit Bisheshwar Nath., *History of the Rashtrakutas (Rathore),* Jaipur, (Reprint) 1997.

142. Ritti Shrinivas, (ed), *A Decade of Epigraphical Studies in South India,* Dharwar, 1985.

143. Sachau., *Alberuni's India,* Indian Reprint, 1964.

144. Sah, Ayodhya Prasad, *Life in Medieval Orissa From 600-1200AD,* Varanasi, 1976.

145. Sastry, K.A.N., *A Comprehensive History of India,* Vol II, 1957

146. Sastry, K.A.N., *A History of South India,* Madras, 1958.

147. Sastry, K.A.N., *Foreign Notices of South India.*

148. Sastry, S.S., *Early Gangas of Talkad,* 1952.

149. Sastry, S.S., *Sources of Karnataka History,* University of Mysore, 1940.

150. Seely, J.B., *The Wonders of Ellora,* London, 1824.

151. Sen, B.C., *Some Historical Aspects of the Inscriptions of Bengal,* Calcutta, 1942.

152. Sen, S.P., *Sources of the History of India,* Calcutta, 1978.

153. Settar, S., *Shravana Belgola Monuments,* Dharwar, 1967.

154. Settar. S. and Gunther D. Sonthemer (eds)., *Memorial Stones,* Dharwad, 1982.

155. Shanta Kumari, S., Leela, *History of the Agraharas in Karnataka,* 400-1300 AD, Madras, 1986.

156. Sharma, Dasharatha., *Early Chauhan Dynasties,* Delhi, 1959.

157. Sharma, Dasharatha., *Rajasthan Through the Ages,* Bikaner, 1966.

158. Shastry, K.A.N., *A History of South India,* IV Edition, Oxford, 1976.

159. Shelke, G.C., *A History of Marathwada Region*, Ph.D. Thesis, Marathwada University, Aurangabad, 1979.

160. Shobhana Gokhale., *Kanheri Inscriptions,* Pune, 1991.

161. Shrama, H.B., *Jainism and Karnataka Culture.*

162. Shriyan, Ratna Nagesh, *A Critical Study of Mahapurana of Pushpadanta,* Ahmedabad, 1969.

163. Singh, Ram Bhushan Prasad, *Jainism in Early Medieval Karnataka,* Delhi, 1975.

164. Sircar, D.C., *Indian Epigraphical Glossary,* Delhi, 1965.

165. Sircar, D.C., *Successor of the Satavahanas in the Lower Deccan,* Calcutta, 1939.

166. Sircar, D.C., *The Kanyakubja - Gauda Struggle,* Calcutta, 1985.

167. Sivarama Murti, C., *Royal Conquest and Cultural Migrations in South India and the Deccan,* 1995.

168. Somadev., *Yasastilaka,* Kavyamala Series.

169. Soundara Rajan, K.V., *Encyclopedia of Indian Temple Architecture,* New Delhi, 1986.

170. Soundara Rajan, K.V., *The Ellora Monolith,* Delhi, 1988.

171. Spink, Walter., *Ajanta to Ellora,* Bombay, 1967.

172. Srikanta Sastry S., *Sources of Karnataka History,* University of Mysore, 1940.

173. Srinivasan, K.R., *Temples of South India,* New Delhi, 3rd Edition, 1985.

174. Srinivasan, K.R., *The Deccan in Jaina Art and Architecture,* Vol I, New Delhi, 1974.

175. Srinivasan, P.R., *Indian Temple Architecture,* Mysore, 1982.

176. Takakasu., *Itsing's Travels,* Oxford, 1896.

177. Tavernier., *Travels In India,* Calcutta, 1905.

178. Tripathi, R.S., *History of Kanauj of the Moslim Conquest,* Hyderbad, 1961.

179. Tripathi, R.S., *History of Kanauj,* Delhi, 1964.

180. Tripati, R.S., *History of Kanauj,* Banaras, 1937.

181. Vaidya, C.V., *History of Hindu Mediaeval India,* Poona, 1921-26.

182. Yazdani, Ghulam,(ed) *The Early History of the Deccan,* Parts VII - XI, (1960) 1982

**Inscriptions, Journals and Periodicals**

1. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು
2. ಧಾರವಾಡ ಜಿಲ್ಲೆಯ ಶಾಸನಸೂಚಿ – ಕಲ್ಬುರ್ಗಿ.
3. ವಿಜಾಪುರ ಜಿಲ್ಲೆಯ ಶಾಸನಸೂಚಿ – ಕಲ್ಬುರ್ಗಿ.
4. Corpus Inscriptionum Indicarum.
5. Epigraphia Caranatica (Rice Volume).
6. Epigraphia Caranatica (Revised).
7. Historical and Literary Inscriptions - Pande R.B.
8. Inscriptions of North Karnataka and Kolhapur State – Kundanagar K.G.
9. Inscriptions of Orissa.
10. List of Inscriptions from the Central Province and Berar – Hiralal.
11. List of Inscriptions, published by the Bharat – Itihas – Samshodak – Mandal.
12. Mysore Archaeological Reports.
13. Select Inscriptions Bearing on Indian History and Civilization – I – Sircar D.C.
14. South Indian Inscriptions.
15. Annals of Bhandarkar Oriental Institute.
16. Annual Reports of Indian Epigraphy, 1946 onwards.
17. Annual Report of the Mysore Archaeological Department.
18. Annual Report of the South Indian Epigraphy.
19. Archaeological Survey of India Annual Report.
20. Bulletin of the Deccan College Research Institute.
21. Bulletin of the Institute of Traditional Culture, Madras.
22. Epigraphia Indica, 1982 onwards.
23. Illustrated Weekly of India.
24. Indian Antiquary.
25. Indian Archaeological Review.
26. Indian Historical Review.
27. Islamic Culture.
28. The Jain Antiquary, Arrah.

29. Journal of the Andhra Historical Research Society.
30. Journal of the Asiatic Society of Bengal.
31. Journal of the Bihar Research Society.
32. Journal of Bombay Branch of Royal Asiatic Society.
33. Journal of Historical Research (Ranchi University).
34. Journal of Indian History.
35. Journal of Karnatak University (Humanities and Social Sciences).
36. Journal of the Numismatic Society of India.
37. Journal of American Oriental Society.
38. Journal of the Royal Asiatic Society.
39. Journal of the University of Bombay.
40. Marathwada University Journal
41. Marga (Pathway), A magazine of Arts, Vol IX., No. 2, March 1956.
42. The Mirror, a monthly magazine from Bombay.
43. Quarterly Journal of Mythic Society, Bangalore.
44. Poona Orientalist.
45. Proceedings of All India Oriental Conference.
46. Proceedings of Indian History Congress.
47. Times of India (a daily from New Delhi).

| Plate No. | ಚಿತ್ರದ ಸಂಖ್ಯೆ | ಚಿತ್ರದ ವಿವರ |
|---|---|---|
| ೧. | ೧. | ಧರ್ಮರಾಜೇಶ್ವರ, ಮಧ್ಯಪ್ರದೇಶ. |
| | ೨. | ಕೈಲಾಸ ದೇವಾಲಯ ಮುಖಮಂಟಪ, ಎಲ್ಲೋರ. |
| ೨. | ೩. | ಧರ್ಮರಾಜೇಶ್ವರ (ದೂರದ ದೃಶ್ಯ), ಮಧ್ಯಪ್ರದೇಶ. |
| | ೪. | ಧರ್ಮರಾಜೇಶ್ವರ (ಸಮೀಪದ ದೃಶ್ಯ), ಮಧ್ಯಪ್ರದೇಶ. |
| ೩. | ೫. | ಧರ್ಮರಾಜೇಶ್ವರ (ಭಿತ್ತಿ), ಮಧ್ಯಪ್ರದೇಶ. |
| | ೬. | ಎಲ್ಲೋರ ಕೈಲಾಸ ಅದಿಷ್ಠಾನ. |
| | ೭. | ಎಲ್ಲೋರ ಕೈಲಾಸ ಕಂಬ. |
| ೪. | ೮. | ಇಂದ್ರಸಭೆ ಮುಂಭಾಗ, ಎಲ್ಲೋರ. |
| | ೯. | ಮಾನಸ್ತಂಭ (ಇಂದ್ರಸಭೆ), ಎಲ್ಲೋರ. |
| ೫. | ೧೦. | ಯಕ್ಷಿ – ಅಂಬಿಕಾ, ಇಂದ್ರಸಭೆ, ಎಲ್ಲೋರ. |
| | ೧೧. | ಕಂಬ, ಇಂದ್ರಸಭೆ, ಎಲ್ಲೋರ. |
| | ೧೨. | ಯಕ್ಷಿ – ಅಂಬಿಕಾ, ಇಂದ್ರಸಭೆ, ಎಲ್ಲೋರ. |
| ೬. | ೧೩. | ಸರ್ವತೋಭದ್ರ ಶಿಖರ, ಎಲ್ಲೋರ. |
| | ೧೪. | ಜೈನ ಗುಹಾ ದೇವಾಲಯ , ಎಲ್ಲೋರ. |
| ೭. | ೧೫. | ಕಾಗಿನೆಲೆ ಕಾಳಹಸ್ತೀಶ್ವರ ದೇವಾಲಯ. |
| | ೧೬. | |
| ೮. | ೧೭. | ನಕ್ಷತ್ರಾಕಾರದ ತಲವಿನ್ಯಾಸ, ಪಾರ್ಶ್ವನಾಥ ಬಸದಿ, ಕೋಣ್ಣೂರು. |
| | ೧೮. | ರಾಷ್ಟ್ರಕೂಟರ ಕಂಬ, ಸಣ್ಣ ಬಸವಣ್ಣನ ಗುಡಿ, ಮೇದೂರು. |
| | ೧೯. | ರಾಷ್ಟ್ರಕೂಟರ ಕಂಬ, ಸಣ್ಣ ಬಸವಣ್ಣನ ಗುಡಿ, ಮೇದೂರು. |
| ೯. | ೨೦. | ಸಣ್ಣ ಬಸವಣ್ಣನ ಗುಡಿ, ಮೇದೂರು. |
| | ೨೧. | ಸಣ್ಣ ಬಸವಣ್ಣನ ಗುಡಿ, ಮೇದೂರು. |
| ೧೦. | ೨೨. | ವೀರಗಲ್ಲು, ಮಂತಗಿ. |
| | ೨೩. | ವೀರಗಲ್ಲು, ಮಂತಗಿ. |
| | ೨೪. | ವೀರಗಲ್ಲು, ಮಂತಗಿ. |
| ೧೧. | ೨೫. | ವೀರಗಲ್ಲು, ಕರಮಡಿ. |
| | ೨೬. | |
| | ೨೭. | ವೀರಗಲ್ಲು, ಚಿಲ್ಲೂರು. |
| ೧೨. | ೨೮. | ವೀರಗಲ್ಲು (ಮುಂಭಾಗ), ಮೇವುಂಡಿ. |
| | ೨೯. | ವೀರಗಲ್ಲು (ಹಿಂಭಾಗ), ಮಂತಗಿ. |
| ೧೩. | ೩೦. | ಗೋಸಾಸ ಕಲ್ಲುಗಳು, ಹಿರೇಮಾಗನೂರು. |
| | ೩೧. | ಗೋಸಾಸ ಕಲ್ಲುಗಳು, ಹೂಲಿಹಳ್ಳಿ. |
| ೧೪. | ೩೨. | ಗೋಸಾಸ ಕಲ್ಲು, ಸಾವಿಕೇರಿ. |
| | ೩೩. | ಗೋಸಾಸ ಕಲ್ಲು, ಕ್ಯಾಸನೂರು. |
| | ೩೪. | ಗೋಸಾಸ ಕಲ್ಲು, ಕ್ಯಾಸನೂರು. |
| ೧೫. | ೩೫. | ಗೋಸಾಸ ಕಲ್ಲು, ಹೊಸಹೂಲಿಹಳ್ಳಿ. |
| | ೩೬. | ಗೋಸಾಸ ಕಲ್ಲು, ಹೊಸಹೂಲಿಹಳ್ಳಿ. |
| | ೩೭. | ಗೋಸಾಸ ಕಲ್ಲು, ಕ್ಯಾಸನೂರು. |

